ಧರ್ಮದಿಂದ ಜ್ಞಾನ[illegible],
ದಯೆಯಿಂದ ವಿನಯ, ವಿನಯದಿಂದ ಯೋಗ್ಯತೆ
ಯೋಗ್ಯತೆಯಿಂದ ಐಶ್ವರ್ಯ, ಐಶ್ವರ್ಯದಿಂದ ಸುಖ-ಜೀವನ



ಧರ್ಮದ ಪ್ರಕಾಶವೇ—ಮಾನವ ಸಂಸ್ಕೃತಿಯ ಮಹತ್ಸಾಧನೆ
ಶುದ್ಧ ಮತ್ತು ಶ್ರೇಷ್ಠ ವಸ್ತುಗಳಿಗೆ ಯಾವಾಗಲೂ ಅಧಿಕಮಾನ




ಲೋಕಪ್ರಿಯತೆಯೇ ಬೇಡಿಕೆಯ
ಮೂಲ. ಮತ್ತು ಮಹೋದ್ಯಮದ
ಪ್ರತಿಬಿಂಬ—1906 ರಿಂದಲೂ .

ಮಂಗಳೂರು

# ಪಿ. ವಿ. ಎಸ್. ಬೀಡಿಗಳು . . . .

ಪ್ರಗತಿಶೀಲ ಮಹೋದ್ಯಮದ ಅಪೂರ್ವ ಕಾಣಿಕೆಯಾಗಿವೆ.
ಅಲ್ಲದೆ—ದೇಶದ ಎಲ್ಲೆಯನ್ನು ಮೀರಿ ವಿದೇಶಗಳಲ್ಲೂ ಪ್ರಖ್ಯಾತಿಗೊಂಡಿವೆ.

ದೀಪಾವಳಿಯ ಶುಭದಿನದಂದು
ಸರ್ವರಿಗೂ ಶುಭಾಶಯಗಳನ್ನು
ಬಯಸುವ: ಸಂಸ್ಥೆ.

★

*Telegrams*: "**PUTHUBIDIS**"
*Phone*: **83, 83 A.**
*Res.*: **593, 593 A**

P. V. S. Beedies (Private) Limited,
*Regd. Office, Kodiyalbail.* **MANGALORE-3**
POST BOX No. **707**

# ದಿ ಬಳ್ಳಾರಿ ಸೆಂಟ್ರಲ್ ಕೋ-ಆಪರೇಟಿವ್ ಸ್ಟೋರ್ಸ್ ಲಿ.

ಪ್ರಧಾನ ಕಚೇರಿ: ಬಳ್ಳಾರಿ

ಟೆಲಿಫೋನ್ ನಂ.: 52 ಕಚೇರಿ
12 ಅಧ್ಯಕ್ಷರ ಗೃಹ

ತಂತಿ: ರಾಂಶುಗರ್ಸ್

ಬಳ್ಳಾರಿ

(Y. N. 349)

ಸಕ್ಕರೆ ಕಾರಖಾನೆ: ಕಂಪ್ಲಿ

ಟೆಲಿಫೋನ್: 23




## ಸಕ್ಕರೆ ಕಾರಖಾನೆಯ ಯಶಸ್ವಿ ಮುನ್ನಡೆ

- ೭ ನೇ ವರ್ಷದ ಉತ್ಪಾದನಾ ಕಾರ್ಯವನ್ನು ಪೂರ್ಣಗೊಳಿಸಿ ೧೬-೧೦-೧೯೬೪ ರಿಂದ ೮ನೇ ವರ್ಷದಲ್ಲಿ ಕಾಲಿಡುತ್ತಲಿದೆ.
- ೧೯೬೩—೬೪ ನೇ ವರ್ಷದಲ್ಲಿ ೧,೫೫,೪೬೬ ಚೀಲಗಳಷ್ಟು ಉತ್ತಮ ಸಕ್ಕರೆಯನ್ನು ತಯಾರಿಸಿದೆ.
- ಗಾಣದ ಶಕ್ತಿಯನ್ನು ದಿನಂಪ್ರತಿ ೧೨೦೦ ಟನ್ನುಗಳಿಂದ ೨೦೦೦ ಟನ್ನುಗಳವರೆಗೆ ಅಭಿವೃದ್ಧಿಗೊಳಿಸುವ ೨ ಹಂತಗಳ ಯೋಜನೆ ತಯಾರಾಗಿದೆ.

೧ ನೇ ಹಂತ: ೧೨೦೦ ರಿಂದ ೧೬೦೦ ವರೆಗೆ
೨ ನೇ ಹಂತ: ೧೬೦೦ ರಿಂದ ೨೦೦೦ ಟನ್ನು

## ಬಿ ಸಿ. ಸಿ. ಎಸ್. ಇವರ ಸ್ತುತ್ಯ ಪ್ರಜಾಸೇವೆ

- ಪ್ರಾರಂಭದಿಂದಲೂ ಬಳ್ಳಾರಿ ಜಿಲ್ಲೆಯ ಪ್ರಜರಿಗೆ ಧಾನ್ಯಗಳನ್ನು ಯೋಗ್ಯ ಹಾಗೂ ನಿಯಂತ್ರಿತ ಬೆಲೆಗಳಿಗೆ ಸರಬರಾಜು ಮಾಡುತ್ತಿದೆ.
- ಸರಕಾರದವರಿಂದ ಮಾನ್ಯತೆ ಪಡೆದ ಠೋಕು ವ್ಯಾಪಾರ ಸಂಸ್ಥೆ
- ಪ್ರಾಥಮಿಕ ಹಾಗೂ ಬಳಕೆದಾರ ಸಹಕಾರ ಸಂಸ್ಥೆಗಳ ಮೂಲಕ ಬಳ್ಳಾರಿ ಜಿಲ್ಲೆಯ ನಾನಾ ಭಾಗಗಳ ಪ್ರಜರಿಗೆ ಧಾನ್ಯಗಳನ್ನು ನಿಯಂತ್ರಿತ ಬೆಲೆಗಳಿಗೆ ಪೂರೈಸಿ ಸೇವೆ ಸಲ್ಲಿಸುತ್ತಿದೆ.
- ಕಬ್ಬಿಣ, ಉಕ್ಕು, ಸಿಮೆಂಟ್, ಗಿರಣಿ ಅರಿವೆ, ಕಾಫೀ ಬೀಜ, ಉರವಲು ಇತ್ಯಾದಿ ದುರ್ಲಭ್ಯ ಜೀವನಾವಶ್ಯಕ ಪದಾರ್ಥಗಳನ್ನು ಯೋಗ್ಯ ಹಾಗೂ ನಿಯಂತ್ರಿತ ಬೆಲೆಗಳಿಗೆ ಪೂರೈಸುತ್ತಿದೆ.
- ಉತ್ತಮ ದರ್ಜೆ ಶೀಗಿಕಾಯಿ ಪುಡಿ ಮತ್ತು ಕಾಫೀಪುಡಿಯನ್ನು ತಯಾರಿಸಿ ಪೂರೈಸುತ್ತಿದೆ.
- ತೋಡು ಬಾವಿಗೆ ರಂಧ್ರ ಹಾಕುವ ಯಂತ್ರಗಳನ್ನು ಬಾಡಿಗೆ ಕರಾರಿನ ಮೇಲೆ ಪೂರೈಸುತ್ತಿದೆ.
- ಯಂತ್ರಗಳ ಪೂರೈಕೆ ಹಾಗೂ ನಮ್ಮ ವಿಸ್ತರಣಾ ಯೋಜನೆಗಳ ಬಗ್ಗೆ ವ್ಯಾಪಾರ ಸಂಸ್ಥೆಗಳು ನೇರವಾಗಿ ಸಂಪರ್ಕ ಮಾಡಲು ವಿನಂತಿಸಲಾಗಿದೆ.

**ಮೊಹಮ್ಮದ್ ಖಲೀ ಮುಲ್ಲಾ, ಐ. ಎ. ಎಸ್.**
ಮ್ಯಾನೇಜಿಂಗ್ ಡೈರೆಕ್ಟರು

**ಹೆಚ್. ಲಿಂಗಾರೆಡ್ಡಿ, ಬಿ. ಎ., ಬಿ. ಎಲ್.**
ಅಧ್ಯಕ್ಷ

**ಹೆಚ್. ರಾಮಮೂರ್ತಿ, ಬಿ. ಎ.**
ಜನರಲ್ ಮ್ಯಾನೇಜರ್

**ಬಿ. ತಿಮ್ಮಣ್ಣಾಚಾರ್ಯ, ಬಿ. ಎ.**
ಸೆಕ್ರೆಟರಿ

ಈ ಶುಭದಿನದಂದು

ಕರ್ನಾಟಕದ ಜನರೆಲ್ಲರಿಗೂ

ನಮ್ಮ ಹಾರ್ದಿಕ

ದೀಪಾವಳಿಯ ಶುಭಾಶಯಗಳು



# MAHARAJA BEEDIES

T.M T.M

MAHARAJA BEEDY

T.M.ABDUL RAHIM BEEDI MERCHANT RANIPET

మహారాజా బీడీలు

ಮಹಾರಾಜಾ ಬೀಡಿಗಳು

T.M.HAJEE ABDUL RAHIM SAHIB & SONS

MAHARAJA BEEDI FACTORY

RANIPET. N.A

V.S. Nathan & Co. VELLORE

## ದಿ ಮಹಾರಾಜಾ ಬೀಡಿ ಸೇಲ್ಸ ಡಿಪೋ,

ನಂ. 1, ಫೋರ್ಟ್, ಬಳ್ಳಾರಿ.

ದೀಪಾವಳಿಯು ಸರ್ವರಿಗೂ ಸುಖಪ್ರದವಾಗಲಿ

# INDEX TO ADVERTISERS

# ಪರಿವಿಡಿ



# ಕರ್ಮವೀರ



ದೀಪಾವಳಿ ಸಂಚಿಕೆ ೧೯೬೪

ಸಹಾಯಕ ಸಂಪಾದಕರು : ಎಸ್. ವಿ. ಪಾಟೀಲ

ಸಂಪಾದಕರು : ರಂಗನಾಥ ದಿವಾಕರ

ಚಿತ್ರಕಾರರು : ಟಿ. ಕೆ. ರಾವ್

## ನಮ್ಮ ನುಡಿ

ವರುಷಕ್ಕೊಮ್ಮೆ ಬರುವ 'ದೀಪಾವಳಿ' ಹಿಂದುಗಳಿಗೆಲ್ಲ ಪರಮಪವಿತ್ರವಾದ ಹಬ್ಬವಾಗಿದೆ. ಅದೇ ಕಾಲಕ್ಕೆ ಹಿಗ್ಗನು ತರುವ ಹಬ್ಬವೂ ಎನಿಸಿದೆ. ಆದರೆ ಈ ವರುಷ ಮಾತ್ರ ದೇಶದಲ್ಲಿ ತಲೆದೋರಿದ ಆಹಾರ ಅಭಾವದ ಮತ್ತು ಬೆಲೆ ಏರಿಕೆಯ ಪರಿಸ್ಥಿತಿಯಿಂದಾಗಿ ಈ ಹಬ್ಬ ಹಿಗ್ಗಿನದಾಗಿರುವದಿಲ್ಲ. ಜನರಾದರೂ ತುಂಬ ನಿರಾಡಂಬರ ರೀತಿಯಲ್ಲಿ ಈ ಹಬ್ಬವನ್ನು ಆಚರಿಸಿ ಈಗ ಉದ್ಭವಿಸಿರುವ ಪರಿಸ್ಥಿತಿಯನ್ನು ದಿಟ್ಟತನದಿಂದ ಎದುರಿಸಲು ಮುಂದಾಗಬೇಕು; ಹಾಗೆ ಮುಂದಾಗುವರೆಂಬ ಭರವಸೆಯೂ ನಮಗಿದೆ. . . . . . . .

ವಾಚಕರ ಕೈಸೇರಿರುವ ಈ ದೀಪಾವಳಿ ಸಂಚಿಕೆ 'ಕರ್ಮವೀರ'ದ ಹದಿನೇಳನೆಯ ದೀಪಾವಳಿ ಸಂಚಿಕೆಯಾಗಿರುವುದು. ವರುಷ ವರುಷ 'ಕರ್ಮವೀರ'ದ ದೀಪಾವಳಿ ಸಂಚಿಕೆ ಭಿನ್ನಭಿನ್ನ ರುಚಿಯ ಜನರಿಗೆ ಮನೋರಂಜನೆ ಒದಗಿಸಲು ನಾನಾ ಬಗೆಯ ಲೇಖನಗಳನ್ನೂ ಕಥೆ ಹರಟೆ ಪ್ರಬಂಧಗಳನ್ನು ಒಳಗೊಂಡು ಹೊರಬರುತ್ತಿರುವುದು. ಈ ಸಲದ ನಮ್ಮ ವೈಶಿಷ್ಟ್ಯವೆಂದರೆ ಲಲಿತ ಸಾಹಿತ್ಯಕ್ಕೆ ಹೆಚ್ಚು ಪ್ರಾಮುಖ್ಯ ನೀಡಲಾಗಿರುವುದು. ಕಥೆಗಳ ಸಂಖ್ಯೆಯನ್ನು ಹೆಚ್ಚಿಸಿರುವದರೊಂದಿಗೆ ಒಂದು ಉತ್ತಮವಾದ ಕಿರು ಸಾಮಾಜಿಕ ಕಾದಂಬರಿಯನ್ನೂ ನಮ್ಮ ಓದುಗರಿಗೆ ಅರ್ಪಿಸಿದ್ದೇವೆ. ಹೊರನಾಡ ಕನ್ನಡಿಗರ ಕಷ್ಟನಷ್ಟಗಳನ್ನು ಚಿತ್ರಿಸುವ ವಿಶೇಷ ಲೇಖನಗಳನ್ನು, ಮಹಿಳೆಯರಿಂದಲೇ ಸಾಮಾಜಿಕ ಅನಿಷ್ಟಗಳ ನಿವಾರಣೆ ಸಾಧ್ಯ ಎಂಬ ವಿಚಾರಸಂಕಿರಣವನ್ನು ಈ ಸಂಚಿಕೆ ಒಳಗೊಂಡಿದೆ. ಚಲಚ್ಚಿತ್ರರಂಗದಲ್ಲಿ ಕೇವಲ ಪರಿಚಯಾತ್ಮಕ ಲೇಖನ ಕೊಡದೆ ಒಳ್ಳೆಯ ಚಿತ್ರ ಬರಬೇಕಾದರೆ ಏನು ಮಾಡಬೇಕು ಎಂಬ ಬಗೆಗೆ ಚಿತ್ರರಂಗದ ಖ್ಯಾತ ವ್ಯಕ್ತಿಗಳ ವಿಚಾರಸಂಕಿರಣವೊಂದನ್ನು ಈ ಸಲ ಏರ್ಪಡಿಸಿದ್ದು ಇನ್ನೊಂದು ವಿಶೇಷವಾಗಿದೆ. ಅಲ್ಲದೇ ಕಳೆದ ಸಲದಂತೆ ಈ ಸಲವೂ ಉದಯೋನ್ಮುಖ ನರ್ತಕಿಯೊಬ್ಬರ-ಕುಮಾರಿ ಶಚಿದೇವಿ-ಸಚಿತ್ರ ಸಂದರ್ಶನವನ್ನು ಪ್ರಕಟಿಸಲಾಗಿರುವುದು. ಹೀಗೆ ಸಾಹಿತ್ಯ ರಸದೂಟವನ್ನು ನಮ್ಮ ಓದುಗರಿಗೆ ನೀಡಲು ಹವಣಿಸಿದ್ದೇವೆ. . . . . . .

ಇದೇ ಸಂಪರ್ಭದಲ್ಲಿ ದಿಲ್ಲಿಯಲ್ಲಿ ದೀಪಾವಳಿಯ ದೀಪಾಲಂಕಾರದ ದೃಶ್ಯದ ಮನೋಹರವಾದ ಮುಖಚಿತ್ರವನ್ನು ಬರೆದು ಕೊಟ್ಟ ಕಲಾವಿದ ಶ್ರೀ. ವಾಯ್. ಎಚ್. ಸುಗೂರ ಅವರಿಗೆ, ಈ ಸಂಚಿಕೆಯನ್ನು ಸರ್ವಾಂಗ ಸುಂದರವಾಗುವಂತೆ ಮಾಡಲು ಸಹಾಯಸಹಕಾರ ನೀಡಿದವರಿಗೆಲ್ಲ, ಅದೇ ರೀತಿ ಜಾಹಿರಾತು ಕೊಟ್ಟು ಸಹಕರಿಸಿದ ಜಾಹಿರಾತುದಾರರಿಗೆಲ್ಲ ನಮ್ಮ ಕೃತಜ್ಞತೆಗಳು. . . . . . . . . .

ದೀಪಾವಳಿಯ ಈ ಶುಭಸಂದರ್ಭವು ಸರ್ವರಿಗೂ ಮಂಗಳದಾಯಕವಾಗಿ ಪರಿಣಮಿಸಲಿ!



# ಮಲೆನಾಡಿನಲ್ಲಿ ದೀವಳಿಗೆ



— ೧ —

ಏ ಗಿಣಿಯೇ ಏ ಗಿಣಿಯೇ ಮುತ್ತಿನ ಪಂಜರದ ಗಿಣಿಯೇ !
ಬಲಗೊಂಬೇ ಬಲಗೊಂಬೇ ಬಲೀಂದ್ರರಾಯನೇ
ಏಳು ಮಂಟಪದ ಒಡೆಯಾಗೇ। ಏ ಗಿಣಿಯೇ......
ಏಳು ಮಂಟಪದ ಒಡೆಯಾದಾವತಿಯು ರಂಗಯ್ಯಗೆ
ಏಳಕು ಮುಂಚೆ ಶರಣಯ್ಯೋ। ಏ ಗಿಣಿಯೇ......
ಏಳಕು ಮುಂಚೆ ಶರಣೆಂದಾರೆ
ಸಣ್ಣ ಮಕ್ಕಳ ಫಲವೆ ದೊರುತಾವೋ। ಏ ಗಿಣಿಯೇ......
ಅರಲ ಬೆಳಕಲ್ಲಿ ಅಂಗಳ ಸಾರಿಸಿ
ರಂಗೋಲೆ ಬರಿಯೋ ತುಳಿಸಮ್ಮ। ಏ ಗಿಣಿಯೇ......
ರಂಗೋಲೆ ಬರಿಯೋ ತುಳಿಸಿ ಮಾಲಕ್ಷ್ಮೀ
ದೃಷ್ಟಿಸಿ ನೋಡಿದುರೆ ಪಾಪ ಪರಿಹಾರ। ಏ ಗಿಣಿಯೇ......

ಮುತ್ತೂರಿಂದ ಬಂತು ಮೂವತ್ತು ಸಾವಿರ ಹಣತೆ
ಹಣತೆ ಸಾಲ್ವಕೆ ಬತ್ತಿ ಸಾಲದು। ಏ ಗಿಣಿಯೇ
ಹಣತೆ ಸಾಲ್ವಕೆ ಬತ್ತಿ ಸಾಲದು ತುಳಿಸಮ್ಮಾಗೆ
ದೃಷ್ಟಿಸಿ ನೋಡಿದರೆ ಪಾಪ ಪರಿಹಾರ। ಏ ಗಿಣಿಯೇ......
ಆಯೊಳಂಗಳ ಕಾಸಿ ಭಾಯೆಂಳ್ಳ ಚಾವಡಿಗಾಗಿ
ಗಂಧದರಸರ ಮನಿಗಾಗಿ। ಏ ಗಿಣಿಯೇ......
ಗಂಧದರಸರ ಮನಿಗಾಗಿ ನಾವು ಬಂದೋ
ಚಂದದಿಂದುರಿಯೋ ಜಗಜೋತಿ। ಏ ಗಿಣಿಯೆ......
ಆಯೊಳ್ಳ ಜೋತಿ ಬಂದು ಅಂಗುಳದಿ ನಿಂದಾವೆ
ಆಯೊಳ್ಳೇರು ಬಂದು ಕರೆಕೊಳ್ಳಿ। ಏ ಗಿಣಿಯೇ......
ಭಾಗ್ಯಳ್ಳ ಜೋತಿ ಬಂದು ಬಾಗಿಲ ಬಲಗಡೆ ನಿಂದಾವೆ
ಭಾಗ್ಯಳ್ಳೇರು ಬಂದು ಕರೆಕೊಳ್ಳಿ। ಏ ಗಿಣಿಯೇ......
ಭಾಗ್ಯಳ್ಳೇರು ಬಂದು ಕರೆಕೊಂಡರೊಚುನಾಳೆ
ಮತ್ತೆ ಮಾಳಿಗೆಗೆ ಬೆಳುಕಾದೋ। ಏ ಗಿಣಿಯೇ......

ಸಾಲು ಮಾಳಿಗೆಯೊಳುಗೆ ಕಾಲೇಣಿಯಾ ಚಾಚಿ
ಸಾಲೇಳು ಕೊಡಸ್ಟೆಣ್ಣೆ ಬಾಯು ತೆಗೆದು। ಏ ಗಿಣಿಯೇ......
ಸಾಲೇಳು ಕೊಡಸ್ಟೆಣ್ಣೆ ಬಾಯು ತೆಗೆದಾ ತಾಯುಮ್ಮಾ
ಜೋತಿಗೆ ನೋಡೆಣ್ಣೆ ಎರೆಯೋಗಿ। ಏ ಗಿಣಿಯೆ......
ಎಣ್ಣೇಯು ಎರುದಾರೆ ಪುಣ್ಯಗೆಳು ನಿಮುಗಾದೋ
ನೀವು ಪುಣ್ಯವಂತ್ರರಾಗಿ ಸುಖಿ ಬಾಳಿ।

— ೨ —

ಬಾಕಲು ತೆಗಿರಮ್ಮ ಭಾಗ್ಯಳ್ಳ ಸಿರಿದೇವಿ
ಜೋತ್ಸಮ್ಮನೊಳಗೆ ಕರೆಕೊಳ್ಳಿ।
ತಾಳು ತಾಳೆಂಬುತ ಕಿನ್ನುಡಿತಾನೆದ್ದು ಮಾತನಾಡುತಾ।
ಬಾಗಿಲು ತೆಗಿಯಾಕೆ ಬಾಲಯ್ಯ ಬಿಡನೊಲ್ಲಾ
ನಾನ್ಯಾಗೆ ಕದುವ ತೆಗಿಯಾಲೇ। ತಾಳು ತಾಳೆಂಬುತ......
ಬಾಲಯ್ಯ ಬಿಡದಿದ್ರೆ ಬಾಳೆ ಹಣ್ಣ ಸುಲಿ ಕೊಡಿ
ಕಿತ್ತಲೆ ಹಣ್ಣ ಸುಲಿ ಕೊಡಿ। ತಾಳು ತಾಳೆಂಬುತ......
ಕಿತ್ತಲೆ ಹಣ್ಣ ಸುಲಿ ಕೊಟ್ರು ಮೇಲು ಕೊಟ್ರು ತಾಯುಮ್ಮ
ಗಮ್ಮನ್ನೆದ್ದಗುಣೆ ತೆಗೆ ಬನ್ನಿ। ತಾಳು ತಾಳೆಂಬುತ......

ಬಾಲಯ್ಯ ಬಿಟ್ರಾರೆ ಚಿನ್ನಯ್ಯ ಬಿಡನೊಲ್ಲಾ
ನಾನ್ಯಾಗೆ ಕದವ ತೆಗೆಯಾಲೇ। ತಾಳು ತಾಳೆಂಬುತ......
ಚಿನ್ನಯ್ಯ ಬಿಡದಿದ್ರೆ ಚಿನ್ನದ ನೆವಳ್ಯಾವೋ
ಅವಕ್ಕೆರಡೊಳ್ಳೆ ಹುರಿ ಗೆಜ್ಜೆ। ತಾಳು ತಾಳೆಂಬುತ......



ಅವಕ್ಕೆರಡೊಳ್ಳೆ ಹುರಿಗೆಜ್ಜೆ ಮಾಡಿಸಿ ಕೊಡುವೆ
ಗಮ್ಮಾನೆದ್ದಗುಣೆ ತೆಗಿಬನ್ನಿ। ತಾಳು ತಾಳೆಂಬುತ......

ಚಿನ್ನಯ್ಯ ಬಿಟ್ವಾರೆ ಪುತ್ರಯ್ಯ ಬಿಡೋನಲ್ಲಾ
ನಾನ್ಯಾಗೆ ಕದವ ತೆಗೆಯಾಲೀ । ತಾಳು ತಾಳೆಂಬುತ......
ಪುತ್ರಯ್ಯ ಬಿಡದಿದ್ರೆ ಪಟ್ಟಣದಲರುಗೆಜ್ಜೆ
ಗಾಥನೆದ್ದುಗುಣಿ ತೆಗಿಬನ್ನಿ । ತಾಳು ತಾಳೆಂಬುತ......

ಬಾಕಲು ಬಾಕಾಲೇ ಬಲಕೊತ್ತಿ ನಿಂದಾವೆ
ಬಾಕಾಲ ಕೈಯ್ಯಾ ಬಲಿದವರೋ । ತಾಳು ತಾಳೆಂಬುತ.,....
ಬಾಕಾಲ ಕೈಯ್ಯೊ ಬಲಿದವರೋ ಎಂದೇಳಿ
ಮುತ್ತುರಾಚಾರಿ ಮಗನಯ್ಯ । ತಾಳು ತಾಳೆಂಬುತ......
ಮುತ್ತುರಾಚಾರಿ ಮಗಬಂದು
ಕಿತ್ತಾಲೆ ಹಣ್ಣು ಸುಲಿದಂತೆ । ತಾಳು ತಾಳೆಂಬುತ......

ದಂತಿ ದಂತಿ ಚೆಂದ ದಂತಿ ದಾರುಣಚಂದ
ದಂತಿ ಮೇಲೆ ಬರುಣಾವೋ । ತಾಳು ತಾಳೆಂಬುತ......
ದಂತಿ ಮೇಲೆ ಏನೇನೋ ಬರುಣಾವೋ
ಪಂಚುವರುಣದ ನವಿಲಿಂದು । ತಾಳು ತಾಳೆಂಬುತ......
ಪಂಚುವರಣದ ನವಲಿಂದು ಬರುಣಾವೋ
ಓದಿಕೊಳ್ಳಿ ಸ್ವಾಮಿ ಮನದಲ್ಲಿ । ತಾಳು ತಾಳೆಂಬುತ......

ವಸ್ತುವಿ ವಸ್ತಾವಿ ಚಂದ ವಸ್ತಾಲಾಗಲಿ ಚೆಂದ
ವಸ್ತಾಲ ಮೇಲೆ ಬರುಣಾವೋ । ತಾಳು ತಾಳೆಂಬುತ......
ವಸ್ತಾಲ ಮೇಲೆ ಏನೇನುಬರುಣಾವೋ ।
ದುಂಡು ಘಾಲಣುದ ಗಿಳಿನೂರು । ತಾಳು ತಾಳೆಂಬುತ......
ದುಂಡು ಘಾಲಣುದ ಗಿಳಿನೂರು ಅವನೂರು
ಓದಿಕೊಳ್ಳಿ ಸ್ವಾಮಿ ಮನದಲ್ಲಿ । ತಾಳು ತಾಳೆಂಬುತ......

— ೩ —

ಬಡಗಲು ಬಂಕಾಪುರ ದೊಡ್ಡವರಾಳುವ ರಾಜ್ಯ
ದೊಡ್ಡ ದೊರೆರಾಯ್ಯ ಅರಮನೆ । ಬಾಗಿಲ ಮುಂದೆ
ಒಡ್ಡು ದಾಟುವುದೆ ಬೆಳಕಾಯ್ತು । ಸುವ್ವೀರೋ
ಸಂಗಯ್ಯಾ ಸುವ್ವೀರೋ ಲಿಂಗಯ್ಯ
ಸುವ್ವಿಂದ್ರ ಬಾರೋ ಬಸವಯ್ಯಾ ।

ಸಣ್ಣ ಬಂಕಾಪುರ ಸಣ್ಣರಾಳುವ ರಾಜ್ಯ
ಸಣ್ಣ ದೊರೆರಾಯ್ರ ಅರಮನೆ । ಬಾಗಿಲ ಮುಂದೆ
ಒಣೆ ದಾಟುವುದೆ ಬೆಳಕಾಯ್ತು । ಸುವ್ವೀರೋ......
ಆಗುಸೆ ತೆಗಿಸಯ್ಯ ಬಗೆಸುಳ್ಳರ ನಮ್ಮಯ್ಯ
ಬಗಸೇಲಿ ಹೊನ್ನ ಚಿಳಿಯಾಲೆ । ಒಡಕೊಂಡು
ತಾವೇಳೊಂದುಗುಸೆ ತೆಗಿಸ್ಯಾರೇ । ಸುವ್ವೀರೋ......

ಮಳಿಗೆ ಒಳಗೆ ಮಗನ ತೊಟ್ಟಿಲ ಕಟ್ಟಿ
ಜಲಾಡಿ ಮಸರ ಕಡೆಯೋರೆ । ನಮ್ಮಮ್ಮ
ವಾಲೆ ಬೆಳಕೀಲಿ ಮಗನೆದ್ದು । ಚಿನ್ನಯ್ಯ
ಹರೆದೇರು ಬಂದಿದ್ದಾರೆ ಜಗಲೀಗೆ । ಚನ್ನಯ್ಯ
ಹರೆದೇರ್ಗೆ ಬಂದೀಳ್ಯ ಕೊಡಬೇಕು । ಸುವ್ವೀರೋ......



ವೀಳ್ಯದ ಮಾತಿಗೆ ಒಪ್ಪುವಳು ನಾವೆಲ್ಲಾ
ಸಾಲು ಸಲು ಚಕ್ರ ನಮಗೊಪ್ಪಿ । ಕೊಟ್ಟಾರೇ
ಲೋಲು ಚಾವಡೀನೆ ಇಳಿದೇವು । ಸುವ್ವಿರೋ......

ಹಾಡಿದವರು:
ಗೋಪಾಲಗೌಡರ ಮಗ ಸಿದ್ದಣ್ಣಗೌಡ
ಕುಡಿನೆಲ್ಲಿ, ಕೊಪ್ಪ ತಾಲ್ಲೂಕ್.

ಸಂಗ್ರಹ: ಕರಾಕೃ

* ಮಲೆನಾಡಿನ ಹಳ್ಳಿಗಳಲ್ಲಿ ದೀಪಾವಳಿ ಸಮಯದಲ್ಲಿ ಹಾಡುವ " ಅಂಟಿಕೆ ಪಂಟಿಕೆ " ಸಂಪ್ರದಾಯದ ಜಾನಪದ ಗೀತೆಗಳು.

ಅದರ ಪ್ರಾರಂಭದ ಇತಿಹಾಸ ಜಾಜ್ವಲ್ಯವಾಗಿದೆ

ಪ. ರಾ. ಪುರೋಹಿತ

# ‘ಕರ್ಮವೀರ’ದ ಮೊದಲ ಹತ್ತು ವರುಷಗಳು

ಶಕೆ ೧೮೪೨ ಮಾಘ ಶುದ್ಧ ಸಪ್ತಮಿ ರಥಸಪ್ತಮಿಯ ಶುಭದಿನದಂದು ಜನ್ಮ ತಾಳಿದ ‘ಕರ್ಮವೀರ’ದ ಇತಿಹಾಸವು ಪತ್ರಿಕಾ ಪ್ರಪಂಚದಲ್ಲಿಯೆ ಉಜ್ವಲವಾಗಿದೆ. ಕ್ರಾಂತಿಕಾರಕವಾಗಿದೆ. ಮಹಾತ್ಮಾ ಗಾಂಧೀಯವರ ಅಸಹಕಾರ ಚಳವಳಿಯೊಂದಿಗೆ ಅದು ಜನಿಸಿ ಹತ್ತು ವರುಷಗಳ ಕಾಲ ಪ್ರಾಂತ್ಯದಲ್ಲೆಲ್ಲ ರಭಸದ ಪ್ರಚಾರ ಕಾರ್ಯವನ್ನು ಮಾಡಿ ಆಳರಸರ ದಬ್ಬಾಳಿಕೆಗೆ ಆಹುತಿಯಾಯಿತು. ಫೆಬ್ರುವರಿ ೧೪, ೧೯೨೧ ರಂದು ಪ್ರಾರಂಭವಾದ ಪತ್ರಿಕೆ ೧೯೩೨ ಜನೆವರಿ ವರೆಗೆ ನಡೆದು ನಿಂತು ಹೋಯಿತು. ಅನಂತರ ೧೯೪೮ ಜನೆವರಿಯಿಂದ ಪುನರವತಾರ ಹೊಂದಿ ಇದೀಗ ದೇಶದಲ್ಲೆಲ್ಲ ಶ್ರೇಷ್ಠ ಪತ್ರಿಕೆಯೆಂದು ಪರಿಗಣಿಸಲ್ಪಟ್ಟು ಎಲ್ಲ ವರ್ಗಗಳಲ್ಲಿಯೂ ಅತ್ಯಂತ ಲೋಕಪ್ರಿಯ ಪತ್ರಿಕೆಯಾಗಿದೆ.

೧೯೨೦ ನೇ ಇಸವಿಯು ಭಾರತೀಯ ಸ್ವಾತಂತ್ರ್ಯದ ಇತಿಹಾಸದಲ್ಲಿ ಸಂಸ್ಮರಣೀಯವಾದ ವರುಷವು. ಮಹಾತ್ಮಾ ಗಾಂಧಿಯವರು ಬ್ರಿಟಿಶ್ ಸರಕಾರದೊಡನೆ ಅಸಹಕಾರ ಹೂಡಿ ಕಾಂಗ್ರೆಸ್ಸಿನ ಮುಖಾಂತರ ರಾಷ್ಟ್ರ ಸ್ವಾತಂತ್ರ್ಯಕ್ಕಾಗಿ ಹೋರಾಡಲು ಭಾರತೀಯರಿಗೆ ಕರೆಯಿತ್ತರು. ವಕೀಲರು ವಕೀಲಿಯನ್ನು ಬಿಡಬೇಕು, ವಿದ್ಯಾರ್ಥಿಗಳು ಶಾಲೆ ಕಾಲೇಜುಗಳನ್ನು ಬಿಡಬೇಕು ಮದ್ಯಪಾನ ಪ್ರತಿಬಂಧ ಮಾಡಬೇಕು. ವಿದೇಶಿ ಬಟ್ಟೆಗಳನ್ನು ಬಿಸುಟಿ ಕೈಯಿಂದ ನೂಲು ತೆಗೆದು ಕೈಮಗ್ಗಗಳಲ್ಲಿ ತಯಾರಾದ ಖಾದಿಬಟ್ಟೆಗಳನ್ನೇ ಧರಿಸಬೇಕು ಮೊದಲಾದ ಕಾರ್ಯಕ್ರಮಗಳನ್ನು ಕಾಂಗ್ರೆಸ್ಸು ರೂಪಿಸಿತು. ಈ ಕಾರ್ಯಕ್ರಮಗಳನ್ನು ಯಶಸ್ವಿಯಾಗಿ ಜಾರಿಯಲ್ಲಿ ತಂದರೆ ಒಂದು ವರುಷದಲ್ಲಿ ಸ್ವರಾಜ್ಯವನ್ನು ಸಂಪಾದಿಸಿಕೊಡುವುದಾಗಿ ಗಾಂಧೀಜಿ ಸಾರಿದರು.

ಇಂಥ ಪರಿಸ್ಥಿತಿಯಲ್ಲಿಯೇ ಕಾಲೇಜ ಪ್ರಾಧ್ಯಾಪಕತ್ವವನ್ನು ಬಿಟ್ಟ ಶ್ರೀ ರಾ. ಶ್ರೀ. ಹುಕ್ಕೇರಿಕರ ಮತ್ತು ರಂ. ರಾ. ದಿವಾಕರ ಹಾಗು ವಕೀಲಿಗೆ ಶರಣು ಹೊಡೆದ ಶ್ರೀ ಮಧ್ವರಾವ ಕಬ್ಬೂರ ಅವರು ಕಾಂಗ್ರೆಸ್ಸಿನ ಈ ಹೋರಾಟದ ಪ್ರಚಾರಕ್ಕಾಗಿ ಪತ್ರಿಕೆಯನ್ನು ಹೊರಡಿಸುವದು ಅವಶ್ಯವೆಂದು ಮನಗಂಡರು. ‘ಕರ್ಮವೀರ’ ಎಂಬ ಹೆಸರಿನಿಂದ ಮೇಲೆ ಉಲ್ಲೇಖಿಸಿದಂತೆ ರಥಸಪ್ತಮಿಯ ಶುಭ ಮುಹೂರ್ತದಲ್ಲಿ ಪತ್ರಿಕೆ ಹೊರಟಿತು. ಶ್ರೀ ದಿವಾಕರ ರಂಗರಾಯರು ಪತ್ರಿಕೆಯ ಸಂಪಾದಕರು; ಮಧ್ವರಾವ ಕಬ್ಬೂರ ಅವರು ಪ್ರಕಾಶಕರು.‘ ನಮ್ಮ ಕರ್ತವ್ಯ’ ವೆಂಬ ಮೊದಲ ಅಗ್ರಲೇಖದಲ್ಲಿ ಶ್ರೀ ದಿವಾಕರ ಅವರು ರಾಷ್ಟ್ರದ ಪರಿಸ್ಥಿತಿಯನ್ನು ವಿವೇಚಿಸಿ ‘ಇಡೀ ಹಿಂದುಸ್ತಾನದ ಸ್ವರಾಜ್ಯವು ನಮ್ಮ ಧ್ಯೇಯವಾಗಿರುವದು... ಕರ್ನಾಟಕವೇ ಸದ್ಯಕ್ಕೆ ನಮ್ಮ ಕಾರ್ಯಕ್ಷೇತ್ರವಿರುವದು. ಕರ್ನಾಟಕದ ಮುಖಾಂತರವಾಗಿ ಭರತಭೂಮಿಯ ಸೇವೆಯನ್ನು ಯಥಾಶಕ್ತಿಯಾಗಿ ಮಾಡಿ ಅದನ್ನು ಕೃಷ್ಣಾರ್ಪಣ ಮಾಡುವದು ನಮ್ಮ ಕರ್ತವ್ಯವೆಂದು ನಾವು ನಂಬುತ್ತೇವೆ... ಆ ಕಾರ್ಯದಲ್ಲಿ ಈ ಇಚ್ಛೆಯನ್ನು ಕೊಟ್ಟ ಸಕಲ ಜಗತ್ಪಾಲಕನಾದ ಕರ್ಮವೀರ ಭಗವಂತನೇ ಯಶಸ್ಸನ್ನು ಕೊಡುವನೆಂಬ ವಿಶ್ವಾಸದಿಂದ ನಾವು ಈ ಮೊದಲನೇ ಹೆಜ್ಜೆಯನ್ನು ಇಡುವೆವು. ಆ ವಿಶ್ವಾಸದಿಂದಲೆ ಈ ಜನತೆಯ ಸೇವೆಯನ್ನು ಆರಂಭಿಸುವೆವು— ಅದನ್ನು ಸರಿಮಾಡಿಕೊಳ್ಳುವದು ಜನತೆಯ ಕಡೆಗೆ ಅದನ್ನು ಯಶಸ್ವಿಯಾಗಿ ಮಾಡುವದು ಭಗವಂತನ ಕಡೆಗೆ’. ಎಂದು ಬರೆದರು.

ರಾಷ್ಟ್ರಸೇವೆಯಲ್ಲಿ ಧುಮುಕಿದ, ಕಾರ್ಯಕರ್ತರಿಂದ ರಾಷ್ಟ್ರೀಯ ಹೋರಾಟದ ಸಮಯದಲ್ಲಿಯೇ ಉದಿಸಿದ ಪತ್ರಿಕೆ ರಾಷ್ಟ್ರ ಪ್ರಚಾರ ಕಾರ್ಯದಲ್ಲಿ ಮುಂದಾಗಿತ್ತೆಂದು ಬರೆಯುವದು ಬೇಡ. ಅಂತೆಯೇ ಅಲ್ಪ ಸಮಯದಲ್ಲಿಯೇ ಅದು ಆಳರಸರ ವಕ್ರದೃಷ್ಟಿಗೆ ಬಿದ್ದಿತು. ಆಗಿನ ಕಲೆಕ್ಟರ ಪೇಂಟರ ಸಾಹೇಬರು ಸಂಪಾದಕ ಶ್ರೀ ದಿವಾಕರ ಮತ್ತು ಪ್ರಕಾಶಕ ಶ್ರೀ ಕಬ್ಬೂರ ಇವರನ್ನು ಕಚೇರಿಗೆ ಕರೆಸಿಕೊಂಡು ‘I am thirsting for your blood ’ ನನಗೆ ನಿಮ್ಮ ರಕ್ತಪಾನದ ಪಿಪಾಸೆಯಾಗಿದೆ ಎಂದು ಒಳ್ಳೆ ದರ್ಪದಿಂದ ಹೇಳಿ ಬೆದರಿಕೆ ಹಾಕಿದರು. ಹೇಗಾದರೂ ಮಾಡಿ ಪತ್ರಿಕೆ ನಿಲ್ಲುವಂತೆ ಮಾಡಲು ಯುಕ್ತಿಪ್ರಯುಕ್ತಿಗಳನ್ನು ಹುಡುಕಿದರು. ಶ್ರೀ ದಿವಾಕರ ಶ್ರೀ ಕಬ್ಬೂರ ಅವರನ್ನು ತುರಂಗಕ್ಕಟ್ಟಿದರು. ಕೂಡಲೆ ಶ್ರೀ ಆಲೂರ ವೆಂಕಟರಾಯರು ಸಂಪಾದಕರಾಗಿ ಮತ್ತಷ್ಟು ಉಗ್ರ ಬರೆಹಗಳನ್ನು ಬರೆದು ಆಳರಸರ ದಬ್ಬಾಳಿಕೆಯನ್ನು ತೀವ್ರ ಶಬ್ದಗಳಲ್ಲಿ ಖಂಡಿಸಹತ್ತಿದರು.

ಶ್ರೀ ಶಂ. ಬಾ. ಜೋಶಿ, ವೆಂ. ಶ್ರೀ ಮಿರಜಿಯವರು ಉಪಸಂಪಾದಕರೆಂದು ಒಳ್ಳೆ ಹುಮ್ಮಸದಿಂದ ಪತ್ರಿಕೆಯನ್ನು ನಡೆಸಹತ್ತಿದರು. ಶ್ರೀ ದಿವಾಕರ ಅವರು ಬಿಡುಗಡೆಯಾಗಿ ಬಂದ ನಂತರ ಮತ್ತೆ ಸಂಪಾದಕತ್ವವನ್ನು ವಹಿಸಿಕೊಂಡರು. ಶ್ರೀ ಕಬ್ಬೂರ ಶ್ರೀ ದ. ಪ. ಕರಮರಕರ ಅವರು ಪತ್ರಿಕೆಯನ್ನು ನಡೆಸುವಲ್ಲಿ ಬಹಳ ಸಹಾಯ ಮಾಡುತಿದ್ದರು. ಸಂಪಾದಕರೆಂದೂ ಕೆಲಸ ಮಾಡಿದರು. ಕರ್ಮವೀರದ ಬಳಗ ಪೂರ್ತಿ ಸ್ಥಾಪಿತವಾದಂತಾಯಿತು. ಯಾರು ತುರಂಗಕ್ಕೆ ಹೋದರೂ ಪತ್ರಿಕೆ ನಿಲ್ಲದಂತೆ ನೋಡಿಕೊಳ್ಳಲು ಈ ಬಳಗವು ಸದಾ ಸಿದ್ಧವಿದ್ದಿತು.

೧೯೩೦ ನೆಯ ಇಸ್ವಿಯ ಜುಲೈ ವರೆಗೆ ‘ಕರ್ಮವೀರ ’ ತನ ಧ್ಯೇಯದಂತೆ ಒಳ್ಳೆ ನಿಷ್ಠೆಯಿಂದ ಕಾಂಗ್ರೆಸ ಪ್ರಚಾರ ಕಾರ್ಯವನ್ನು ಮಾಡಿತು. ಆದರೆ ೧೯೩೦ ನೆಯ ಇಸ್ವಿ ರಾಷ್ಟ್ರದ ಸ್ವಾತಂತ್ರ್ಯ ಸಮರದಲ್ಲಿ ಒಳ್ಳೆ ಮಹತ್ವದ ವರುಷ. ಗಾಂಧೀಜಿ ಆ ವರ್ಷ ಉಪ್ಪಿನ ಸತ್ಯಾಗ್ರಹ ಮಾಡಲು ನಿರ್ಧರಿಸಿ ಸರಕಾರಕ್ಕೆ ಆಹ್ವಾನ ಕೊಟ್ಟರು. ಸರಕಾರವು ಕ್ರೂರ ದಬ್ಬಾಳಿಕೆಯನ್ನು ಪ್ರಾರಂಭಿಸಿತು. ಎಂದಿನಿಂದಲೂ ಕರ್ಮವೀರದ ಮೇಲೆ ವಕ್ರದೃಷ್ಟಿಯಿದ್ದ ಆಳರಸರು ಅದಕ್ಕೆ ೧೦೦೦ ರೂ. ಜಾಮೀನು ಕೇಳಿದರು. ಜಾಮೀನು ಕೊಟ್ಟು ಪತ್ರಿಕೆಯನ್ನು ನಡೆಸಬಾರದೆಂದು ಕಾಂಗ್ರೆಸ್ ಕಾರ್ಯಸಮಿತಿಯ ಅಭಿಪ್ರಾಯವಿದ್ದದರಿಂದ ಅನಿವಾರ್ಯವಾಗಿ ಪತ್ರಿಕೆಯನ್ನು ೧೯೩೦ ಜುಲೈ ೨೪ ರಿಂದ ನಿಲ್ಲಿಸಬೇಕಾಯಿತು. ಜಾಮೀನ ಅವಧಿ ಮುಗಿದ ನಂತರ ಮತ್ತೆ ಪತ್ರಿಕೆ ಹೊರಟಿತು.

೧೯೩೦ ರಲ್ಲಿ ಕಾಂಗ್ರೆಸ್ ಸಂಸ್ಥೆಗಳನ್ನೆಲ್ಲ ಅಕ್ರಮ ಕೂಟಗಳನ್ನಾಗಿ ಸಾರಲಾಯಿತು. ಕಾಂಗ್ರೆಸ್ ಕಚೇರಿಗಳಿದ್ದ ಕಟ್ಟಡಗಳನ್ನೆಲ್ಲ ತನ್ನ ವಶಪಡಿಸಿಕೊಳ್ಳಹತ್ತಿತು. ಅಷ್ಟರಲ್ಲಿ ಧಾರವಾಡಕ್ಕೆ ಸ್ಥಳಾಂತರಿಸಲ್ಪಟ್ಟಿದ್ದ ಕರ್ನಾಟಕ ಪ್ರಾಂತಿಕ ಕಾಂಗ್ರೆಸ್ ಕಮಿಟಿಯಿದ್ದ ಹಾಲಗೆರೆ ಮೇಲಿನ ಕಟ್ಟಡವನ್ನು ಧಾರವಾಡ ಜಿಲ್ಲೆಯ ಪೋಲೀಸರು ೧೧-೧೧-೧೯೩೦ ರಂದು ವಶಪಡಿಸಿಕೊಂಡರು. ಅಲ್ಲಿದ್ದ ಕರ್ಮವೀರ ಕಚೇರಿಯೂ ಸರಕಾರದ ವಶವಾಯಿತು.

೧೯೩೨ ರಲ್ಲಿ ದಬ್ಬಾಳಿಕೆ ಮತ್ತೆ ಪ್ರಾರಂಭವಾಯಿತು. ಕಾಂಗ್ರೆಸ್ ಸಮಿತಿಗಳ ಜೊತೆ, ಧಾರವಾಡದಲ್ಲಿ ೬-೮ ತಿಂಗಳ ಹಿಂದೆ ಇದ್ದ ‘ವಿದ್ಯಾರಣ್ಯ ಶಿಬಿರ’ ವೆಂಬ ಸ್ವಯಂಸೇವಕ ಸಂಘವೂ ಅಕ್ರಮ ಕೂಟವೆಂದು ಸಾರಲ್ಪಟ್ಟು ಆಗ ಅದರ ಚಟುವಟಿಕೆಗಳಿಗೆ ಮನೆಯಾಗಿದ್ದ ಮಂಗಳವಾರ ಪೇಟೆ ದೇಸಾಯಿ ಓಣಿಯಲ್ಲಿಯ ಶ್ರೀ ಮೊಕಾಶಿ ಗುರುರಾಯರ ಮನೆಯನ್ನು ಪೋಲೀಸರು ವಶಪಡಿಸಿಕೊಂಡರು. ಕರ್ಮವೀರ ಮುದ್ರಣಾಲಯವು ಆಗ ಆ ಕಟ್ಟಡದಲ್ಲಿದ್ದಿತು. ಸರಕಾರದವರು ಆ ಕಟ್ಟಡವನ್ನು ವಶಪಡಿಸಿಕೊಂಡು ಬಿಟ್ಟದ್ದರಿಂದ ಅದರಲ್ಲಿದ್ದ ಕರ್ಮವೀರ ಮುದ್ರಣಯಂತ್ರ ಟಾಯಿಪುಗಳು ಕಾಗದಪತ್ರಗಳು ಎಲ್ಲವೂ ಪೋಲೀಸ ವಶವಾದವು. ಅದು ಹೇಗೋ ಆ ವಾರದ ಪತ್ರಿಕೆಯನ್ನು ಹೊರಡಿಸಿ ಕರ್ಮವೀರಕ್ಕೆ ‘ವಿಶ್ರಾಂತಿ’ ಎಂದು ಬರೆದು ಅದನ್ನು ನಿಲ್ಲಿಸಬೇಕಾಯಿತು. ಸರಕಾರದವರು ನಮ್ಮ ಮನವಿಯನ್ನು ಮನ್ನಿಸಲಿಲ್ಲ. ಇಷ್ಟೇ ಅಲ್ಲ ಮುದ್ರಣಯಂತ್ರ ಮೊದಲಾದವುಗಳನ್ನೆಲ್ಲ ಮುಂದೆ ಲಿಲಾವು ಮಾಡಿಬಿಟ್ಟರು. ಶ್ರೀ ದಿವಾಕರ ಮೊದಲಾದವರು ತುರಂಗಕ್ಕೆ ಹೋದ್ದರಿಂದ ಹಾಗು ಮುದ್ರಣ ಯಂತ್ರ ಮೊದಲಾದವುಗಳು ಸರಕಾರ ವಶವಾದ್ದರಿಂದ ಕರ್ಮವೀರ ನಿಲ್ಲಬೇಕಾಯಿತು. ಆದರೆ ಈ ಹತ್ತು ವರ್ಷಗಳಲ್ಲಿ ಕರ್ಮವೀರ ಮಾಡಿದ ರಾಷ್ಟ್ರಪ್ರಚಾರಕಾರ್ಯ ಅತ್ಯಂತ ಉಜ್ವಲವಾಗಿದೆ. ‘ ಸ್ವಕರ್ತವ್ಯ ’ ವೆಂಬ ಮೊದಲ ಅಗ್ರಲೇಖದಲ್ಲಿ ದಿವಾಕರರಾಯರು ಇಟ್ಟುಕೊಂಡ ರಾಷ್ಟ್ರದ ಸ್ವಾತಂತ್ರ್ಯ ಮತ್ತು ಕರ್ನಾಟಕ ಏಕೀಕರಣ ಇವೆರಡೂ ಧ್ಯೇಯಗಳೀಗ ಸಾಧಿಸಲ್ಪಟ್ಟದ್ದರಿಂದ ‘ಕರ್ಮವೀರ’ ಕೃತಕೃತ್ಯವಾಗಿದೆ.

ದೀಪಾವಳಿಯ ಹಾರ್ದಿಕ ಶುಭಾಶಯಗಳು



ನಿಜವಾಗಿಯೂ ಒರಟಾದ ತಡೆ..... ಆದರೂ ನಂತರ ಚದುರಂಗದಾಟದ ಭರಭರಾಟಿಯಲ್ಲಿ ತಾನು ಅದ್ದುಬರಬಾರದೆಂದು ಮಗುವು ಮನಗಾಣಲಿಲ್ಲ. ★ ಅವನು ತನ್ನದೇ ಆದ **ಬ್ಯಾಂಕ ಆಫ ಇಂಡಿಯಾ ಸೇವ್ವಿಂಗ್ಸ ಬ್ಯಾಂಕ ಪಾಸ ಬುಕ್** ಬಗ್ಗೆ ಇದ್ದ ಹೆಮ್ಮೆಯು ಮೂಲಕ ಪ್ರತಿಯೊಬ್ಬರಿಗೂ ಅದನ್ನು ತೋರಿಸಬೇಕೆಂಬ ಬಲವಾದ ಇಚ್ಛೆಯನ್ನು ಅವನು ತಡೆಯಲಾರದವನಾಗಿದ್ದನು. ಸೇವ್ವಿಂಗ್ಸ ಚಟವು ಒಳ್ಳೇ ಚಟವಾಗಿದೆ ಅದನ್ನು **ನಿಮ್ಮ ಮಕ್ಕಳೂ** ತಮ್ಮ ಜೀವನದ ಪ್ರಾರಂಭಾವಸ್ಥೆಯಲ್ಲಿಯೇ ಪಡೆಯಲಿ.

**ದಿ ಬ್ಯಾಂಕ್ ಆಫ್ ಇಂಡಿಯಾ ಲಿ.**
ಟಿ. ಡಿ. ಕನ್‌ಸಾರಾ, ಜನರಲ್ ಮೆನೇಜರ



ನಿಜವಾಗಿಯೂ
ಒರಟಾದ ತಡೆ........

ನೀವೂ ಇದನ್ನು ವಿಚಾರಿಸಿ ಇಟ್ಟುಕೊಳ್ಳಿ

# ತಲೆ ಬೇಕೆ?

ಬೀChi




ನಾನು ಹೆಂಣಾಗಿದ್ದರೆ ಚೆನ್ನಾಗಿತ್ತು. ನನ್ನಲ್ಲಿಯೇ ಅಂದುಕೊಂಡೆ ಒಂದು ದಿನ.

ಈ ಮಾತು ನಾನಂದುಕೊಂಡುದು ಇದೇ ಮೊದಲಸಲವಲ್ಲವಲ್ಲ ? ಹಿಂದೂ ಎಷ್ಟೋಬಾರಿ ಅಂದುಕೊಂಡಿದ್ದೇನೆ, ಮುಂದೂ ಅಂದುಕೊಳ್ಳುತ್ತೇನೆ. ಹೆಂಣಾಗುವವರೆಗೂ ಅಂದುಕೊಳ್ಳುತ್ತಲೇ ಇರುತ್ತೇನೋ ಏನೋ, ಯಾರು ಬಲ್ಲರು ? ಆ ಅರ್ಧ-ನಾರೀನಟೇಶ್ವರನಿಗೇ ಗೊತ್ತು.

ಎರಡು ದಿನಕ್ಕೊಮ್ಮೆ ಮುಖ, ತಿಂಗಳಿಗೊಮ್ಮೆ ತಲೆ ಸ್ವಚ್ಛವಾಗಬೇಕು ಗಂಡಿಗೆ. ಇದು ಆದರೇ ಅವನು ಗಂಡು. ಈ ಮಹಾಯಾಗಕ್ಕೆ ಕುಳಿತಾಗಲೆಲ್ಲ ನನ್ನ ಬಾಯಿಂದ ಈ ಉದ್ಗಾರ ಹೊರಬೀಳುತ್ತಲೇ ಇರುತ್ತದೆ.

ಮುಖಕ್ಷೌರ ನನ್ನ ಕೈಯಲ್ಲಿಯೇ ಇದೆ. ಸುಖವೋ, ಕಷ್ಟವೋ, ಇಷ್ಟವೋ ಆ ಇಷ್ಟವೂ, ತಂಣೀರೋ – ಬೀಸಿನೀರೋ – ಕಣ್ಣೀರಂತೂ ನಿಜ, ಬ್ಲೇಡ್ ಹಾಗಿದ್ದರೆ - ಮುಗಿಸಲೇಬೇಕು; ಮುಗಿಸುತ್ತೇನೆ. ಮುಂಡನಕ್ಕೆ ಗೌಣವಾರ, ತಿಥಿ ಏನೇನೆಲ್ಲ ಬರೆದಿಟ್ಟಿದ್ದಾರೆ, ನಾಪಿತ-ಶತ್ರುಗಳಾದ ನಮ್ಮ ಪೂರ್ವಜರು. ಆದರೆ ಸ್ವಯಂಕ್ಷೌರಕ್ಕೆ ಯಾರ ಅಡ್ಡಿಯೂ ಇಲ್ಲವಲ್ಲ? ಇದಕ್ಕೂ ನಿಯಂತ್ರಣ, ನಿಬಂಧನೆ ಮಾಡಿ ಬರೆದಿಡುತ್ತಿದ್ದರೋ ಏನೋ ? ಆದರೆ ಪಾಪ! ಆಗವರಿಗೆ ತಿಳಿಯದು, ಮುಂದಿನ ಕಾಲದಲ್ಲಿ ಕ್ಷೇಮಕತ್ತಿ ( Safety Razor ) ಬರುತ್ತದೆಂಬುದು. ಅಷ್ಟು ಮಾತ್ರ ಭವಿಷ್ಯ ತಿಳಿಯುವಂತಿದ್ದರೆ ಅವರು ದೇವರೇ ಆಗಿಬಿಡುತ್ತಿದ್ದರು,

ಇನ್ನೊಂದು ವಿಷಯ— ಇದು ಅಡ್ಡ ಮಾತೇನಲ್ಲ. ಮುಖ್ಯ ವಿಷಯಕ್ಕೆ ಒಂದು ರೀತಿಯಿಂದ ಸಂಬಂಧಿಸಿದುದೇ ಇದು. ಆದ ಕಾರಣ ಇಲ್ಲಿ ಇದರ ಚಿಂತನೆ. ಅಥಾತೋ ಶಿರ ಮುಂಡನ ಜಿಜ್ಞಾಸಃ!

ಇಂತಿಂತಹ ತಿಥಿ, ಇಂತಿಂತಹ ವಾರ 'ಪುಣ್ಯತಿಥಿ ಹರಿದಿನಗಳಂದು, ಸೂರ್ಯಾಸ್ತದ ನಂತರ, ಸೂರ್ಯೋದಯದ ಪೂರ್ವ, ಮುಖಪ್ರಕ್ಷಾಳನದ ಮುಂಚೆ, ಭೋಜನದ ತರುವಾಯ ಕ್ಷೌರ ಕೂಡದು ಎಂದೆಂಬ ಉಲ್ಲೇಖವಿದೆ–ಕ್ಷಮಿಸಬೇಕು, ಇದೆ ಅಂತೆ. ಇಲ್ಲಿ ಕ್ಷೌರ ಅಂದರೆ ತಲೆ ಮತ್ತು ಮುಖ ಕೂಡ ಎಂದು ಬರೆದವರ ಅಭಿಪ್ರಾಯವೆಂಬುದು ಸ್ಪಷ್ಟ, ಅಲ್ಲವೆ?

ಆದರೇ.........

ನಮ್ಮ ವಿಜ್ಞಾನದಲ್ಲಿ ಒಂದು ಮಾತಿದೆ. ಯಾವುದ್ದೇ ಪ್ರಾಣಿ— ಮನುಷ್ಯನೂ ಒಂದು ಒಬ್ಬ ಪ್ರಾಣಿ— ತನ್ನ ದೇಹದ ಯಾವುದೇ ಅಂಗವನ್ನು ಉಪಯೋಗಿಸುವುದಿಲ್ಲವೋ ಆ ಅಂಗವು ಕಾಲಕ್ರಮೇಣ, ಪ್ರಕೃತಿ ನಿಯಮದ ಮೇರೆಗೆ, ಇಲ್ಲದಾಗುತ್ತದೆ. ಮುಂದಿನಪೀಳಿಗೆಗಳಿಗೆ ಆ ಅಂಗವಿರುವುದಿಲ್ಲ. ಕಪಿಯಾಗಿದ್ದಾಗ ಇದ್ದ ಬಾಲವು ಮನುಷ್ಯನಾದ ನಂತರ ಮಾಯವಾಯಿತು, ಮನುಷ್ಯ ಎದ್ದು ನಿಂತ ಮತ್ತು ಬಾಲವನ್ನು ಉಪಯೋಗಿಸಲಿಲ್ಲವೆಂಬ ಏಕಮಾತ್ರ ಕಾರಣದಿಂದ. ಕುದುರೆಯ ಕಾಲಲ್ಲಿಯೂ ಇಂತಹದೇ ಒಂದು ಮಾರ್ಪಾಟು ಆಗಿದೆಯಂತೆ. ನನ್ನ ಊಹೆ ಅಲ್ಲ ಇದು, ವಿಜ್ಞಾನ ಹೀಗೆಂದು ಹೇಳುತ್ತಿದೆ. ಈಗ ಒಂದು ಮಾತು ಸ್ಪಷ್ಟವಾಯಿತು. ಯಾವ ಅಂಗವು ಉಪಯೋಗದಲ್ಲಿಲ್ಲವೋ ಕ್ರಮೇಣ ಆ ಅಂಗವೇ ಇಲ್ಲವಾಗುತ್ತದೆ.

ಈಗ ನಮ್ಮ ಜನ ದೇಹದಲ್ಲಿಯ ಅಂಗಾಂಗಗಳಲ್ಲಿ ಅತಿ ಕಡಿಮೆ ಉಪಯೋಗಿಸುವ ಅಂಗ ಯಾವುದು? ಎಲ್ಲರಿಗೂ ಗೊತ್ತಿದೆ, ತಲೆ; ಈಗ ತಲೆಯ ಉಪಯೋಗ ಇಷ್ಟು ಕಡಮೆಯಾಗಿದೆ, ಇದನ್ನು ನಾವು ಹೋದಲ್ಲೆಲ್ಲ ಹೊತ್ತುಕೊಂಡು ಹೋಗುವುದೇ ಒಂದು ತಲೆ ಇಲ್ಲದ ಕೆಲಸ ಎಂದೆನಿಸುತ್ತದೆ. ಆದ ಕಾರಣ ನಿರುಪಯುಕ್ತವಾದ ಈ ತಲೆ ಇನ್ನು ಕೆಲವೇ ಕಾಲದನಂತರ- ಮುಂದಿನ ಹಲವು ಪೀಳಿಗೆಗಳ ನಂತರ ಅನ್ನಿ—ಇಲ್ಲವಾಗುತ್ತದೆ. ಆಗಿನ ಮನುಷ್ಯನಿಗೆ ತಲೆ ಇಲ್ಲ- ಕತ್ತಿನ ಆ ಬದಿ ಈ ಬದಿ ಒಂದೊಂದು ಕಂಣು, ಮಧ್ಯೆ ಮೂಗು, ಅದರಡಿಯಲ್ಲಿ ಬಾಯಿ. ಮುಂದಿನ ಮನುಷ್ಯ, ನಮ್ಮ ಮೊಮ್ಮಗನ, ಮೊಮ್ಮಗನ ಮರಿಮಗ, ಹೀಗಿರುತ್ತಾನೆಂದ. ತಲೆಯುಳ್ಳ ನಾವು ಸುಲಭವಾಗಿ ಊಹಿಸಬಹುದಾಗಿದೆ. ನಮ್ಮ ವಂಶಜರು ತಲೆಯೇ ಇಲ್ಲದವರು ಆಗುತ್ತಾರೆಂದು ನಾವು ಎಷ್ಟೂ ದುಃಖಿಸಬೇಕಿಲ್ಲ. ಸಂಪೂರ್ಣವಾಗಿ ನಿರುಪಯುಕ್ತವಾದ ತಲೆಯನ್ನು ನಮ್ಮಲ್ಲಿ ಈಗ ಅನೇಕರು—ಅವರೇ ಹೆಚ್ಚು ಅಂದರೆ ಆ ಗುಂಪಿನವರು ಕೋಪಿಸಿಕೊಳ್ಳದಿರಲಾರರು- ಇಂದು ಅನವಶ್ಯವಾಗಿ ಹೊತ್ತಿರುವುದಕ್ಕೆ ನಾವು ನಿಜವಾಗಿಯೂ ದುಃಖಿಸಬೇಕಾಗಿದೆ.

ಮುಂದೊಂದು ಪೀಳಿಗೆಯಲ್ಲಿ ಮನುಷ್ಯನಿಗೆ ತಲೆ ಇಲ್ಲ. ಆಗ ಈ ಶಿರೋಮುಂಡನದ ಕಟ್ಟು, ಕಾಯಿದೆ, ಕಡ್ಡಾಯ, ಗೌಣವಾರ ತಿಥಿಗಳ ಪಟ್ಟಿ ಎಲ್ಲವೂ ಅರ್ಥಹೀನ ಅಲ್ಲವೆ? ತಲೆ ಇಲ್ಲದ ಜನರ ಆ ಯುಗದಲ್ಲಿ, ತಲೆಯ ಬಗ್ಗೆ ಏನೇನನ್ನೂ ಬರೆದಿಟ್ಟ ಈ ತಲೆವಂತರೇ ತಲೆ ಇಲ್ಲದವರಾಗುತ್ತಾರೆ. ಇದನ್ನೆಲ್ಲ ಊಹಿಸಲಾರದವರು ಮುಖಕ್ಷೌರದ ಬಗ್ಗೆಯೂ ಯೋಚಿಸಿಲ್ಲ ಎಂದು ತಿಳಿದು ಅವರನ್ನು ಕ್ಷಮಿಸುವದು ನಮ್ಮ ತಲೆಗೆ ಸೂಕ್ತವೆನಿಸುತ್ತದೆ.

ಮುಖದ ವಿಷಯ ಮುಗಿಯಿತು, ಮಂಡೆಯ ಮಾತಿಗೆ ಬರೋಣ. ಕ್ರಾಪ್ ಕಟ್ ಆಗಬೇಕು. ಪೂರ್ವಜರು ಬರೆದಿಟ್ಟ ಕಟ್ಟುಗಳನ್ನೆಲ್ಲ ಸುಟ್ಟು-ಹಾಕಿದ್ದೇವೆ. ಹೊಸತನ ತಾನಾಗಿಯೆ ಹುಟ್ಟಿಕೊಂಡಿದೆ. ಸಲೂನಿಗೆ ಹೋಗಲು ಭಾನುವಾರವೇ ಒಳ್ಳೆಯದು. ಆಫೀಸಿಗೆ ರಜೆ, ಅಡುಗೆಯೂ ತಡ. ಆದರೆ ಯಾವ ಭಾನುವಾರ? ತಿಂಗಳಲ್ಲಿಯ ಕಡೆಯ ಎರಡು ಭಾನುವಾರಗಳಂತೂ ಸಾಧ್ಯವಿಲ್ಲ- ಅಲ್ಲಿಯವರೆಗೂ ಸಂಬಳ ಇನ್ನೂ ಉಳಿದಿರುತ್ತದೆಯೆ? ಸಾಲ

ದೀಪಾವಳಿಯು ನಮ್ಮೆಲ್ಲ ಗ್ರಾಹಕರಿಗೂ
ಇಷ್ಟಮಿತ್ರರಿಗೂ ಶುಭದಾಯಕವಾಗಲಿ..





ಇಗೋ, ಇಲ್ಲಿಂದಲೇ ನಿಮಗೆ
ಸಿ. ಸಿ. ಸಿ. ಕಾಫಿ ಬರುತ್ತಿರುವದು

# ಸಿ. ಸಿ. ಸಿ. ಕಾಫಿ

ಸುವಾಸನೆ—ಸುರುಚಿ

ಪರಿಶುದ್ಧತೆ—ಲೋಕಪ್ರಿಯತೆ

ನಿಮ್ಮ ಹಣಕ್ಕೆ ಯೋಗ್ಯ ಮಾಲು

## ಕರ್ನಾಟಕ ಕಾಫಿ ಕಂಪನಿ

## ಶ್ರೀ ಶ್ರೀನಿವಾಸ ಕೃಪಾ

ದಾವಣಗೆರೆ ಸಿಟಿ




## CARNATIC COFFEE COMPANY

**DAVANGERE CITY**

ಹೇಳಿದರೆ ಈ ಮನುಷ್ಯ ಬಹುಕಾಲದಿಂದಲೂ ಒಂದೇ ಊರಲ್ಲಿದ್ದು ಸಾಕಷ್ಟು ವರ್ಚಸ್ಸು (ವರ್ಚಸ್ಸು) ಬೆಳೆಸಿಕೊಂಡಿದ್ದಾನೆ–ಎಂಬುದು ರುಜುವಾಗಿ ಇನ್ನು ಬೇರೆ ಊರಿಗೆ ವರ್ಗಾವಣೆ. ಹಾಗಾದರೆ ಮೊದಲ ಭಾನುವಾರವೇ ಕ್ಷೇಮವಾರ. ಎಲ್ಲರೂ ಒಂದೇ ದಿನ ಬಂದು ಕುಳಿತರೆ ಆ ಕ್ಷೌರಿಕನೇನು ದೇವರೆ? ಅವನಿಗೇನು ನಾಲ್ಕೈವೆಯೇ ಕೈಗಳು? 'ಒಂದೈದೇ ನಿಮಿಷ, ಕೂತುಕೊಳ್ಳಿ ಮಾಸ್ಟೋಮಿ' ಎಂದೆಂದು ಇಡೀ ದಿನವೆಲ್ಲ ಅಲ್ಲಿಯೆ ಕೊಳೆ ಹಾಕುತ್ತಾನೆ. ತಲೆಯೋಡಿಸಿದೆ, ಎರಡನೆ ಭಾನುವಾರ ಸರಿ ಎಂದು ನಿಶ್ಚಯಿಸಿ ಹೊರಟೆ ಸಲೂನಾಭಿಮುಖನಾಗಿ.

ಚಿಕ್ಕ ಕದ ದಬ್ಬಿ ಒಳ ನುಗ್ಗಿದೆ, 'ಬನ್ನಿ ಮಾಸ್ಟೋಮಿ, ಒಂದೈದೇ ನಿಮಿಸ' ಎಂದು ಸ್ವಾಗತಿಸಿದ ಸಲೂನ್ ಯಜಮಾನ, ಕೈಲಿದ್ದ ತಲೆಯ ಮೇಲಿಂದ ಕಣ್ಣನ್ನೂ ಎತ್ತದೆ.

ನನಗೊಬ್ಬನಿಗೇ ಏನು ತಲೆ ಇರುವುದು? ಎಲ್ಲರೂ ನನ್ನಂತೆಯೇ ಮಾಡಿದ್ದಾರೆ.

ಕ್ಷೌರವೇ ಬೇಡವೆನಿಸಿತು, ಹೊರಬಿದ್ದು ಮನೆಯ ದಾರಿ ಹಿಡಿದೆ. ಆಗ ಅಂದುಕೊಂಡಿದ್ದು

'ನಾನು ಹೆಣ್ಣಾಗಿದ್ದರೇ ಚೆನ್ನಾಗಿತ್ತು'

ಅಂತ ದಾರಿಯುದ್ದಕ್ಕೂ ಬಂದೆ ತಲೆ ತಗ್ಗಿಸಿ— ತಲೆ ಇರುವುದೇ ತಗ್ಗಿಸಲಿಕ್ಕೆ ಅಲ್ಲವೆ?

"ಏನಪ್ಪಾ, ಸೌಖ್ಯವೆ?" ಎಂದರು. ತಲೆ ಎತ್ತಿ ನೋಡಿದೆ, ನಮ್ಮೂರಿನ ಪುಢಾರಿ!

"ಏನೋ, ಇಷ್ಟು ಮಟ್ಟಿಗೆ"

ಎಂದು ಗೊಣಗಿ ನಿಂತೆ ಅವರ ಮುಂದು.

ಆ ಮಾತು, ಈ ಮಾತು ಆಡಿದ್ದವು ಲೋಕಾಭಿರಾಮವಾಗಿ–ಕಡೆಗೆ ಅವರು ಅಂದರು.

"ನನ್ನ ಮುಂದೂ ಸಂಕೋಚವೆ? ಏನಾದರೂ ಇದ್ದರೂ ಹೇಳಿಕೊ, ನಿನ್ನ ಕಷ್ಟಸುಖಗಳನ್ನು."

ಹೇಳಿಕೊಳ್ಳುವಂತಹ ಸುಖ ಏನಿದೆ? ಇದ್ದವನು ಹೇಳಿಕೊಳ್ಳುತ್ತಾನೆ ಏಕೆ? ನನ್ನ ಕಷ್ಟವನ್ನು ಅವರಲ್ಲಿ ತೋಡಿಕೊಂಡೆ.

"ಇಷ್ಟೇ ತಾನೆ? ಒಂದೈವತ್ತು ರೂಪಾಯಿ ಜೇಬಿನಲ್ಲಿಟ್ಟುಕೊಂಡು ನಾಳೆ ಬಾ."

ಗುಟ್ಟಾಗಿ ಹೇಳಿ, ಚೆನ್ನು ತಟ್ಟಿ, ಅರ್ಥಗರ್ಭಿತವಾಗಿ ನಕ್ಕು ನಡೆದರು.

ಮನೆಗೆ ಬಂದು ಅವಳಿಗೂ ಹೇಳಿದೆ.

"ಐವತ್ತು ಹೋದರೆ ಹೋಗ್ಲಿ ಹೋಯಿತು. ಕೆಲಸ ಆಗತ್ತೆ ತಾನೆ?"

"ಅವರು ಕೈಹಾಕಿದ ಮೇಲೆ ಕೇಳಬೇಕೆ!"

ಐವತ್ತು ಪುಢಾರಿಗಳ ಕೈಗಿತ್ತೆ, ಆ ಮಾತಿಗಿಂದು ಮೂರು ವರ್ಷಗಳಾದುವು–ನನ್ನ ಕೆಲಸ ಮಾತ್ರ ಇನ್ನೂ ಆಗುತ್ತಲೇ ಇದೆ.

ಆ ನಾಪಿತನ ಕ್ಷೌರ ಕ್ಷೌರವೇ, ಈ ಪುಢಾರಿ ಮಾಡಿದ ಕ್ಷೌರದ ಮುಂದು? ಇದು ಮಹಾ ಕ್ಷೌರ. ಇವರ ಕ್ಷೌರಕ್ಕೆ ಗಂಡಾದರೇನು, ಹೆಣ್ಣಾದರೇನು?

ಇಂತಹ ತಲೆಯುಳ್ಳ ಈಗಿನ ಜನದಕ್ಕಿಂತಲೂ ತಲೆ ಇಲ್ಲದೆಯೆ ಹುಟ್ಟುವ ಮುಂದಿನ ಪೀಳಿಗೆ ಮೇಲಲ್ಲವೆ?

ತಲೆ ಇರೂವಾಗಲೇ ಯೋಚಿಸೋಣ; ತಲೆ-ಬೇಕೆ?



# ನಮೋ ನವ್ಯ ಕವಿತಾ

'ಕವಿತಾ'......'ಕವಿತಾ'......
ಎಂಥ ಹೆಸರು ಮಗುವಿಗೆ!
ಇಂಥ ಹೆಸರೆ ಮಗಳಿಗೆ?
ಕವಿಯು ಸೃಷ್ಟಿಗಿಡುವ ಹೆಸರ ಮನುಜ ಸೃಷ್ಟಿಗಿಡುವುದೆ!
"ಕವಿತಾ......ಕವಿತಾ......ಬಾ....ಬಾ ಮಗೂ..."
ಕೊಡುವ ಹಸುರು ಹುಲ್ಲ ಬಯಸಿ 'ಬರುವ-ಬಿಡುವ' ಹುಲ್ಲೆಮರಿ!
ಮುದ್ದು ಮುಖ, ಮಧುರ ಸುಖ
ಹೊಳೆವ ಕಣ್ಣು ರಸದ ಹಣ್ಣು
ಮಾಟ ರೂಹು, ನೀಟ ನಡಿಗೆ
ಕೋಟಿಗೊಂದು ಇಂಥ ಮಗು!
ಮುಗ್ಧತೆಯನೆ ಮುದ್ದೆಮಾಡಿ
ಮಾಡಿದಂಥ ಮಗು 'ಕವಿತಾ'!
"ಬಾ.. ...ಬಾ......ಕವಿತಾ......"
ಇಲ್ಲ ಎಂಬುದವಳ ವ್ರತಾ.......
"ನಿನ್ನ ಹೆಸರದೇನು, 'ಕವಿತಾ'?"
......ಪ್ರಶ್ನೆಯಲ್ಲೇ ಇದೇ ಉತ್ತರ!
......ರೂಪದಲ್ಲೇ ಹೆಸರಿಲ್ಲವೇ
......ಕೇಳಬೇಕೆ ಈ ಅರಸಿಕ!
ಅವಳ ಮೌನಕಿರುವ 'ಧ್ವನಿ'!
"ಬಾ......ಬಾ......ಕವಿತಾ......"
ನಿರ್ನಿಮೇಷ, ನಿಷ್ಪಂದ, ನಿಶ್ಚಲ ಮಿಂಚುಳ್ಳಿ!
ಹೊಂಚುಹಾಕಿ ಹಿಡಿದರವಳ
ಮೋಡ—ಗುಡುಗು—ಮಿಂಚು—ಮಳೆ
ಒಮ್ಮೆಗೇ......ಒಟ್ಟಿಗೇ........
ಮರುಕ್ಷಣದಲಿ
ಮಂ...ದ...ಹಾ...ಸ!
ಮಂಜು ಹನಿತ ಚೆಲು ಗುಲಾಬಿ!
ಚಿಟುಗುಬ್ಬಿಯು ಚಟುವಟಿಕೆ!
ಅಲಂಕಾರವೇನೂ ಇರದ ಸಹಜ 'ಕವಿತಾ' ಇರುವುದೆ?
ಕವಿತೆಗಿಂಥ 'ನುಡಿ'ಗಳಿಹವೆ?
ಕವನಕಿಂಥ 'ಅಡಿ'ಗಳಿಹವೆ?
ಮೌನದಲ್ಲೇ ಮಾತಾಡುವ 'ಧ್ವನಿ'ಯದೆಲ್ಲಿ ಕವಿತೆಗೆ?
ಜೀವ ತುಂಬಿ ತುಳುಕುವಂಥ
ಭಾವದೂಟೆ 'ತೊರೆ'ಯುವಂಥ
'ಕವಿತಾ'...... ಅಲ್ತೆ ನವ್ಯ ಕವಿತಾ?
ನಮೋ ನವ್ಯ ಕವಿತಾ:

— ಶ್ರೀ ವೃಷಭೇಂದ್ರಸ್ವಾಮಿ

ಶ್ರೀ ರಂಗನಾಥ ದಿವಾಕರ

# ಕರ್ಮಸಮಾಧಿ ಸಾಧ್ಯವೇ?

## ಪರಬ್ರಹ್ಮನು ಕರ್ಮ-ಸಮಾಧಿಸ್ಥನು

ಸಮಾಧಿ ಎಂಬುದು ಚಿತ್ತದ ಒಂದು ಅವಸ್ಥೆ. ಒಬ್ಬ ವ್ಯಕ್ತಿ ಏಕಾಂತದಲ್ಲಿ ಕುಳಿತು ತನ್ನ ಚಿತ್ತವನ್ನು ಪರಮಾತ್ಮನಲ್ಲಿ ಲೀನಗೊಳಿಸಿ ನಿಷ್ಕರ್ಮನಾಗಿ ತದೇಕ-ಧ್ಯಾನದಲ್ಲಿ ತೊಡಗಿರುವುದು ಎಂಬ ಚಿತ್ರ ಸಾಮಾನ್ಯವಾಗಿ ನಮ್ಮ ಕಣ್ಣೆದುರು ಬರುವುದು. ಆದರೆ ಸಮಾಧಿಯ ಹಲವಾರು ಪರ್ಯಾಯ ರೂಪಗಳಿವೆ. ಹಾಗೆ ಕರ್ಮ-ಸಮಾಧಿಯೂ ಒಂದು ವ್ಯಕ್ತಿಭಾವ ಅಳಿದು ವಿಶ್ವಭಾವ ನೆಲೆಗೊಂಡು ಲೀಲಾಭಾವದಿಂದ ಆವಿರ್ಭವಿಸುವ ಕರ್ಮದಲ್ಲಿ ತನ್ಮಯವಾಗಿರುವುದೇ ಕರ್ಮ-ಸಮಾಧಿಯ ಲಕ್ಷಣ ಎಂದು ಯೋಗಶಾಸ್ತ್ರದಲ್ಲಿ ಪರಿಣತರಾದ ಲೇಖಕರು ಇಲ್ಲಿ ವಿಶದಪಡಿಸಿರುವರು.

### ಇಬ್ಬಗೆಯ ಸಮಾಧಿ

ಸಮಾಧಿ ಎಂಬ ಶಬ್ದವನ್ನುಚ್ಚರಿಸಿದೊಡನೆ ಈ ಹೊತ್ತು ಅದರ ಬಗ್ಗೆ ಒಂದು ವಿಶಿಷ್ಟವಾದ ಚಿತ್ರ ನಮ್ಮೆದುರಿಗೆ ನಿಲ್ಲುತ್ತದೆ. ಅದಾವುದೆಂದರೆ ಒಬ್ಬ ವ್ಯಕ್ತಿ ಒಂದು ನಿತಾಂತ ಸ್ಥಾನದಲ್ಲಿ ಕುಳಿತು ತನ್ನ ಚಿತ್ತವನ್ನು ಪರಮಾತ್ಮನಲ್ಲಿ ಲೀನ ಮಾಡಿ ನಿಷ್ಕರ್ಮನಾಗಿ ತದೇಕ-ಧ್ಯಾನದಲ್ಲಿ ನಿರತನಾಗಿರುವುದು. ಚಿತ್ತವು ಒಂದೇ ವಿಷಯದಲ್ಲಿ ಅಥವಾ ಒಂದೇ ಬಿಂದುವಿನಲ್ಲಿ ನೆಟ್ಟಿತೆಂದರೆ ಅದಕ್ಕೆ ಏಕಾಗ್ರತೆ ಎನ್ನುವರು. ಆದರೆ ಅದು ಜ್ಞಾನಪೂರ್ವಕವಾಗಿ ಪರಮಾತ್ಮನಲ್ಲಿ ತನ್ಮಯವಾಯಿತೆಂದರೆ ಅದು ಸಮಾಧಿ ಎನಿಸುವದು.

ಸಾಮಾನ್ಯವಾಗಿ ಸಮಾಧಿಯಲ್ಲಿ ಎರಡು ಬಗೆಗಳನ್ನು ಕಲ್ಪಿಸುವದುಂಟು: ಸವಿಕಲ್ಪ ಹಾಗೂ ನಿರ್ವಿಕಲ್ಪ ಅಥವಾ ಸಂಪ್ರಜ್ಞಾತ ಹಾಗೂ ಅಸಂಪ್ರಜ್ಞಾತ. ಉಪಾಸನೆಗಳಲ್ಲಿ ಎರಡು ಬಗೆಗಳು, ಒಂದು ಸಗುಣೋಪಾಸನೆ—ಇನ್ನೊಂದು ನಿರ್ಗುಣೋಪಾಸನೆ. ಇವುಗಳಿಗನುಗುಣವಾಗಿಯೇ ಈ ಎರಡು ಬಗೆಯ ಸಮಾಧಿಗಳಿರುವವು. ಸಗುಣೋಪಾಸನೆಯ ಪರಿಣತಿ ಸವಿಕಲ್ಪ ಅಥವಾ ಸಂಪ್ರಜ್ಞಾತ ಸಮಾಧಿಯಲ್ಲಿ ಆಗುವದು. ನಿರ್ಗುಣೋಪಾಸನೆಯ ಪರಿಣತಿ ಅಸಂಪ್ರಜ್ಞಾತ ಸಮಾಧಿಯಲ್ಲಿ. ಗೀತೆಯಲ್ಲಿ ನಿರ್ಗುಣೋಪಾಸನೆಯು ಕಠಿಣವಾದುದು ಎಂದು ಶ್ರೀಕೃಷ್ಣನು ಹೇಳಿರುವನು. ಯಾಕೆಂದರೆ ಸಗುಣವಾದ ಜೀವವು ಪರಮಾತ್ಮನ ನಿರ್ಗುಣತ್ವವನ್ನು ಅನುಭವಕ್ಕೆ ತಂದುಕೊಳ್ಳುವದು ಕಠಿಣ.

ಒಮ್ಮೆ ನಾನು ಶಿವೈಕ್ಯರಾದ ಶ್ರೀ ಸ್ವಾಮಿ ಶಿವಾನಂದರನ್ನು ಕೇಳಿದ್ದಕ್ಕೆ, ಎರಡೂ ಬಗೆಯ ಸಮಾಧಿಗಳ ಅನುಭವವು ನನಗಿದೆ ಎಂದು ಅವರು ಉತ್ತರ ಕೊಟ್ಟರು! ಅವರಂಥವರು ಸಿಕ್ಕುವದು ಕಷ್ಟ. ಪರಮಹಂಸ ರಾಮಕೃಷ್ಣರಿಗೆ ಸಗುಣ ನಿರ್ಗುಣ ಶಕ್ತಿಮಾತೆಯ ಸಾಕ್ಷಾತ್ಕಾರವಿತ್ತೆಂಬುದು ಅವರ ಚರಿತ್ರೆಯಿಂದ ಗೊತ್ತಾಗುವದು. ನಿರ್ವಿಕಲ್ಪ ಸಮಾಧಿಯ ಅನುಭವವನ್ನು ಅವರು ತೋತಾಪುರಿಯವರಿಂದ ಪಡೆದಿದ್ದರು.

### ಯೋಗಶಾಸ್ತ್ರ

ವೇದೋಪನಿಷತ್ತುಗಳ ಕಾಲದಲ್ಲಿ ಆಗಿನ ಋಷಿ ಮುನಿಗಳಿಗೆ ಸಮಾಧಿಯ ಅನುಭವ ಇದ್ದರೂ ಅದಕ್ಕೆ ಒಂದು ಶಾಸ್ತ್ರರೂಪ ಅಥವಾ ಪ್ರಕ್ರಿಯಾರೂಪ ಇಲ್ಲವೆ ತಂತ್ರರೂಪ (ಟೆಕ್ನಿಕ್) ಬಂದಿತ್ತೊ ಇಲ್ಲವೊ ಇದನ್ನು ಹೇಳಲು ಬರುವದು ಕಠಿಣ. ಆದರೆ ಪತಂಜಲಿಮುನಿಗಳು ಯೋಗಶಾಸ್ತ್ರವನ್ನು ಸೂತ್ರಬದ್ಧವಾಗಿ ಮಾಡಿದಂದಿನಿಂದ, ಹಾಗೂ ಅದಕ್ಕೆ ಅಷ್ಟಾಂಗ ಯೋಗ (ಯಮ, ನಿಯಮ, ಆಸನ, ಪ್ರಾಣಾಯಾಮ, ಪ್ರತ್ಯಾಹಾರ, ಧ್ಯಾನ, ಧಾರಣಾ, ಸಮಾಧಿ) ಎಂಬ ಹೆಸರನ್ನು ಕೊಟ್ಟಂದಿನಿಂದ ಸಮಾಧಿಯು ಯೋಗಶಾಸ್ತ್ರದ ಧ್ಯೇಯ ಸ್ವರೂಪವನ್ನು ತಾಳಿತು.

ಯೋಗಶಾಸ್ತ್ರವು ಪ್ರತಿಯೊಬ್ಬ ಮಾನವನಲ್ಲಿರುವ ಚಿತ್‌ಶಕ್ತಿಗೆ ಸಂಬಂಧಿಸಿದ್ದು. ಆ ಚಿತ್ತವೇ ಮುಖ್ಯ ಶಕ್ತಿ. ಅದೇ ಎಲ್ಲಕ್ಕೂ ಪ್ರೇರಕ, ಅದೇ ಸುಖದುಃಖಾದಿ ಭೋಗಗಳಿಗೆ ಕಾರಣ, ಅದೇ ಸಂಸ್ಕಾರಗಳ ಸಂಗ್ರಹಸ್ಥಾನ. ಬಂಧ-ಮೋಕ್ಷಾದಿಗಳು ಆ ಚಿತ್ತಕ್ಕೆ ಸಂಬಂಧಿಸಿದವುಗಳು. ಇದನ್ನು ಕಂಡು ಹಿಡಿದು ಆ ಚಿತ್ತದ ಶಕ್ತಿ ಸರ್ವಸ್ವಗಳನ್ನು ಅಳಿದು ಅದನ್ನು ಎಲ್ಲಕ್ಕೂ ಉಚ್ಚಸ್ಥಾನಕ್ಕೆ—ಆತ್ಮಾನಂದ ಸ್ಥಿತಿಗೆ—ಹೇಗೆ ಮುಟ್ಟಿಸಬೇಕು, ಅಲ್ಲಿಯೇ ಅದು ಸ್ಥಿರವಾಗುವಂತೆ ಹೇಗೆ ಮಾಡಬೇಕು, ಇವೇ ಯೋಗಶಾಸ್ತ್ರದ ಸಮಸ್ಯೆಗಳು. ಯೋಗಶಾಸ್ತ್ರವು ಆಸ್ತಿಕ-ನಾಸ್ತಿಕ ವಾದದಲ್ಲಿ ಇಳಿಯುವುದಿಲ್ಲ, ದ್ವೈತಾದ್ವೈತಗಳಲ್ಲಿ ಸೇರುವುದಿಲ್ಲ; "ಈಶ್ವರ ಪ್ರಣಿಧಾನಾತ್ ವಾ" ಎಂದು ಹೇಳುವುದರಿಂದ ಈಶ್ವರ ಭಕ್ತಿಯೂ ವಿಕಲ್ಪ, ಒಂದು ಮಾರ್ಗ ಎಂದು ಆ ಶಾಸ್ತ್ರವು ಹೇಳುವುದೇ ಹೊರತು, ಅದೊಂದೇ ಮಾರ್ಗ ಅಥವಾ ಆಸ್ತಿಕ್ಯ ಬುದ್ಧಿ ಅವಶ್ಯ ಎಂದು ಅದು ಪ್ರತಿಪಾದಿಸುವುದಿಲ್ಲ.

ವ್ಯಗ್ರವಾಗಿರುವ ವಿ-ಕ್ಷಿಪ್ತವಾಗಿರುವ, ವಿವಿಧ ವೃತ್ತಿಗಳಲ್ಲಿ ಛಿನ್ನವಿಚ್ಛಿನ್ನವಾಗಿರುವ ಚಿತ್ತವನ್ನು ತನ್ನಲ್ಲಿ ತಾನೇ ಲೀನವಾಗುವಂತೆ— ಸ್ವರೂಪೇ ಅವಸ್ಥಾನಂ—ಹೇಗೆ ಮಾಡಬೇಕು, ಇದು ಯೋಗಶಾಸ್ತ್ರದ ಮುಖ್ಯ ಪ್ರಯತ್ನ.

### ಸಮಾಧಿ—ಒಂದು ಅವಸ್ಥೆ

ಸಮಾಧಿ ಎಂಬುದು ಚಿತ್ತದ ಒಂದು ಅವಸ್ಥೆ. ಜಾಗ್ರತಿ ಅಂದರೆ ಎಚ್ಚರಿರುವದು, ಸ್ವಪ್ನ ಅಂದರೆ ಕನಸು ಕಾಣುತಿರುವದು, ಸುಷುಪ್ತಿ ಅಂದರೆ ಕನಸಿಲ್ಲದ ನಿದ್ರೆ, ಇವು ಎಲ್ಲರ ಅನುಭವದ ಅವಸ್ಥೆಗಳು. ಉಪನಿಷತ್ತುಗಳಲ್ಲಿ "ತುರೀಯ" ಎಂಬುದೊಂದು ಮಾನವೀ ಚಿತ್ತದ ಅವಸ್ಥೆ ಎಂದು ಬಣ್ಣಿಸಲಾಗಿದೆ. ಅದರ ವರ್ಣನೆ ಬಹಳ ಮನೋಹರವಾಗಿರುವುದು. "ಶಾಂತಂ ಶಿವಂ ಅದ್ವೈತಂ" ಎಂದು "ಪ್ರಪಂಚೋಪಶಮಂ" ಎಂದು ಆ ಅವಸ್ಥೆಯ ವರ್ಣನೆ ಮಾಂಡೂಕ್ಯೋಪನಿಷತ್ತಿನಲ್ಲಿ ಬಂದಿರುವದು. ಅದನ್ನು ಹೊಂದುವ ಬಗೆಯನ್ನು ಹೇಳುವಾಗ "ಏಕಾತ್ಮಪ್ರತ್ಯಯ ಸಾರಂ" ಎಂದು ಹೇಳಲಾಗಿದೆ. ಅದನ್ನು ಜೀವಾತ್ಮನಿಂದಲೆ ತಿಳಿದುಕೊಳ್ಳುವದು ಅಥವಾ ಅನುಭವಿಸುವದು ಸಾಧ್ಯ. ಅದು ಕೇವಲ ವಿಚಾರದಿಂದ, ಬುದ್ಧಿಯಿಂದ, ತಿಳಿಯುವ ಸ್ಥಿತಿಯಲ್ಲ. ಸಕ್ಕರೆಯ ಸಿಹಿಯನ್ನು, ಬೇವಿನ ಕಹಿಯನ್ನು ಶಬ್ದದಿಂದ ವರ್ಣಿಸಲಾಗದು, ಬುದ್ಧಿಯಿಂದ ಅರಿಯಲಾಗದು. ಅದು ಅನುಭವದಿಂದಲೆ ಗೊತ್ತಾಗುವದು. ಅನುಭವ ಎಂಬುದೇ ಎಲ್ಲಕ್ಕೂ ಹೆಚ್ಚಿನ ಹಾಗೂ ಚರಮ ಜ್ಞಾನಸಾಧನ.

ಚಿತ್ತವು ಅನೇಕಾನೇಕ ವಿಷಯಗಳಲ್ಲಿ ಏಕಾಗ್ರವಾಗುವದುಂಟು. ಹಲವು ಸಾರೆ ಅದು ತನ್ನ ದುಃಖವನ್ನೊ ನೋವನ್ನೊ ಅವಚಿಕೊಂಡು

ಕೊಡುವದುಂಟು. ಅದೇ ಚಿಂತಾಮಗ್ನ ಸ್ಥಿತಿ. ಯಾವದೇ ಒಂದು ವಸ್ತುವಿನಲ್ಲಿ, ವಿಷಯದಲ್ಲಿ, ಏಕಾಕಾರವಾಗಿ ತನ್ಮಯವಾಯಿತೆಂದರೆ ಅದು ಏಕಾಗ್ರ ಅವಸ್ಥೆ ಎನಿಸುವದು. ಆದರೆ ಉಳಿದ ಎಲ್ಲ ವಿಷಯಗಳನ್ನು ಹಾಗೂ ವೃತ್ತಿಗಳನ್ನು ಹೊರತುಪಡಿಸಿ ಕೇವಲ ತನ್ನ ಸ್ವರೂಪದಲ್ಲಿಯೇ ಅದು ಲೀನವಾಯಿತೆಂದರೆ ಅದು ಸಮಾಧಿ ಎನಿಸುವದು. ಅದೇ ರೀತಿ ಪಿಂಡದಲ್ಲಿದ್ದ ಅಥವಾ ಒಂದೇ ಒಂದು ವ್ಯಕ್ತಿಯಲ್ಲಿದ್ದ ಚಿತ್ತ-ಚಿತ್‌ಶಕ್ತಿ, ಬ್ರಹ್ಮಾಂಡದಲ್ಲಿದ್ದ ಚಿತ್‌ಶಕ್ತಿ (ಬ್ರಹ್ಮಾಂಡದಲ್ಲಿಲ್ಲದ್ದು ಪಿಂಡದಲ್ಲಿರುವದು ಅಸಾಧ್ಯ) ಇವುಗಳಲ್ಲಿಯ ಸಮ್ಮೇಳನದಲ್ಲಿ ಚಿತ್ತವು ಏಕಾಕಾರವಾಯಿತೆಂದರೆ ಅದು ಕೂಡ ಸಮಾಧಿ ಎನಿಸುವದು. ವಿಷಯದಲ್ಲಿ ಏಕಾಕಾರವಾಗುವದು ಏಕಾಗ್ರತೆ, ಸ್ವರೂಪದಲ್ಲಿ ಅಥವಾ ಬ್ರಹ್ಮಸ್ವರೂಪದಲ್ಲಿ ಏಕಾಕಾರವಾಗುವದು ಸಮಾಧಿ. ಇದೇ ಸಮಾಧಿಯ ಮುಖ್ಯ ಲಕ್ಷಣ.

### ಸಮಾಧಿಯ ಪರ್ಯಾಯಗಳು

ಇನ್ನು ಯಾವ ಸಾಧನಗಳಿಂದ, ಯಾವ ಸಾಧನ ಮಾರ್ಗದಿಂದ ಚಿತ್ತವು ಸಮಾಧಿ ಅವಸ್ಥೆಯನ್ನು ಹೊಂದುವದೋ ಅದಕ್ಕನುಗುಣವಾಗಿ ಸಮಾಧಿಯ ಪರ್ಯಾಯವು ಬದಲಾಗುವದು— ಮೂಲರೂಪ ಒಂದು, ಆದರೆ ಅದರ ಪರ್ಯಾಯ ಮಾತ್ರ ಬೇರೆ.

ಮೂಲ ಯೋಗಶಾಸ್ತ್ರ, ಯೋಗಪ್ರಕ್ರಿಯೆ, ಯೋಗರಹಸ್ಯ (ಸಾಮರಸ್ಯದ ಅನುಭವ, ಪಿಂಡ ಬ್ರಹ್ಮಾಂಡದ ಏಕರಸತೆಯ ಅನುಭವ, ಆತ್ಮ-ಪರಮಾತ್ಮರ ಯೋಗ) ಇವೆಲ್ಲ ಒಂದೇ ಇದ್ದರೂ ಬರಬರುತ್ತ ಸಾಧಕರು ತಮ್ಮ ತಮ್ಮ ಶಕ್ತಿ ವೈವಿಧ್ಯ, ಸಾಧನ ವಿವಿಧತೆ ಇವುಗಳಿಗೆ ಅನುರೂಪವಾದ ಯೋಗಗಳನ್ನು ಸಾಧಿಸತೊಡಗಿದರು. ಆದುದರಿಂದ ಯೋಗಮಾರ್ಗ ಒಂದೇ ಇದ್ದರೂ ಯೋಗದ ಪ್ರಕ್ರಿಯೆ (ಸಾಧನಶುದ್ಧಿ, ಶಕ್ತಿಸಂಗ್ರಹ, ಶಕ್ತಿಯ ಏಕಾಗ್ರೀಕರಣ, ಶಕ್ತಿಯ ಸಮರ್ಪಣೆ, ಶಕ್ತಿಸಮಾಧಿ) ಒಂದೇ ಇದ್ದರೂ ಆಯಾ ಶಕ್ತಿಯ ಉಪಯೋಗದ ಮೂಲಕ ಆಯಾ ಸಾಧನದ ಮೂಲಕ ಯೋಗ ರೂಪಗಳು ಬೇರೆ ಹೆಸರುಗಳನ್ನು ಪಡೆದವು. ಮುಖ್ಯವಾಗಿ ಹಠಯೋಗ, ರಾಜ-ಯೋಗ, ಭಕ್ತಿಯೋಗ, ಜ್ಞಾನಯೋಗ, ಪೂರ್ಣ-ಯೋಗ ಎಂಬ ಹೆಸರುಗಳು ಈಗ ಎಲ್ಲರಿಗೂ ಪರಿಚಿತವಾಗಿರುವವು.

ಈ ಹೆಸರುಗಳಿಗನುಸರಿಸಿ ಹಾಗೂ ಆಯಾ ಸಾಧನಗಳಿಗನುರೂಪವಾಗಿ ಸಮಾಧಿಗಳ ಪರ್ಯಾಯಗಳನ್ನು ನಾಮಕರಣ ಮಾಡಬಹುದು. ಹಠಯೋಗದ ಪರಮ ಸೀಮೆಗೆ ಪ್ರಾಣಸಮಾಧಿ ಎನ್ನಬಹುದು. ರಾಜಯೋಗದಿಂದ ಪ್ರಾಪ್ತವಾಗುವ ಸಮಾಧಿಗೆ ಚಿತ್ತಸಮಾಧಿ ಎಂದೂ ಭಕ್ತಿಯೋಗದ ಮೂಲಕ ಪಡೆದ ಸಮಾಧಿಗೆ ಪ್ರೇಮಸಮಾಧಿ ಎಂದೂ ಜ್ಞಾನಯೋಗದಿಂದ ಹೊಂದಿದ ಸಮಾಧಿಗೆ ಜ್ಞಾನಸಮಾಧಿ ಎಂದೂ ಪೂರ್ಣಯೋಗದಿಂದ ಅನುಭವಿಸಿದ ಸಮಾಧಿಗೆ ಸರ್ವಸಮರ್ಪಣಸಮಾಧಿ ಎಂದೂ ಹೇಳಬಹುದು.

### ಗೀತೆ ಮತ್ತು ಕರ್ಮಸಮಾಧಿ

ಪರಮಾತ್ಮ ವಸ್ತು ಅನಂತವು, ಜ್ಞಾನವು ಕೂಡ ಅನಂತವು. ಆ ಅನಂತವನ್ನು ಪಡೆಯುವ ಮಾರ್ಗಗಳು ಕೂಡ ಅನಂತವೇ ಇರಬಲ್ಲವು. ಗೀತೆಯು ವೇದಾಂತಸಮನ್ವಯವಿದ್ದಂತೆ. ಯೋಗಮಾರ್ಗಗಳ ಸಮನ್ವಯವೂ ಇರುವದು. ಆದರೆ ಕರ್ಮಯೋಗಕ್ಕೆ ಹೆಚ್ಚು ಮಹತ್ವವನ್ನು ಕೊಟ್ಟು 'ಕರ್ಮಯೋಗೇ ವಿಶಿಷ್ಯತೇ' ಎಂದು ಅದು ಸಾರಿದೆ. ಗೀತೆಯು ಮೇಲೆ ಕಾಣಿಸಿದ ಸಮಾಧಿಗಳನ್ನಲ್ಲದೆ ಕರ್ಮಸಮಾಧಿಯನ್ನು ಪ್ರತಿಪಾದಿಸಿದೆ. 'ಬ್ರಹ್ಮಾರ್ಪಣಂ......... ಬ್ರಹ್ಮೈವ ತೇನ ಗಂತವ್ಯಂ ಬ್ರಹ್ಮಕರ್ಮ ಸಮಾಧಿನಾ' ಕರ್ಮಸಮಾಧಿ ಎಂಬುದೂ ಒಂದು ನಿಷ್ಠೆ, ಒಂದು ಚರಮ ಚಿದಾವಸ್ಥೆ ಎಂದು ಗೀತೆ ಇಲ್ಲಿ ಹೇಳಿರುವದು. ಅದನ್ನು ಶ್ರೀಕೃಷ್ಣನು ತನ್ನ ಸ್ವಂತ ಉದಾಹರಣೆಯಿಂದ ಸ್ಪಷ್ಟಪಡಿಸಿರುವನು.

ನಾನು ಪಡೆಯುವಂತಹದು ಏನೂ ಉಳಿದಿಲ್ಲ, ಆದರೂ ನಾನು ಸತತವೂ ಕರ್ಮ ಮಾಡುತ್ತಲಿ ಇರುವೆ. ನಾನು ಹಾಗೆ ಮಾಡದೆ ಹೋದರೆ ಜಗತ್ತೆಲ್ಲ ಹಾಳಾಗುವದು (ಇದು ಕೇವಲ ಅರ್ಥವಾದವು ಅಥವಾ ಅಲಂಕಾರಿಕವು. ಯಾಕೆಂದರೆ ಯಾರೂ ಒಂದು ಕ್ಷಣವೂ ಕರ್ಮ ಮಾಡದೆ ಇರಲಾರರು) ಎಂದು ಶ್ರೀಕೃಷ್ಣನು ಉಸಿರಿರುವನು. ಅರ್ಥಾತ್ ಶ್ರೀಕೃಷ್ಣನಂಥ ಸಿದ್ಧಪುರುಷನು ಮಾಡುವ ಕರ್ಮವು ಬಂಧನಕಾರಿಯಾಗಲಾರದು, ಬಂಧನಕಾರಿಯಿರಲಾರದು. ಅದು ಕರ್ಮಸಮಾಧಿರೂಪವೇ ಇರಬಲ್ಲದು. ಅಂದರೆ ಆಯಾ ಕರ್ಮವು ಮುಕ್ತಕರ್ಮವೇ ಇರುವದು-ಅದರಲ್ಲಿ ಕರ್ಮ-ಕರ್ಮ ಮಾಡುವವ, ವ್ಯಕ್ತಿ-ಸಮಷ್ಟಿ ಈ ದ್ವಿಧಾಭಾವವು ಇರಲರಿಯದು. ಪರಮಾತ್ಮನು ಅಥವಾ ಪರಮಾತ್ಮಶಕ್ತಿ ಹಾಗೂ ಅದರ ಆವಿರ್ಭಾವ ಇವುಗಳಲ್ಲಿ ಯಾವ ರೀತಿ ದ್ವಿಧಾಭಾವವು ಇರಲರಿಯದೋ, ಸೂರ್ಯ ಸೂರ್ಯನ ತೇಜ ಇವುಗಳಲ್ಲಿ ಯಾವ ರೀತಿ ಭಿನ್ನತೆ ಇರಲಾರದೋ ಅದೇ ರೀತಿ ಪರಮಾತ್ಮ ಪ್ರೇರಿತ ಕರ್ಮದಲ್ಲಿ ತಲ್ಲೀನನಾದವನ ಸ್ಥಿತಿ ಇರಬಲ್ಲದು. ಕರ್ಮಸಮಾಧಿ ಎಂಬ ಅವಸ್ಥೆ ಈ ಸ್ಥಿತಿಗೆ ಅನ್ವಯಿಸುವದು. ವ್ಯಕ್ತಿಭಾವ ಅಳಿದು ವಿಶ್ವಭಾವ ನೆಲೆಗೊಂಡು ಲೀಲಾಭಾವದಿಂದ ಆವಿರ್ಭವಿಸುವ ಕರ್ಮದಲ್ಲಿ ತನ್ಮಯನಾಗಿರುವುದೇ ಕರ್ಮಸಮಾಧಿಯ ಲಕ್ಷಣ.

---

## ನಲ್

೧

ಲೋಕೋತ್ತರ ನಿನ್ನ ಚೆಲುವು
ವಿಶ್ವೋತ್ತರ ಎನ್ನ ಒಲವು
ಅದಕೇ ಮೂಡಿಹುದು ನಲವು
ನನ್ನ ನಿನ್ನೊಳು

೨

ನನ್ನೊಳ ಹೊರಗೂನು ನೀನು
ನಿನ್ನೊಳ ಹೊರಗೂನು ನಾನು
ಬಂದು ಸಂದುದೆಲ್ಲ ಜೇನು
ಮನದ ಮನುವಿಗೆ

೩

ನಿನಗಾಗಿಯೆ ನಾನು ಮುಡಿಪು
ನನಗಾಗಿಯೆ ನೀನು ಮುಡಿಪು
ಬೇಡ ಬೇರೆ ಒಡಪು ಕೊಡಪು
ಒಲಿದ ತನುವಿಗೆ

೪

ನೀನಾದರೆ ನನಗೆ ಸಾಕು
ನಾನಾದರೆ ನಿನಗೆ ಸಾಕು
ಹರ್ಷಕೆ ಇನ್ನೇನು ಬೇಕು
ಒಲಿದ ಬಾಳೊಳು

೫

ಎಷ್ಟು ದೂರವಿದ್ದರೇನು
ನನ್ನ ಮೇರೆ ಮೀರೆ ನೀನು
ನಿನ್ನ ಮೇರೆ ಮೀರೆ ನಾನು
ಹೆಣಿಕೆ ಒಲವಿಲಿ

೬

ನನಗಾಗಿಯೆ ನಿನ್ನದೆಲ್ಲ
ನಿನಗಾಗಿಯೆ ನನ್ನದೆಲ್ಲ
ಹೊಂದಿ ಒಂದಿ ಜತೆಯು ಸೊಲ್ಲ
ಬದುಕ ನಲವಿಲಿ

೭

ಮನದಿ ಮೂಡಿ ಎದೆಯುಲಿಳಿದು
ಹದ ಬೆದೆ ಹದುಳದಲಿ ಹೊದೆದು
ಎದೆಗೆ ಎದೆಯು ಮುದದಿ ಬೆಸೆದು
ಅದುವೈಕ್ಯ ಬೇರಿದು

೮

ನಮ್ಮದೊಂದೇ ಮಂತ್ರ 'ನಲ್'
ನಮ್ಮ ಪದದ ಗೆಜ್ಜೆ ಘಿಲ್
ತಾಳ ಮೇಳವಿಲ್ಲ ಸೊಲ್
ಜೀವನವೇ 'ನಲ್ ನಲ್'

೯

ನಾನು ನೀನು ನವೋನವ
ಅರೆಹೆಣ್-ಅರೆಗಂಡು ಶಿವ
ನಮ್ಮ ಅಡುಂಬೊಲವೆ ಭವ
ನಲ್ಮೆಯುದೀ ವೈಭವ

೧೦

ಅಡಿಯಲ್ಲಿದೆ 'ಅ'ಕಾರ
ಉಡಿಯಲ್ಲಿದೆ 'ಉ'ಕಾರ
ಮುಡಿಯಲ್ಲಿದೆ 'ಮ'ಕಾರ
ಇದೇ ವೈಯು, 'ಓಂಕಾರ'

—ಶ್ರೀ ಬೇಸಾಯಿ ದತ್ತಮೂರ್ತಿ,

# ಕರ್ನಾಟಕದಲ್ಲಿ ನಿಸರ್ಗ

ಕರ್ಣಾಟಕವು ನಿಸರ್ಗಸೌಂದರ್ಯದ ನೆಲೆವೀಡಾಗಿದೆ. ಒಂದೊಂದೂ ಒಂದೊಂದು ವಿಧದ ಚೆಲುವಿನಿಂದ ಕೂಡಿವೆ. ವನಶ್ರೀ, ಕೆರೆ, ಹಳ್ಳ, ಕೊಳ್ಳ, ನದಿ, ಗಿರಿಶಿಖರಗಳು ಕಣ್ಣಿಗೆ ಹಬ್ಬವುಂಟುಮಾಡುವವು. ಈ ಸೌಂದರ್ಯದ ಸವಿಯನ್ನು ಸವಿಯಲು ಅವುಗಳೊಡನೆ ಒಂದಾಗಿ ಅಲೆದಾಡಬೇಕು. ಆ ಅಭಿರುಚಿಯನ್ನು ಜತೆಯಲ್ಲಿ ಹೊತ್ತು ಹೋಗಬೇಕು. ಆಗ ದೊರೆಯುವ ಆನಂದ ಅಷ್ಟಿಷ್ಟಲ್ಲ ಎಂದು ಕರ್ಣಾಟಕದ ನಾನಾ ಭಾಗಗಳನ್ನು ಸಂಚರಿಸಿ ನಿಸರ್ಗಸೌಂದರ್ಯವನ್ನು ಕಣ್ಣಾರೆ ಕಂಡು ಅನುಭವಿಸಿದ ಶ್ರೀ ಶಿವರಾಮ ಕಾರಂತರು ತಮ್ಮ ಸೌಂದರ್ಯಾರಾಧನ ದೃಷ್ಟಿಯಿಂದ ಕರ್ಣಾಟಕದ ನಿಸರ್ಗಸೌಂದರ್ಯವನ್ನು ಇಲ್ಲಿ ಹಲವಾರು ತೆರದಲ್ಲಿ ಬಣ್ಣಿಸಿದ್ದಾರೆ.

ಶ್ರೀ ಶಿವರಾಮ ಕಾರಂತ,
ಪುತ್ತೂರು

ಪ್ರಕೃತಿದೇವಿ ಧಾರಾಳವಾಗಿ ಒಲಿದ ನಾಡು— ಕರ್ಣಾಟಕ. ಈ ನಾಡಿನ ನಾಲ್ಕು ಮೂಲೆಗಳಿಗೂ ಕಣ್ಣು ಹಾಯಿಸಿದವರಿಗೆ—ಅದರ ಹಿರಿಮೆಯು ಅರಿವಾಗದಿರದು. ಇಲ್ಲಿ ಕಡಲುತೀರ, ನದಿಗಳು, ಪರ್ವತಗಳು, ಗುಡ್ಡಗಳು, ಅರಣ್ಯಗಳು, ಬಯಲುಸೀಮೆ— ಒಂದೊಂದೂ ಒಂದೊಂದು ವಿಧದ ಚೆಲುವಿಂದ ಕೂಡಿದೆ. ಅಂಥ ನಿಸರ್ಗಸುಂದರ ಭೂಮಿಯಲ್ಲಿ ನೆಲೆಸಿರಬಹುದಾದ ಜೀವಸಂಪತ್ತು ಅಷ್ಟೇ ವಿಪುಲವಾಗಿದೆ;ಸುಂದರವಾಗಿದೆ; ವಿವಿಧವಾಗಿದೆ. ಅನೇಕ ಬಾರಿ— ನಾವು ಪ್ರವಾಸಿಗಳನ್ನು ನಮ್ಮ ನಾಡಿನ ಕಡೆಗೆ ಆಕರ್ಷಿಸುವ ವಿಚಾರ ಮಾತನಾಡುತ್ತೇವೆ! ಈ ಕೆಲಸ, ಕಿಸೆಗಳು ಕಳ್ಳರೆನ್ನು ಆಕರ್ಷಿಸಿದಂತಲ್ಲ. ಅದಕ್ಕೆ ಪ್ರಯತ್ನ ಬೇಕಾಗಿದೆ. ಮೊದಲು ನೈಸರ್ಗಿಕ ಸಂಪತ್ತು, ಚೆಲುವು ಎಲ್ಲಿ ಅತಿ ಆಕರ್ಷಕವಾಗಿದೆ— ಎಂದು ಹೋಗಿ ನಾವೇ ಪರಿಶೀಲಿಸಬೇಕು. ಅವುಗಳನ್ನು ಆಕರ್ಷಕವಾಗಿ ಬಣ್ಣಿಸುವವರು ಬೇಕು. ಬಣ್ಣಿಸಿದ ಮಾತ್ರದಿಂದಲೇ ಪತಂಗಗಳು ದೀಪಕ್ಕೆರಗುವಂತೆ ಜನಸಾಮಾನ್ಯರು ಅಲ್ಲಿಗೆ ಹೋಗಿ ಎರಗುವುದಿಲ್ಲ; ಅಲ್ಲಿ ಹೋಗುವವರಿಗೆ ಸಮನಾದ ದಾರಿಗಳೂ ಬೇಕು; ದಾರಿಗಳಲ್ಲಿ ನದಿಗಳು ಅಡ್ಡ ಬರುವಲ್ಲಿ ಸೇತುವೆಗಳೂ ಬೇಕು. ಹೋಗಿ ನಾಲ್ಕು ದಿನವೋ, ಒಂದೇ ದಿನವೋ ಇರಲು ಅಪೇಕ್ಷಿಸುವವರಿಗೆ—ಇರುವುದಕ್ಕೆ ವಸತಿಗಳಿರಬೇಕು. ಬಡವರು, ಮಧ್ಯಮ ಆದಾಯದವರು, ಶ್ರಿಮಂತರು— ಯಾವುದೇ ವರ್ಗದವರು ಬಂದರೂ, ಅವರವರ ಅನುಕೂಲತೆಗಳಿಗೆ ಸರಿಯಾಗಿ ಸಿಗುವ ರೀತಿಯಲ್ಲಿ, ನಿವಾಸ ಸೌಕರ್ಯಗಳು ಕಲ್ಪಿಸಲ್ಪಡಬೇಕು. ಈ ಯಾವುದೇ ಕೆಲಸವನ್ನು ಮಾಡಲು ಪ್ರಯತ್ನಿಸದೆಯೆ, ಬರಿದೆ Tourist ಆದಾಯ ಸಂಪಾದಿಸಲು, ಬಯಸಿದರೇನು ಫಲ!

ಸದ್ಯಕ್ಕೆ ಅಂಥ ಅನುಕೂಲತೆಗಳು ನಾಡಿನ ಕೆಲವೇ ಸ್ಥಳಗಳಲ್ಲಿವೆ; ಆದರೆ ಅದು ವಿವಿಧ ವರ್ಗದ ಜನಗಳ ದೃಷ್ಟಿಯಿಂದ ಮಾಡಿರುವಂಥ ಅನುಕೂಲತೆಯಲ್ಲ. ಇನ್ನು 'ಜೋಗ'ದಂಥ ಸ್ಥಳದಲ್ಲಿ ಖಾಲಿಯಿರುವ ಬಂಗ್ಲೆಯಲ್ಲಿ ಒಬ್ಬ ಪ್ರವಾಸಿ ಬಂದು ಸೇರಿದರೆ, ಸರಕಾರದ ಪ್ರಧಾನ ಅಧಿಕಾರಿಯೋ ಮಂತ್ರಿಯೋ ಬಂದರೆ— ಅವನು ಮಧ್ಯರಾತ್ರಿಯಾದರೂ ಅಲ್ಲಿಂದ ಬಿಟ್ಟೋಡಬೇಕಾದೀತು ಇನ್ನು, ಅನೇಕ ಕಡೆಗಳಲ್ಲಿ ಹಳೆಯ ಪ್ರವಾಸಿ ಬಂಗಲೆಗಳನ್ನು ಇನ್ಸ್ಪೆಕ್ಷನ್ ಬಂಗಲೆಗಳಾಗಿ ಮಾರ್ಪಡಿಸಿದ್ದಾರೆ! ಇದು ಜನತಾರಾಜ್ಯದಲ್ಲಿ ಜನಸೇವಕರೆಂಬವರ ಅಧಿಕಾರದ ಆಟೋಪದ ಒಂದು ಚಿಹ್ನೆ.

ಕರ್ಣಾಟಕದ ನಿಸರ್ಗದ ಚಿತ್ರ ಕಾಣಲು, ಅದರ ವಿಹಂಗಮ ನೋಟ ಪಡೆಯಲು ವಿಮಾನ ಸಂಚಾರ ತೀರ ಅನುಕೂಲ. ಮಂಗಳೂರು— ಬೆಳ್ಗಾವಿ, ಮಂಗಳೂರು— ಬೆಂಗಳೂರು, ಬೆಂಗಳೂರು— ಹೈದರಾಬಾದು, ಬೆಂಗಳೂರು— ಕೋಯಂಬುತ್ತೂರು— ಹೀಗೆ ನಾಲ್ಕು ಪ್ರವಾಸಗಳಲ್ಲಿ ಅದರ ಸ್ಥೂಲ ಚಿತ್ರ ನಮಗೆ ಕಾಣಿಸೀತು. ಹೀಗೆ ದೊರೆಯುವ ನೋಟಗಳಲ್ಲಿ ಬೆಳ್ಗಾಮು—ಮಂಗಳೂರಿನ ಹಾದಿಯ ಉದ್ದಕ್ಕೂ, ಮಂಗಳೂರು— ಹಾಸನದ ದೂರಕ್ಕೂ ಚಾಚಿರುವಷ್ಟು ನೋಟದ ಭವ್ಯತೆ ಇನ್ನೆಲ್ಲೂ ಕಾಣಸಿಗುವಂತಿಲ್ಲ. ಮಂಗಳೂರಿಂದ ಬಾನಿಗೇರಿದೊಡನೆಯೇ ನಮಗೆ ಅರಬ್ಬಿ ಸಮುದ್ರದ ವಿಸ್ತಾರ ನೋಟ ಪಡುವಣಕ್ಕೆ ಕಾಣಿಸಿದರೆ, ಮುಂದೆ ಪೂರ್ವಕ್ಕೋ, ಈಶಾನ್ಯಕ್ಕೋ ತಿರುಗಿದಾಗ ಕಾಣಿಸುವ ಸುದೀರ್ಘ ಪರ್ವತಾವಳಿಗಳು, ಹಸುರು ತುಂಬಿದ ಕಾಡುಗಳು, ಅಂಬಿನ ವೇಗದಿಂದ ಹರಿಯುವ ಅಸಂಖ್ಯ ನದಿಗಳು ನಮ್ಮನ್ನು ಮುಗ್ಧರನ್ನಾಗಿ ಮಾಡುತ್ತವೆ. ಈ ಹಸುರು ರತ್ನಕಂಬಳಿಯನ್ನು ಕಂಡು ಬೇಸರವಾದಾಗ, ಅಂತರಿಕ್ಷದಲ್ಲಿ ಪರ್ವತಗಳಂತೆ ವಿರಾಮಗತಿಯಿಂದ ತೇಲುವ ರಾಶಿಮೋಡಗಳು (cumulus) ಇದಿರಾಗತೊಡಗಿದುವೆಂದರೆ— ಯಕ್ಷನ ಮೇಘಸಂದೇಶವೇ ಇದಿರಾದಂತೆ! ಇಂಥ ಸೌಂದರ್ಯವಿಲಾಸ— ಬೆಂಗಳೂರಿನಿಂದ ನಾಲ್ಕೆಸೆಗೆ ಹಾಯುವ ಬಯಲು ಸೀಮೆಯ ದಾರಿಯಲ್ಲಿ ಸಿಗುವುದಿಲ್ಲ. ಬೇಸಿಗೆಯಲ್ಲಿ ಅಲ್ಲಿ ಕಾಣಸಿಗುವದು ವಿಸ್ತಾರವಾದ ಬೂದು ಮಣ್ಣಿನ ಬಯಲು ಭೂಮಿ— ಅದರ ನಡುವೆ ಅಲ್ಲಲ್ಲಿನ ಬರಡು ಬೆಟ್ಟಗಳು, ಬಂಡೆಗಳು— ಬೇಸರವನ್ನೆ ತರುತ್ತವೆ. ಮಳೆಗಾಲದಲ್ಲಿ ಮಾತ್ರ ಇದೇ ನೆಲದ ನಡುವೆ— ಅಲ್ಲಲ್ಲಿ ನೀರು ನಿಂತು, ಅಸಂಖ್ಯ ಕೆರೆಗಳುಂಟಾಗಿ ಅದಕ್ಕೊಂದು ಹೊಸ ಚೆಲುವು ಬರುತ್ತದೆ. ಆದರೂ ಈ ಪ್ರದೇಶವು ಕಾಲಾಂತರದಲ್ಲಾದ ಭೂಮಿಯ ಕೊರೆತದಿಂದ, ರೂಪುಗೆಟ್ಟ ದಾರುಣ ದೃಶ್ಯವೇ ಸರಿ.

ಸುಮಾರು ಇನ್ನೂರು ಮೈಲುದ್ದದ ನಮ್ಮ ಕಡಲು ತೀರವು ಮಂಗಳೂರಿನ ದಕ್ಷಿಣದ ಉಲ್ಲಾಳದಿಂದ ಕಾರವಾರದ ಸದಾಶಿವಗಡದ ತನಕವೂ ಹಾಸಿದೆ. ಅಲ್ಲಿನ ಮರಗಳು ದಿನ್ನೆಯ ಮೇಲೆ ನಡೆದು ಹೋಗುವವನಿಗೆ— ಅದೊಂದು ಚಿರಸ್ಮರಣೀಯ ನೆನಪಾದೀತು. ಅಲ್ಲಲ್ಲಿ ಸಮುದ್ರವನ್ನು ಕೂಡಲು ಬರುವ ನದಿಗಳನ್ನು, ಪ್ರವಾಸಿಯು ಸ್ಥಳಿಕ ಕಡಲಿನ ದೋಣಿಗಳಲ್ಲಿ ಕುಳಿತು, ದಾಟಬಹುದು. ಕಡಲಿನ ಮರಳು ದಂಡೆ ದಕ್ಷಿಣ ಕನ್ನಡ ಜಿಲ್ಲೆಯ ಪಡವಣದಲ್ಲಿ ಯಾವತ್ತೂ ಉದ್ದಕ್ಕೂ ಹಾಸಿದೆ; ಉತ್ತರ ಕನ್ನಡ ಜಿಲ್ಲೆಯಲ್ಲಿ ಈ ಮರಳಿನ ಹಾಸುಗೆ— ಭಟ್ಕಳ, ಕುಮಟೆ, ಅಂಕೋಲೆ, ಕಾರವಾರ ಮೊದಲಾದ ಕಡೆಗಳಲ್ಲಿ, ಸಮುದ್ರಕ್ಕೆ ಚಾಚುವ ಬೆಟ್ಟದ ಸೆರಗುಗಳಿಂದ ಅಲ್ಲಲ್ಲಿ ತುಂಡಾಗಿ ಕಾಣಿಸುತ್ತದೆ. ಈ ಮರಳು ದಂಡೆಯ ಮೇಲೆ ಕಡಲಿನ ಅಲೆಗಳು, ಹಾದು ಹಿಂಜರಿದಾಗ, ಇಳಿತದ ವೇಳೆ ಸೈಕಲು ಸವಾರಿ ಮಾಡಲುಬಹುದು. ಅದರ ಗಾಲಿಗಳು ಹೂತುಹೋಗುವುದಿಲ್ಲ. ಆದರೆ, ಕಡಲಿಂದ ಬೀಸುವ ಗಾಳಿ ಮಾತ್ರ ನಿಮಗೆ ಅನುಕೂಲವಾಗಿರಬೇಕು. ಬದಲು ಪ್ರತಿಕೂಲವಾಗಿದ್ದರೆ ಸೈಕಲು ಸವಾರಿ ಒಂದು ಶಿಕ್ಷೆಯೇ ಅನಿಸುತ್ತದೆ.

ನದಿಯ ಸಂಗಮಸ್ಥಾನಗಳು ಇಂಥ ನಮ್ಮ



ಬೇಲಿಕೇರಿ ನದೀ ಮುಖ

ಪಯಣವನ್ನು— ಅಲ್ಲಲ್ಲಿ ತಡೆಯುತ್ತವೆ. ನಾವು ನೆಲದ ಮೇಲೆ ಸೆರಗಿನ ಕುಡಿಗೆ ಬರುತ್ತೇವೆ! ಅಂಥ ಭೂಮಿಯನ್ನು 'ಕೋಡಿ' ಎಂದು ಕರೆಯುತ್ತಾರೆ! ಅಲ್ಲಿಂದ ದೋಣಿಗಾಗಿ ಕಾದು, ಅಳಿವೆಯನ್ನು ದಾಟಿ, ಮುಂದಣ ಭೂಮಿಯ ಸೆರಗನ್ನು ಹಿಡಿಯಬೇಕಾಗುತ್ತದೆ. ಹೀಗೆ ಸಿಗುವ ಅಳಿವೆಗಳಲ್ಲಿ— ಮಂಗಳೂರು, ಗಂಗೊಳ್ಳಿ, ಹೊನ್ನಾವರ ತದಡಿ— ರೇವುಗಳ ಒಳಿಯ ನೀರಿನ ಪಾತ್ರಗಳು ಬಹಳ ವಿಶಾಲವಾದುವು.

ಕಡಲಿನ ದಂಡೆಯಲ್ಲಿ ಹಾದುಹೋಗುವವನಿಗೆ— ಬಿಳಿ ಮರಳಿನ ಸುಂದರ ಸ್ಪರ್ಶ ವಿಶೇಷ ಆನಂದವನ್ನು ಉಂಟುಮಾಡುತ್ತದೆ. ಸ್ವಚ್ಛವಾದ ಮರಳಿನ ಮೇಲೆ ಕುಳಿತಿರೋಣ, ಉರುಳಾಡೋಣ—ಎನಿಸುತ್ತದೆ! ಮರಳಿನ ಈ ದಂಡೆಯನ್ನು ಸ್ಥಳಿಕರು— 'ಬೆಂಗ್ರೆ' ಇಲ್ಲವೆ 'ಅರಾಲು' ಎಂದು ಕರೆಯುತ್ತಾರೆ. ಬೆಂಗರೆ ಪ್ರಾಯಶಃ ಬೆಣ್+ಕರೆ— ಬಿಳಿಯ ದಂಡೆ ಇಲ್ಲವೆ ಅಂಚು ಆಗಿರಬಹುದು ಈ ಕರೆ ಕೆಲವು ಕಡೆಗಳಲ್ಲಿ ಒಂದೆರಡು ಫರ್ಲಾಂಗುಗಳ ಅಗಲಕ್ಕೆ ಹಾಸಿರುತ್ತದೆ. ಕೆಲವು ಕಡೆ ಮೈಲು, ಮೂರು ಮೈಲುಗಳ ತನಕವೂ ಅಗಲದಲ್ಲಿ ಹಾಸಿದ್ದುಂಟು. ಕೋಟ, ಬಂಕಿಕೊಡಲು, ಧಾರೇಶ್ವರ ಮೊದಲಾದ ಹಳ್ಳಿಗಳಲ್ಲಿ ಇವು— ಮರುಭೂಮಿಯ ಮರಳಿನ ದಿನ್ನೆಗಳಂತೆ ಉನ್ನತವಾಗಿ, ದೀರ್ಘವಾಗಿ ಚಾಚಿರುವುದೂ ಕಾಣಿಸುತ್ತದೆ.

ಈ ಕಡಲು ತೀರದ ಉದ್ದಕ್ಕೂ ಜನರು ನಟ್ಟು ಬೆಳಯಿಸಿದ ತೆಂಗಿನ ತೋಟಗಳಿವೆ. ಹಲವೆಡೆ, ಹಾಗೆಯೇ ನಟ್ಟು ಬೆಳೆಯಿಸಿದ, ಗಾಳಿ (ಸರ್ವೆ) ಮರಗಳ ತೋಪುಗಳಿವೆ. ಈ ಪ್ರದೇಶದಲ್ಲಿ ಜನವಸತಿ ತುಂಬ. ಹೆಚ್ಚಿನ ಮನೆಗಳು ಬೆಸ್ತರ ಮನೆಗಳು. ಇಲ್ಲಿ ಕೆಲವು ಕಡೆ—ಎರಡೆರಡು ಬಗೆಯ ಮನೋಹರ ನೋಟಗಳು ನಮಗೆ ಕಾಣಸಿಗುತ್ತದೆ. ಒಂದು ಕಡಲಿನ ಕಡೆಗೆ ನೋಡಿದಾಗ ಇನ್ನೊಂದು; ನೆಲದ ಕಡೆಗೆ ನೋಡಿದಾಗ.

ಮಂಗಳೂರಿಂದ ೩೫ ಮೈಲು ದಕ್ಷಿಣಕ್ಕೆ ಬಂದರೆ ಕಡಲಿನ ಅಂಚಿಗೆ ತುಸುವೇ ದೂರದಲ್ಲಿ, ಬಹದ್ದೂರಗಡ ದ್ವೀಪ ಸಿಗುತ್ತದೆ; ಇನ್ನೂ ತುಸುವೇ ಮುಂದೆ ಸ್ಯೆಂಟ್‌ಮೇರಿ ದ್ವೀಪ ಸಿಗುತ್ತದೆ. ಶಿರಾಲಿಗೆ ಪಶ್ಚಿಮದಲ್ಲಿ ಶಂಖಾಕೃತಿಯ ಕಾಡು ತುಂಬಿದ ಒಂದು ಸಣ್ಣ ದ್ವೀಪವಿದೆ; ಹೊನ್ನಾವರದ ಪಡುವಣಕ್ಕೆ ಮತ್ತೊಂದು ದ್ವೀಪವಿದೆ. ತಿರುಗಿ ಬೇಲಿಕೇರಿಯಲ್ಲಿ, ಕಾರವಾರದಲ್ಲಿ, ಅಂತಹವೇ ಕೆಲವಾರು ದ್ವೀಪಗಳು ಕಾಣಸಿಗುತ್ತವೆ. ಬೇಲಿಕೇರಿ, ಕಾರವಾರಗಳಲ್ಲಿ ಸಿಗುವ ದ್ವೀಪಗಳು ಒಂದು ಕಾಲದಲ್ಲಿ ಭೂಮಿಯಿಂದ ಕಡಲಿಗೆ ಚಾಚಿದ್ದ ಪರ್ವತದ ಸೆರಗುಗಳೇ ಆಗಿದ್ದಿರುವುವು. ಈ ದ್ವೀಪಗಳಲ್ಲಿ ಅನ್ಯರ ಸಹಾಯವಿಲ್ಲದೆಯೇ, ನಾಲ್ಕು ದಿವಸ ಕಳೆಯಲು ಬಯಸುವ ಜನರಿದ್ದಾರಾದರೂ— ಅಲ್ಲಿಗೆ ನಮ್ಮನ್ನು ಒಯ್ಯುವ ಯಾವೊಂದು ವ್ಯವಸ್ಥೆಯೂ ಇಲ್ಲ. ಪೋರ್ಚುಗೀಸರ ಆಧೀನದಲ್ಲಿ 'ಅಂಜದೀಪ' ಎಂಬೊಂದು ನಡುಗಡ್ಡೆಯಿತ್ತು. ಇದು ಕಾರವಾರಕ್ಕೆ ಇದಿರಾದ ದ್ವೀಪ. ಅಲ್ಲಿ ಪೋರ್ತುಗೀಸರು ಕೈದಿಗಳನ್ನು ಇರಿಸುತ್ತಿದ್ದರಂತೆ! ಆ ಭಾಗ್ಯ ಪ್ರವಾಸಿಗಳಿಗೆ ದೊರೆಯಲಾರದೇ—ಎನಿಸುತ್ತದೆ, ಅವುಗಳ ಚೆಲುವನ್ನು ನೋಡುವಾಗ!

ಸ್ಯೆಂಟ್‌ಮೇರಿ ದ್ವೀಪವು ಉಡುಪಿಯ ಬಳಿಯ ತೋನ್ಸೆಗೆ ಇದಿರಾದೊಂದು ದ್ವೀಪ. ಇಲ್ಲಿನ ನಿಸರ್ಗ ಬೇರೆಯೇ ರೀತಿಯದು. ಭೂಗರ್ಭದಿಂದ ಮೇಲಕ್ಕೆ ಉಕ್ಕಿದ ಲಾವಾದ್ರವವು ಇಲ್ಲಿ ಆರು ಮೈಗಳುಳ್ಳ ದೀರ್ಘ ಸ್ತಂಭಗಳಂತೆ ಹರಳುಗಟ್ಟಿ, ಉಂಟಾದ ನೆಲ ಇಲ್ಲಿನದು. ಸಮುದ್ರದ ಅಲೆಗಳ ಒಡಿತದಿಂದ ಒಡೆದ ಇಲ್ಲಿನ ವಿಚಿತ್ರ ಆಕಾರದ ಬಂಡೆಗಳು — ಆ ದೇವಾಲಯಗಳ ಸ್ತಂಭರಾಜಿಗಳಂತೆ ಕಂಗೊಳಿಸುತ್ತವೆ. ಈ ದ್ವೀಪದ ಪಶ್ಚಿಮ ತೀರದಲ್ಲಿ ಬಿದ್ದಿರುವ ಚಿಪ್ಪುಗಳ ರಾಶಿಯೇ ಒಂದು ವಿಚಿತ್ರ ದೃಶ್ಯವಾಗಿದೆ.

ಕುಂದಾಪುರ ತಾಲೂಕಿನ ಗಂಗೊಳ್ಳಿಯಿಂದ ನಾಲ್ಕು ಮೈಲು ಮುಂದಕ್ಕೆ 'ಮೊರಸ್ವಾಮಿ' ಎಂಬೊಂದು ಸ್ಥಳ ಬರುತ್ತದೆ. ಇಲ್ಲಿ ಸಮುದ್ರದ ದಡದಿಂದ ನೂರು ಅಡಿ ಸಮೀಪಕ್ಕೆ, ನದಿಯೊಂದು ದಂಡಿಗೆಯ ಮರದಂತೆ ಬಾಗಿ ಮುಂದುವರಿಯುತ್ತದೆ. ಇಲ್ಲಿನ ಕಡಿದಾದ ಕಡಲು ದಂಡೆಯಿಂದಾಗಿ, ನದಿಯ ನೀರು ಸಮುದ್ರ ಮಟ್ಟಕ್ಕಿಂತ ಆಳವಾಗಿರುವಂತೆ ಕಾಣಿಸುತ್ತದೆ. ರಸ್ತೆಯ ಮೇಲೆ ನಿಂತವನಿಗೆ—ಒಮ್ಮೆಗೇ ಒಂದು ಮಗ್ಗುಲಲ್ಲಿ ಕಾಣಿಸುವ ಕಡಲಿನ ನೋಟವೂ, ಇನ್ನೊಂದು ಮಗ್ಗುಲಲ್ಲಿ ತೆಂಗಿನ ತೋಟಗಳ ನಡುವೆ ಹಾಯುವ ಈ ನೀಲ ನದಿಯ ದೃಶ್ಯವೂ- ಮನೋಹರವಾದೊಂದು ಸ್ವಪ್ನದಂತೆ ಹೊಳೆದೀತು.

ಕಡಲ ತೀರದಲ್ಲಿ, ಮರಳಿನ ಹಾಸುಗೆಯು ಏರು ತಗ್ಗಿಲ್ಲದೆ ಹಾಸಿರುವ ಪ್ರದೇಶಕ್ಕೆ ಒಂದು ತೆರನ ಚೆಲುವಿದ್ದರೆ, ಕಡಲು ಚಾಪದ ಆಕಾರದಲ್ಲಿ ನೆಲದೊಳಕ್ಕೆ ನುಗ್ಗಿ ಒಂದು ಅಖಾತವನ್ನುಂಟುಮಾಡು



ಹಿರೇಭಾಸ್ಕರ ಜಲಾಶಯದ ನೀರು ಪಶ್ಚಿಮಘಟ್ಟದ ತನಕವೂ ಹೀಗೆ ಚಾಚುತ್ತದೆ

ವಾಗ ಇನ್ನೊಂದೇ ಚೆಲುವು ಅದಕ್ಕೆ ಬರುತ್ತದೆ. ಅಂಕೋಲೆ ಮತ್ತು ಕಾರವಾರದ ಎರಡು ಮೂರು ಕಡೆಗಳಲ್ಲಿ ಅಂಥ ಆಖಾತಗಳ ಮನೋಹರ ದೃಶ್ಯ ನಮಗೆ ಕಾಣಿಸುತ್ತದೆ. ಈ ಪ್ರದೇಶದಲ್ಲಿ, ಬೆಟ್ಟದ ಸೆರಗುಗಳು ಸಮುದ್ರಕ್ಕೆ ತೀರ ಸಮೀಪದಲ್ಲಿ ಹಾಯುವುದರಿಂದ ಕಡಲಿನ ಸೆರಗುಗಳೇ ಭೂಮಿಯೊಳಕ್ಕೆ ಚಾಚಿರುವಂತೆ ಕಾಣಿಸುತ್ತವೆ! ಅಂಕೋಲೆಯ ಬೇಲಿಕೇರಿ ಬಂದರು ಅಂಥ ಒಂದು ಮನೋಹರ ದೃಶ್ಯವಾಗಿದೆ. ನಾರ್ವೆ ದೇಶದ ಫಿಯರ್ಡುಗಳ ಮಾದರಿಯಲ್ಲಿದೆ ಅಲ್ಲಿನ ನೋಟ. ಕಾರವಾರ ನಗರಕ್ಕೆ ತುಸುವೇ ಹಿಂದಕ್ಕಿರುವ ಒಂದು ನೋಟ ಅಂಥದೇ ಆಗಿದೆ. ಇಲ್ಲಿ, ಎತ್ತರದ ಬೆಟ್ಟವೊಂದರಿಂದ ನೋಡುವ ನಮಗೆ— ಕೆಳಗಣ ಬಯಲಿನ ಸೆರಗು, ತೋಟಗಳು, ತೋಡುಗಳು, ಮುಂಗಡೆಯಲ್ಲಿ ಕಡಲು, ಅತ್ಯಂತ ಮನೋಹರವಾಗಿ ಕಾಣಿಸುತ್ತದೆ. ಈ ಹಸುರು—ನೀಲ ದೃಶ್ಯಾವಳಿ ಬಣ್ಣಗಳ ದೃಷ್ಟಿಯಿಂದ ವೈವಿಧ್ಯವಿಲ್ಲದ್ದಾದರೂ ಅವೇ ಎರಡು ಬಣ್ಣಗಳ ಒಂದು ವಿಚಿತ್ರ ಮೇಳ, ಮನಸ್ಸಿಗೆ ವಿಶೇಷವಾದ ಆಹ್ಲಾದವನ್ನು ಉಂಟುಮಾಡುತ್ತದೆ.

ನಮ್ಮ ನಾಡಿನಲ್ಲಿ ಹರಿಯುವ ನದಿಗಳು ಒಂದೆರಡಲ್ಲ. ಹೆಚ್ಚಿನವು ಪಶ್ಚಿಮಘಟ್ಟದ ಬೆನ್ನಿನಲ್ಲಿ ಹುಟ್ಟುತ್ತವೆ. ಅವುಗಳಲ್ಲಿ ಹಲವು ಪೂರ್ವಾಭಿಮುಖವಾಗಿ ಹರಿದರೆ, ಹಲವು ಪಶ್ಚಿಮಾಭಿಮುಖವಾಗಿ ಹರಿಯುತ್ತವೆ. ಪಡುವಣಕ್ಕೆ ಮುಖ ತಿರುಗಿಸಿ ಹರಿಯುವ ನದಿಗಳಿಗೆ, ಮುಂದೆ ದಾರಿಯುದ್ದಕ್ಕೂ ಪರ್ವತಗಳು ಅಡ್ಡಾಗುತ್ತವೆ. ಅವುಗಳ ಇಕ್ಕಟ್ಟಿನಲ್ಲಿ ಧುಮುಕುತ್ತ, ನಲಿಯುತ್ತ, ಅವು ಹರಿಯಬೇಕು. ನಾಡಿನ ತೀರ ಉತ್ತರದಲ್ಲಿ ಹರಿಯುವ ಕಾಳೀನದಿ ಇವುಗಳಲ್ಲಿ ಬಹಳ ದೊಡ್ಡದು. ಅದೂ ಅದರ ಹಲವು ಶಾಖೆಗಳೂ ದಖ್ಖಣದ ಪೀಠಭೂಮಿಯನ್ನು ಬಹಳ ಆಳಕ್ಕೆ ಕೊರೆದು ಕಂದಕಗಳನ್ನಾಗಿ ಮಾಡಿ, ಹಾವಿನಂತೆ ಹರಿಯುತ್ತ, ಕಡಲಿಗೆ ಸಮೀಪ ಬರುವ ತನಕವೂ ದೂರದ ನೋಟಕ್ಕೆ ಸಿಗದಾಗುತ್ತವೆ! ವಿಮಾನದಲ್ಲಿ ಸಂಚರಿಸುವವರಿಗೆ ಈ ನದಿಯೂ ಅದರ ಶಾಖೆಗಳೂ ಕೊರೆದು ಮಾಡಿದ ದಾರಿಗಳು— ಬಹಳ ದೀರ್ಘವಾಗಿವೆಯೆಂಬುದು ಕಾಣಿಸುತ್ತದೆ. ದಾರಿಯಲ್ಲಿ ಅವು ಅಲ್ಲಲ್ಲಿ ನಿರ್ಮಿಸಿರುವ ಜಲಪಾತಗಳು, ತೀರ ಸಮೀಪಕ್ಕಷ್ಟೇ ಕಾಣಿಸುತ್ತವೆ. ಅಂಥ ಜಲಪಾತಗಳ ಸಂಖ್ಯೆ ಒಂದೆರಡಲ್ಲ. ಅವುಗಳಲ್ಲಿ ಹೆಚ್ಚಿನವನ್ನು ಬಹಳ ಜನರು ಕಂಡಿರಲಾರರು. ದಾಂಡೇಲಿನಗರದ ಸಮೀಪದ 'ಸೈಕ್ಸ್ ಪಾಯಿಂಟ್' ಎಂಬ ಒಂದು ಪ್ರೇಕ್ಷಣೀಯ ಸ್ಥಳ—ಕಾಳೀನದಿಯ, ಅಸಂಖ್ಯ ದೃಶ್ಯಗಳಲ್ಲಿ ಬರಿಯ ಒಂದು ಕೊರಕಲಿನ ನೋಟವನ್ನಷ್ಟೇ ನಮಗೆ ಕೊಡುತ್ತದೆ. ಅಂಥ ದೃಶ್ಯಗಳು ನೂರಾರಿವೆ!

ಪಶ್ಚಿಮಘಟ್ಟದ ಸೆರಗಿನ ಎದುರಿಗೆ ವಿಮಾನದ ಮೂಲಕ ಹಾಯುವಾಗ ಮಾಗೋಡು, ಲೆಸ್ಸಿಂಗಟನ್ ಜಲಪಾತಗಳು ನಮಗೆ ಕಾಣಿಸುತ್ತವೆ. ಇನ್ನೂರು, ಮುನ್ನೂರು ಅಡಿ ಎತ್ತರದ ಇಂಥ ಜಲಪಾತಗಳು—ಉತ್ತರ ಕನ್ನಡದ ಕೊರಕಲುಗಳಲ್ಲಿ ಹಲವಾರು ಇರಬೇಕು. ಅವನ್ನು ಪರಿಶೀಲಿಸಿದವರು ಕಡಿಮೆ; ಹೆಚ್ಚಿನ ಭೂಪ್ರದೇಶಗಳು ಸರಕಾರಿ ಕಾದಿಟ್ಟ ಕಾಡುಗಳ ಪಾಲಿಗೆ ಸೇರಿದುದರಿಂದ ಜನಸಂಚಾರವೇ ಇಲ್ಲದ ಪ್ರದೇಶವಾಗಿದೆ.

ಜನರ ಪಾಲಿಗೆ ಕಾಣಸಿಗುವ ಪ್ರಸಿದ್ಧ ಜಲಪಾತವೆಂದರೆ ಗೆರಸೊಪ್ಪೆಯದು. ಇಂದು ಅದೊಂದೇ ಪ್ರವಾಸಿಗೆ ಅನುಕೂಲವಾಗಿರುವ ತಾವು. ಜೋಗಿನಿಂದ ಶರಾವತಿ ನದಿಯ ಆಳವಾದ ಕಂದಕವೊಂದರಲ್ಲಿ ಹರಿದು, ಮುಂದೆ ಪುರಾತನ ಗೇರಸೊಪ್ಪೆಯೆಂಬ ಊರಿನ ಬಳಿ- ಶರಾವತಿ ಕಣಿವೆ ಸಿಗುವ ತನಕವೂ, ವೇಗದಿಂದ ಧಾವಿಸಿ ಸಾಗುತ್ತದೆ! ಮಳೆಗಾಲದಲ್ಲಿ ಈ ನದಿಯನ್ನು ಪೋಷಿಸುವ ಅಸಂಖ್ಯ ಚಿಕ್ಕ ಜಲಪಾತಗಳು ಇವೆ! ಈಗಿನ ಜೋಗು ಊರಿನಿಂದ, ಹೊಸ ವಿದ್ಯುತ್ ಉತ್ಪಾದನಾಕೇಂದ್ರಕ್ಕೆ (ಆನೆಬೈಲು) ಹೋಗುವ ದಾರಿಯಲ್ಲೇ, ಮಳೆಗಾಲದಲ್ಲಿ ಮಾತ್ರ ವಿಶೇಷ ಸುಂದರವಾಗಿ ಕಾಣಿಸುವ ಜಲಪಾತವೊಂದಿದೆ. ಮಾವಿನಗುಂಡಿಯಿಂದ ಘಟ್ಟವನ್ನು ಇಳಿದು ಗೆರಸೊಪ್ಪೆಗೆ ಹೋಗುವ ದಾರಿಯಲ್ಲಿ 'ಕೆಪ್ಪ ಜೋಗು' ಎಂಬೊಂದು ಜಲಪಾತ ಕಾಣಸಿಗುತ್ತದೆ! ಗೆರಸೊಪ್ಪೆ ಪೇಟೆಯಿಂದ ನದಿ ದಂಡೆಯಲ್ಲಿ ಮೇಲಕ್ಕೆ ಸರಿದರೆ— ನಗಿರೆ ಬಸದಿಯಿರುವ ಕಾಡಿನ ಬಳಿಯಲ್ಲಿ ಕಾಣಿಸುವ ಶರಾವತಿ ನದಿಯ ಒಂದು ನೋಟ, ಆಚೀಚಿನ ಪರ್ವತದ ಗೋಡೆಗಳ ದೆಸೆಯಿಂದ ಒಂದು ಅದ್ಭುತ ಪ್ರಶಾಂತ ಸ್ಥಳವಾಗಿ ಕಾಣಿಸುತ್ತದೆ. ಅದು ಸ್ವಿಟ್ಸರಲೇಂಡಿನ ಸರೋವರ ಮತ್ತು ಪರ್ವತಗಳ ನೆನಪನ್ನೆ ನನಗೆ ತಂದುಕೊಟ್ಟಿತು.

ಕಾಳೀನದಿಯಂತೆ, ಶರಾವತಿಯಂತೆ— ಗಂಗಾವಳಿಯ ಶಾಖೆಗಳು, ವೆಂಕಟಾಪುರ ಹೊಳೆ, ಎಣ್ಣೆಹೊಳೆ, ಸುವರ್ಣ ನದಿ, [illegible] ವತಿ ಮತ್ತು ಅವುಗಳ ಶಾಖೆಗಳು ಒಂದೇ ಪಶ್ಚಿಮ ಘಟ್ಟದ ಸೆರಗಿನಿಂದಲೇ [illegible]

ಹುಟ್ಟುವ ಹಲವಾರು ಪರ್ವತಯೋನಿಗಳು— ಮಿಂಚಿನ ವೇಗದಿಂದ ಧುಮುಕುವ ಅಬ್ಬಿಗಳಿಗೆ ತವರೂರುಗಳಾಗಿವೆ. ಕೊಲ್ಲೂರಿನಲ್ಲಿ ಹರಿಯುವ ಒಂದು ಹೊಳೆ ಹಾಗೆಯೇ, ಆರೆಂಟು ಮೈಲುಗಳ ಹಿಂದಿನ ಒಂದು ಬೆಟ್ಟದಿಂದ ಹಾರಿ, ಹರಿದುಬರುವ ಒಂದು ಹೊಳೆಯಾಗಿದೆ. ಹೊಸಂಗಡಿಯಿಂದ ವಾರಾಹಿ ನದಿಯೂ ಅದೇ ರೀತಿಯ ಜಲಪಾತವಾಗಿ ಧುಮುಕುತ್ತದೆ. ಸೀತಾನದಿಯು ಎರಡೆರಡು ಕಡೆಗಳಲ್ಲಿ ಜಲಪಾತವಾಗಿ ಉರುಳಿ ಒಂದು ಕಣಿವೆಯನ್ನು ಸೇರುತ್ತದೆ. ಅದರಂತೆ ಸೋಮೇಶ್ವರ— ಊರಿಗೆ ತುಸುವೇ ಸಮೀಪದಲ್ಲಿ 'ಒನಕೆಅಬ್ಬಿ'ಯಿದೆ. ಇದನ್ನು ಪರ್ವತದ ಮೇಲಿಂದ ಹೋಗಿ ನೋಡಲು ಬರುತ್ತದೆ; ಕೆಳಗಿಂದಲೂ ಹೋಗಿ ನೋಡುವದಕ್ಕೂ ಆಗುತ್ತದೆ. ನಮ್ಮ ನದಿಗಳನ್ನು ಪೋಷಿಸುವ ಉಪನದಿಗಳೆಲ್ಲವೂ ಪಶ್ಚಿಮಘಟ್ಟಗಳಿಂದಲೇ ಕುಣಿಕುಣಿದು ಬರುವ ತೊರೆಗಳು.

ಈ ನದಿಗಳ ನಿಜವಾದ ಚೆಲುವನ್ನು ಕಾಣಲು ಹಂಬಲಿಸುವವರಿಗೆ, ವಿರಾಮ ಮತ್ತು ಧಾಷ್ಟ್ರ್ಯವಿದ್ದರೆ ಒಂದು ಉಪಾಯವಿದೆ. ಕಡಲು ತೀರದಲ್ಲಿ ದೋಣಿಯೊಂದನ್ನು ಏರಿ, ಅವರು ಪೂರ್ವಾಭಿಮುಖವಾಗಿ ಹೋಗಬೇಕು ಆಗ ವಿರಾಮಗತಿಯಿಂದ ಶಾಂತವಾಗಿ ಹರಿಯುವ ನಮ್ಮ ನದಿಗಳ ವೈಖರಿ ಮತ್ತು ವಿಲಾಸಗಳನ್ನು ಕಾಣಬಹುದು. ಮುಂದೆ ನೀರಿನ ವೇಗಕ್ಕೆ, ದೋಣಿಯೇ ಸಂಚರಿಸದಾಗುತ್ತದೆ. ಆಗ ನಾವು ನದಿ ದಂಡೆಯನ್ನು ಸೇರಿ, ಅದರ ಅಂಚು ಹೇಗಿದ್ದರೆ ಹಾಗೆ ನಡೆದು ಮುಂದುವರಿಯಬೇಕು. ನದಿ ದಂಡೆಯಲ್ಲಿ ಈ ರೀತಿ ಮುಂದುವರಿಯುವಾಗ ಕೆಲವೊಮ್ಮೆ ದಿನಕ್ಕೆ ನಾಲ್ಕೈದು ಮೈಲು ಸಾಗುವುದೂ ಕಷ್ಟವೇ. ದಂಡೆಯಲ್ಲಿ ಬೆಳೆದ ಕಾಡುಗಳನ್ನು ನುಗ್ಗಿ ನುಸುಳಬೇಕಾದೀತು; ದಾರಿಗೆ ಅಡ್ಡಬರುವ ಹಳ್ಳಗಳನ್ನು ದಾಟಬೇಕಾದೀತು; ಅಲ್ಲಿರುವ ಬಂಡೆಗಳ ಮೇಲೆ ಕುಪ್ಪಳಿಸಿ, ಕುಪ್ಪಳಿಸಿ,— ಸಾಗಬೇಕಾದೀತು. ನದಿಯ ಅಗಲವು ಕಿರಿದಾದಂತೆ, ಅದರ ಚೆಲುವೂ ಅಧಿಕವಾಗುತ್ತದೆ. ಆ ದೃಶ್ಯಕ್ಕೆ ವಿಶೇಷ ಗಾಂಭೀರ್ಯವೂ ಬರುತ್ತದೆ. ನಾನು ಈ ರೀತಿಯಲ್ಲಿ— ಕುಮಾರಧಾರೆ ಮತ್ತು ನೇತ್ರಾವತಿ ನದಿಗಳ ಕೆಲವೊಂದು ಶಾಖೆಗಳನ್ನೂ, ಸೀತಾನದಿಯ ಸೆರಗನ್ನು ಹಿಡಿದು— ಪರ್ವತದ ಕೊರಕಲುಗಳಲ್ಲಿ ಸಾಕಷ್ಟು ದೂರ ಅನುಸರಿಸಿದ್ದುಂಟು. ಹಾಗೆ ಮಾಡಿದರೆ ಒಂದೇ ಒಂದು ನದಿ— ಒಂದು ಮೈಲು ದೂರದಲ್ಲಿ, ಎಷ್ಟೊಂದು ವಿಭಿನ್ನ ದೃಶ್ಯಗಳನ್ನು ಒದಗಿಸುತ್ತದೆಂದು ಹೇಳುವಂತಿಲ್ಲ. ಈ ಶ್ರಮ ಸಾಧ್ಯವೆನಿಸದವರು— ಸಕಲೇಶಪುರದಿಂದ ಶಿರಾಡಿಗೆ ಇಳಿಯುವ ಘಾಟಿಯಲ್ಲಿ ಮೆಲುವಾಗಿ ಇಳಿದು ಬರಲಿ. ಅಲ್ಲಿ ನಡೆಯಲು ಒಳ್ಳೆಯ ದಾರಿಯಿದೆ; ಆ ದಾರಿ ಹತ್ತಾರು ಬೆಟ್ಟದ ತೊರೆಗಳನ್ನು ದಾಟುತ್ತದೆ. ನಮ್ಮ ಧಾರಿ ಕೆಂಪನ ಹಳ್ಳವು ಹರಿಯುವ ಒಂದೇ ಒಂದು ಮಗ್ಗುಲಿನಿಂದಲೇ ಇಳಿಯುತ್ತದೆ. ಇತ್ತೀಚೆಗೆ ಇಲ್ಲಿ ರಸ್ತೆಯನ್ನು ಅಗಲಮಾಡುತ್ತಿದ್ದಾರೆ. ರಸ್ತೆಗೂ ಕೊರಕಲಿಗೂ ನಡುವೆ ಇರುವ ಕಾಡು, ಗಿಡ, ಬಳ್ಳಿಗಳನ್ನು ಸವರಿರುವುದರಿಂದ— ನಮಗೆ ಮಗ್ಗುಲಿನ ಕಣಿವೆಯ ನೋಟ ನಿರಾತಂಕವಾಗಿ ಕಾಣಸಿಗುತ್ತದೆ. ಮಳೆಗಾಲದಲ್ಲಂತು— ಈ ಕಣಿವೆ ಎಷ್ಟೊಂದು ಮನೋಹರ ನೋಟಗಳನ್ನು ಒದಗಿಸುತ್ತದೆ— ಎನ್ನುವುದಕ್ಕಿಲ್ಲ. ಕೆಲವು ಬಾರಿ ಮುಗಿಲು ತುಂಬಿ ಆ ಕಣಿವೆಯೇ ಕಾಣಿಸುವುದಿಲ್ಲ. ಎದುರಿನ ಉನ್ನತ ಪರ್ವತದ ಗೋಡೆಗಳ ಮೇಲೆ ಬಿಸಿಲು ಬಿದ್ದಾಗ, ಅದರ ಚೆಲುವೇ ಬೇರೆ. ಅದರ ಮುಂಗಡೆ ಬಂಡೆಗಳ ಎಡೆಯಲ್ಲಿ ಆರ್ಭಟಿಸುತ್ತ, ನೊರೆ ಕಾರುತ್ತ ಓಡುವ ಆ ನದಿಯ ನೀರು ಭಯವನ್ನು ಹುಟ್ಟಿಸುತ್ತದೆ. ಹತ್ತು, ಹದಿನಾರು ಮೈಲುಗಳ ಉದ್ದಕ್ಕೂ ಈ ನದಿಯು ಬಂಡೆಗಳ ಮೇಲೆ ಮುರಿ ಮುರಿದು ಓಡುವುದರಿಂದ, ಅದರ ವಿವಿಧ ರೀತಿಯ ನರ್ತನಗಳ ನಲಿವನ್ನು ನೋಡಿ ನಾವು ಆನಂದಿಸಬಹುದು.

ಒಮ್ಮೆ ನಾನು ಧರ್ಮಸ್ಥಳಕ್ಕೆ ತೀರ ಸಮೀಪದಲ್ಲಿರುವ (ಅಲ್ಲಿನ ಸೇತುವೆಗಿಂತಲೂ ಒಂದು ಮೈಲು ಮುಂದಕ್ಕೆ) ಒಂದು ನದಿ ದಂಡೆಯನ್ನು ಹೋಗಿ ಸೇರಿದೆ. ಅಲ್ಲಿ ಹರವಿ ಬಿದ್ದ ಬಂಡೆಗಳ ರಾಶಿ, ನದಿಗೆ ಸ್ನಾನಕ್ಕಿಳಿಯಲು ಬಂದ ಮದ್ದಾನೆಗಳ ಹಿಂಡಿನಂತೆಯೇ ಕಾಣಿಸುತ್ತದೆ. ಆ ಬಂಡೆಗಳ ಎಡೆಯಿಂದ, ಶಿಶಿರಋತುವಿನಲ್ಲಿ ಹದವಾದ ನೀರು ಅಲ್ಲಲ್ಲಿ ನುಸುಳುತ್ತ ಮುಂದುವರಿಯುತ್ತದೆ. ನೀರು ತಾನು ಧುಮುಕುವ ಭರಕ್ಕೆ ಆ ಬಂಡೆಗಳನ್ನು ಬಾವಿಯಂತೆ ಆಳಕ್ಕೆ ಕೊರೆದು ಮಾಡಿದ ದಾರಿಗಳೂ ಉಂಟು. ಇನ್ನೂ ಕೆಲವೆಡೆ ಇಕ್ಕಟ್ಟಿನ ದಾರಿಗಳಲ್ಲಿ ಅಬ್ಬರದಿಂದ ಧುಮುಕುವ ಹತ್ತಿಪ್ಪತ್ತು ಅಡಿ ಅಗಲದ ಮುರುಕಲು ಅಬ್ಬಿ (Cataract)ಗಳೂ ಅಲ್ಲಿ ಇವೆ. ಆ ನೀರು ಒಯ್ಲಿನಿಂದ ಸಾಗುವ ತುಸು ದೂರದ ತನಕವೂ ಆಳಕ್ಕೆ ನೆಲವನ್ನು ಕೊರೆದು, ಸಾಗಿದಂತಿದೆ. ಅಲ್ಲಿಂದ ತುಸುದೇ ದೂರ ಸರಿದರೆ— ಮುಂದೊಂದು ಕಡೆ, ನದಿ ತಾನೆಲ್ಲಿಗೆ ಬಂದೆ? ಏತಕ್ಕೆ ಬಂದೆ?— ಎಂಬುದನ್ನೇ ಮರೆತು, ಒಂದೆಡೆ ಬೆಪ್ಪಾಗಿ ನಿಂತಂತೆ ಕಾಣಿಸುತ್ತದೆ!

ನಮ್ಮ ಸಹ್ಯಾದ್ರಿಪರ್ವತದಿಂದ ಪಶ್ಚಿಮಕ್ಕೆ ಹರಿಯುವ ನದಿಗಳಿಗೆ ವೇಗ ಅಧಿಕ. ಅವೆಲ್ಲ ಒಂದು ದಿನದೊಳಗೇನೆ ತಮ್ಮ ಪಯಣವನ್ನು ಮುಗಿಸುತ್ತವೆ. ಹೆಚ್ಚಿನ ನದಿಗಳು ೨೦-೩೦ ಮೈಲುಗಳಷ್ಟು ಕಿರಿಯವು. ನೇತ್ರಾವತಿ, ಕಾಳೀ ನದಿಗಳು ಮಾತ್ರವೇ ಐವತ್ತು ಮೈಲಿಗಿಂತ ಉದ್ದವಾಗಿವೆ. ಈ ಚಿಕ್ಕ ಪಯಣದಲ್ಲಿ ಅವು ನಮ್ಮ ಕಣ್ಣುಗಳಿಗೆ ಒಪ್ಪಿಸುವ ನಿಸರ್ಗವೈಖರಿ ಮೂಡಣಕ್ಕೆ ಹರಿಯುವ ನದಿಗಳಿಗಿದ್ದಂತೆ ಕಾಣಿಸುವುದಿಲ್ಲ. ಇವೆರಡನ್ನೂ ಪೋಷಿಸುತ್ತಿರುವುದು ಪಶ್ಚಿಮಘಟ್ಟದ ಪರ್ವತಗಳೇ, ಅರಣ್ಯಗಳೇ. ಈ ಬೆಟ್ಟದ ಸೆರಗುಗಳ ಮೇಲೆ ಪ್ರತಿ ವರ್ಷ ೨೦೦–೪೦೦ ಇಂಚುಗಳ ತನಕವೂ ಮಳೆ ಬಡಿಯುತ್ತದೆ. ಈ ಪರ್ವತಗಳಿಂದ ೨೦-೩೦ ಮೈಲು ಪೂರ್ವಕ್ಕೆ ಸರಿಯುವುದರೊಳಗಾಗಿ ಮಲೆನಾಡಿನ ಗುಡ್ಡಗಾಡುಗಳು ಮಾಯವಾಗುತ್ತ, ಮೈದಾನು ಭೂಮಿ ಕಾಣಿಸತೊಡಗುತ್ತದೆ. ಅಲ್ಲಿಂದ ನದಿಗಳ ಗಮನವೂ ಮೆಲ್ಲಗಾಗುತ್ತದೆ. ಆದರೂ ಕಾವೇರಿ, ಅದರ ಶಾಖೆಗಳು, ತುಂಗಾ ಮತ್ತದರ ಶಾಖೆಗಳು ಮಲೆನಾಡಿನಲ್ಲಿ ಹರಿಯುವಷ್ಟರ ತಕನವೂ ಅಂಕುಡೊಂಕಾಗಿ ಸಂಚರಿಸುತ್ತ, ಬಿದಿರ ಮೆಳೆಗಳಿಂದ ಚಾಮರ ಬೀಸಿಕೊಳ್ಳುತ್ತ, ಮುಂದುವರಿಯುವ ನೋಟವು ಮೋಹಕವಾಗಿಯೇ ಕಾಣಿಸುತ್ತದೆ. ಅವು

ಸೈಂಟ್‌ಮೇರಿ ದ್ವೀಪ





ಕುಟಜಾದ್ರಿ ಪರ್ವತಶಿಖರದಿಂದ ಪೂರ್ವಕ್ಕೆ ನೋಡುವಾಗ ಕುಟಜಾದ್ರಿ ಪರ್ವತ

ಅಲ್ಲಲ್ಲಿ ಮುರುಕಲು ಅಬ್ಬಿಗಳಂತೆ ಮುರಿದು, ಮುಂದುವರಿಯುತ್ತವೆ.

ಈ ಶತಮಾನದಲ್ಲಿ ಮನುಷ್ಯ—ಪ್ರಯತ್ನದಿಂದ ನಿರ್ಮಾಣಗೊಂಡ ಹಲವಾರು ಜಲಾಶಯಗಳು ಮಲೆನಾಡಿನ ಸೌಂದರ್ಯವನ್ನು ಹೆಚ್ಚಿಸಿವೆ. ಅಲ್ಲದೆ ಹೋದರೆ ನೈಸರ್ಗಿಕ ಸರೋವರಗಳು ನಮ್ಮಲ್ಲಿ ತೀರ ಕಡಿಮೆ. ಶರಾವತಿಯ ಒಡ್ಡಿನಿಂದ ಮೊದಲಿಗೆ ಉಂಟಾದ ಹಿರೇಭಾಸ್ಕರ ಜಲಾಶಯವೆಂಬುದು ಬಯಲುಸೀಮೆಯ ಕನ್ನಂಬಾಡಿ ಜಲಾಶಯ, ಇಲ್ಲವೆ, ತುಂಗಭದ್ರಾ ಜಲಾಶಯಗಳ ಸಮುದಾಯಕ್ಕಿಂತ ಭಿನ್ನವಾದುದು. ಹಿರೇಭಾಸ್ಕರ ಜಲಾಶಯವು ಮಲೆನಾಡಿನ ಉನ್ನತ ಪರ್ವತಶ್ರೇಣಿಯ ಸಂದುಗೊಂದುಗಳಿಗೆಲ್ಲಾ ಚಾಚುತ್ತದೆ. ಹಾಗೆ ಚಾಚುವ ನೀರಿನ ಸೆರಗುಗಳ ಇಕ್ಕೆಡೆಗಳಲ್ಲೂ ಕಡಿದಾದ ಪರ್ವತಗಳ ಹಸುರು ಗೋಡೆ ನಿಂತಿದ್ದು, ಆ ಸೆರಗಿಗೆ ತುಂಬ ಆಳವೂ ಬರುತ್ತದೆ. ಈ ಜಲಾಶಯಗಳ ನೋಟವು ಬಹಳ ದೂರಕ್ಕೆ ಚಾಚಿದ್ದು ಕಾಣುವುದರೊಳಗಾಗಿಯೇ ಪರ್ವತಗಳು ಅಡ್ಡ ಬರುತ್ತವೆ. ಆದರೆ, ಅದರ ಒಂದೊಂದು ತುಣುಕೂ, ಒಂದೊಂದು ಆಕಾರದ ನೀರಿನ ಸೆರಗಿನಂತೆ ನಮಗೆ ಕಾಣಿಸುತ್ತದೆ. ಲಿಂಗನಮಕ್ಕಿಯಲ್ಲಿ ಕಟ್ಟುತ್ತಿರುವ ಹೊಸ ಅಣೆಕಟ್ಟಿನಿಂದ, ಇದರ ವಿಸ್ತಾರ ಅಧಿಕವಾಗಿದೆ. ಅದರ ಮಗ್ಗುಲಿನ ತಲಕಳಲೆ ಜಲಾಶಯವಾಗಲಿ, ಭದ್ರಾ ಜಲಾಶಯವಾಗಲೀ, ಮಲೆನಾಡಿನ ಸೌಂದರ್ಯಕ್ಕೆ ಮಾನವರು ಅರ್ಪಿಸಿದ ಹೊಸ ಕಾಣಿಕೆಗಳಾಗಿವೆ.

ಬಯಲು ಸೀಮೆಯಲ್ಲಿ ಹರಿಯುವ ನದಿಗಳಿಗೆ ಮಲೆನಾಡಿನ ನದಿಗಳಷ್ಟು ಚೆಲುವು ಬರುವುದಿಲ್ಲವಾದರೂ ಆ ನದಿಗಳ ರೀತಿಯೇ ಬೇರೆ ಉದಾಹರಣೆಗೆ ಘಟಪ್ರಭಾ ನದಿಯು ಮುಂದುವರಿಯುತ್ತ ಗೋಕಾಕಿನ ಬಳಿ ಜಲಪಾತವಾಗಿ ಉರುಳುತ್ತದಷ್ಟೆ. ಅದು ಬಿದ್ದು, ಉಂಟುಮಾಡಿದ ಕಂದಕವಾಗಲಿ, ಆ ಜಲಪಾತವೇ ಆಗಲಿ ಸೌಂದರ್ಯದಲ್ಲಿ ಯಾವುದಕ್ಕೂ ಕಡಿಮೆಯಿಲ್ಲ. ಈ ಪ್ರದೇಶದಲ್ಲಿ ಹಾಸಿರುವ ನೆಲ ಮರಳುಗಲ್ಲಿನದು. ಅದರ ಮೇಲೆ ಸೂರ್ಯನ ಬಿಸಿಲು ಕುಣಿಯುವಾಗ ಮಿಂಚುವ ಬಣ್ಣಗಳು ಹಳದಿ, ಕಂದು, ಕಿತ್ತಳೆ, ಕಪಿಲೆ, ನೀರುಳ್ಳಿ, ನೇರಳೆ ಬಣ್ಣಗಳಂತಿದ್ದು ಅವು, ಸಾಮಾನ್ಯ ಶಿಲೆಯ ನೆಲವು ಕೊಡುವ ಬಣ್ಣ ಬೆಡಗುಗಳಿಗಿಂತಲೂ ಸುಂದರವಾಗಿವೆ. ಶಿಲೆ(Granite)ಯ ಮೇಲೆ ಬಿಸಿಲು ಕುಣಿದಾಗ ಬೂದು ಇಲ್ಲವೆ ಮಸುಕು ಬೆಳಕು ಹೊಮ್ಮುತ್ತದೆ. ಮರಳುಗಲ್ಲಿನಲ್ಲಿ ಬೆಳಕು ಬಿಂಬಿಸುವ ರೀತಿ ಹಾಗಲ್ಲ

ಜಲಪಾತದ ನೆನಪು ಬರುವಾಗ ಕಾವೇರಿ ನದಿಯ ಮಧ್ಯ ಪಯಣದಲ್ಲಿ ಕಾಣಿಸುವ ಶಿವಸಮುದ್ರವನ್ನು ಯಾರೂ ಮರೆಯುವಂತಿಲ್ಲ. ಅಲ್ಲಿನ ಗಗನಚುಕ್ಕಿ, ಭರಚುಕ್ಕಿಗಳು ಪ್ರವಾಸಿಗೆ ಸುಲಭವಾಗಿ ದೊರೆಯುವ ದೃಶ್ಯಗಳು. ಹೋಗಿ ಇರಬೇಕೆಂದರೂ ಅಲ್ಲಿ ಅನುಕೂಲತೆಗಳೂ ಇವೆ. ಮುಂದೆ, ಇದೇ ಮಾದರಿಯಲ್ಲಿ, ಕಾವೇರಿ ನದಿಗೆ ಇನ್ನೊಂದು ಇಕ್ಕಟ್ಟಿನ ದಾರಿ-ಮೇಕೆದಾಟು — ಎಂಬಲ್ಲಿ ಇದಿರಾಗುತ್ತದೆ. ಅದು ಕನ್ನಡ - ತಮಿಳು ದೇಶಗಳ ಗಡಿ ಸೀಮೆಯಲ್ಲಿದೆ.

ನದಿಗಳ ತೀವ್ರ ಓಟ ನಮಗೆ ಆಶ್ಚರ್ಯ ಹುಟ್ಟಿಸುವುದು ಸಹಜ. ನೀರು ಉರುಳುತ್ತ ಉಂಟುಮಾಡುವ ಆರ್ಭಟೆಯೇ ಭಯ ಹುಟ್ಟಿಸುತ್ತದೆ. ಆದರೆ ನದಿ ಬಯಲು ಸೀಮೆಯಲ್ಲಿ ಹರಿಯುವಾಗ ಅಗಲ ಹೆಚ್ಚುತ್ತ ಹರಿಯುತ್ತದೆ. ಅದರ ಗಮನ ಭುಜಂಗಗತಿಯಾಗುತ್ತದೆ. ಅಂಕು ಡೊಂಕಾಗಿ ಅದು ಹರಿಯುವಾಗ, ಬಯಲು ಭೂಮಿಯನ್ನೇ ಕೆಲವು ಕಡೆ ಐವತ್ತು, ನೂರು ಅಡಿಗಳಷ್ಟು ಆಳಕ್ಕೂ ಕತ್ತರಿಸಲೂಬಹುದು. ಇಂಥ ಸ್ಥಳಗಳಲ್ಲಿ ನದಿಯು ಮುರಿದು, ದಿಕ್ಕು ಬದಲಿಸಿ ಮುಂದಕ್ಕೆ ಸಾಗುತ್ತದೆ. ಅವೇ ಸ್ಥಳಗಳು ನಮ್ಮ ಮನಸ್ಸಿಗೆ ತುಂಬ ಶಾಂತಿಯನ್ನು ಕೊಡಬಲ್ಲ ತಾಣಗಳಾಗುತ್ತವೆ. ಉದಾಹರಣೆಗಾಗಿ ರಾಮನಾಥಪುರ(ಹಾಸನಜಿಲ್ಲೆ). ಇಲ್ಲಿನ ಚೆಲುವನ್ನು ಮೆಚ್ಚಿಯೇ, ಪೂರ್ವಿಕರು 'ರಾಮೇಶ್ವರ' ದೇವಾಲಯವನ್ನು ಕಟ್ಟಿರಬೇಕು. ಇದು ಕಾವೇರಿ ನದಿಯ ತೀರವಾದರೆ, ಅದೇ ಕಾವೇರಿಯನ್ನು ಕೂಡುವ ಕಪಿನಿ ನದಿಯೂ ಇದೇ ರೀತಿ ಭುಜಂಗಗತಿಯಿಂದ ಚಲಿಸುವ ಒಂದು ನದಿ. ಅದರ ಮಗ್ಗುಲಲ್ಲೂ ಚೆಲುವಿನ ತಾಣವೊಂದನ್ನೇ ಅರಸಿ-ನಂಜನಗೂಡು ಎಂಬಲ್ಲಿ ದೇವಾಲಯವನ್ನು ಕಟ್ಟಿದ್ದಾರೆ. ಕಾವೇರಿಯ ದಂಡೆಯಲ್ಲಿ ಯಡತೊರೆ ಎಂಬುದು ಅಂಥದೇ ಒಂದು ಸ್ಥಳ. ಶ್ರೀರಂಗಪಟ್ಟಣ, ತಿರುಮಕೂಡಲುನರಸೀಪುರ, ಹರಿಹರ ಇವೆಲ್ಲವೂ ನದಿಯ ಸೊಬಗಿನ ಆಕರ್ಷಣೆಯಿಂದಲೇ ಕಟ್ಟಿದ ಸುಂದರ ಕ್ಷೇತ್ರಗಳಾಗಿವೆ.



ಜಾರ್ಮಾಡಿ ಘಟ್ಟದಿಂದ ಧುಮುಕುವ ಒಂದು ಹಳ್ಳ

ಅಂಥ 'ಸುಂದರ'ವೆಂಬ ಪದದೊಡನೆ, ಉಗ್ರ— ಎಂಬ ಪದವನ್ನೂ ಕೆಲವೊಮ್ಮೆ ಸೇರಿಸಬಹುದು· ಉಗ್ರತೆಯೇ ಹೆಚ್ಚು ಸೌಂದರ್ಯವಿಲ್ಲದಾಗಲೂ ಬಹುದು. ಪಂಪಾಕ್ಷೇತ್ರದಲ್ಲಿ ಹರಿಯುವ ತುಂಗಭದ್ರಾ ನದಿಯನ್ನು ಕಂಡರೆ ಹಾಗೆ ಅನಿಸುವುದಿಲ್ಲವೇ! ಆ ಪ್ರದೇಶದ ಅಸಂಖ್ಯ ಬೆಟ್ಟಗಳು ಬೇರೆಯೇ ತೆರನವು; ಆ ಬೆಟ್ಟಗಳು ಮಹಾಮಹಾ ಬಂಡೆಗಳನ್ನು ಒಂದೆಡೆ ರಾಶಿಯೊಟ್ಟಿ ಇರಿಸಿದಂತಿದೆ. ಅಂಥ ಬಂಡೆಗಳ ಎಡೆಯಿಂದ ನದಿನೀರು ಕತ್ತರಿಸಿಕೊಂಡು ಹಾಯುವಾಗ, ಅದಕ್ಕಿರುವ ಶಾಂತ ಸೌಂದರ್ಯ ಮಾಯವಾಗಿ ರುದ್ರಸೌಂದರ್ಯವೇ ಉಂಟಾಗುತ್ತದೆ. ಮಳೆಗಾಲದಲ್ಲಿ ರಾಡಿಯಾದ ಕೆಂಬಣ್ಣದ ನೀರನ್ನು ಸಾಗಿಸಿ, ಹರಿಯುವಾಗ, ನದಿ ದಂಡೆಯ ಬಂಡೆಗಳು ಈ ಭೈರವ ನೋಟಕ್ಕೆ ಸಮನಾದ ದ್ವಾರಪಾಲಕರಂತಾಗುತ್ತವೆ! ಹೊಂಬೆಳಕು ಸಂಜೆ, ಮುಂಜಾನೆಗಳಲ್ಲಿ ಈ ಬಂಡೆಗಳ ಬಿಂಬಗಳನ್ನು ಚಂಚಲ ನೀರಲ್ಲಿ ಮೂಡಿಸುವಾಗ, ನದಿ ನೀರು ಬೆಂಕಿಯ ನಾಲಗೆಗಳನ್ನು ನೇಯ್ದು ಮಾಡಿದ ಚಾಪೆಯಂತೆ ಕಾಣಿಸುತ್ತದೆ.

ಕಾವೇರಿ, ತುಂಗೆ, ಭದ್ರೆ, ಕೃಷ್ಣೆ— ಎಲ್ಲವೂ ನಮ್ಮ ನದಿಗಳೇ. ಬೀದರ ಜಿಲ್ಲೆಯ ತುತ್ತುದಿಯಲ್ಲಿ ನಮಗೆ ಗೋದಾವರಿಯ ಅಂಚೂ ಸಿಗುತ್ತಿರಬೇಕು. ಗೋದಾವರಿ ನದಿ ಪುರಾತನ ಕರ್ಣಾಟಕದ ಮೇರೆಯಾಗಿತ್ತು; ಇಂದಲ್ಲ. 'ಇವುಗಳ ನೆನಪು ಇವುಗಳ ತವರುಮನೆಯನ್ನು ನೆನಪಿಗೆ ತಂದುಕೊಡಲೇಬೇಕಷ್ಟೇ. ಬೆಟ್ಟವಿಲ್ಲವಾದರೆ ನದಿಗಳೂ ಇಲ್ಲ; ಏರು ಇಲ್ಲವಾದರೆ ತಗ್ಗೂ ಇಲ್ಲವಷ್ಟೆ. ವನಸಂಪತ್ತಿನಿಂದ ತುಂಬಿರುವ ಕನ್ನಡದ ಪ್ರದೇಶವೇ ಸಹ್ಯಾದ್ರಿ; ಅದೇನೆ ಪಶ್ಚಿಮಘಟ್ಟಗಳ ಸೆರಗು. ಈ ಪರ್ವತಾವಳಿ ಮುಂಬಯಿಯಿಂದ ತೊಡಗಿ ಕನ್ಯಾಕುಮಾರಿಯ ತನಕವೂ ಹಾಯುವುದರಿಂದ ನಮಗೆ ಅದು ಕಡಲಿನ ಉದ್ದಕ್ಕೂ ಕಾಣಸಿಗುತ್ತದೆ.

ಕರ್ಣಾಟಕದ ಉತ್ತರ ಮತ್ತು ದಕ್ಷಿಣ ಕನ್ನಡ ಜಿಲ್ಲೆಗಳ ಮೂಲಕ ಅದು ಹಾಯುತ್ತದೆ. ವಿಮಾನವನ್ನೇರಿ ಅದನ್ನು ದಾಟುವಾಗ ಈ ಪರ್ವತಾವಳಿಯೆಂಬುದು ೨೦ ರಿಂದ ೩೦, ೪೦ ಮೈಲುಗಳ ಅಗಲಕ್ಕೆ ಶುಂಠಿಯ ಬೆರಳುಗಳಂತೆ ಯಾವೆಡೆಗೆಂದರೆ ಆವೆಡೆಗೆ ಚಾಚಿರುವುದು ಕಾಣಿಸುತ್ತದೆ. ಅದರ ಪಡುವಣ ಮಗ್ಗುಲು ಥಟ್ಟನೆ ಗೋಡೆಯಂತೆ ಕಡಿದಾಗಿ ಇಳಿಯುತ್ತದೆ. ಉತ್ತರ ಕನ್ನಡ ಜಿಲ್ಲೆಯಲ್ಲಿ ಈ ಸೆರಗಿನ ಸರಾಸರಿ ಎತ್ತರ ೨೦೦೦ ಅಡಿಗಳಿಷ್ಟಿದ್ದರೆ ದಕ್ಷಿಣ ಕನ್ನಡದಲ್ಲಿ ಅದು ೩೦೦೦ ಅಡಿಯಷ್ಟಿದೆ. ಆದರೆ ಅದರ ಬುಡವು ಸಮುದ್ರ ಮಟ್ಟಕ್ಕಿಂತ ಕೇವಲ ೩೦೦ ಅಡಿ ಎತ್ತರವಾಗಿದೆ. ಈ ಬೆಟ್ಟಗಳನ್ನು ಏರಿ ಹೋಗುವ ಹಲವಾರು ದಾರಿಗಳಿವೆ. ಅಂಥ ಹಾದಿಗಳನ್ನು ಹಿಡಿದು ಹೋದರೆ— ನಮಗೆ ಈ ಪರ್ವತಗಳ ಬೆನ್ನಿನ ಕುಡಿಯನ್ನು ಸೇರಲು ಎಷ್ಟು ಪ್ರಯಾಸವಿಪೆಯೆಂಬ ಅನುಭವವಾದೀತು. ಇಂದು ಮಡಿಕೇರಿ, ಬಿಸಿಲೆ, ಮಂಜರಾಬಾದು, ಚಾರ್ಮಾಡಿ, ಆಗುಂಬೆ, ಹುಲಿಕಲ್ಲು, ನಾಗೋಡಿ, ಗೆರಸೊಪ್ಪೆ, ಕೋಗಾರ, ದೇವೀಮನೆ, ಅರೆಬೈಲು- ಘಟ್ಟಗಳಿಂದಾಗಿ ವಾಹನ ಸಂಚಾರ ಸುಲಭವಾಗಿದೆ. ನಾವು ನಡೆದೋ, ವಾಹನಗಳನ್ನೇರಿಯೋ ಹೋಗಬಹುದು. ಇವುಗಳಲ್ಲಿ— ಚಾರ್ಮಾಡಿ ಘಟ್ಟದ ದಾರಿಯು ನಮಗೆ ಅತ್ಯಂತ ಮನೋಹರವಾದೊಂದು ಕಣಿವೆಯ ನೋಟವನ್ನು ಒದಗಿಸುತ್ತದೆ. ಮಂಜರಾಬಾದು ಇಲ್ಲವೆ ಶಿರಾಡಿ ಘಟ್ಟವು, ನದಿಯೊಂದರ ದೀರ್ಘ ನೋಟವನ್ನು ದಾರಿಯುದ್ದಕ್ಕೂ ಕೊಡುತ್ತದೆ. ಆಗುಂಬೆಯಲ್ಲಿ- ಅದೇ ಘಟ್ಟ ನೇರಾದ ಗೋಡೆಯಂತೆಯೇ ಇದೆ. ಬಹಳ ಸ್ವಲ್ಪ ಉದ್ದದಲ್ಲಿ, ಯಾವತ್ತೂ ಘಟ್ಟದ ಎತ್ತರವನ್ನೇ ನಾವು ಏರಬೇಕಾಗುತ್ತದೆ. ಆದರೆ, ಅದರ ಪಡುವಣ ಭಾಗ ಪ್ರೇಕ್ಷಕನಿಗೆ— ಬಹಳ ಸುಲಭವಾಗಿ, ಬಹಳ ದೂರದ ತನಕ ಹರವಿ ಕಾಣಿಸುತ್ತದೆ. ಆಗುಂಬೆಯ ದಾರಿ ಬರಿಯ ಏಳು ಮೈಲು ಉದ್ದದ್ದು. ಅದು ಏರುವ ಎತ್ತರ ೧೮೦೦ ಅಡಿ; ಇದಕ್ಕೆ ಪ್ರತಿಯಾಗಿ ಮಡಿಕೇರಿಗೆ ಹೋಗುವಾಗ ಸಿಗುವ ಸಂಪಾಜೆಯ ಘಟ್ಟವು ೧೬ ಮೈಲಿನ ಏರಿಕೆಯಲ್ಲಿ ೪೦೦೦ ಅಡಿ ಉನ್ನತಿಯನ್ನು ಸಾಧಿಸುತ್ತದೆ. ಆದರೆ ಇದರ ಮಗ್ಗುಲು ಬಹಳ ತೆರೆದಿರುವ ದೃಶ್ಯಗಳನ್ನು ಒದಗಿಸುವುದಿಲ್ಲ.

ಇಂಥ ಪರ್ವತಶ್ರೇಣಿಗಳಲ್ಲಿ, ನಾವು ಸಾಹಸಪಟ್ಟರೆ, ಕೆಲವೊಂದು ಗಿರಿ ಶಿಖರಗಳಿಗೂ ಹೋಗಬಹುದು. ಹಿಂದಿನವರು, ಹೋಗಿ ಬರಲು, ಸಾಮಾನ್ಯ ದಾರಿಗಳನ್ನೂ ಕಡಿದಿದ್ದರು. ಸುಬ್ರಹ್ಮಣ್ಯದ ಹಿಂದಕ್ಕಿರುವ ಕುಮಾರಪರ್ವತವೆಂಬುದು ೫೬೨೦ ಅಡಿ ಎತ್ತರವಾದೊಂದು ಶಿಖರ. ಅಲ್ಲಿ ಹೋಗಿ, ತಂಗುವುದಕ್ಕೆ ವಿಸ್ತಾರ ಸ್ಥಳವೂ ಇಲ್ಲ; ಇಲ್ಲಿ ಬೇರೆ ಯಾವುದೊಂದು ಅನುಕೂಲತೆಗಳೂ ಇಲ್ಲ. ಆದರೆ ಹಿಂದಣ ದಿನಗಳಲ್ಲಿ, ಕುದುರೆಮುಖ ಶಿಖರಕ್ಕೆ ಹೋಗುವವರಿಗೆ ಕುದುರೆ ಸಂಚರಿಸಬಹುದಾದ ದಾರಿಯೊಂದು ಇದ್ದಿತ್ತು. ಈ ದಾರಿ ಹಳೆಯ ಹೇರೆತ್ತುಗಳ ದಾರಿಯಂತಿದೆ. ಶಿಖರವನ್ನು ಏರುವವರ ಸಲುವಾಗಿ ಅಲ್ಲಿ ಕಟ್ಟಡಗಳನ್ನು ಕಟ್ಟಿದ್ದರು. ಈಗ

ಅವೆಲ್ಲವೂ ನೆಲಸಮವಾಗಿವೆ. ಹದಿನಾರು ಮೈಲುಗಳಷ್ಟು ದೂರವನ್ನು ನಡೆದೇ ಹೋಗಬಲ್ಲವರಿಗೆ— ಅಲ್ಲಿನ ಮನೋಹರ ನೋಟ ಕಾಣಿಸೀತು. ಈ ಶಿಖರವು ೬೨೧೪ ಅಡಿ ಎತ್ತರವಾಗಿದೆ. ಇನ್ನೊಂದು ಪ್ರಸಿದ್ಧ ಶಿಖರ ನಗರ ಮತ್ತು ಕುಂದಾಪುರ ತಾಲೂಕುಗಳ ನಡುವೆ ಇರುವ 'ಕುಟಚಾದ್ರಿ.' ಇದು ಇವೆರಡಕ್ಕಿಂತ ಸುಲಭಗಮ್ಯವಾಗಿದೆ. ಮೋಟರು ದಾರಿಯಿಂದ ಐದು ಮೈಲಿನೊಳಗಿರುವ ಈ ಶಿಖರ ೪೪೦೬ ಅಡಿ ಉನ್ನತವಾಗಿದೆ. ಇಂದು ಇದು ಕಬ್ಬಿಣದ ಅದುರು ತೆಗೆಯುತ್ತಿರುವ ಒಂದು ಪ್ರದೇಶವಾದುದರಿಂದ— ಶಿಖರಕ್ಕೆ ತೀರ ಸಮೀಪದ ತನಕ ಜೀಪುಗಳಿಗಾಗಿ ದಾರಿಯನ್ನು ಕಡಿದಿದ್ದಾರೆ. ಈ ಶಿಖರದ ತುದಿಯಲ್ಲಿ ಒಂದು ಕಲ್ಲಿನ ಮಂಟಪವಿದೆ; ಚಿಕ್ಕದೊಂದು ಕೊಳ್ಳವಿದೆ; ಈ ಶತಮಾನದ ಆರಂಭದಲ್ಲಿ ವಾಸಕ್ಕೆ ಅನುಕೂಲವಾದ ಒಂದು ಮನೆಯೂ ಇತ್ತು. ಅದು ಬಿದ್ದುಹೋಗಿದೆ. ಇವತ್ತು, ಪ್ರವಾಸಿಗಳ ಸೌಕರ್ಯ ಅಲ್ಲಿ ಈಗೇನೇನೂ ಇಲ್ಲ. ಈ ಕುಟಚಾದ್ರಿಯ ಕೆಳಗೆ ಇರುವ ಕ್ಷೇತ್ರವೆ, ಶಂಕರಾಚಾರ್ಯರಿಂದ ಸ್ಥಾಪನೆಗೊಂಡಿತೆನ್ನುವ ಕೊಲ್ಲೂರು ಮೂಕಾಂಬಿಕಾ ದೇವಾಲಯ. ಯೌವನದಲ್ಲಿ ನಾನು ಹಲವು ಬಾರಿ ಕುಟಚಾದ್ರಿಗೆ ಹೋದುದುಂಟು. ಎರಡು-ಮೂರು ದಿನಗಳನ್ನು ಅಲ್ಲೇ ಕಳೆದುದುಂಟು. ಅಲ್ಲಿನ ಸುತ್ತಮುತ್ತಣ ನೋಟಗಳು ಸದಾ ನನ್ನ ನೆನಪಿಗೆ ಬರುತ್ತವೆ.

ಇದರಂತೆಯೇ ಉತ್ತರ ಕನ್ನಡ ಜಿಲ್ಲೆಯ ಸಹ್ಯಾದ್ರಿಯ ಸೆರಗಿನಲ್ಲಿ ಪ್ರೇಕ್ಷಣೀಯ ಗಿರಿಶಿಖರಗಳಿವೆ. ಕೋಗಾರ ಘಟ್ಟ ತೊಡಗುವಲ್ಲಿ— ಗೋವರ್ಧನ ಗಿರಿಯಿದೆ. ಅದು ಬಿದನೂರು ಅರಸರ ಕಾಲದಲ್ಲಿ ಪ್ರಸಿದ್ಧಿಯನ್ನು ಪಡೆದ ಒಂದು ಸ್ಥಳವಾಗಿತ್ತು. ಗೋವರ್ಧನಗಿರಿಮಹಾತ್ಮೆ— ಎಂಬ ಒಂದು ಕಾವ್ಯವೂ ರಚನೆಗೊಂಡಿತ್ತೆಂದು, ಅದನ್ನು ಸಂಗ್ರಹಿಸಿದ 'ಮೆಕೆಂಜಿ' ತಿಳಿಸಿದ್ದುಂಟು. ನಾನಿನ್ನೂ ಆ ಶಿಖರಕ್ಕೆ ಹೋಗುವ ಹಂಬಲವನ್ನು ಉಳಿಸಿಕೊಂಡಿದ್ದೇನೆ. ಗಿರಿಶಿಖರಗಳ ಸೊಗಸನ್ನು ಕಾಣಲು ಬಯಸುವವರು, ಅತ್ಯುನ್ನತ ಶಿಖರವನ್ನೇ ಕಾಣಬೇಕೆಂದು ಹಂಬಲಿಸಬೇಕಾಗಿಲ್ಲ. ನಮಗೆ ಸಮೀಪದ ಯಾವ ಬೆಟ್ಟದಿಂದಲೂ ಆ ಕೆಲಸ ಪ್ರಾರಂಭಿಸಬಹುದು. ಆ ಬೆಟ್ಟ ಅರಣ್ಯಮಯವಾಗಿದ್ದರೆ, ಗುಂಪಾಗಿ ಹೋಗುವುದೊಳ್ಳೆಯದು; ದಾರಿ ಕಡಿದುಕೊಳ್ಳುತ್ತ ಹೋದವನು ಮರಳಿ ಬರುವುದಕ್ಕೆ ಅನುಕೂಲತೆ ಕಲ್ಪಿಸಿಕೊಳ್ಳಬೇಕಾಗಲೂಬಹುದು.

ಚಿಕ್ಕಮಗಳೂರು ಜಿಲ್ಲೆಯ ಬೆಟ್ಟದ ಸೆರಗನ್ನು ನಾವು ಮರೆತರೆ ತಪ್ಪಾದೀತು. ಅದೆಂದರೆ ಬಾಬಾಬುಡನ್ ಬೆಟ್ಟಗಳು. ಈ ಪರ್ವತಶ್ರೇಣಿ ಸಾಮಾನ್ಯವಾಗಿ ನಾಲ್ಕುಸಾವಿರ ಅಡಿ ಉನ್ನತವಾಗಿದೆ. ಅದರ ಒಂದು ಶಿಖರವು ೬೧೫೧ ಅಡಿ ಎತ್ತರವಾಗಿದೆ. ಈ ಪರ್ವತದ ಚೆಲುವನ್ನು ಮೆಚ್ಚಿಯೇ, ಅಲ್ಲಿ ದತ್ತಾತ್ರೆಯ ಕ್ಷೇತ್ರ ಸ್ಥಾಪಿಸಿದರು. ಈಗ ಕೆಮ್ಮಣ್ಣುಗುಂಡಿಯು ಗಣಿಯಿಂದಾಗಿ, ಅದಕ್ಕೆ ಹೋಗುವ ಮಾರ್ಗ ಸೌಕರ್ಯವೂ ಅಲ್ಲಿ ನೆಲೆಸಲು ವಸತಿ ಸೌಕರ್ಯಗಳೂ ಇವೆ. ಆದರೆ ಈ ಬೆಟ್ಟದ ಕಾಡುಗಳನ್ನು ಪಶ್ಚಿಮಘಟ್ಟದ ಅರಣ್ಯಗಳಿಗೆ ಎಂದೂ ಹೋಲಿಸಲು ಬರುವಂತಿಲ್ಲ.

ಇಂತಹ ಪರ್ವತಗಳಿಗೆ, ಕಾಡುಗಳಿಗೆ, ನದಿಗಳಿಗೆ ಕಡಲುಗಳಿಗೆ ನಾವು ಏತಕ್ಕೆ ಹೋಗಬೇಕು? ಎಂಬ ಪ್ರಶ್ನೆ ಬರುತ್ತದೆ. ಬರಿಯ ಕಣ್ಣಿನ ಹಬ್ಬಕ್ಕಾಗಿ ಹೋದರೂ ತಪ್ಪಿಲ್ಲ. ನೀರಿರುವಲ್ಲಿಗೆ ಹೋಗಿ ಜಲಕ್ರೀಡೆಯಾಡಿ ಆನಂದಿಸಿದರೂ ತಪ್ಪಿಲ್ಲ. ಅದಕ್ಕಿಂತಲೂ ಹೆಚ್ಚಿನ ಅಭಿರುಚಿಯನ್ನು ನಮ್ಮ ಜತೆಯಲ್ಲಿ ಒಯ್ಯಬಲ್ಲೆವಾದರೆ— ಆಗ ದೊರೆಯುವ ಆನಂದ ಮತ್ತಷ್ಟು ಹೆಚ್ಚು. ಅಲ್ಲಿನ ಗಿಡ-ಮರಗಳು, ಪಶು-ಪಕ್ಷಿಗಳು, ಕೀಟಗಳು, ಜಲಚರಗಳು— ಎಷ್ಟು ವಿಶೇಷವಾಗಿದೆಯೆಂದು ನೋಡಿದವರಿಗಷ್ಟೇ ತಿಳಿದೀತು. ಅವನ್ನು ಅಭ್ಯಸಿಸಬಹುದು ಬೆರಗುಗೊಳ್ಳಲೂಬಹುದು. ಇಂಥ ಅಪೂರ್ವ ಪ್ರದೇಶಗಳಲ್ಲಿರುವ ಬರಿಯ ಒಂದು ಕೀಟವೂ ನಿಮ್ಮನ್ನು ವಿಸ್ಮಯಗೊಳಿಸೀತು, ಒಂದಡಿ ಉದ್ದದ ಲಕ್ಷ್ಮೀಚೇಳೂ ಆಶ್ಚರ್ಯಪಡಿಸೀತು ! ನೀವು ಅದೃಷ್ಟಶಾಲಿಗಳಾದರೆ— ಹೆಬ್ಬುಲಿಯೂ ಬಂದು ನಿಮ್ಮ ಕಡೆಗೆ ತನ್ನ ಪರಮ ಉದಾಸೀನ ದೃಷ್ಟಿಯನ್ನೂ ಬೀರಬಾರದೆಂದಿಲ್ಲ. *

# ಭಾರತವೆಲ್ಲಾ ಒಂದೇಒಂದು

೧

ಭಾರತವೆಲ್ಲಾ ಒಂದೇ ಒಂದು
ಬಾ ! ಬಂಧು !
ಭವ್ಯ ಹಿಮಾಚಲ
ಕಾಶ್ಮೀರದ ನೆಲ
ಕನ್ಯಾಕುಮಾರಿಯ ದಿವ್ಯಜಲ;
ನನಗೂ ನಿನಗೂ ಒಂದೆ ನೆಲ
ಬಾಳಿಗು ಬದುಕಿಗು ಪುಣ್ಯಬಲ
ಭಾರತದುದ್ದಗಲ.
ಜನುಮ ಜನುಮಕೂ
ಪ್ರಾಣದುಸಿರಿಗೂ
ಬಸಿರು ತುಂಬುತಿಹ ಜೀವದಗಾಳಿ
ಹರಸಿದೆ ಭಾರತ ಸಂತಾನ
ನನಗೂ ನಿನಗೂ ಒಂದೇ ಪ್ರಾಣ
ಭಾರತಾಂಬೆಯೆ ಸುತ್ರಾಣ
ಧಮನಿಧಮನಿಯೊಳು ಹರಿಯುವ ನೆತ್ತರ
ನನ್ನದು ನಿನ್ನದು ಒಂದೇ ಒಂದು
ಬಾ ! ಬಂಧು.
ಭಾರತವೆಲ್ಲಾ ಒಂದೇ ಒಂದು.

೨

ಸಾವಿರ ಶತಮಾನದ ಹಿಂದೆ
ಆ ಹಿಂದಿನ ಕಾಲಕು ಬಹುಹಿಂದೆ
ಭಾರತದುತ್ತರಗಡಿಯೊಳು ನಿಂತಿದೆ
ಅಂದಿಗೆಂದಿಗೂ ಭವ್ಯ ಹಿಮಾಚಲ
ಎಂದೆಂದಿಗೂ ಅಚಲ.
ಮನ್ವಂತರಗಳು ಮಣ್ಣುಮುಕ್ಕಿದರು
ನಿಂತಿದೆ ಈ ಕೋಟೆ.
ರಾಜ್ಯಸಾಮ್ರಾಜ್ಯಗಳು
ಮೂಡಿಮುಳುಗಿದುದ
ಕಂಡಿದೆ ಈ ಕೋಟೆ.
ಈ ಗುಡ್ಡಬೆಟ್ಟಗಳ ಕೋಡುಗಲ್ಲುಗಳು
ಮಿಟುಕಿಸಿ ಕಣ್ಣನು ಹೇಳುತಿವೆ
'ಮನ್ವಂತರವೆ ಕಾವ್ಯದ ಹಾಳೆ
ಭವ್ಯ ಹಿಮಾಚಲಕೆ
ಮಾನವ ಕುಲವೆ ಕಾವ್ಯದ ವಸ್ತು
ಶಿವಪರಮೇಶ್ವರಿಗೆ
ಭದ್ರಾಚಲವೆ ಭಾರತ ರಕ್ಷಣೆ
ಗೆನ್ನುವ ಸಂದೇಶ
ತಂದಿದೆ ಈ ದಿನ ಹೊಸದಿನವೆ ಮುಂದು
ಬಾ ! ಬಂಧು.
ಭಾರತವೆಲ್ಲಾ ಒಂದೇ ಒಂದು.

೩

ಕಹಿಯಾದರು ಜೀವ
ಸವಿಯಾಗಲಿ ಭಾವ
ಬದುಕು ಬಾಳೂ ಬೇವೂಬೆಲ್ಲಾ
ನನಗೂ ನಿನಗೂ ಒಂದೇ ಸೊಲ್ಲ,
'ಭಾರತದುಸಿರೇ ಅಪರಂಪಾರ
ಸಾವೇ ಅದಕಿಲ್ಲ.
ನಾನೂ ನೀನೂ ಒಂದೇ ಒಂದು
ಹಿಂದೂ ಇಂದೂ ಮುಂದೂ
ಬಾ ! ಬಂಧು.
ಭಾರತವೆಲ್ಲಾ ಒಂದೇ ಒಂದು.
ನಾನಳಿದರು ಸರಿ
ನಾನುಳಿದರು ಸರಿ.
ಭಾರತದೊಳು ಯುಗಮುಗಿಯುವದೇ ಇಲ್ಲ'
ಯುಗದಾದಿಯೆ ಎಲ್ಲ
ಬಾ ! ಬಂಧು.
ಭಾರತವೆಲ್ಲಾ ಒಂದೇ ಒಂದು.

—ಕೃಷ್ಣಮೂರ್ತಿ ಪುರಾಣಿಕ

# ಅಳಿಯನ ದೀವಾಳಿ

ಶ್ರೀ ಗೊರೂರು ರಾಮಸ್ವಾಮಿ ಅಯ್ಯಂಗಾರ

ಬೆಂಗಳೂರಿನಲ್ಲಿ ಕಾಲೇಜಿಗೆ ಹೋಗುತ್ತಿದ್ದ ಗೋಪಾಲ ಸಂಗೀತಪ್ರೇಮಿ ಮನೆತನದ ಹೆಣ್ಣನ್ನು ಪ್ರೀತಿಸಿದ. ಅವಳೂ ಕಾಲೇಜ ವಿದ್ಯಾರ್ಥಿನಿ. ಸಂಗೀತಗಾರನನ್ನೇ ಮದುವೆಯಾಗುವ ಪ್ರತಿಜ್ಞೆ ಮಾಡಿದ್ದಳವಳು. ಅವಳ ತಂದೆಯಾದರೂ ಸಂಗೀತಗಾರನಿಗೇ ಕೊಡಬೇಕೆಂದು ಮಾಡಿಕೊಂಡಿದ್ದರು. ಆದರೆ ನಾನಾಬಗೆಯ ಠಕ್ಕಿನಿಂದ ಗೋಪಾಲ ಅವರನ್ನು ತಾನು ಸಂಗೀತಗಾರನೆಂದು ನಂಬಿಸಿದ. ಆ ನಂಬಿಕೆಯಿಂದಾಗಿಯೇ ರಾತ್ರಿಯೊಂದಿಗೆ ಅವನ ಮದುವೆಯಾಗಿಹೋಯಿತು. ಅವನ ಸಂಗೀತವಿದ್ಯೆಯ ಪರೀಕ್ಷೆಯ ಪ್ರಸಂಗ ಬಂದೇ ಬಂತು. ಆಗ ಅವನು ಹೇಗೆ ಪಾರಾದನೆಂಬುದನ್ನು ಅರಿಯಲು ಈ ಕುತೂಹಲಕಾರಿ ಕಥೆಯನ್ನು ನೀವು ಓದಬೇಕು.

ದೀಪಾವಳಿಗೆ ತಪ್ಪದೆ ಬರಬೇಕೆಂದು ಅಳಿಯನ ತಂದೆತಾಯಿಗಳಿಗೆ ಹೆಣ್ಣಿನ ತಂದೆ ಅವತಾರಯ್ಯನವರಿಂದ ಕಾಗದ ಬಂದಿತ್ತು. ಕಾಗದವನ್ನು ನೋಡಿ ಗೋಪಾಲನಿಗೆ (ಅಳಿಯನಿಗೆ) ಆನಂದವೂ ಸ್ವಲ್ಪ ಆತಂಕವೂ ಉಂಟಾಯಿತು. ಇದರ ಕಾರಣವನ್ನು ತಿಳಿಯಬೇಕಾದರೆ ಗೋಪಾಲನ ಮದುವೆಯ ವಿಷಯವನ್ನು ಸ್ವಲ್ಪ ಪ್ರಸ್ತಾಪಿಸಬೇಕು.

*  *  *

ಗೋಪಾಲ ಮಲ್ಲಿಗೆಹಳ್ಳಿಯ ನಾರಣಪ್ಪನವರ ಮಗ. ನಾರಣಪ್ಪನವರು ಸ್ವಲ್ಪ ಜಮೀನುಳ್ಳ ಮಲ್ಲಿಗೆಹಳ್ಳಿಯ ವ್ಯವಸಾಯಗಾರರು. ಅವರ ಮನೆತನ ವಿದ್ಯೆಯಲ್ಲಿ ಯಾವಾಗಲೂ ಮುಂದುವರಿದಿರಲಿಲ್ಲ. ವಾಸ್ತವವಾಗಿ ಮೂರು ತಲೆಮಾರುಗಳಿಂದ ಆ ಮನೆಯಲ್ಲಿ ಮಿಡಲ್ ಸ್ಕೂಲು ಮಟ್ಟಕ್ಕೆ ಮೀರಿದ ವಿದ್ಯಾಭ್ಯಾಸವನ್ನು ಮಾಡಿದವರು ಯಾರೂ ಇರಲಿಲ್ಲ. "ಮೂರು ತಲೆಮಾರು ಗ್ರಂಥಗಳ ಧೂಳಿನಲ್ಲಿ ಹೊರಳಿದರೆ ಆ ಮನೆತನದಲ್ಲಿ ಒಬ್ಬ ವಿದ್ವಾಂತನ ಆವಿರ್ಭಾವವುಂಟಾಗುವುದೆಂದು" ಒಂದು ನಾಣ್ಣುಡಿಯಿದೆ. ಹೀಗೆ ಆ ಮನೆತನದಲ್ಲಿ ವಿದ್ಯದಲ್ಲಿ ದೃಷ್ಟಿಯಿಟ್ಟವರ ಪೈಕಿ ಗೋಪಾಲನು ಮೂರನೆಯ ತಲೆಯವನಾಗಿದ್ದನು. ಅವನ ತಂದೆ ಬಾಲ್ಯದಲ್ಲಿ ಹಳ್ಳಿಯಲ್ಲಿ ಅಲ್ಪ ಸ್ವಲ್ಪ ಸಂಸ್ಕೃತವನ್ನು ಕಲಿತೆನೆಂದು ಹೇಳಿಕೊಳ್ಳುತ್ತಿದ್ದರು, ಅವರ ಅಪ್ಪ ಅದೂ ಇಲ್ಲ. ಮೂರನೆಯ ತಲೆಯವನಾದ ಗೋಪಾಲ ಹಾಗೂ ಹೀಗೂ ಸೆಂಟ್ರಲ್ ಕಾಲೇಜನ್ನು ಮುಟ್ಟಿದ್ದನು. ಎಸ್.ಎಸ್.ಎಲ್.ಸಿ., ಇಂಟರಮೀಡಿಯಟ್ (ಅವನ ಮಂದಬುದ್ಧಿಯನ್ನು ಕಂಡು ಉಪಾಧ್ಯಾಯರು ಅವನನ್ನು ಇಂಟರ್ ಈಡಿಯಟ್ (Inter idiot) ಎಂದು ಕರೆಯುತ್ತಿದ್ದರು) ಪರೀಕ್ಷೆಗಳಲ್ಲಿ ಅವನು ನಾಲ್ಕು ಐದು ಸಲ ಸಹ ದಂಡಯಾತ್ರೆ ಮಾಡದೆ ಜಯಶೀಲನಾಗಲೇ ಇಲ್ಲ. ಆದರೆ ಸೆಂಟ್ರಲ್ ಕಾಲೇಜಿನ ಪ್ರಥಮ ವರುಷದ ಬಿ. ಎಸ್. ಸಿ. ಪರೀಕ್ಷೆಯಲ್ಲಿ ಅವನು ತನ್ನ ತಂದೆ ತಾಯಿಗಳ ನಿರೀಕ್ಷಣೆಯನ್ನು ಭಂಗಗೊಳಿಸಿದನು. ಆ ಕಾಲದಲ್ಲಿ ಅದು ತರಗತಿಯ ಪರೀಕ್ಷೆಯಾಗಿದ್ದಿತು. ಅಲ್ಲಿಯೂ ತನ್ನ ಮಗ ಎರಡು ವರುಷಗಳಾದರೂ ಮುಗ್ಗರಿಸುವನೆಂದು ಅವನ ತಂದೆ ನಂಬಿದ್ದರು. ಆದರೆ ಗೋಪಾಲ ಮೊದಲ ಸಲವೇ ಕ್ಲಾಸ್ ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿದುದರಿಂದ ಅವನ ತಂದೆಯ ನಿರೀಕ್ಷಣೆ ಭಂಗವಾಗಿ ಅವರಿಗೆ ದೊಡ್ಡ ಆಘಾತವುಂಟಾಯಿತು. ಅವನ ತಂದೆಯವರು "ಇದು ಮಾಮೂಲಿಗೆ ವಿರೋಧವಾಯಿತು. ಒಳ್ಳೆಯ ಕಷ್ಟಕ್ಕೆ ಬಂತು" ಎಂದು ವಿನೋದ ಮಾಡುತ್ತಿದ್ದರು. "ಮೂರು ತಲೆ ಪುಸ್ತಕದ ಧೂಳಿನಲ್ಲಿ ಹೊರಳಿದ ನಂತರ ಒಬ್ಬ ವಿದ್ಯಾವಂತನಾಗುತ್ತಾನೆ." ಎಂದು ನಂಬಿದ್ದ ಊರಿನ ಹಿರಿಯರು ಗೋಪಾಲನ ತಂದೆಗೆ "ನಿಮ್ಮ ಮೊಮ್ಮಗನನ್ನು ನೋಡುವಿರಂತೆ, ಸ್ವಲ್ಪ ತಾಳಿ. ಎಲ್ಲ ಪರೀಕ್ಷೆಗಳಲ್ಲಿಯೂ ಫಸ್ಟ್ ಕ್ಲಾಸ್ ಹೊಡೆದು ದೊಡ್ಡ ಪದವಿಗೆ ಬರುತ್ತಾನೆ. ಯಾಕೆಂದರೆ ಅವನು ನಾಲ್ಕನೆಯ ತಲೆಯವನಾಗುತ್ತಾನೆ" ಎಂದು ಪ್ರೋತ್ಸಾಹ ಕೊಡುತ್ತಿದ್ದರು.

ವಿದ್ಯದಲ್ಲಿ ಹೀಗೆ ಹಿಂದಾಡಿದ್ದರೂ ಅಥವ ಅದೇ ಕಾರಣದಿಂದಲೋ ಏನೋ, ಉಳಿದ ವಿಷಯಗಳಲ್ಲೆಲ್ಲ ಗೋಪಾಲನು ಬಹಳ ಆಕರ್ಷಣೀಯವಾದ ಗುಣಗಳನ್ನು ಹೊಂದಿದ್ದನು. ಅವನು ಯಾವಾಗಲೂ ಗೆಲುವಾಗಿ ಸಂತೋಷಚಿತ್ತನಾಗಿ ಸರಳವಾದ ಆಕೃತಿಯ ಸ್ವಭಾವದ ಯುವಕ. ನೋಡುವುದಕ್ಕೆ ಎತ್ತರವಾಗಿ ನಿಜವಾಗಿ ಸ್ಫುರದ್ರೂಪಿಯಾಗಿದ್ದ ಆಳು, ಅವನನ್ನು ನೋಡಿದ ಕೂಡಲೇ ಯಾರಿಗಾದರೂ ಅವನಲ್ಲಿ ಪ್ರೀತಿಯೂ ವಿಶ್ವಾಸವೂ ಉಂಟಾಗುತ್ತಿದ್ದಿತು. ಗೋಪಾಲ ಬಸವನಗುಡಿಯಲ್ಲಿ ಒಂದು ಕೊಠಡಿಯನ್ನು ಬಾಡಿಗೆಗೆ ಹಿಡಿದು ಹೋಟಲಿನಲ್ಲಿ ಊಟಮಾಡುತ್ತಾ, ನಿತ್ಯ ಸೆಂಟ್ರಲ್ ಕಾಲೇಜಿಗೆ ಹೋಗುತ್ತಿದ್ದನು.

ಬೆಂಗಳೂರಿನಲ್ಲಿ ಸಾಧಾರಣವಾಗಿ ಜುಲಿಯಟ್‌ಗಳೂ ರೋಮಿಯೋಗಳೂ ಸೇರುವ ಸ್ಥಳಗಳ ಪೈಕಿ ಮಹಾರಾಣಿ ಕಾಲೇಜ್ ಮುಂಭಾಗದ ಬಸ್‌ನಿಲ್ದಾಣವೂ ಒಂದು. ಅಲ್ಲಿ ಬಂದು ನಿಲ್ಲುವ ಆ ರತಿಮನ್ಮಥರೆಲ್ಲ, ಸುಖಸಂಕಥಾ ವಿನೋದದಿಂದ ಅಲ್ಲಿ ಕಾಲವನ್ನು ಕಳೆಯುವುದಕ್ಕಾಗಿಯೇ ನಿಂತಿರುವುದಿಲ್ಲ. ಅವರು ಹಾಗೆ ಅಲ್ಲಿ ಗೇರಾಯಿಸಲು ಸಾರಿಗೆ ಇಲಾಖೆಯವರ ಕೃಪೆಯೂ ಒಂದು ಕಾರಣ. ಯಾಕೆಂದರೆ ಮಹಾರಾಣಿ ಕಾಲೇಜ್ ನಿಲ್ದಾಣದಿಂದ ವಿದ್ಯಾರ್ಥಿನಿಯರು ಬೆಂಗಳೂರಿನ ನಾನಾಭಾಗದಲ್ಲಿರುವ ತಮ್ಮ ಮನೆಗಳಿಗೆ ಹೋಗಬೇಕು. ಆದರೆ ಎಲ್ಲ ಬಸ್ಸುಗಳೂ ಯಾವಾಗಲೂ ತುಂಬಿಯೇ ಬರುವುದರಿಂದ ವಿದ್ಯಾರ್ಥಿ ವಿದ್ಯಾರ್ಥಿನಿಯರಿಗೆ ಅವುಗಳಲ್ಲಿ ಸ್ಥಳ ಸಿಕ್ಕುವುದೇ ಕಷ್ಟ. ಒಂದು ಬಸ್‌ನಲ್ಲಿ ಮೂರು ನಾಲ್ಕು ಮಹಿಳೆಯರಿಗೆ ಸ್ಥಳ ಸಿಕ್ಕಿದರೆ ಹೆಚ್ಚು. ಅದೂ ಅನೇಕ ದಿನಗಳಲ್ಲಿ ನಿಂತುಕೊಂಡೇ ಹೋಗಬೇಕು. "ಕಾರ್ಖಾನೆಗಳ ಕೆಲಸಗಾರರಿಗಾಗಿ ಬಸ್




ಗಳು ಇವೆ. ವಿಧಾನಸೌಧ ಅಕೌಂಟೆಂಟ್ ಜನರಲ್ ಆಫೀಸಿನ ಕೆಲಸಗಾರರನ್ನು ಅವರವರ ಮನೆಗಳಿಗೆ ತಲುಪಿಸಲು ಬಸ್ಸುಗಳು ಬರುತ್ತವೆ, ಆದರೆ ಮಹಾರಾಣಿ ಕಾಲೇಜಿನ ಮುಂದಲ ವಿದ್ಯಾರ್ಥಿನಿಯರು ಸಕಾಲದಲ್ಲಿ ಸಂಧ್ಯಾಕಾಲ ತಮ್ಮ ಮನೆಗಳನ್ನು ತಲಪುವಂತೆ ಮೂರು ಬಸ್‌ಗಳನ್ನು ನಿಯಮಿಸಬೇಕೆಂಬುದು ವಿದ್ಯಾಮಂತ್ರಿಗೂ ಹೊಳೆಯುವುದಿಲ್ಲ, ಸಾರಿಗೆ ಮಂತ್ರಿಗೂ ಹೊಳೆಯುವುದಿಲ್ಲ" ಎಂದು ವಿದ್ಯಾರ್ಥಿನಿಯರು ಕೇಳಿಕೊಳ್ಳುತ್ತಿದ್ದರು.

ಗೋಪಾಲ, ಮೊದಲ ಸಲ ರಾತ್ರಿಯನ್ನು ಸಂಧಿಸಿದುದು ಹೀಗೆ ಬಸ್‌ಗಾಗಿ ಗಂಟೆಗಟ್ಟಲೆ ಮಹಾರಾಣಿ ಕಾಲೇಜಿನ ಮುಂದುಗಡೆಯ ನಿಲ್ದಾಣದಲ್ಲಿ ಕಾಯುತ್ತಾ ನಿಂತಿದ್ದಾಗ. ರಾತ್ರಿಯ ಮನೆಯೂ ಬಸವನ ಗುಡಿಯಲ್ಲಿಯೇ ಇದ್ದಿತು. ಆಕೆಯೂ ಬಿ. ಎ. ವಿದ್ಯಾರ್ಥಿನಿ. ಅನೇಕ ದಿನಗಳ ವರೆಗೆ ಅವರಿಬ್ಬರೂ ಮಾತನಾಡದೆ ಒಟ್ಟಿಗೆ ಬಸ್‌ನಲ್ಲಿ ಪ್ರಯಾಣ ಮಾಡಿ ಇಳಿಯುವ ಸ್ಥಳದಲ್ಲಿ ಇಳಿದು ತಮ್ಮ ತಮ್ಮ ಮನೆಗಳಿಗೆ ಹೋಗುತ್ತಿದ್ದರು. ಆದರೆ ಕಾಲೇಜಿಗೆ ಬರುವಾಗ ಇಬ್ಬರೂ ಬಸವನಗುಡಿಯ ಬಸ್ ಸ್ಟಾಪ್‌ನಲ್ಲಿ ಬಸ್ಸಿಗೆ ಹತ್ತಲು ಒಟ್ಟಾಗಿ ಕಾಯುತ್ತಿರಬೇಕಾಗುತ್ತಿದ್ದಿತು ಗೋಪಾಲನಂತೂ ರಾತ್ರಿಯಿಂದ ಆಕರ್ಷಿತನಾಗಿದ್ದನು. ಅವಳ "ರಾತ್ರಿ" ಎಂಬ ಹೆಸರಿನಲ್ಲಿಯೇ ಅವನಿಗೆ ಅದಾವುದೋ ವಿಚಿತ್ರವಾದ ಮನೋಹರವಾದ ಸೊಬಗು ತೋರಿದ್ದಿತು. ಹೀಗೆ ಅನೇಕ ತಿಂಗಳು ಜತೆಯಲ್ಲಿಯೇ ಹೋಗಿ ಬರುತ್ತಿದ್ದರೂ ಇಬ್ಬರೂ ಒಂದು ಮಾತನ್ನು ಆಡಿರಲಿಲ್ಲ. ಅಲ್ಲದೆ ಇತರ ಕೆಲವು ಹುಡುಗಿಯರೂ ರಾತ್ರಿಯ ಜತೆ ಕಾಲೇಜಿಗೆ ಹೋಗಲು ನಿಂತಿರುತ್ತಿದ್ದರು. ಸ್ವಲ್ಪ ಹೆಚ್ಚು ಶೃಂಗಾರಪ್ರಿಯರಾದ ವಿದ್ಯಾರ್ಥಿಗಳು ಅಳತೆ ತಪ್ಪಿ ನಡೆದಾಗ ವಿದ್ಯಾರ್ಥಿನಿಯರು ಅವರಿಗೆ ಬುದ್ಧಿ ಕಲಿಸಿದುದೂ ಗೋಪಾಲನಿಗೆ ಗೊತ್ತಿದ್ದಿತು. ಆದುದರಿಂದ ಗೋಪಾಲ ದೂರದಿಂದ ರಾತ್ರಿಯನ್ನು ಕಣ್ಣುಗಳಿಂದ ನಮಸ್ಕರಿಸುತ್ತಿದ್ದನೇ ಹೊರತು ಮಾತನಾಡುವ ಸಾಹಸ ಮಾಡಿರಲಿಲ್ಲ. ಕ್ರಮೇಣ, ಇತರ ವಿದ್ಯಾರ್ಥಿನಿಯರಿಗಿಂತ ಒಂದು ಪೀರಿಯಡ್ ಮುಂಚೆ, ರಾತ್ರಿಯು, ಕೆಲವು ದಿನಗಳಲ್ಲಿ, ಸಂಗೀತ ಪಾಠಕ್ಕೆ ಹೋಗುತ್ತಿರುವುದು ಗೋಪಾಲನ ಅನುಭವಕ್ಕೆ ಬಂದಿತು. ಅಂದಿನಿಂದ ಆ ದಿನಗಳಲ್ಲಿ ಗೋಪಾಲ ತನಗೆ ಒಂದು ಗಂಟೆ ಮುಂಚೆ ಪಾಠ ಇಲ್ಲದಿದ್ದರೂ ತಾನು ಮುಂಚೆಯೇ ಹೊರಟು ಬಸವನಗುಡಿಯ ಬಸ್‌ಸ್ಟಾಪ್‌ಗೆ ಬರಲು ಪ್ರಾರಂಭಿಸಿದನು. ಆ ದಿನಗಳಲ್ಲಿ ಆ ಬಸ್‌ಸ್ಟಾಪ್‌ನಲ್ಲಿ ಇತರ ಕಾಲೇಜು ಹುಡುಗಿಯರೂ ಹೆಚ್ಚಾಗಿರುತ್ತಿರಲಿಲ್ಲ. ಅಂತಹ ಸಂದರ್ಭಗಳಲ್ಲಿ ಗೋಪಾಲ, ಹೆದರುತ್ತಾ ಹೆದರುತ್ತಾ "ನಿತ್ಯಾ ಇಷ್ಟು ಹೊತ್ತಿಗೆ ಬಸ್ಸು ಬರುತ್ತಿತ್ತು", "ಇವತ್ತೂ ಯಾಕೋ ಸಾವಕಾಶ" ಎಂದೂ ಮುಂತಾಗಿ ಮೆತ್ತಗೆ ಹೇಳುತ್ತಿದ್ದನು. ಅವನು ಅದನ್ನು ತನ್ನ ಪಾಡಿಗೆ ತಾನು ಹೇಳಿದಂತೆ ಕಂಡರೂ, ಇದು ನನಗೆ ಹೇಳಿದುದು ಎಂದು ರಾತ್ರಿಗೆ ಗೊತ್ತಾಗುತ್ತಿದ್ದಿತು. ಅವಳು ಒಂದು ಸಲ ಅವನ ಕಡೆ ಮುಖ ಎತ್ತಿ ನೋಡುವುದರ ಹೊರತು, ಮತ್ತಾವ ಚಿನ್ಹೆಯಿಂದಲೂ ಅವನ ಮಾತು ತನಗೆ ಕೇಳಿಸಿತು ಎಂಬುದನ್ನು ತೋರಿಸಿಕೊಳ್ಳುತ್ತಿರಲಿಲ್ಲ. ಮಹಾರಾಣಿ ಕಾಲೇಜ ಮುಂಭಾಗದಲ್ಲಿಯೂ ಬಸವನಗುಡಿಯ ಬಸ್‌ಸ್ಟಾಪ್‌ನಲ್ಲಿಯೂ ರಾತ್ರಿಯು ಮೊದಲು ಬಸ್ ಹತ್ತಿದುದು ಖಾತರಿಯಾದ ಮೇಲೆಯೇ ಗೋಪಾಲನು ತಾನು ಹತ್ತುತ್ತಿದ್ದನು. ಅನೇಕ ದಿವಸ ಅವನು ಬಸ್ಸಿನಲ್ಲಿ ನಿಂತುಕೊಂಡೇ ಪ್ರಯಾಣ ಮಾಡಬೇಕಾಗುತ್ತಿದ್ದಿತು. ಅದರಿಂದ ಅವನಿಗೆ ಬೇಸರಿಕೆಯೇ ಆಗದೆ "ಇದೇ ನಾನು ನನ್ನ ಇಷ್ಟದೇವತೆಗಾಗಿ ನಿಂತುಕೊಂಡು ಮಾಡುವ ತಪಸ್ಸು" ಎಂಬ ತೃಪ್ತಿಯೇ ಉಂಟಾಗುತ್ತಿದ್ದಿತು. ಕೆಲವು ದಿನಗಳಲ್ಲಿ ಇತರ ವಿದ್ಯಾರ್ಥಿನಿಯರ ಜತೆಯಲ್ಲಿ ರಾತ್ರಿಯೂ ಸಹ ನಿಂತುಕೊಂಡೇ ಪ್ರಯಾಣ ಮಾಡಬೇಕಾಗುತ್ತಿದ್ದಿತು. ಕುಳಿತಿರುತ್ತಿದ್ದ ಧಾಂಡಿಗರನ್ನೆಲ್ಲ ಕೊಲೆ ಮಾಡುವಷ್ಟು ಕೋಪ ಆಗ ಗೋಪಾಲನಿಗೆ ಉಂಟಾಗುತ್ತಿದ್ದಿತು. ಅವನು ತನ್ನಂತೆಯೇ ತನ್ನ ಹಿಂದುಗಡೆ ನಿಂತಿದ್ದವರೊಂದಿಗೆ ಮೆಲ್ಲನೆ "ಈ ಮೃಗಗಳಿಗೆ ನಡತೆಯೇ ಇಲ್ಲ. ಮಹಿಳೆಯರು ಬಂದರೆ ಎದ್ದು ಅವರಿಗೆ ಸ್ಥಳ ಕೊಡಬೇಕೆನ್ನುವುದು ಸಹ ಇವರಿಗೆ ತಿಳಿಯದು. ಇವರು ವಿದ್ಯಾವಂತರಂತೆ, ಪಟ್ಟಣದ ನಾಗರಿಕರಂತೆ !" ಎಂದು ಗೊಣಗುಟ್ಟುತ್ತಿದ್ದನು. ತನಗೆ ರಾತ್ರಿಯ ಮಂಕು ಹಿಡಿಯುವುದಕ್ಕೆ ಮುಂಚೆ ಇತರ ಮಹಿಳೆಯರು ಬಸ್‌ನಲ್ಲಿ ನಿಂತಿದ್ದರೂ ತಾನು ಕುಳಿತಿದ್ದ ಸ್ಥಳವನ್ನು ಅವರಿಗೆ ಬಿಟ್ಟು ಕೊಡುತ್ತಿರಲಿಲ್ಲವೆಂಬುದು ಅವನಿಗೆ ಮರೆತೇ ಹೋಯಿತು. ರಾತ್ರಿಗಾಗಿ ತಾನು ಯಾವುದಾದರೂ ದೊಡ್ಡ ಒಂದು ತ್ಯಾಗವನ್ನು ಮಾಡಿ ತನ್ನ ಪ್ರೇಮವನ್ನು ತೋರಿಸಬೇಕೆಂದು ಅವನು ಬಹು ಕಾತುರನಾಗಿದ್ದನು. ಆದರೆ ಬೆಂಗಳೂರಿನ ಬರಡು ಜೀವನದಲ್ಲಿ ಅವನಿಗೆ ಅದಕ್ಕೆ ಅವಕಾಶವೇ ದೊರಕಲಿಲ್ಲ. ರಾತ್ರಿಯು ಕಾಲುಜಾರಿ ನದಿಗೆ ಬಿದ್ದು ತೇಲಿ ಹೋಗುತ್ತಿದ್ದರೆ ತಾನು ಜೀವದ ಹಂಗು ತೊರೆದು ನೀರಿಗೆ ಧುಮುಕಿ ಅವಳನ್ನು ರಕ್ಷಿಸಬಹುದಲ್ಲ ಎಂದುಕೊಂಡನು. ಆದರೆ ಬೆಂಗಳೂರಿನಲ್ಲಿ ನದಿಯೇ ಇರಲಿಲ್ಲ. ಅಥವ ಎಂಟು ಅಥವ ಹತ್ತು ಅಂತಸ್ತಿನ

ಮಹಡಿಯ ಮನೆಗೆ ಬೆಂಕಿ ಬಿದ್ದು, ಕೆಳಗಿನಿಂದ ಮನೆ ಉರಿಯುತ್ತಿರುವಾಗ ಅಗ್ನಿಶಾಮಕದಳದವರೂ ಪೋಲೀಸಿನವರೂ ಹೋಂಗಾರ್ಡುಗಳೂ ಹತ್ತಿರಕ್ಕೆ ಬರದಂತೆ ದಳ್ಳುರಿ, ಕಾಡು ಕಿಚ್ಚಾಗಿ ಸಾವಿರ ನಾಲಗೆಗಳೊಡನೆ ಅಟ್ಟುತ್ತಿರಲು ಮೇಲಿನ ಅಂತಸ್ತಿನಲ್ಲಿ ಉರಿಯಲ್ಲಿ ಸಿಕ್ಕಿಕೊಂಡಿರುವ ರಾತ್ರಿಯನ್ನು ಎತ್ತಿಕೊಂಡು ಅಪ್ಪಿಕೊಂಡು ಕೆಳಗೆ ಅಗ್ನಿಶಾಮಕದಳದವರು ಹಿಡಿದುಕೊಂಡು ನಿಂತಿರುವ ಬಲೆ ಅಥವ ಜಮಖಾನದ ಮೇಲೆ ಹಾರಿ ಬೀಳೋಣ ಎಂದರೆ ಹಾಳಾದ ಬೆಂಗಳೂರಿನಲ್ಲಿ ಹತ್ತು ಅಂತಸ್ತಿನ ಕಟ್ಟಡಗಳೇ ಇನ್ನೂ ಏಳುತ್ತಿಲ್ಲ. ಅಥವ ಘಟಿಂಗನಾವನಾದರೂ ರಾತ್ರಿಯನ್ನು ಎತ್ತಿಕೊಂಡು ಓಡಿದರೆ ಅವನನ್ನು ಎದುರಿಸಿ ಗುದ್ದಿ ಕೈಕಾಲು ಕಟ್ಟಿಹಾಕಿ ಅವಳನ್ನು ಬಿಡಿಸಿಕೊಂಡು ಹೋಗೋಣ ಎಂದರೆ ಅಂತಹ ಘಟಿಂಗರು ಯಾರೂ ಕಾಣಲಿಲ್ಲ. ವಿದ್ಯಾರ್ಥಿಗಳು ವಿದ್ಯಾರ್ಥಿನಿಯರ ಹಿಂದೆ ದೂರದಲ್ಲಿ ನಡೆದುಕೊಂಡು ಬರುತ್ತಾ ಪೆಚ್ಚು ಪೆಚ್ಚಾಗಿ ಅವರನ್ನು ಕುರಿತು ಮಾತನಾಡುವುದು! "ಏ" ಎನ್ನುವುದು; ಇನ್ನೂ ಧೈರ್ಯವನ್ನು ತೋರಿಸುತ್ತೇನೆ ಎನ್ನುವ ವಿದ್ಯಾರ್ಥಿ, ಸಭ್ಯತೆಯನ್ನು ಮರೆತು, ಸ್ವಲ್ಪ ಗಟ್ಟಿಯಾಗಿ ಇತರ ಹುಡುಗಿಯರಿಗೆ ಕೇಳಿಸುವಂತೆ ಲಾಘವವಾಗಿ ಮಾತನಾಡಿ "ಅಶಡು" ಪೆಚ್ಚುನಗುವನ್ನು ನಗುವುದು; ಅಲ್ಲಿದ್ದ ರಾವಣ, ಪೃಥ್ವೀರಾಜ ಅರ್ಜುನ ಕೃಷ್ಣರು ಇಂತಹವರೇ ಆಗಿದ್ದರು, ಗೋಪಾಲನಿಗೆ ಯಾವ ಸಾಹಸವನ್ನು ಮಾಡಿ ತೋರಿಸಲು ಅವಕಾಶವೇ ಇಲ್ಲದೆ, ಬೆಂಗಳೂರು ಬಹಳ ಅರೋಮಾಂಚಕಾರಿ. ಸಾಹಸರಹಿತ ಆಫೀಸ್, ಕಾರ್ಖಾನೆ, ಅಂಗಡಿ, ನಿಯತ ಜೀವನದ ನೀರಸನಗರವಾಗಿ ತೋರಿತು. ಗೋಪಾಲನು "ಏನು ಮಾಡಲಿ ರಾತ್ರಿಯು ನಡೆಯುತ್ತಿರುವಾಗ, ಅವಳ ಸುಮಕೋಮಲ ಹೆಜ್ಜೆಯ ತಳಕ್ಕೆ ನನ್ನ ನಾಲಗೆಯನ್ನು ಕಿತ್ತು ಹಾಸಲೇ ಅಥವ ನನ್ನ ಎದೆಯ ಮೇಲೆಯೇ ಅವಳಿಗೆ ರಸ್ತೆ ಕೊಡಲೆ? ಅಯ್ಯೋ ನನ್ನನ್ನು ಸಾಯಿಸುತ್ತಾಳೆ ಸಾಯಿಸುತ್ತಾಳೆ ಎಂದು ಕೊರಗಿದನು.

ಬೆಂಗಳೂರಿನದು ನೀರಸ ಜೀವನವೆಂದುಕೊಂಡಿದ್ದ ಗೋಪಾಲನಿಗೆ ಸಹ ತನ್ನ ಪ್ರೇಮವನ್ನು ತೋರಿಸಲು ಒಂದು ದಿನ ಅವಕಾಶ ದೊರಕಿತು. ಆ ದಿನ ಮಧ್ಯಾಹ್ನ, ನಾಲ್ಕು ಗಂಟೆಗೆ ಅಸಾಧ್ಯವಾದ ಮಳೆ ಬಂದಿತು. ಎರಡೇ ನಿಮಿಷಗಳಲ್ಲಿ ನೀರು ಚರಂಡಿಗಳಲ್ಲೆಲ್ಲ ತುಂಬಿ ರಸ್ತೆಯಲ್ಲಿ ಹರಿಯಿತು. ಐದು ಗಂಟೆಯಾದರೂ ಮಳೆ ಇನ್ನೂ ಬರುತ್ತಲೇ ಇದ್ದಿತು. ಕಾಲೇಜು ಬಾಗಿಲನ್ನು ಮುಚ್ಚಿದುದರಿಂದ ವಿದ್ಯಾರ್ಥಿನಿಯರೆಲ್ಲ ಬಂದು, ಮಳೆಯಲ್ಲಿಯೇ ಕಾಲೇಜು ಮುಂದಲ ಬಸ್ ನಿಲ್ದಾಣದಲ್ಲಿ ನಿಂತರು. ವಿದ್ಯಾರ್ಥಿಗಳೂ ಪದ್ಧತಿಯಂತೆ ಅಲ್ಲಿಯೇ ನಿಂತಿದ್ದರು. ಮಳೆ ರಾಚುತ್ತಲೇ ಇದ್ದಿತು. ವಿದ್ಯಾರ್ಥಿನಿಯರ ಕೈಯಲ್ಲಿ ಛತ್ರಿ ಇರಲಿಲ್ಲ. ಇದ್ದ ಕೆಲವರಿಗೆ ಆ ಛತ್ರಿಗಳಿಂದ ಪ್ರಯೋಜನವಾಗುತ್ತಿರಲಿಲ್ಲ. ಅವು ವಿದ್ಯಾರ್ಥಿನಿಯರ ಉಡುಪುಗಳಂತೆ, ಗಾಳಿಯನ್ನೂ ಮಳೆಯನ್ನೂ ತಡೆಯಲಾರದೆ, ವಿದ್ಯಾರ್ಥಿನಿಯರಂತೆಯೇ ಬಣ್ಣದ ಬೀಸಣಿಕೆಗಳಾಗಿದ್ದವು. ಎಲ್ಲ ವಿದ್ಯಾರ್ಥಿನಿಯರೂ ನೆನೆಯುತ್ತಲೇ ನಿಂತಿದ್ದರು. ರಾತ್ರಿಯು ಸಹ ನೆನೆಯುತ್ತಲೇ ಇದ್ದಳು. ಗೋಪಾಲನ ಕೈಯಲ್ಲಿ ಒಂದು ಛತ್ರಿ ಇತ್ತು. ಅವನು ಧೈರ್ಯಮಾಡಿ ಅದನ್ನು ರಾತ್ರಿಗೆ ಕೊಡಲು ಹೋದನು. ಅವಳು "ಯಾಕೆ? ಬೇಡ" ಎಂದುಬಿಟ್ಟಳು. ಇನ್ನು ಹೆಚ್ಚು ಬಲಾತ್ಕರಿಸಲು ಗೋಪಾಲನಿಗೆ ಧೈರ್ಯ ಬರಲಿಲ್ಲ. ಎಲ್ಲರೂ ನೆನೆಯುತ್ತಲೇ ನಿಂತಿರುವಂತೆಯೇ ಎರಡು ಮೂರು ಬಸ್ಸುಗಳು ಬಂದವು. ಎಲ್ಲವೂ ಭರ್ತಿಯಾಗಿಯೇ ಬಂದವು. ಒಂದೊಂದರಲ್ಲಿಯೂ ನಾಲ್ಕು ಆರು ಹುಡುಗಿಯರು ನಿಂತುಕೊಂಡೇ ಬಸವನಗುಡಿಯ ಕಡೆಗೆ ಹೊರಟರು. ಹಾಗೂ ಹೀಗೂ ಏಳೂವರೆ ಗಂಟೆಯಾದರೂ ಬಸ್ ನಿಲ್ದಾಣದಲ್ಲಿ ಜನರ ಗುಂಪು ಕಡಿಮೆಯಾಗಲೇ ಇಲ್ಲ. ಮಳೆಯೂ ಹೆಚ್ಚುತ್ತಲೇ ಹೋಯಿತು ಅನಂತರ ಬಂದ ಬಸ್ಸಿನಲ್ಲಿ ರಾತ್ರಿಯೂ ಮುಂದುಗಡೆ ಏರಿದಳು, ಹಿಂದುಗಡೆ ಗೋಪಾಲನೂ ಏರಿದನು. ಮಳೆ ಜನಜಂಗುಳಿ ತುಳಿತಗಳಿಂದ ಪ್ರಯಾಣಿಕರಿಗೂ ಕಂಡಕ್ಟರನಿಗೂ ಎಲ್ಲರಿಗೂ ಬೇಸರಿಕೆ ಆಗಿತ್ತು. ಗೋಪಾಲನು ಚಿಲ್ಲರೆಯನ್ನು ಕೊಟ್ಟು ತನ್ನ ಟಿಕೆಟನ್ನು ಕೊಂಡುಕೊಂಡನು. ಕಂಡಕ್ಟರು ರಾತ್ರಿಯ ಕಡೆ ನೋಡಲು ಅವಳು ತನ್ನ ಕೈಚೀಲದಿಂದ "ಐದು ರೂಪಾಯಿ"ನ ಒಂದು ನೋಟನ್ನು ತೆಗೆದು ಅವನೆಡೆ ನೀಡಿದಳು. ಕಂಡಕ್ಟರ್, ಕೋಪದಿಂದ "ಐದು ರೂಪಾಯಿಗೆ ಚಿಲ್ಲರೆ ಇಲ್ಲ" ಎಂದನು. ರಾತ್ರಿಯು "ನನ್ನ ಹತ್ತಿರವೂ ಇವತ್ತು ಚಿಲ್ಲರೆ ಇಲ್ಲ. ನಿತ್ಯಾ ನಾನು ಚಿಲ್ಲರೆಯನ್ನೇ ಕೊಡುತ್ತಿದ್ದೆ" ಎಂದಳು. ಕಂಡಕ್ಟರನಿಗೆ ಆದಿನ ಏನು ರೋಗ ಬಂದಿತ್ತೊ? ಅಥವ ಹಿಂದಲ ನಿಲ್ದಾಣದಲ್ಲಿ ಅವನೇನಾದರೂ ಮೇಲಧಿಕಾರಿಯ ಕೈಗೆ ಸಿಕ್ಕಿಬಿದ್ದಿದ್ದನೊ? ಅವನು "ಹಾಗಾದರೆ ಇಳಿಯಿರಿ" ಎಂದು ಹೊರಟಿದ್ದ ಬಸ್ಸನ್ನು ನಿಲ್ಲಿಸಲು ಗಂಟೆ ಬಾರಿಸಿದನು. ರಾತ್ರಿಯ ಮುಖ ಅಳುವಂತೆ ಆಯಿತು. ಅವಳು ಇನ್ನೇನು ಕೆಳಕ್ಕೆ ಇಳಿಯಬೇಕು: ಆಗ ಗೋಪಾಲ, ಕಂಡಕ್ಟರಿಗೆ ಕೋಪದಿಂದ "ಏನರಿ ಈ ಮಳೆಯಲ್ಲಿ ಇಲ್ಲಿ ಪ್ರಯಾಣಿಕರನ್ನು ಇಳಿಸುತ್ತೀರಿ. ಇದು ಬಸ್‌ನಿಲ್ದಾಣ ಕೂಡ ಅಲ್ಲ." ಎಂದು ಹೇಳಿ ರಾತ್ರಿಗೆ "ಈ ಚಿಲ್ಲರೆ ತೆಗೆದುಕೊಳ್ಳಿ, ಆ ಮೇಲೆ ಕೊಡುವಿರಂತೆ" ಎಂದು ಇಪ್ಪತ್ತು ಪೈಸವನ್ನು ಕೊಡಹೋದನು. ರಾತ್ರಿಯು "ಬೇಡ ಬೇಡ ಮುಂದಲ ಬಸ್‌ನಲ್ಲಿ ಬರುತ್ತೇನೆ" ಎಂದಳು. ಗೋಪಾಲನು ಸ್ವಲ್ಪ ಕಠಿನವಾಗಿ "ತೆಗೆದುಕೊಳ್ಳಿ. ಮತ್ತೆ ಮುಂದಲ ಬಸ್ಸಿಗೆ ಕಾಯುವುದೆಂದರೆ ಇನ್ನು ಎಷ್ಟು ಹೊತ್ತೊ" ಎಂದನು. ಬಸ್‌ನಲ್ಲಿದ್ದ ಒಬ್ಬ ಹಿರಿಯರು ರಾತ್ರಿಗೆ "ತೆಗೆದುಕೊಳ್ಳಮ್ಮ, ಆ ಮೇಲೆ ಕೊಡುವಿಯಂತೆ. ಪರಿಚಯಸ್ಥರಿಂದ ತೆಗೆದುಕೊಂಡರೆ ಬಾಧಕವೇನು!" ಎಂದರು. ಕಂಡಕ್ಟರೂ ಸಹ "ಮುಂದಲ ಬಸ್ಸು ಬರುವುದು ಇವತ್ತು ಹೊತ್ತು" ಎಂದನು. ರಾತ್ರಿಯು ಗೋಪಾಲನಿಂದ ಇಪ್ಪತ್ತು ಪೈಸೆ ತೆಗೆದುಕೊಂಡು ಕಂಡಕ್ಟರನಿಗೆ ಕೊಟ್ಟಳು. ಐದು ರೂಪಾಯಿ ನೋಟನ್ನು ಗೋಪಾಲನಿಗೇ ಕೊಡಬೇಕೆಂಬುದು ಅವಳ ಇಷ್ಟವಾಗಿತ್ತು. ಆದರೆ ಮತ್ತೆ ಗೋಪಾಲನೊಂದಿಗೆ ಮಾತನಾಡಬಾರದೆಂದು ಸುಮ್ಮನಾದಳು.

ಬಸ್ಸು, ಬಸವನಗುಡಿ ಗಾಂಧೀಬಜಾರ್ ನಿಲ್ದಾಣವನ್ನು ಸೇರಿದರೂ ಮಳೆ ನಿಲ್ಲಲಿಲ್ಲ. ಬಸ್ಸಿನಿಂದ ರಾತ್ರಿಯೂ ಗೋಪಾಲನೂ ಕೆಳಕ್ಕೆ ಇಳಿದರು. ಗೋಪಾಲನು ಸ್ವಾಭಾವಿಕವಾಗಿ ತನ್ನ ಛತ್ರಿಯನ್ನು ರಾತ್ರಿಯ ತಲೆಯಮೇಲೆ ಹಿಡಿದನು. ಒಂದು ಗಳಿಗೆ ಇಬ್ಬರೂ ಮಾತನಾಡದೆ ನಿಂತರು. ಅನಂತರ ಗೋಪಾಲನು ರಾತ್ರಿಯನ್ನು ಕೇಳಿ ಅವಳ ಮನೆ ಎಲ್ಲಿ ಎಂಬುದನ್ನು ಅರಿತನು "ನಡೆಯಿರಿ. ನಿಮ್ಮ ಮನೆಯ ವರೆಗೆ ಬಿಡುತ್ತೇನೆ" ಎಂದನು. ರಾತ್ರಿಯು, ಮೊದಲು ಒಪ್ಪಲಿಲ್ಲ. ಆದರೆ ಮಳೆ ಬರುತ್ತಿದ್ದುದರಿಂದ ಬೇರೆ ದಾರಿ ಇಲ್ಲದೆ ಅವಳು ಗೋಪಾಲನ ಛತ್ರಿಯ ಆಶ್ರಯದಲ್ಲಿ ಹೊರಟಳು. ರಾತ್ರಿಯ ತಂದೆಯ ಮನೆ ದೂರವಾಗಿರಲಿಲ್ಲ. ಒಂದು ಫರ್ಲಾಂಗ್‌ನಲ್ಲಿದ್ದಿತು. ಅಷ್ಟುದೂರ ನಡೆಯುವುದರೊಳಗಾಗಿ ಗೋಪಾಲನಿಗೆ ರಾತ್ರಿಯ ಮನೆಗೆ ಸಂಬಂಧಪಟ್ಟ ವಿಷಯಗಳು ತಿಳಿದುವು. ರಾತ್ರಿಯ ತಂದೆ ತಾಯಿ ಇದ್ದಾರೆ, ತಂದೆ ನಿವೃತ್ತ ಡೆಪ್ಯುಟಿಕಮಿಶನರ್, ರಾತ್ರಿಯು ಅವರ ನಾಲ್ಕನೆಯ ಮತ್ತು ಕೊನೆಯ ಮಗಳು. ಅವರ ಅಕ್ಕಂದಿರಿಗೆಲ್ಲ ಮದುವೆ ಆಗಿದೆ. ಅವಳ ಹದಿಮೂರು ವರುಷದ ತಮ್ಮ ಒಬ್ಬನಿದ್ದಾನೆ. ಅವನೊಬ್ಬನೇ ಆ ಮನೆಯ ಗಂಡು ಮಗ. ರಾತ್ರಿಯ ತಂದೆಯ ಹೆಸರು ನರಸಿಂಹಯ್ಯ. ಅವರು ಹಿಂದಲ ಕಾಲದಲ್ಲಿಯೂ (ಸ್ವಾತಂತ್ರ್ಯ ಬರುವುದಕ್ಕೆ ಮುಂಚೆ ಅಧಿಕಾರ ಮಾಡಿದವರು) ಬಹಳ ಜೋರಾದ ಆಸಾಮಿ.

ತುಂಬಾ ಸ್ವಾಭಿಮಾನಿ. ಮನೆಯಲ್ಲಿ ಎಲ್ಲರನ್ನೂ ಗಡಗಡನೆ ನಡುಗಿಸುತ್ತಾರೆ. ತಾವು ಈಗಲೂ ಇನ್ನೂ ಹಳೆಯ ಕಾಲದ ಡೆಪ್ಯುಟಿಕಮಿಶನರ್ ಎಂದೇ ತಿಳಿದುಕೊಂಡಿದ್ದಾರೆ. ನಿವೃತ್ತರಾಗುವ ಕಾಲಕ್ಕೆ ಅವರು ಗೃಹಶಾಖೆಯಲ್ಲಿದ್ದುದರಿಂದ ಅವರಿಗೆ ಹೋಂ ಡಿಪಾರ್ಟ್‌ಮೆಂಟ್ ನರಸಿಂಹಯ್ಯನವರೆಂದೂ ಹೆಸರಾಗಿದೆ. ಕೆಲವರು ಅದನ್ನು ಕುಹಕಮಾಡಿ ಮನೆಯಲ್ಲಿ ಹೆಂಗಸರ ಪ್ರಾಬಲ್ಯವೇ ಹೆಚ್ಚೆಂದು ಹೇಳುತ್ತಿದ್ದರು. ಅವರ ಕೋಪದಿಂದ ಅವರಿಗೆ ನರಸಿಂಹಾವತಾರ ಎಂದೇ ಹೆಸರಾಗಿತ್ತು. ಈಚೆಗೆ ಆ ಹೆಸರು ಮೊಟಕಾಗಿ ಅವರಿಗೆ ಅವತಾರಯ್ಯ ಎಂದೇ ಹೆಸರು ಬಂದಿದೆ. ಅವರ ಹೆಂಡತಿ (ರಾತ್ರಿಯ ತಾಯಿ) ಬಹಳ ಒಳ್ಳೆಯವರು. ಅವರ ಮುಂದೆ ಅವತಾರಯ್ಯನವರು ತುಂಬ ಸಾಧುವಾಗಿ ವರ್ತಿಸುತ್ತಾರೆ. ಅದು ಸಂಗೀತಪ್ರಿಯರ ಮನೆತನ. ಅವತಾರಯ್ಯನವರಿಗೂ ಸಂಗೀತ ಚೆನ್ನಾಗಿಗೊತ್ತು. ಅವರ ಹೆಂಡತಿಯವರಿಗೂ ಹಾಗೆಯೇ. ರಾತ್ರಿಯ ಮೂರು ಜನ ಅಕ್ಕಂದಿರೂ ಒಳ್ಳೆಯ ಹಾಡುಗಾರ್ತಿಯರು ಜತೆಗೆ ಒಬ್ಬರಿಗೆ ವೀಣೆ, ಮತ್ತೊಬ್ಬಳಿಗೆ ಪಿಟೀಲಿನಲ್ಲಿ ಪ್ರಾವೀಣ್ಯವಿದೆ, ಅವತಾರಯ್ಯನವರಿಗೆ ಸಂಗೀತದ ಹುಚ್ಚು. ಅವರು ಯಾರು ಹತ್ತಿರಕ್ಕೆ ಬಂದರೂ ನಿನಗೆ ಸಂಗೀತ ಬರುತ್ತದೆಯೇ ಎಂದು ಕೇಳುತ್ತಾರೆ. ಅವರಿಗೆ ಬಂದರೆ ಅವರಲ್ಲಿ ಮತ್ತಾವ ದೋಷವಿದ್ದರೂ ಎಲ್ಲವೂ ಮಾಫಿ. ಸಂಗೀತ ಬರದವರಲ್ಲಿ ಅವರಿಗೆ ಪೂರ್ಣ ಉದಾಸೀನ. ಆ ವಿಷಯದಲ್ಲಿ ಅವರದು ಖಡಾಖಂಡಿತ. ಅವರ ಮೂರು ಜನ ಹಿರಿಯ ಹೆಣ್ಣುಮಕ್ಕಳಿಗೂ ಸಂಗೀತಗಾರರೇ ಗಂಡಂದಿರಾಗಿ ಸೇರಿದ್ದಾರೆ. ಅವತಾರಯ್ಯನವರು ಸಂಗೀತ ಬರದವನಿಗೆ ಹೆಣ್ಣನ್ನೇ ಕೊಡುವುದಿಲ್ಲವೆಂದು ಪ್ರತಿಜ್ಞೆ ಮಾಡಿದ್ದಾರೆ. ಕೊನೆಯ ಮಗ ಹದಿಮೂರು ವರುಷದ ಕೇಶವನಿಗೆ ಸಹ ತಬಲದಲ್ಲಿ ಈಗಲೇ ತುಂಬ ಪರಿಶ್ರಮವಾಗಿದೆ. ಒಟ್ಟಿನಲ್ಲಿ ಅದು ಸಂಗೀತದ ಮನೆತನ. ಅವಳ ತಂದೆ ತಾಯಿ ಅಭಿಪ್ರಾಯದಲ್ಲಿ ರಾತ್ರಿಯು ಎಲ್ಲರಿಗಿಂತಲೂ ಸಂಗೀತದಲ್ಲಿ ನಿಪುಣಳು. ಅವಳ ಶರೀರ ಸೊಗಸಾಗಿತ್ತು. ಅವಳಿಗೂ ಸಹ ಸಂಗೀತಬಲ್ಲ ಗಂಡನನ್ನೇ ಮದುವೆ ಮಾಡಿಕೊಡುವುದಾಗಿ ಅವತಾರಯ್ಯನವರು ಹಠ ತೊಟ್ಟಿದ್ದರು. "ನಮ್ಮ ಮೂರು ಜನ ಭಾವಂದಿರೂ ಸಂಗೀತ ವಿದ್ವಾಂಸರು. ನಾನೂ ಸಂಗೀತ ಕಲಿತವರನ್ನೇ ಮದುವೆಯಾಗುತ್ತೇನೆ" ಎಂದು ಪ್ರತಿಜ್ಞೆ ಮಾಡಿದ್ದೇನೆ ಎಂದು ರಾತ್ರಿಯು ಹೇಳಿದಳು. "ಈ ದಂಪತಿಗಳ ಹೊಟ್ಟೆಯಲ್ಲಿ ಈ ವಂಶದ ಸಂಗೀತದ ಪ್ರಾದುರ್ಭಾವ ಶಿಖರವನ್ನು ಮುಟ್ಟುತ್ತದೆ. ಒಬ್ಬ ತ್ಯಾಗರಾಜನಿಗೂ, ಪುರಂದರದಾಸನಿಗೂ, ಬಾಲಗಂಧರ್ವನಿಗೂ ನಾನು ಅಜ್ಜನಾಗುವೆನು" ಎಂದು ಅವತಾರಯ್ಯನವರು ನಂಬಿದ್ದರು. ರಾತ್ರಿಯು "ನಮ್ಮ ತಂದೆಯವರದು ಬಹಳ ಕೋಪದ ಸ್ವಭಾವ. ಗಂಡು ಹುಡುಗರೆಲ್ಲ ಪೋಕರಿಗಳೇ ಎಂದು ಅವರು ಭಾವಿಸಿದ್ದಾರೆ. ನಿಮ್ಮನ್ನು ನೋಡಿ ಅವರಿಗೆ ಕೋಪ ಬರಬಹುದು. ನಿಮ್ಮ ಮೇಲೆ ನಾಯಿಯನ್ನು ಛೂ ಬಿಟ್ಟರೂ ಬಿಡಬಹುದು" ಎಂದು ಹೆದರುವ ಧ್ವನಿಯಲ್ಲಿ ಹೇಳಿದಳು. ಗೋಪಾಲನು ಇಷ್ಟು ಸಂಗತಿಗಳನ್ನು ತಿಳಿದುಕೊಳ್ಳುವುದರೊಳಗಾಗಿ, ಅವರು ಅವತಾರಯ್ಯನವರ ಮನೆಯ ಬಾಗಿಲಿಗೆ ಬಂದರು. ಆ ಮನೆ ಗೋಪಾಲನ ಕೊಠಡಿಯಿಂದ ತುಂಬ ದೂರವಿರಲಿಲ್ಲ. ಗೋಪಾಲ, ಆ ಮನೆಯ ಮುಂದೆ ಅನೇಕ ಸಲ ತಿರುಗಾಡಿದ್ದನು. ರಾತ್ರಿಯು ಹೇಳಿದ್ದಂತೆ ಅದು ಸಂಗೀತದ ಮನೆಯೇ ಹೌದು. ಗೋಪಾಲ ಆ ದಾರಿಯಲ್ಲಿ ತಿರುಗುತ್ತಿರುವಾಗಲೆಲ್ಲ ಮನೆಯೊಳಗೆ ತಂಬೂರಿ, ತಬಲ, ಹಾರ್ಮೋನಿಯಂ, ಬಾಯಿ ಹಾಡುಗಾರಿಕೆ, ಪಿಟೀಲು ಇವುಗಳ ಧ್ವನಿ ಕೇಳುತ್ತಲೇ ಇದ್ದಿತು. ಮನೆಯ ಹೊರಗೋಡೆಗೆ ಒಂದು ಕಡೆ ಗಾನಮಂದಿರ (Music House) ಎಂದು ಬರೆದಿದ್ದ ಒಂದು ಹಲಗೆಯನ್ನು ತೂಗಹಾಕಿದ್ದರು. ಗೋಪಾಲ ಆಗ ಇದು ಒಂದು ಸಂಗೀತ ಶಾಲೆಶಾಲೆ ಇರಬಹುದೆಂದು ಭಾವಿಸಿದ್ದನು.

ಈಗ ಗೋಪಾಲನೂ ರಾತ್ರಿಯೂ ಬಾಗಿಲಿಗೆ ಬಂದ ಕೂಡಲೇ ಒಳಗೆ ಹಾಡು ತಬಲ ಅವರಿಗೆ ಕೇಳಿಸಿತು. ಕಾಂಪೌಂಡಿನಲ್ಲಿ ಕಟ್ಟಿದ್ದ ದೊಡ್ಡ ತೋಳನಂತಹ ಕರಿಯ ನಾಯಿ, ಗುಂಡು ಹಾರಿಸಿದಷ್ಟು ಬಲವಾಗಿ ಬಗುಳಿತು. ಆ ಧ್ವನಿಯನ್ನು ಕೇಳಿ ಬಡಪಾಯಿ ಗೋಪಾಲನ ಎದೆ ನಡುಗಿತು. ರಾತ್ರಿಯು "ಇದು ನಮ್ಮ ತಂದೆಯವರ ಪ್ರೀತಿಯ ನಾಯಿ. ಅವರಿಗೆ ಹೊರತು ಮತ್ತಾರಿಗೂ ಇದು ಬಗ್ಗುವುದಿಲ್ಲ. ಇದು ಹುಲಿಯನ್ನು ಸಹ ಹೊಡೆದು ಹಾಕುತ್ತದೆ ಎಂದು ನಮ್ಮ ತಂದೆ ಹೇಳುತ್ತಾರೆ. ಇದರ ಕೈಗೆ ಸಿಕ್ಕಿದವನ ಕೆಲಸ ಮುಗಿಯಿತು" ಎಂದಳು. ಗೋಪಾಲನು "ಅದಕ್ಕೂ ಸಂಗೀತ ಗೊತ್ತೆ?" ಎಂದನು. ರಾತ್ರಿಯು "ನೀವು ಚೆನ್ನಾಗಿ ಊಹಿಸಿದಿರಿ. ಸಂಗೀತ ಕಿವಿಗೆ ಬಿದ್ದಕೂಡಲೇ ಅದು ಬಗುಳುವುದನ್ನು ನಿಲ್ಲಿಸುತ್ತದೆ. ಅಷ್ಟೇ ಅಲ್ಲ ಮನುಷ್ಯನನ್ನು ನೋಡಿದ ಕೂಡಲೇ ಅವನಿಗೆ ಸಂಗೀತ ಬರುತ್ತದೆಯೋ ಇಲ್ಲವೋ ಎಂಬುದು ಇದಕ್ಕೆ ಗೊತ್ತಾಗುತ್ತದೆಂದು ನಮ್ಮ ತಂದೆಯವರು ಹೇಳುತ್ತಾರೆ" ಎಂದಳು,

ಕಾಂಪೌಂಡಿನ ಬಾಗಿಲಿನ ಒಳಕ್ಕೆ ಕೈ ಹಾಕಿ ರಾತ್ರಿಯು ಚಿಲಕವನ್ನು ತೆಗೆದಳು. ನಾಯಿಯ ಆರ್ಭಟ ಇನ್ನೂ ಬಹಳ ಜೋರಾಯಿತು. ಅದನ್ನು ದೂರದಲ್ಲಿ ಕಟ್ಟಿಹಾಕಿದ್ದರೂ ಅದು ನಿಂತ ಜಾಗದಿಂದಲೇ ಗೋಪಾಲನ ಕಡೆಗೆ ನೆಗೆಯುತ್ತಿದ್ದಿತು. ಗೋಪಾಲನು ಹೆದರುವ ಧ್ವನಿಯಲ್ಲಿ "ನಾಯಿಯನ್ನು ಬಲವಾಗಿ ಕಟ್ಟಿಹಾಕಿದೆಯೆ?" ಎಂದು ಕೇಳಿದನು. ರಾತ್ರಿಯು "ಹೌದು. ಆದರೆ ಅದು ಮನಸ್ಸು ಮಾಡಿದರೆ ಎಂತಹ ಹಗ್ಗವೂ ಸರಪಣಿಯೂ ಅದಕ್ಕೆ ತಡೆಯುವುದಿಲ್ಲ" ಎಂದಳು. ಆ ಸಂತೋಷವಾರ್ತೆಯನ್ನು ಕೇಳಿ ಗೋಪಾಲ ಚೇತರಿಸಿಕೊಳ್ಳುವುದರೊಳಗಾಗಿ ಮನೆಯ ಬಾಗಿಲು ತೆರೆಯಿತು. ಕಪ್ಪು ಉಣ್ಣೆಯ ನಿಲುವಂಗಿ, ಕಾಲಿಗೆ ಮಂಡಿಯ ವರೆಗೆ ಬರುವ ರಬ್ಬರ್ ಕೊಳವೆಯ ಮಳೆಗಾಲದಲ್ಲಿ ಧರಿಸುವ ಕಪ್ಪುಬೂಟ್ಸ್, ತಲೆ ತುಂಬ ಕರಿಯ ಮಫ್ಲರ್ ಕೈಯಲ್ಲಿ ನಾಲ್ಕು ಸೆಲ್‌ಗಳ ಉದ್ದವಾದ ಕಣ್ಣು ಕೋರೈಸುವ ಟಾರ್ಚ್ (ದಿವಟಿಗೆ) ಇವುಗಳೊಂದಿಗೆ ಅವತಾರಯ್ಯನವರು ಬಾಗಿಲಲ್ಲಿ ಪ್ರತ್ಯಕ್ಷವಾದರು. ಅವರು ಟಾರ್ಚನ್ನು ಗೋಪಾಲನ ಮೇಲೆ ಬಿಟ್ಟಾಗ, ಗೋಪಾಲ ಅದರ ಪ್ರಖರ ಹೊಳಪಿಗೆ ಕಣ್ಣು ಮುಚ್ಚಿದನು. ಗೋಪಾಲನೂ ರಾತ್ರಿಯೂ ನಿಧಾನವಾಗಿ ಮನೆಯ ಬಾಗಿಲಿನ ಕಡೆ ಹೊರಟರು. ನಾಯಿ ಒಂದೇ ಸಮನೆ ಬಗಳುತ್ತಲೇ ಇತ್ತು. ಅವತಾರಯ್ಯನವರು ನಾಯಿಯ ಧ್ವನಿಯನ್ನೂ ಮೀರಿಸಿದ ಗುಡುಗಿನಂತಹ ಧ್ವನಿಯಲ್ಲಿ "ರಾತ್ರಿ, ಅದಾರು" ಎಂದು ಕೂಗಿದರು. ರಾತ್ರಿಯು ಏನೋ ಹೇಳಿದಳು. ಅದು ಗದ್ದಲಲ್ಲಿ ಅವತಾರಯ್ಯನವರಿಗೆ ಕೇಳಿಸಲೇ ಇಲ್ಲ. ಅವರು ಟಾರ್ಚನ್ನು ಒಂದು ಸಲ ನಾಯಿಯ ಕಡೆ ಬಿಟ್ಟು "ಸೈಲೆನ್ಸ್" ಎಂದು ಕೂಗಿದರು. ನಾಯಿ, ಬಗಳುವುದನ್ನು ನಿಲ್ಲಿಸಿದರೂ ಸಹ ಗುರುಗುರು ಎನ್ನುತ್ತಲೇ ಇದ್ದಿತು. ಅವತಾರಯ್ಯನವರು ರಾತ್ರಿಯನ್ನು ಮತ್ತೆ "ಅದಾರು" ಎಂದು ಕೇಳಿದರು. ರಾತ್ರಿಯು "ಇವರು ಗೋಪಾಲ್, ಸೆಂಟ್ರಲ್ ಕಾಲೇಜ್ ವಿದ್ಯಾರ್ಥಿ. ನಿಮಗೆ ಪರಿಚಯವಿಲ್ಲ" ಎಂದಳು. ಸೆಂಟ್ರಲ್ ಕಾಲೇಜಿನ ವಿದ್ಯಾರ್ಥಿ ಗೋಪಾಲಕೃಷ್ಣನೆಂಬುವನು ಕಾಲೇಜ್ ಸಂಘದ ವಾರ್ಷಿಕೋತ್ಸವದಂದು ಬಹು ಸೊಗಸಾಗಿ ಪಿಟೀಲು ಬಾರಿಸಿದನೆಂದು ಅವತಾರಯ್ಯನವರು ಕೆಲವು ದಿನಗಳ ಕೆಳಗೆ ಪತ್ರಿಕೆಯಲ್ಲಿ ಓದಿದ್ದರು. ತಮ್ಮ ಮನೆಗೆ ಬರುವವರೆಲ್ಲ ಸಂಗೀತಗಾರರೇ ಎಂಬುದು ಅವರ

ನಮ್ಮೆಲ್ಲ ಗ್ರಾಹಕ ವೃಂದಕ್ಕೆ
ದೀಪಾವಳಿಯು ಸುಖಪ್ರದವಾಗಲಿ !



ನಾನು ದಿನವಿಡೀ

## ಉಲ್ಲಸಿತೆಯಾಗಿ,

## ಸೌಂದರ್ಯವತಿಯಾಗಿ,

## ಸುವಾಸಿತೆಯಾಗಿ

ಇರುವುದು ಇದರಿಂದಲೇ...



ವಂದನಾ




# ರೆಮಿ

## ಸೌಂದರ್ಯ-ಸಾಧನಗಳು

ನಿಮ್ಮ ಚರ್ಮವನ್ನು ನಯವಾಗಿ, ಮೃದುವಾಗಿ ಇಡಿ. ನಿಮ್ಮ ಮೈಕಾಂತಿ ಬೆಳಗುವಂತೆ ಮಾಡಿ.

ಈ ಸೌಂದರ್ಯ-ಸಾಧನಗಳನ್ನು ದಿನಾಲೂ ಉಪಯೋಗಿಸಿದರೆ ನಿಮ್ಮ ಕಣ್ಣುಗಳಲ್ಲಿ ಯೌವನದ ಹೊಳಪು ಕಾಣಿಸುವುದು, ದಿನವಿಡೀ ನಿಮ್ಮಲ್ಲಿ ಉಲ್ಲಾಸ ತುಂಬಿರುವುದು ಮತ್ತು ಕೂದಲು ಘನವಾಗಿ, ನೀಳವಾಗಿ, ಕಪ್ಪಾಗಿ ಬೆಳೆಯುವುದು.

ರೆಮಿ ಸ್ನೋ ಎಂದರೆ
ಚರ್ಮಕ್ಕೆ ಟಾನಿಕ್ಕು

* ★ ಸ್ನೋ ಮತ್ತು ಕೋಲ್ಡ್ ಕ್ರೀಮ್
* ★ ಟಾಯಿಲೆಟ್, ಟಾಲ್ಕಂ, ಡಸ್ಟಿಂಗ್ ಮತ್ತು ಫೇಸ್ ಪೌಡರ್‌ಗಳು
* ★ ಕ್ಯಾಸ್ಟರ್, ಆಮ್ಲ, ಕೋಕೋನಟ್ ಹೇರ್ ಆಯಿಲ್‌ಗಳು ಮತ್ತು ವಿಶಿಷ್ಟ ತೈಲಗಳು
* ★ ಸಾಬೂನುಗಳು ಮತ್ತು ಶಾಂಪೂ ★ ಟೂಥ್ ಪೌಡರ್ ಮತ್ತು ಪೇಸ್ಟ್ ಇತ್ಯಾದಿ.

KAN

ಅಭಿಪ್ರಾಯುವಾಗಿತ್ತು. ಅಲ್ಲದೆ ರಾತ್ರಿಯೂ, ಸಂಗೀತವನ್ನು ಐಚ್ಛಿಕವಾಗಿ ಆರಿಸಿಕೊಂಡಿದ್ದುದರಿಂದ. ಪಿಟೀಲಿನ ವಿದ್ವಾಂಸನಾದ ಗೋಪಾಲಕೃಷ್ಣನಿಗೂ ಅವಳಿಗೂ ಸ್ವಾಭಾವಿಕವಾಗಿ ಪರಿಚಯವಿರಬೇಕೆಂದು ಅವರು ಭಾವಿಸಿದರು. ಅವರು ಸಂಭ್ರಮದಿಂದ "ಯಾಕೆ ಪರಿಚಯವಿಲ್ಲ. ಹೆಸರು ಕೇಳಿದ್ದೇನೆ. ಈತ, ಒಳ್ಳೆ ಪಿಟೀಲು ವಿದ್ವಾಂಸ" ಎಂದರು. ಗೋಪಾಲನು ಗಾಬರಿಯಿಂದ "ಪಿಟೀಲಿನಲ್ಲಿ ನನಗೆ ಇನ್ನೂ..." ಎಂದು ಪ್ರಾರಂಭಿಸಿದ ಕೂಡಲೇ ಅವತಾರಯ್ಯನವರು "ಪರಿಶ್ರಮ ಸಾಲದು ಎನ್ನುತ್ತಿ. ವಿದ್ಯೆಕ್ಕೆ ವಿನಯವೇ ಭೂಷಣ. ಬಾಬಾ" ಎಂದು ಒಳಕ್ಕೆ ಕರೆದುಕೊಂಡು ಹೋದರು. ಗೋಪಾಲ್ ಹೇಳಬೇಕೆಂದಿದ್ದುದು "ನನಗೆ ಪಿಟೀಲಿನಲ್ಲಿ ಇನ್ನೂ ಪ್ರವೇಶವೇ ಇಲ್ಲ" ಎಂದು. ಆದರೆ ಅವತಾರಯ್ಯನವರು ಅವನು ಮಾತನ್ನು ಪೂರ್ತಿಗೊಳಿಸಲು ಅವಕಾಶವನ್ನೇ ಕೊಡಲಿಲ್ಲ. ತಂದೆಯ ಮಾತನ್ನು ಕೇಳಿ ರಾತ್ರಿಗೂ ಸಂತೋಷವೂ ಆಶ್ಚರ್ಯವೂ ಆಯಿತು. ಅವಳು ಮೃದುವಾದ ಮುಖಭಾವದಿಂದ "ಎಲ ಠಕ್ಕ ! ಈ ವಿಷಯವನ್ನು ನನ್ನಿಂದ ಬಚ್ಚಿಟ್ಟುಕೊಂಡೆಯಾ ? ಇರಲಿ" ಎಂದು ಗೋಪಾಲನನ್ನು ನೋಡಿದಳು. ತಂದೆಯವರಿಗೆ ಗೋಪಾಲನ ವಿಷಯವೆಲ್ಲ ಚೆನ್ನಾಗಿ ಗೊತ್ತಿದೆ ಎಂದೇ ಅವಳು ನಂಬಿದಳು. ಅವತಾರಯ್ಯನವರು "ಮಳೆ ನಿಂತ ಮೇಲೆ ಹೊರಡುವಿಯಂತೆ. ಒಳಗೆ ಬಂದು ಕುಳಿತುಕೊ" ಎಂದು ಎಷ್ಟು ಹೇಳಿದರೂ ಗೋಪಾಲ್ "ರಾತ್ರಿಯು ಮಳೆಯಲ್ಲಿ ನೆನೆಯುತ್ತಾರಲ್ಲ ಎಂದು ಛತ್ರಿ ಹಿಡಿದುಕೊಂಡು, ಬಂದೆ" ಎಂದು ಹೊರಟೇಬಿಟ್ಟನು. ಅವತಾರಯ್ಯನವರು "ಬರುತ್ತಾ ಇರಯ್ಯ, ಆತುರದಲ್ಲಿ ಬಂದು ಹೊರಟುಬಿಟ್ಟೆ. ಕಾಫಿಯನ್ನಾದರೂ ಒಂದು ತೊಟ್ಟು ಕುಡಿಯಬಹುದಾಗಿತ್ತು. ಎಂದರು. ಗೋಪಾಲನು "ಬೇಡಿ; ಈಗ ಊಟದ ಹೊತ್ತು. ಮತ್ತೆ ಬರುತ್ತೇನೆ" ಎಂದು ಹೊರಟನು. ಅವನು ಕಂಪೌಂಡನ್ನು ದಾಟಿ, ರಸ್ತೆಗೆ ಬಂದರೂ ನಾಯಿ, ಇನ್ನೂ ಬಗಳುತ್ತಲೇ ಇದ್ದಿತು. "ಸಂಗೀತಗಾರರಲ್ಲದವರನ್ನು ಈ ನಾಯಿ ಸಹಿಸುವುದಿಲ್ಲ" ಎಂದು ರಾತ್ರಿಯು ಹೇಳಿದುದನ್ನು ಜ್ಞಾಪಿಸಿಕೊಳ್ಳುತ್ತಾ ಗೋಪಾಲ್, ತನ್ನ ಕೊಠಡಿಗೆ ಹೋದನು ಆ ರಾತ್ರಿ ಅವನಿಗೆ ಸರಿಯಾಗಿ ನಿದ್ರೆ ಬರಲಿಲ್ಲ. ಬೆಳಗಿನ ವೇಳೆಗೆ ಅವನು "ರಾತ್ರಿಯನ್ನು ನಾನು ಮದುವೆಯಾಗಲೇಬೇಕು. ಅವಳು ನನ್ನ ಜೀವನ ಸರ್ವಸ್ವ. ಅವಳೇ ನನ್ನ ಹೃದಯದೇವತೆ. ಆದರೆ ಸಂಗೀತಗಾರನಲ್ಲದವನನ್ನು ಅವಳು ಮದುವೆಯಾಗುವುದಿಲ್ಲ. ನಾನು ಸಂಗೀತಗಾರ ಎಂದು ರಾತ್ರಿಯೂ ನಂಬಿದ್ದಾಳೆ. ಅವಳ ತಂದೆಯು ನಂಬಿದ್ದಾರೆ. ಈ ನಂಬಿಕೆಯನ್ನೇ ಮುಂದುವರಿಸಿ ನನ್ನ ಕಾರ್ಯವನ್ನು ಸಾಧಿಸಬೇಕು" ಎಂದು ನಿಶ್ಚಯಿಸಿಕೊಂಡನು. ರಾತ್ರಿಯನ್ನು ಸಂಪಾದಿಸಲು ತನ್ನ ಒಂದು ಅವಯವವನ್ನು ಸಹ ಕೊಡಲು ಸಿದ್ಧನಾಗಿದ್ದ ಅವನಿಗೆ. "ಇಷ್ಟು ಸುಲಭದಲ್ಲಿ ಇಪ್ಪತ್ತು ಪೈಸಾದ ಖರ್ಚಿನಲ್ಲಿ ರಾತ್ರಿಯನ್ನು ಒಲಿಸಿಕೊಳ್ಳುವ ಅವಕಾಶ ಸಿಕ್ಕಿದುದಕ್ಕೆ ಆಶ್ಚರ್ಯವಾಯಿತು. ಇಂತಹ ಸಂದರ್ಭವನ್ನು ಒದಗಿಸಿದನಲ್ಲ ಎಂದು ಆತನಿಗೆ ಬಸ್‌ಕಂಡಕ್ಟರಲ್ಲಿಯೂ ಕೃತಜ್ಞತಾಭಾವವುಂಟಾಯಿತು. ಹೀಗೆ ತನ್ನನ್ನು ಸಂಗೀತಗಾರ, ಪಿಟೀಲುಕಾರ ಎಂದು, ರಾತ್ರಿಯೂ ಅವಳ ಮನೆಯವರೂ ತಿಳಿದುಕೊಂಡುದನ್ನು ತಾನು ಪ್ರತಿಭಟಿಸದುದೇ ತನ್ನ ಮುಂದಲ ಎಲ್ಲ ಕಷ್ಟಗಳಿಗೂ ಕಾರಣವಾಗಬಹುದೆಂಬುದು ಆಗ ಅವನಿಗೆ ತಿಳಿಯಲೇ ಇಲ್ಲ.

ಗೋಪಾಲನ ಕೊಠಡಿ; ಅವತಾರಯ್ಯನವರ ಮನೆಗೆ ಸಮೀಪದಲ್ಲಿದ್ದಿತೆಂಬ ವಿಷಯ ಹಿಂದೆಯೇ ವಿಶದವಾಗಿದೆ. ಮರುದಿನ ಸಾಯಂಕಾಲ ಸುಮಾರು ಆರು ಗಂಟೆಗೆ ಅವತಾರಯ್ಯನವರು. ಗೋಪಾಲನ ಕೊಠಡಿಗೆ ಬಂದರು. ಒಂದು ಕೈಯ್ಯಲ್ಲಿ ಛರ್ಜರಿ ಬೆತ್ತ, ಇನ್ನೊಂದು ಕೈಯಲ್ಲಿ ಹುಲಿಯಂತಿದ್ದ ನಾಯಿ. ನಾಯಿ ಗೋಪಾಲನನ್ನು ನೋಡಿದ ಕೂಡಲೇ ಹಿಂದಲ ರಾತ್ರಿಯಂತೆಯೇ ಭಯಂಕರವಾಗಿ ಬಗುಳಿತು; ಗೋಪಾಲನ ಮೇಲೆ ಬೀಳುವುದಕ್ಕೆ ಹೋಯಿತು. ಅವತಾರಯ್ಯನವರು ಅದನ್ನು ಮೃದುವಾಗಿ ಗದ್ದರಿಸಿ "ಬಾಗಿಲಿಗೆ ಪೋಕರಿ ವಿದ್ಯಾರ್ಥಿಗಳು ಬಂದರೆ ಇದು ಅವರನ್ನು ಸಿಗಿದು ಹಾಕುತ್ತೆ" ಎಂದರು. ನಾಯಿ "ನಿನಗೂ ಇದೇ ಗತಿ" ಎನ್ನುವಂತೆ ಗೋಪಾಲನನ್ನು ನೋಡಿ ಮಧ್ಯೆ ಮಧ್ಯೆ ಬೊಗಳುತ್ತಲೇ ಇದ್ದಿತು.

ಅವತಾರಯ್ಯನವರು ನಾಲ್ಕಾರು ಪ್ರಶ್ನೆಗಳನ್ನು ಕೇಳಿ ಗೋಪಾಲನ ವೃತ್ತಾಂತವನ್ನೆಲ್ಲ ತಿಳಿದುಕೊಂಡು ಬಿಟ್ಟರು. ಪರಿಚಯವಿದ್ದ ಯಾವುದೋ ಒಂದು ಎಳೆಸಿಕ್ಕಿದ ಕೂಡಲೇ ಅವರಿಗೆ ಗೋಪಾಲನ ತಾಯಿ ಯಾರೆಂಬುದು ಸುಲಭವಾಗಿ ಗೊತ್ತಾಗಿ ಹೋಯಿತು. ಸರ್ಕಾರಿ ಕೆಲಸದಲ್ಲಿದ್ದಾಗ ಅವರಿಗೆ ಮಲ್ಲಿಗೆಹಳ್ಳಿಯ ನಾರಾಯಣಪ್ಪನವರ ತಂದೆಯ ಪರಿಚಯವಾಗಿತ್ತು. ಅದರಿಂದ ಗೋಪಾಲ "ಗುರುತು ಪರಿಚಯವಿಲ್ಲದ ಪೋಕರಿಯಲ್ಲ ಸಂಭಾವಿತರ ಮನೆತನದ ಹುಡುಗ" ಎಂಬುದು ಅವರಿಗೆ ಸ್ಪಷ್ಟವಾಯಿತು. ಅವರು ಗೋಪಾಲನ ಕೊಠಡಿಯಲ್ಲಿ ಸುತ್ತಾಡಿನೋಡಿ "ನಿನ್ನ ಪಿಟೀಲು ಎಲ್ಲಿ" ಎಂದು ಕೇಳಿದರು. ಗೋಪಾಲ ಉಗುಳು ನುಂಗುತ್ತಾ "ಸ್ನೇಹಿತರ ಕೊಠಡಿಯಲ್ಲಿದೆ" ಎಂದನು. ಅವತಾರಯ್ಯನವರು "ಸರಿ ಸರಿ ಸಂಗೀತಗಾರರಿಗೆ ಸಂಗೀತಗಾರರೇ ಸ್ನೇಹಿತರು. ಆದರೆ ಪಿಟೀಲು ನಿನ್ನ ಬಳಿ ಇರಬೇಕಪ್ಪ, ನಿತ್ಯಾ ಅಭ್ಯಾಸ ಇಟ್ಟುಕೊಂಡಿದ್ದೀಯೆ ತಾನೆ ? ಅಭ್ಯಾಸ ಬಿಡಬಾರದು. ಒಂದು ಗಳಿಗೆ ಪಿಟೀಲನ್ನು ಕೇಳೋಣ ಅಂತಲೇ ಬಂದೆ. ನನ್ನ ಹಿರಿಯ ಅಳಿಯನಿಗೂ ಬಹು ಖಯಾಲು. ನಡಿ ಮನೆಗೇ ಹೋಗೋಣ. ಅಲ್ಲಿಯೇ ಸೊಗಸಾದ ಪಿಟೀಲು ಇದೆ ಬಾರಿಸುವೆಯಂತೆ, ಒಂದು ಸಣ್ಣ ಕಚೇರಿಯನ್ನೇ ಮಾಡಿಬಿಡೋಣ. ಗಾನ ಸರಸ್ವತಿಯ ಪೂಜೆಯಾಗಿಬಿಡಲಿ" ಎಂದರು. ಗೋಪಾಲನ ಗಂಟಲು ಒಣಗಿಹೋಯಿತು. ಅವನು "ಛೆ ಛೆ, ಅಂತಹ ವಿದ್ವಾಂಸರ ಎದುರಿಗೆ ಬಾರಿಸುವ ಅಹಂಕಾರ ನನಗೆಲ್ಲಿ ?" ಎಂದನು. ಅವತಾರಯ್ಯನವರು "ಅದು ಸರಿ, ವಿದ್ಯಾವಂತರಿಗೆ ವಿನಯವೇ

ಭೂಷಣ. ಕಾಲೇಜಿನಲ್ಲಿ ಪಕ್ಕವಾದ್ಯಕ್ಕೆ ಜಾರಿಸಿದ ಮೇಲೆ ಅದು ಕಛೇರಿಯೇ ಆಯಿತಲ್ಲ. ಅದು ಸರಿ. ನಿನಗೆ ಗುರುಗಳು ಯಾರು?" ಎಂದರು. ಗೋಪಾಲನಿಗೆ ಏನು ಹೇಳುವದಕ್ಕೂ ತೋಚಲೇ ಇಲ್ಲ. ಅವನು "ನಮ್ಮ ಊರಿನಲ್ಲಿಯೂ ಸುತ್ತಮುತ್ತಲೂ ಕಲಿತವರು ಕೆಲವರಿದ್ದಾರೆ". ಎಂದನು. ಅವತಾರಯ್ಯನವರು "ಯಾರ್ಯಾರಲ್ಲಿ ಯಾವ ಶಕ್ತಿಯಿದೆಯೋ" ಎಂದರು. ಮಹಾನುಭಾವುರು ಪಾಪ ಗೋಪಾಲ ಬೆಂಕಿಯಲ್ಲಿ ಬಿದ್ದ ಹುಳುವಿನಂತಾದನು. "ಮನೆಯಲ್ಲಿ ರಾತ್ರಿಯು ಇದ್ದಾಳೆ. ಒಂದು ಸಲ ಹೋಗಿ ನೋಡಿಕೊಂಡು ಬರೋಣ ಎಂದರೆ ನಾನು ಪಿಟೀಲನ್ನು ನುಡಿಸಬೇಕು, ನನ್ನ ಕೆಲಸ ಇನ್ನು ಮುಗಿಯಿತು. ರಾತ್ರಿಯ ಆಸೆಯನ್ನು ನಾನು ಬಿಡಬಹುದು" ಎಂದು ಕೊರಗಿದನು. "ಈಗ ನಾನು ಸ್ವಲ್ಪ ಕಾಲೇಜು ಕಡೆ ಲೈಬ್ರೇರಿ ಕೆಲಸಕ್ಕೆ ಹೋಗಬೇಕು. ಇನ್ನಾವಾಗಲಾದರೂ ಬರುತ್ತೇನೆ" ಎಂದು ಹೇಳಿ ಅವತಾರಯ್ಯನವರನ್ನು ಕಳುಹಿಸಿದನು.

ಮರುದಿವಸ ಬೆಳಗ್ಗೆ ಕಾಲೇಜಿಗೆ ಹೋಗುವ ಹೊತ್ತಿಗೆ, ಬಸ್‌ಸ್ಟ್ಯಾಂಡಿನಲ್ಲಿ ರಾತ್ರಿಯೂ ಬಂದಿದ್ದಳು. ರಾತ್ರಿಗೆ ತನ್ನಲ್ಲಿ ಎರಡು ದಿನಗಳಿಂದ ಮರ್ಯಾದೆ ಹೆಚ್ಚಾಗಿದೆ ಎಂಬುದು ಗೋಪಾಲನಿಗೆ ಕಂಡಿತು. ಆದರೆ ಅದರ ಕಾರಣವನ್ನು ಕುರಿತು ಯೋಚಿಸಿದಾಗ ಅವನಿಗೆ ದುಃಖವುಂಟಾಯಿತು. ರಾತ್ರಿಯು "ಸಂಗೀತಗಾರರಿಗೆ ಜಂಬ ಹೆಚ್ಚು ಕಣ್ರಿ. ನಿನ್ನೆ ರಾತ್ರಿ ನಮ್ಮ ತಂದೆ ಬಂದು ಕರೆದರೂ ನೀವು ಬರಲಿಲ್ಲ. ನಿಮ್ಮ ಪಿಟೀಲು ಕೇಳಬೇಕೆಂದು ನಮ್ಮ ಮನೆಯವರಿಗೆಲ್ಲ ಆಸೆ. ನಾನೇ ನಿಮ್ಮ ವಾದ್ಯದ ಜೊತೆ ಹಾಡಬೇಕೆಂದಿದ್ದೆ. ನಮ್ಮ ದೊಡ್ಡ ಭಾವನವರಿಗೆ ಪಿಟೀಲು ಎಂದರೆ ಹುಚ್ಚು. ನೀವು ಎಲ್ಲರಿಗೂ ಚಕ್ಕರ್ ಕೊಟ್ಟು ಬಿಟ್ರಿ" ಎಂದಳು. ಗೋಪಾಲನು "ಲೈಬ್ರೇರಿಗೆ ಹೋಗಬೇಕಾಗಿತ್ತು" ಎಂದನು. ರಾತ್ರಿಯು "ಇವತ್ತಾದರೂ ಬರುತ್ತೀರಾ?" ಎಂದಳು. ಗೋಪಾಲನು ಮನಸ್ಸಿನಲ್ಲಿ "ಬರುತ್ತೇನೆ. ದಮ್ಮಯ್ಯ ಅಂತ ಬರುತ್ತೇನೆ. ಆದರೆ ಪಿಟೀಲು ಒಂದು ಈಗ ಗಂಟುಬಿತ್ತಲ್ಲ" ಎಂದುಕೊಂಡು "ಇವತ್ತೂ, ಖಾಯಿಲೆ ಬಿದ್ದಿರುವ ಒಬ್ಬ ಮಿತ್ರನನ್ನು ಆಸ್ಪತ್ರೆಯಲ್ಲಿ ನೋಡಬೇಕು" ಎಂದನು. ಆ ವೇಳೆಗೆ ಬಸ್ಸು ಬಂದುದರಿಂದ ಇಬ್ಬರೂ ಬಸ್ಸಿನಲ್ಲಿ ಕುಳಿತು ತಮ್ಮ ಕಾಲೇಜುಗಳಿಗೆ ಹೋದರು. ಮರುದಿನ ಶನಿವಾರ. ಕಾಲೇಜಿಗೆ ಯಾಕೋ ರಜ ಇತ್ತು. ಗೋಪಾಲನಿಗೆ ಆ ದಿನವೆಲ್ಲ ರಾತ್ರಿಯ ದರ್ಶನವಾಗಲಿಲ್ಲ' ಅವಳನ್ನು ಹೋಗಿ ನೋಡಬೇಕು. ಆದರೆ ಹೋದರೆ ಪಿಟೀಲು ನುಡಿಸು ಎನ್ನುತ್ತಾರಲ್ಲ ಏನು ಮಾಡಲಿ ಎಂದು ಅವನು ತಳಮಳಗೊಂಡನು. ಹಗಲನ್ನು ನೂಕುವುದೇ ಅವನಿಗೆ ಕಷ್ಟವಾಯಿತು. ರಾತ್ರಿ ಏನು ಮಾಡಿದರೂ ಅವನಿಗೆ ನಿದ್ರೆಯೇ ಬರದೆ ಯುಗವಾಯಿತು. ಕನಸಿನಲ್ಲಿ ಅವನಿಗೆ ಒಬ್ಬ "ಸಮುದ್ರದ ನೀರನ್ನು ಸಣ್ಣ ಪಾತ್ರೆಯಿಂದ ಬರಿದು ಮಾಡುವುದು ಎಷ್ಟು ಸುಲಭವೋ ನೀನು ರಾತ್ರಿಯನ್ನು ಸಂಗೀತದಿಂದ ಒಲಿಸಿಕೊಳ್ಳುವುದೂ ಅಷ್ಟೇ ಸುಲಭ" ಎಂದು ನಕ್ಕನು. ಗೋಪಾಲನಿಗೆ ಎಚ್ಚರವಾದಾಗ ಅವನ ಮೈ ಕೈಯೆಲ್ಲ ನಿಜವಾಗಿ ನೀರೆತ್ತಿದಂತೆ ನೋಯುತ್ತಿದ್ದಿತು,

ಬೆಳಗಾಯಿತು. ಅಂದು ಭಾನುವಾರ. ಗೋಪಾಲನ ಸ್ನೇಹಿತ ಕಿಟ್ಟು, ಅವನನ್ನು ಬೆಳಗಿನ ಮ್ಯಾಟನಿ ಸಿನಿಮಾಕ್ಕೆ ಕರೆದುಕೊಂಡು ಹೋಗಲು ಬಂದನು. ಗೋಪಾಲನನ್ನು ನೋಡಿದ ಕೂಡಲೇ ಇವನಾವುದೋ ಪೇಚಾಟಕ್ಕೆ ಸಿಕ್ಕಿಕೊಂಡಿದ್ದಾನೆ ಎಂಬುದು ಕಿಟ್ಟುವಿಗೆ ಗೊತ್ತಾಯಿತು. ಕಿಟ್ಟುವಿನ ಘಾಟಿ ಸವಾಲಿನಲ್ಲಿ ಗೋಪಾಲ, ಇದ್ದ ವಿಷಯವನ್ನೆಲ್ಲ ಇದ್ದಂತೆಯೇ ಹೇಳಿಬಿಟ್ಟನು. "ರಾತ್ರಿಯನ್ನು ಹೋಗಿ ನೋಡದಿದ್ದರೆ ನನಗೆ ಹುಚ್ಚು ಹತ್ತುತ್ತೆ" ಎಂದನು. ಕಿಟ್ಟುವು ಸರಾಗವಾಗಿ "ಹಾಗಾದರೆ ಈ ಸಾಯಂಕಾಲ ಹೋಗು" ಎಂದನು. ಗೋಪಾಲನು "ಹೋದರೆ ಆ ಮುದುಕ ಪಿಟೀಲು ನುಡಿಸು ಎನ್ನುತ್ತಾನೆ. ರಾತ್ರಿಯೂ ನಾನು ನುಡಿಸಬಲ್ಲೆನೆಂದು ತಿಳಿದುಕೊಂಡಿದ್ದಾಳೆ" ಎಂದನು. ಕಿಟ್ಟುವು "ಹಾಗಾದರೆ ನನಗೆ ಪಿಟೀಲು ಬರುವುದಿಲ್ಲ ಎಂದು ಹೇಳಿಬಿಡು" ಎಂದನು. ಗೋಪಾಲನು "ಅದು ಇನ್ನೂ ಕೇಡು. ಹಾಗೆ ತಿಳಿದ ಕೂಡಲೇ ಮುದುಕ, ಕತ್ತಿಗೆ ಕೈಕೊಟ್ಟು ನನ್ನನ್ನು ನಡುಬೀದಿಗೆ ತಳ್ಳುತ್ತಾನೆ. ನಾಯಿ ನನ್ನನ್ನು ಸಿಗಿದು ಹಾಕುತ್ತೆ" ಎಂದನು. ಕಿಟ್ಟುವು "ರಾತ್ರಿಗೆ, ಇರುವ ವಿಷಯವನ್ನು ಹೇಳಿಬಿಡು" ಎಂದನು. ಗೋಪಾಲನು ಆತುರವಾಗಿ "ಕೂಡದು, ಸಂಗೀತಗಾರನಲ್ಲದವನನ್ನು ಆ ಗಡಸುಗಾತಿ ಏನು ಮಾಡಿದರೂ ಒಲ್ಲಳು. ಅವಳಿಲ್ಲದೆ ನಾನು ಜೀವಿಸಲಾರೆ" ಎಂದನು. ಕಿಟ್ಟುವು ಸ್ವಲ್ಪವೂ ಗಾಬರಿಗೊಳ್ಳದೆ, "ಹಾಗಾದರೆ ಪಿಟೀಲು ಬರುವವನೂ ನುಡಿಸದೆ ಇರುವ ಕಾರಣಗಳಾವುವು?" ಎಂದನು. ಗೋಪಾಲನಿಗೆ ಕಿಟ್ಟುವಿನ ಮನಸ್ಸು ಓಡುತ್ತಿದ್ದ ಜಾಡು ಹೊಳೆಯಿತು. "ಭೇಷ್ ಭೇಷ್ ಕೈಬೆರಳಿಗೆ ಏಟುಬಿದ್ದವನು ಹೇಗೆ ತಾನೇ ಪಿಟೀಲು ನುಡಿಸಬಲ್ಲ?" ಎಂದನು. ಗೋಪಾಲನ ಸಂತೋಷಕ್ಕೆ ಪಾರವೇ ಇರಲಿಲ್ಲ. ಅವನ ಮೈ ಹಕ್ಕಿಯಂತೆ ಹಗುರವಾಯಿತು. ಅವನು ಕಿಟ್ಟುವಿನ ಜತೆ ಮ್ಯಾಟನಿಗೆ ಹೋಗಿಬಂದು, ಒಂದು ವಾರದಿಂದ ಹಸಿದುಕೊಂಡಿದ್ದವನಂತೆ ಊಟ ಹೊಡೆದು, ಮಧ್ಯಾಹ್ನದ ನಿದ್ರೆಯನ್ನು ತೆಗೆದು ಸೊಗಸಾಗಿ ಅಲಂಕಾರ ಮಾಡಿಕೊಂಡು ಸಂಜೆ ಆರು ಗಂಟೆಗೆ ರಾತ್ರಿಯ ಮನೆಗೆ ಹೊರಟನು. ಎಡಗೈಯಿನ ನಾಲ್ಕು ಬೆಟ್ಟುಗಳಿಗೂ ಸೇರಿಸಿ ಬಟ್ಟೆ ಕಟ್ಟಿಕೊಳ್ಳುವುದನ್ನು ಮರೆಯಲಿಲ್ಲ. ಆದರೆ ಅವನು ಎಡಗೈಯ್ಯನ್ನು ಕೋಟಿನ ಜೇಬಿನೊಳಕ್ಕೆ ಇಳಿಯಬಿಟ್ಟಿದ್ದುದರಿಂದ ನೋಡುವವರಿಗೆ ಕೈ ಘಾಯ ಗೊತ್ತಾಗುತ್ತಿರಲಿಲ್ಲ.

ಎರಡು ದಿನಗಳಿಂದ ಬಾರದ ಅವನು ಅಂದು ಬಂದುದರಿಂದ ಅವತಾರಯ್ಯನವರಿಗೆ ಸಂತೋಷವಾಯಿತು- ರಾತ್ರಿಯೂ ಮುಖದಲ್ಲಿ ತೃಪ್ತಿಯನ್ನು ವ್ಯಕ್ತಪಡಿಸಿದಳು. ನಾಯಿ ಮಾತ್ರ ಗೋಪಾಲನನ್ನು ಕಂಡು ಬಗಳುವುದನ್ನು ಬಿಡಲಿಲ್ಲ. ಕಾಫಿಯ ಉಪಚಾರವೂ ಆಯಿತು. ಗೋಪಾಲ, ಎಡಗೈಯ್ಯನ್ನು ಜೇಬಿನಿಂದ ಹೊರಕ್ಕೆ ತೆಗೆಯದೆ, ಬಲಗೈಯಲ್ಲಿಯೇ ಕಾಫಿಯನ್ನು ಕುಡಿದನು. ಅವನು ಕಾಫಿ ಕುಡಿದುದೇ ತಡ. ಅವತಾರಯ್ಯನವರು "ಎಲ್ಲಿ ನಿನ್ನ ಪಿಟೀಲು ತರಲಿಲ್ಲವೆ? ಕೊಠಡಿಯ ಬೀಗದ ಕೈ ಕೊಡು, ಆಳು ತರುತ್ತಾನೆ" ಎಂದರು. ಗೋಪಾಲನು "ಅಲ್ಲಿ ಪಿಟೀಲು ಇಲ್ಲ" ಎಂದು ಮಾತನ್ನು ಮುಗಿಸುವುದಕ್ಕೆ ಮುಂಚೆಯೇ ಅವತಾ

ರಯ್ಯನವರು "ಸ್ನೇಹಿತ ಇನ್ನೂ ಹಿಂದಿರುಗಿ ಕೊಡಲಿಲ್ಲ? ನಮ್ಮ ವಾದ್ಯ ನಮ್ಮ ಕೈಯಲ್ಲಿ ಇರಬೇಕು ಚಿಂತೆಯಿಲ್ಲ. ನಮ್ಮ ಮನೆಯ ಪಿಟೀಲಿನಲ್ಲಿಯೇ ಎರಡು ಕೀರ್ತನೆ ಬಿಡಿಸು" ಎಂದರು. ರಾತ್ರಿಯೂ ಸಹ ಹಾಗೆಯೇ ಮಾಡಿ ಎಂದು ಆಸೆಯ ಕಣ್ಣುಗಳಿಂದ ಸೂಚಿಸಿದಳು. ಆ ನೋಟವನ್ನು ನೋಡಿ ಬಡಪಾಯಿ ಗೋಪಾಲ, ಹಾಗೆಯೇ ಕರಗಿಹೋದನು. ಮನಸ್ಸಿನಲ್ಲಿ "ಅಯ್ಯೋ ನಿನಗೆ ಮೋಸಮಾಡಬೇಕಲ್ಲ, ಮನ್ನಿಸು, ಮನ್ನಿಸು. ಪ್ರಾಣವಿರುವವರೆಗೆ ಜೀವಮಾನವೆಲ್ಲ ನಿನ್ನ ಸೇವೆ ಮಾಡುತ್ತೇನೆ" ಎಂದುಕೊಂಡನು. ಅನಂತರ ನಿಸ್ಸಂಕೋಚವಾಗಿ "ಆಗಬಹುದಾಗಿತ್ತು. ಆದರೆ ಕೈಗೆ ಸ್ವಲ್ಪ ಏಟುಬಿದ್ದಿದೆ" ಎಂದನು. ಆ ಮಾತನ್ನು ಕೇಳಿ ರಾತ್ರಿಯು ನಿಜವಾಗಿ ಅಲ್ಲಿಯೇ ಕುಗ್ಗಿಹೋದಳು. ಅವತಾರಯ್ಯನವರು ಕಾತುರರಾಗಿ "ಎಲ್ಲಿ? ಎಲ್ಲಿ ಏಟು ಬಿತ್ತು. ತುಂಬ ಪೆಟ್ಟಾಗಿದೆಯೆ?" ಎಂದು ಕೇಳಿದರು. ಗೋಪಾಲನು ಜೇಬಿನಿಂದ ಎಡಗೈಯನ್ನು ಹೊರಕ್ಕೆ ತೆಗೆಯದೆಯೇ "ಅಷ್ಟೇನೂ ಅಪಾಯವಿಲ್ಲ ನಾಲ್ಕುಬೆರಳುಗಳಿಗೂ ಏಟು ಬಿದ್ದಿದೆ ಅಷ್ಟೆ" ಎಂದನು. ಅವತಾರಯ್ಯನವರ ಬಲಾತ್ಕಾರಕ್ಕೆ ಗೋಪಾಲ್, ಜೇಬಿನಿಂದ ಕೈಯನ್ನು ಮೇಲಕ್ಕೆ ತೆಗೆದನು. ಪ್ರಾರಂಭದ ಗಾಬರಿಯಲ್ಲಿ ರಾತ್ರಿಯು, ಕೈಹಿಡಿದು ನೋಡಲು ಮುಂದಕ್ಕೆ ಬಂದಳು. ಗೋಪಾಲನಿಗೆ ಮುಂದಲ ಸುಖವನ್ನು ನೆನೆದು ರೋಮಾಂಚವುಂಟಾಯಿತು ಆದರೆ ಅಷ್ಟರಲ್ಲಿಯೇ ಅವತಾರಯ್ಯನವರು "ಎಲ್ಲಿ ನೋಡೋಣ" ಎಂದು ಗೋಪಾಲನ ಕೈಯ್ಯನ್ನು ಎಳೆದುಕೊಳ್ಳುವುದಕ್ಕೆ ಮುಂಚೆಯೇ, ತಮ್ಮ ಮುಷ್ಟಿಯಲ್ಲಿ ಅವನ ಕೈಯ್ಯನ್ನು ಹಿಡಿದುಕೊಂಡರು. ಮುದುಕನ ಹಿಡಿತ ಒಳ್ಳೆಯ ಉಕ್ಕಿನ ಹಿಡಿಯಾಗಿತ್ತು. ಗೋಪಾಲ, ಬಿಡಿಸಿಕೊಳ್ಳಲು ಪ್ರಯತ್ನಿಸಿ ಕೈಯ್ಯನ್ನು ಎರಡು ಮೂರು ಸಲ ಎಳೆದುಕೊಂಡನು. ಏನೂ ಪ್ರಯೋಜನವಾಗಲಿಲ್ಲ. ಅವತಾರಯ್ಯನವರು "ಎಲ್ಲಿ ಏಟು ಬಿತ್ತು?" ಎಂದರು. ಗೋಪಾಲನು "ಬಸ್ ಕಂಡಕ್ಟರು ಬಾಗಿಲನ್ನು ಝಾಡಿಸಿಬಿಟ್ಟ. ಕೈ ಸಿಕ್ಕಿಕೊಂಡು ಬಿಟ್ಟಿತು" ಎಂದನು. ಅವತಾರಯ್ಯನವರಿಗೆ ಬಸ್‌ನವರ ಮೇಲೆ ಹತ್ತಿದ ಕೋಪದಲ್ಲಿ ಅವರು ಗೋಪಾಲನ ಕೈಯ್ಯನ್ನೇ ಅಲ್ಲಾಡಿಸಿ ಕೆಳಕ್ಕೆ ಬಿಟ್ಟುಬಿಟ್ಟರು. ಅವರ ಆ ಕುಲುಕಾಟದಿಂದ ಸರಿಯಾಗಿದ್ದ ಗೋಪಾಲನ ಕೈ ಸ್ವಲ್ಪ ನೋಯತೊಡಗಿತು. ಅವತಾರಯ್ಯನವರು "ಬಸ್ ಮೇಲೆ ಮೊಖದ್ದಮೆ ಹೂಡಿ ಪರಿಹಾರ ವಸೂಲ್ಮಾಡಬೇಕು, ಬಸ್ ನಂಬರು ಗುರುತು ಹಾಕಿಕೊಂಡಿದ್ದೀಯಾ? ಸರಿಯಾದ ದಂಡ ತೆರಿಸುತ್ತೇನೆ. ನಿನ್ನದು ಸಾಮಾನ್ಯ ಕೈಯಲ್ಲ. ಕರ್ಣಾನಂದವನ್ನುಂಟು ಮಾಡುವ ಪಿಟೀಲು ನುಡಿಸುವ ಕೈ. ಡಾಕ್ಟರಿಂದ ಸರ್ಟಿಫಿಕೇಟ್ ಪಡೆದೆಯಾ? ಎಷ್ಟು ದಿನಕ್ಕೆ ಗುಣವಾಗುತ್ತೆ, ಅಂತ ಹೇಳಿದರು? ಸರಿಯಾಗಿ ಉಪಚಾರ ಮಾಡಿ ಬ್ಯಾಂಡೇಜ್ ಕಟ್ಟಿದ್ದಾರೆಯೇ? ಈ ಡಾಕ್ಟರುಗಳು ನಿಗಾ ಮಾಡುವುದಿಲ್ಲ ಅವರಿಗೆ ಬರಿಯ ದುಡ್ಡಿನ ದಾಹ ಎಲ್ಲಿಯಾದರೂ "ಸೆಪ್ಟಿಕ್" ಆದೀತು. ತೇಗಿ, ಬ್ಯಾಂಡೇಜನ್ನು ಬಿಚ್ಚಿ ನಾನು ಸರಿಯಾಗಿ ಡ್ರೆಸ್ ಮಾಡುತ್ತೇನೆ. ನನಗೆ ಪ್ರಥಮ ಉಪಚಾರ (First aid) ಗೊತ್ತು." ಎಂದು ಗೋಪಾಲನ ಕೈ ಹಿಡಿದರು. ಗೋಪಾಲನು "ಪರಮಾತ್ಮ ಒಳ್ಳೆ ಅಪಾಯಕ್ಕೆ ಸಿಕ್ಕಿದೆ" ಎಂದುಕೊಂಡು ಹಾವು ಹುತ್ತದಲ್ಲಿ ಕುಳಿತುಬಿಟ್ಟಂತೆ ಕೈಯನ್ನು ಮೇಲಕ್ಕೆ ಬಿಡಲೇ ಇಲ್ಲ. "ತಪ್ಪು ನನ್ನದೇ ಆದುದರಿಂದ ಪರಿಹಾರ ಕೇಳುವ ಪ್ರಶ್ನೆಯೇ ಇಲ್ಲ. ಇನ್ನು ಬ್ಯಾಂಡೇಜ್ ಬಿಚ್ಚಬಾರದು. ಕೈಸೋಕಿದರೆ ಸೆಪ್ಟಿಕ್ ಆಗುತ್ತೆ ಎಂದು ಡಾಕ್ಟರರು ಹೇಳಿದ್ದಾರೆ." ಎಂದುಬಿಟ್ಟನು ಅವತಾರಯ್ಯನವರು ಸುಮ್ಮನಾದರು. ಬಂದ ಅಪಾಯಹೀಗೆ ಪರಿಹಾರವಾದ ಮೇಲೆ, ಗೋಪಾಲ ಸರಾಗವಾಗಿ ಶಾಂತಿಯಿಂದ ಕುಳಿತು ಎರಡು ಗಂಟೆಗಳ ಕಾಲ ಮಾತುಕಥೆಯಾಡುತ್ತಿದ್ದನು. ತನ್ನ ಮೋಸಯಾರಿಗೂ ತಿಳಿಯಲಿಲ್ಲವೆಂದು ಅವನಿಗೆ ಖಾತರಿಯಾಯಿತು, ಅವನು ಹೊರಟಾಗ ಅವತಾರಯ್ಯನವರು "ಕೈ ಎಚ್ಚರಿಕೆಯಿಂದಿರಿ. ನಿಮ್ಮ ಪಿಟೀಲು ಕೇಳುವ ಯೋಗ ನನಗೆ ಇನ್ನೂ ಬರಲಿಲ್ಲ" ಎಂದರು. ಗೋಪಾಲ ಮನಸ್ಸಿನಲ್ಲಿ "ಎಂದಿಗೂ ಬರುವುದಿಲ್ಲ"ಎಂದುಕೊಂಡು ಹೊರಟನು ಅವನನ್ನು ನೋಡಿ ನಾಯಿ ಮತ್ತೆ ಬೊಗುಳಿತು.

ಅವತಾರಯ್ಯನವರು ಅಲ್ಲಿಂದ ಪದೇ ಪದೇ ಗೋಪಾಲನ ಕೊಠಡಿಗೆ ಬಂದರು. ಗೋಪಾಲನಂತೂ ನಿತ್ಯ ರಾತ್ರಿಯನ್ನು ಸಂಧಿಸುತ್ತಲೇ ಇದ್ದ, "ಅವನು ಒಳ್ಳೆಯ ಪಿಟೀಲುಗಾರನೆಂಬುದು ನಮ್ಮ ತಂದೆಯವರಿಗೆ ಗೊತ್ತು." ಎಂದು ರಾತ್ರಿಯು ತಿಳಿದಿದ್ದಳು."ಸಂಗೀತಗಾರನಾದುದರಿಂದಲೇ ರಾತ್ರಿಗೂ ಗೋಪಾಲನಿಗೂ ಸ್ನೇಹವಾಗಿದೆ" ಎಂದು ಅವತಾರಯ್ಯನವರು ನಂಬಿದರು. "ಸಾವಿರ ಸುಳ್ಳು ಹೇಳಿ ಒಂದು ಮದುವೆ ಮಾಡು" ಎಂಬ ಗಾದೆಯಿದೆಯಂತೆ. ಸುಳ್ಳು ಹೇಳಿ ಈ ಕಾಲದಲ್ಲಿ ಮದುವೆ ಮಾಡುವುದಕ್ಕಾಗುವುದಿಲ್ಲ. ಯಾಕೆಂದರೆ ಈಗ ಎಲ್ಲರೂ ಯಾವುದಕ್ಕೂ ಸುಳ್ಳು ಹೇಳುತ್ತಾರೆ. ಅಲ್ಲದೆ ಮುಂದಲ ಗಳಿಗೆಯಲ್ಲಿಯೇ ಸುಳ್ಳು ಪತ್ತೆಯಾಗಿಹೋಗುತ್ತದೆ. ಆದುದರಿಂದ ಗೋಪಾಲ ಈ 'ನಾಣ್ಣುಡಿ'ಯನ್ನು "ಸಾವಿರ ಮೋಸಮಾಡಿ ಒಂದು ಮದುವೆಯಾಗು" ಎಂದು ತಿದ್ದಿಕೊಂಡನು. ಗೋಪಾಲನ ಪಿಟೀಲುಪ್ರಾವೀಣ್ಯದ ವಿಷಯದಲ್ಲಿ ಇದ್ದಿರಬಹುದಾದ ಅಲ್ಪ ಸ್ವಲ್ಪ ಸಂಶಯವು ಸಹ ಕೃಷ್ಣನ ಒಂದು ಮೋಸದಿಂದ ಪರಿಹಾರವಾಯಿತು. ಕೃಷ್ಣನ ತಂಗಿ ರಾಧೆ, ಸೊಗಸಾದ ಪಿಟೀಲುಗಾರ್ತಿ. ಆಕೆ ಆಕಾಶವಾಣಿಯಲ್ಲಿ ಕೆಲಸದಲ್ಲಿದ್ದಳು. ಕೃಷ್ಣ, ಅವಳ ನಾಲ್ಕಾರು ಉತ್ತಮ ಕೃತಿಗಳ ಟೇಪ್ ರಿಕಾರ್ಡುಗಳನ್ನು ಮಾಡಿಸಿ, ಆ ಟೇಪ್‌ಗಳನ್ನು ಗೋಪಾಲನಿಗೆ ಕೊಟ್ಟನು. ಒಂದು ದಿನ ಅವತಾರಯ್ಯನವರು ಗೋಪಾಲನ ಕೊಠಡಿಗೆ ಬಂದಾಗ, ಉದ್ದೇಶಪೂರ್ವಕವಾಗಿ ಅವರ ಕಣ್ಣಿಗೆ ಬೀಳುವಂತೆ ಗೋಪಾಲ ಇಟ್ಟಿದ್ದ ಆ ಟೇಪನ್ನು ಅವರು ನೋಡಿದರು. ಅದು ಗೋಪಾಲನು ನುಡಿಸಿದ ಪಿಟೀಲಿನ ರಿಕಾರ್ಡು ಎಂದು ಅರಿತ ಅವರು ಅದನ್ನು ತೆಗೆದುಕೊಂಡು ಹೋಗಿ, ತಮ್ಮ ಸ್ನೇಹಿತರ ರಿಕಾರ್ಡು ಪೆಟ್ಟಿಗೆಯನ್ನು ಮನೆಗೆ ತರಿಸಿ ಕೇಳಿದರು. ಉನ್ನತ ಮಟ್ಟದಲ್ಲಿ ನುಡಿಸಿದ್ದ ಆ ಕೃತಿಗಳನ್ನು ಕೇಳಿ ಅವರಿಗೆ ತುಂಬ ಸಮಾಧಾನವಾಯಿತು. "ಇವನು ರಾತ್ರಿಯ ಸ್ನೇಹವನ್ನು ಮಾಡುವುದಕ್ಕೂ ನಮ್ಮ ಮನೆಗೆ ಬಂದು ಹೋಗುವದಕ್ಕೂ ಯೋಗ್ಯನಾಗಿದ್ದಾನೆ." ಎಂದು ಅವರು ಭಾವಿಸಿದರು. ನಿತ್ಯ ದರ್ಶನ, ನಿತ್ಯ ಸಂಭಾಷಣೆ ನಿತ್ಯ ಒಟ್ಟಿಗೆ ಪಯಣ ಇವುಗಳಿಂದ ಗೋಪಾಲ ರಾತ್ರಿಯರಲ್ಲಿ ಪ್ರೇಮ ಬೆಳೆದಂತೆ, ರಾತ್ರಿಯ ತಾಯಿ,



" ಹೂಂ. ಬೇಗ ಫೋಟೊ ತೆಗೆದುಕೊಳ್ಳಿ, ತುಂಬ ಹೊತ್ತು ಇದನ್ನು ಹಿಡಿಯಲಾರೆ ''

ಅವತಾರಯ್ಯನವರನ್ನು ಮಲ್ಲಿಗೆಹಳ್ಳಿಗೆ ಲಗ್ನ ನಿಷ್ಕರ್ಷಕ್ಕಾಗಿ ಅಟ್ಟಿದರು ಅವತಾರಯ್ಯನವರು ತಮ್ಮ ಮನೆಗೆ ಬಂದು ವಿಷಯವನ್ನು ಪ್ರಸ್ತಾಪಿಸಿದಾಗ ನಾರಣಪ್ಪನವರಿಗೆ ನಿಜವಾಗಿ ಸಂತೋಷವೂ ಹಿಂದೆ ತಮ್ಮ ಜಿಲ್ಲೆಯಲ್ಲಿ ಡೆಪ್ಯುಟಿ ಕಮಿಶನರ್ ಆಗಿದ್ದವರು ಈಗ ತಮ್ಮ ಬೀಗರಾಗುವರೆಂಬ ಹೆಮ್ಮೆಯೂ ಉಂಟಾಯಿತು. ಅವತಾರಯ್ಯನವರು "ನಾಲ್ಕು ಹುಡಿಗಿಯರನ್ನೂ ನಾಲ್ಕು ಸಂಗೀತ ವಿದ್ವಾಂಸರಿಗೇ ಕೊಡಬೇಕೆಂಬ ನನ್ನ ನಿರ್ಧಾರ ಸಿದ್ಧಿಸಿತು. ಗೋಪಾಲ, ಪಿಟೀಲಿನಲ್ಲಿ ಸಿದ್ಧಹಸ್ತ. ಕೈ ಬಹಳ ಚನ್ನಾಗಿದೆ. ರಾತ್ರಿಯ ಗಾಯನ, ಇವನ ಪಿಟೀಲು ಎರಡೂ ಹಾಲು ಜೇನು ಸೇರಿದಂತೆ" ಎಂದರು, ನಾರಣಪ್ಪನವರಿಗೂ ಅವರ ಹೆಂಡತಿಯವರಿಗೂ ತಮ್ಮ ಮಗ ಪಿಟೀಲಿನಲ್ಲಿ ಪ್ರವೀಣನಾಗಿರುವುದನ್ನು ಕೇಳಿ ಆಶ್ಚರ್ಯವಾಯಿತು. ಅವರು "ಗೋಪಾಲ ಇಲ್ಲಿದ್ದಾಗ......" ಎಂದು ಪ್ರಾರಂಭಿಸಿದ ಕೂಡಲೇ ಅವತಾರಯ್ಯನವರು "ಇಲ್ಲಿದ್ದಾಗ ಅವನ ಕೈ ಪಳಗಿರಲಿಲ್ಲ. ಪಟ್ಟಣಗಳಲ್ಲಿ ಸಂಗೀತ ಕೇಳಿ ಕೇಳಿಯೇ ಒಬ್ಬನ ಕೈ ನುರಿಯುತ್ತೆ. ಈಗ ನೀವು ಗೋಪಾಲನ ಸಂಗೀತ ಕೇಳಿದರೆ ಅದು ಅವನ ಕೈಯ್ಯಿಂದು ಗುರುತಿಸಲಾರಿರಿ'' ಎಂದರು. "ಏನೋ ಬೆಂಗಳೂರಿನಲ್ಲಿ ಪಿಟೀಲು ಅಭ್ಯಾಸ ಮಾಡಿದ್ದಾನೇನೋ" ಎಂದು ನಾರಣನಪ್ಪನವರು ಮಾತನಾಡದೆ ಸುಮ್ಮನಾದರು. ಅವತಾರಯ್ಯನವರು "ಅವನ ಕೈಗೆ ಬಿದ್ದಿದ್ದ ಏಟೂ ಈಗ ಪೂರ್ಣವಾಗಿ ಗುಣವಾಗಿದೆ" ಎಂದರು. ನಾರಣಪ್ಪನವರಿಗೆ ಮೊದಲು ಆಶ್ಚರ್ಯವಾಗಿದ್ದಂತೆ ಈಗ ಗಾಬರಿಯಾಯಿತು. "ಏಟೆ? ಅವನು ಬರೆಯಲೇ ಇಲ್ಲವಲ್ಲ? ಎಲ್ಲಿ ಏಟು ಬಿತ್ತು" ಎಂದು ಕೇಳಿದರು. ಅವತಾರಯ್ಯನವರು ಮೆಚ್ಚುಕೆಯಿಂದ "ನಿಮಗೆ ಗಾಬರಿಯಾಗುತ್ತೆ ಅಂತ ಬರೆದಿಲ್ಲ. ಹುಡುಗ ವಿವೇಕಿ ಎಂಬುದಕ್ಕೆ ಇದೇ ಗುರುತು. ಸರಿಯಾದ ಔಷಧಿ ಹಾಕಿಸಿಕೊಂಡಿದ್ದಾನೆ, ಎಲ್ಲ ವಾಸಿಯಾಗಿದೆ. ಯೋಚಿಸಬೇಡಿ" ಎಂದರು. ಹುಡುಗ ಹೆಣ್ಣನ್ನು ಒಪ್ಪಿದ್ದಾನೆ ಎಂಬುದು ತಿಳಿದ ಕೂಡಲೇ, ನಾರಣಪ್ಪನವರೂ ಅವರ ಹೆಂಡತಿಯವರೂ ಸಂಬಂಧ ಮಾಡಲು ಸಂತೋಷದಿಂದ ಒಪ್ಪಿದರು. ಹೆಣ್ಣು ಗಂಡು, ಎರಡೂ ಡಿಗ್ರಿ ಪರೀಕ್ಷೆಗೆ ಕಟ್ಟಿದ್ದುದರಿಂದ ಪರೀಕ್ಷೆಯ ಫಲಿತಾಂಶ ತಿಳಿದನಂತರ ಲಗ್ನಕಾಲದಲ್ಲಿ ವಿವಾಹವನ್ನು ನೆರವೇರಿಸಬೇಕೆಂದು ಗೊತ್ತು ಮಾಡಿಕೊಂಡು ಅವತಾರಯ್ಯನವರು ಬೆಂಗಳೂರಿಗೆ ಹಿಂದಿರುಗಿದರು. ನಾರಣಪ್ಪನವರು ಗೋಪಾಲನಿಗೆ "ನಿನ್ನ ಕೈಗೆ ಏಟು ಬಿದ್ದದ್ದು ಕೇಳಿ ತುಂಬ ಗಾಬರಿಯಾಯಿತು. ನೀನು ವಿಷಯ ಬರೆಯಲೇ ಇಲ್ಲ." ಎಂದು ಬರೆದರು. ಗೋಪಾಲನು "ಏಟೂ ಇಲ್ಲ ಏನೂ ಇಲ್ಲ- ಬರೀ ಒಂದು ಬಟ್ಟೆ ಬೆರಳಿಗೆ ಕಟ್ಟಿದ್ದೆ. ಅರ್ಜುನ ಸುಭದ್ರೆಯನ್ನು ಹೊಡೆದುಕೊಂಡು ಹೋಗಲಿಲ್ಲವೇ ? ಕೃಷ್ಣ, ರುಕ್ಮಿಣಿಯನ್ನು ಹಾರಿಸಿಕೊಂಡು ಹೋಗಲಿಲ್ಲವೆ? ರಾವಣ, ಸೀತೆಯನ್ನು ಎತ್ತಿಕೊಂಡು ಹೋಗಲಿಲ್ಲವೆ? ಹಾಗೆಯೇ ಇದೊಂದು ತಂತ್ರ. ಆದರೆ ನಾನು ರಾವಣನಲ್ಲ" ಎಂದು ಬರೆದನು. ನಾರಣಪ್ಪನವರೂ ಅವರ ಹೆಂಡತಿಯವರೂ ಈಗಿನ ಕಾಲದ ಹುಡುಗರು ಏನೇನು ವೇಷ ಹಾಕುತ್ತಾರೆಯೋ? ಎಂದು ನಕ್ಕರು. ಅವರ ಹೆಂಡತಿಯವರಿಗೆ.

ಹಗಲು ಹಾರುವನಾದ. ಇರುಳು
ಬಣಜಿಗನಾದ
ಅರಸರ ಮಗನಾಗಿ ತಿರುಗಿದ ‖ ನನರಾಯ
ನರಸೀಪುರದೋರ ಮಗಳಿಗೆ

ಎಂಬ ಹಳ್ಳಿಯ ತ್ರಿಪದಿ ಜ್ಞಾಪಕಕ್ಕೆ ಬಂತು.

ಪರೀಕ್ಷೆಯ ಫಲಿತಾಂಶ ಬಂದಾಗ, ರಾತ್ರಿಗೂ ಗೋಪಾಲನಿಗೂ ಇಬ್ಬರಿಗೂ ತೇರ್ಗಡೆಯಾಗಿದ್ದಿತು. ಅವತಾರಯ್ಯನವರು ಮದುವೆಯ ಲಗ್ನವನ್ನು ನಿಷ್ಕರ್ಷಿಸಿ, ನಾರಣಪ್ಪನವರ ಒಪ್ಪಿಗೆ ಪಡೆದು ಲಗ್ನಕ್ಕೆ ಏರ್ಪಾಡು ಮಾಡಿದರು. ಲಗ್ನಪತ್ರಿಕೆಯಲ್ಲಿ "ರಾತ್ರಿ B. A. (Music) ಮತ್ತು ಗೋಪಾಲ (Violonist) ಎಂದು ಅಚ್ಚು ಮಾಡಿಸಿದ್ದರು ಮದುವೆ, ಅವತಾರಯ್ಯನವರ ಘನತೆಗೆ ಅರ್ಹವಾಗಿ ವೈಭವದಿಂದಲೇ ನೆರವೇರಿತು. 'ನನ್ನ ಹಟದಂತೆ, ನಾಲ್ಕು ಹೆಣ್ಣುಗಳನ್ನೂ ಸಂಗೀತಗಾರರನ್ನಾಗಿ ಮಾಡಿ ಅವರನ್ನೆಲ್ಲ ಸಂಗೀತಗಾರರಿಗೇ ಮದುವೆ ಮಾಡಿದೆ' ಎಂದು "ರಿಸೆಪ್ಷನ್" ಸಂಜೆ ಬಂದವರಿಗೆಲ್ಲ ಹೇಳುವುದನ್ನು ಅವತಾರಯ್ಯನವರು ಮರೆಯಲಿಲ್ಲ. ಹಸೆಯ ಮಣೆಯ ಮೇಲೆ ಗಂಡು ಹೆಣ್ಣು ಕುಳಿತಿದ್ದಾಗ ನೆಂಟರೊಬ್ಬರು "ವಧು ಹಾಡಲಿ ವರ ಪಿಟೀಲು ಬಾರಿಸಲಿ" ಎಂದರು. "ಆಗಲಿ ಆಗಲಿ" ಎಂದು ಎಲ್ಲರೂ ಕೂಗಿದರು. ಗೋಪಾಲ ದೈನ್ಯದಿಂದ ಕಿಟ್ಟುವಿನ ಕಡೆ ನೋಡಿದನು. ಕಿಟ್ಟುವು ನಗುತ್ತಾ ಎಡಗೈ ಬೆರಳುಗಳಿಗೆ ತನ್ನ ಕರವಸ್ತ್ರವನ್ನು ಸುತ್ತಿಕೊಂಡನು ಗೋಪಾಲನು ಮುಗುಳು ನಗೆ ನಗುತ್ತಾ "ಈಗ ಅದು ನಡೆಯುವುದಿಲ್ಲ" ಎಂದು ಸಂಜ್ಞೆ ಮಾಡಿದನು. ಕಿಟ್ಟುವು "ಅಯ್ಯೋ ನಿನ್ನ ಬಾಳ" ಎಂದು ಹೇಳುವಂತೆ ಗೋಪಾಲನ ಮುಖವನ್ನು ದೂರದಿಂದಲೇ ಕೈಯಿಂದ ತಿವಿದಂತೆ ಮಾಡಿ, ನೆಂಟರಿಗೆ ಗಟ್ಟಿಯಾಗಿ "ಧಾರೆಯಲ್ಲಿ ಏನಿದ್ದರೂ ವಧುವಿನ ಪ್ರತಾಪ ದೀಪಾವಳಿಯಲ್ಲಿ ನಮ್ಮ ಕೈ ತೋರಿಸುತ್ತೇವೆ" ಎಂದನು. ಅವರೊಂದಿಗೆ ಗೋಪಾಲನಿಗೆ ಬಂದಿದ್ದ ಅಪಾಯ ಮುಕ್ತಾಯವಾಯಿತು.

ಮದುವೆಯಾದ ಮೇಲೆ ಗೋಪಾಲ ಮೂರು ನಾಲ್ಕು ತಿಂಗಳು. ಮದರಾಸು ಪ್ರಾಂತದ ಕೆಲವು ಕಾರ್ಖಾನೆಗಳಲ್ಲಿ ಅನುಭವ ಪಡೆದು ಕೆಲಸಕ್ಕೆ ಸೇರುವುದಕ್ಕೆ ಮುಂಚೆ ಮಲ್ಲಿಗೆಹಳ್ಳಿಗೆ ಬಂದನು. ಅವನು ಆ ನಡುವೆ ಅನೇಕಸಲ ಬೆಂಗಳೂರಿಗೆ ಹೋದರೂ, ಮಾವನ ಮನೆಯಲ್ಲಿ ಇಳಿದುಕೊಂಡರೂ ಯಾವಾಗಲೂ ಒಂದು ದಿನದ ಮೇಲೆ ಅಲ್ಲಿ ಇರುತ್ತಿರಲಿಲ್ಲವಾಗಿ ಅವನ ಐಬು ಯಾರಿಗೂ ತಿಳಿಯಲಿಲ್ಲ. ದೀಪಾವಳಿಗೆ ಬೆಂಗಳೂರಿಗೆ ಹೋಗಲು ಅವನು ಅತ್ಯಂತ ಆತುರನಾಗಿದ್ದನು. ನಿರೀಕ್ಷಿಸಿದಂತೆ ನಾರಣಪ್ಪನವರಿಗೆ ಅವತಾರಯ್ಯನವರ ಆಹ್ವಾನವೂ ಬಂತು. ಜೊತೆಯಲ್ಲಿ ತನ್ನ ವಿಳಾಸಕ್ಕೆ ಬಂದಿದ್ದ ಮತ್ತೊಂದು ಕಾಗದವನ್ನು ನೋಡಿ ಗೋಪಾಲನಿಗೆ ಗಾಬರಿಯಾಯಿತು ಅದೊಂದು ಅಚ್ಚಾದ ಆಹ್ವಾನಪ್ರತಿಕೆ "ದೀಪಾವಳಿಯದಿನ ಸಾಯಂಕಾಲ ನಾಲ್ಕು ಗಂಟೆಗೆ ಶ್ರೀಮತಿ ರಾತ್ರಿಯ ಹಾಡುಗಾರಿಕೆ, ಪಕ್ಕವಾದ್ಯ ಶ್ರೀಮಾನ್ ಗೋಪಾಲ್" ಎಂದು. ಆಹ್ವಾನಪತ್ರಿಕೆ ಅವತಾರಯ್ಯನವರ ಹೆಸರಿನಲ್ಲಿದ್ದಿತು ಅವತಾರಯ್ಯನವರು ಜತೆಯಲ್ಲಿ ಬರೆದಿದ್ದ ಕಾಗದದಲ್ಲಿ "ಸ್ನೇಹಿತರೆಲ್ಲ ಅಳಿಯನ ಪಿಟೀಲನ್ನು ಕೇಳಬೇಕೆಂದು ತುಂಬ ಅಪೇಕ್ಷೆಪಟ್ಟರು. ಅವರೆಲ್ಲ ನನಗೆ ಹಿಂದಲಿಂದಲೂ ಮಿತ್ರರಾಗಿರುವ ದೊಡ್ಡ ಮನುಷ್ಯರು. ಅವರ ಕೋರಿಕೆಯನ್ನು ಮನ್ನಿಸದಿರಲು ಸಾಧ್ಯವಿಲ್ಲ. ರಾತ್ರಿಯೂ ಒಪ್ಪಿದ್ದಾಳೆ. ನಿಮಗೆ ಒಳ್ಳೆಯ ಪ್ರಚಾರವೂ ಸಹ ಸಿಕ್ಕುತ್ತೆ, ಸುಮಾರು ನೂರು ಜನ (ಸ್ತ್ರೀ ಪುರುಷರು) ಬರುತ್ತಾರೆ. ಅವರೆಲ್ಲ ಸಂಗೀತಗಾರರು ಅಥವ ಸಂಗೀತದಲ್ಲಿ ಪರಿಶ್ರಮವುಳ್ಳವರು. ಇವರು ಕೇಳುವುದರಿಂದ ನಿಮ್ಮ ವಿದ್ಯಕ್ಕೆ ಸರಿಯಾದ ಮೆಚ್ಚುಗೆಯೂ ಪ್ರಚಾರವೂ ಸಿಕ್ಕುತ್ತದೆ" ಎಂದು ಬರೆದ-

ದ್ದರು. ಆ ಕಾಗದವನ್ನು ನೋಡಿ ದೀಪಾವಳಿಗೆ ಹೋಗುವ ಆನಂದ, ಗೋಪಾಲನಿಗೆ ಬಹು ಮಟ್ಟಿಗೆ ಕಡಿಮೆಯಾಗಿ ಹೋಯಿತು. ಆದರೆ ಹೋಗದೆ ಇರುವುದು, ತನ್ನಿಂದ ಖಂಡಿತ ಸಾಧ್ಯವಿಲ್ಲವೆಂಬುದು ಅವನಿಗೆ ಗೊತ್ತಿತ್ತು. ಅವನು ರಾತ್ರಿಗಾಗಿ ಹುಚ್ಚನಾಗಿದ್ದನು. ಅವಳನ್ನು ನೋಡದೆ ಬದುಕಿರುವುದೇ ಸಾಧ್ಯವಿಲ್ಲವೆಂದು ಅವನು ಪ್ರಾಮಾಣಿಕವಾಗಿಯೇ ನಂಬಿದನು. ಮಾನ ಹೋದರೂ ಸರಿ, ಏಟುಬಿದ್ದರು ಸರಿ, ಪ್ರಾಣ ಹೋದರೂ ಸರಿ; ರಾತ್ರಿಯು ಕಣ್ಣಿಗೆ ಬಿದ್ದರೆ ಸಾಕು ಎಂಬುದು ಅವನ ಹಂಬಲವಾಗಿತ್ತು. "ದೀಪಾವಳಿಗೆ ಹೋಗಲು ಬಾಯಿ ಬಿಟ್ಟು ಕಾದಿರುವವನಿಗೆ ಈ ಗುದ್ದು ಯಾಕೆ?" ಎಂದು ಅವನು ಮೈ ಪರಚಿಕೊಂಡನು. ಟಪಾಲಿನಲ್ಲಿ ತನ್ನ ಹೆಸರಿಗೆ ಬಂದಿದ್ದ ಇನ್ನೊಂದು ಕವರಿನ ಮೇಲಿನ ಹಸ್ತಾಕ್ಷರವನ್ನು ನೋಡಿ, ಅವನು ಆತುರದಿಂದ ಅದನ್ನು ಎತ್ತಿಕೊಂಡನು. ಅದು ಕೃಷ್ಣನ ಕಾಗದ. ಕೃಷ್ಣನೂ ಬೆಂಗಳೂರಿನಿಂದಲೇ ಬರೆದಿದ್ದನು. ಅವನ ಕಾಗದದ ಸಾರಾಂಶ ಹೀಗಿತ್ತು: "ನಿನ್ನೆ ನಿನ್ನ ಮಾವಂದಿರು ಗಾಯನಸಮಾಜದ ಆವರಣದಲ್ಲಿ ಸಿಕ್ಕಿದ್ದರು. ನನಗೆ ಒಂದು ಆಹ್ವಾನ ಪತ್ರಿಕೆ ಕೊಟ್ಟರು. ನಿನ್ನನ್ನು ಶೂಲಕ್ಕೆ ಏರಿಸಿದ್ದಾರೆ! ಎಲ್ಲ ಸಂಗೀತಗಾರರನ್ನೂ ಆಹ್ವಾನಿಸಿದ್ದಾರೆ. ನಿನಗೂ ಆಹ್ವಾನಪತ್ರಿಕೆಯನ್ನು ನಿನ್ನೆಯೇ ಕಳುಹಿಸಿದ್ದಾರಂತೆ. ನಿನ್ನನ್ನು ರಕ್ಷಿಸಬೇಕೆಂದು ನಾನು "ಈಚೆಗೆ ಗೋಪಾಲನಿಗೆ ಪಿಟೀಲನ್ನು ಕಂಡರೇ ಯಾಕೋ ಆಗುವುದಿಲ್ಲ. ಅವನನ್ನು ಕೇಳಿ ಈ ಕಛೇರಿ ನೀವು ಏರ್ಪಾಟ ಮಾಡಬೇಕಾಗಿತ್ತು" ಎಂದೆ. ಅವರು "ನಿನಗೆ ಗೊತ್ತಿಲ್ಲ. ಅವನು ನುಡಿಸಿರುವ ಟೇಪ್‌ರಿಕಾರ್ಡನ್ನು ನೀನು ಕೇಳಿಲ್ಲ. ಕೇಳಿದರೂ ಅದರ ಸ್ವಾರಸ್ಯ ನಿನಗೆ ಗೊತ್ತಾಗಬೇಕಲ್ಲ. ಕಛೇರಿ ಮಾಡಿ ಎಂದು ಹೇಳಿದರೆ ಸಂಗೀತಗಾರರಿಗೆ ಅದೇ ಔತಣ. ಅಳಿಯನನ್ನು ಕೇಳಬೇಕಾದದ್ದೇನಿದೆ. ನೀನೇ ಮದುವೆಯಲ್ಲಿ ಹೇಳಿರಲಿಲ್ಲವೆ? ಅಳಿಯನ ಪರಾಕ್ರಮ ದೀಪಾವಳಿಯಲ್ಲಿ ಎಂದು" ಎಂದರು. ನಿನ್ನ ಪಿಟೀಲಿನ ಶಕ್ತಿ, ನನಗೆ ಗೊತ್ತಿಲ್ಲ? ಆದುದರಿಂದ ನೀನು ಬೇಜಾರುಪಟ್ಟುಕೊಳ್ಳಬೇಡ. ನೀನು ಖಂಡಿತ ಇಲ್ಲಿ ಬಂದೇ ಬರುತ್ತೀಯ ಎಂಬುದಂತೂ ನನಗೆ ಗೊತ್ತು. ನಿನ್ನ ಹೃದಯವನ್ನು ಸೆರೆಹಿಡಿದಿರುವವಳು ಇಲ್ಲಿರುವಾಗ ಅವತಾರಯ್ಯನವರ ಇಂತಹ ನೂರು ಆಹ್ವಾನಪತ್ರಿಕೆಗಳು ಬಂದರೂ, ಮುಳ್ಳುಕಡಾವಿನ ಮೇಲೆ ಬೇಕಾದರೂ ನೀನು ನಡೆದುಕೊಂಡು ಬರುತ್ತಿ. ಬಂದ ಮೇಲೆ ಏನು ಮೋಸ ಮಾಡಬೇಕೋ ಯೋಚಿಸೋಣ ಬಾ. ಹಿಂದೆ ಬೆರಳುಗಳಿಗೆ ಬಟ್ಟೆ ಕಟ್ಟಿ ತಪ್ಪಿಸಿಕೊಂಡವು. ಈಗ ನಿನ್ನ ಒಂದು ತೋಳನ್ನೇ, ಇಲ್ಲದಿದ್ದರೆ ಎರಡು ತೋಳನ್ನೇ ಕತ್ತರಿಸಿ ಹಾಕಿಯಾದರೂ ನಿನ್ನನ್ನು ಬಚಾಯಿಸುತ್ತೇನೆ. ಹೆದರಬೇಡ ಗೆಳೆಯ ಬಾ" ಎಂದು ಬರೆದಿದ್ದನು. ನಿರುತ್ಸಾಹಿಯಾಗಿದ್ದ ಗೋಪಾಲನಿಗೆ, ಯಾವಾಗಲೂ ವಿನೋದಪ್ರಿಯನೂ ಉಪಾಯಚತುರನೂ ಆದ ಕಿಟ್ಟುವಿನ ಕಾಗದವನ್ನು ನೋಡಿ ಮನಸ್ಸು ಹಗುರವಾಯಿತು. ದೀಪಾವಳಿಯ ಮೊದಲ ದಿನ ಪ್ರಾತಃಕಾಲ, ನಾರಣಪ್ಪನವರು ತಮ್ಮ ಹೆಂಡತಿ ಮತ್ತೂ ಗೋಪಾಲನೊಂದಿಗೆ ಬೆಂಗಳೂರಿನ ಬೀಗರ ಮನೆಯಲ್ಲಿ ಇಳಿದರು. ಸಂಗೀತಕಛೇರಿಯ ಕತ್ತಿ ತಲೆಯ ಮೇಲೆ ಆಡುತ್ತಿದ್ದರೂ ರಾತ್ರಿಯನ್ನು ನೋಡಿದ ಕೂಡಲೇ ಗೋಪಾಲನ ಸಮಸ್ತ ಆಯಾಸವೂ ಪರಿಹಾರವಾಯಿತು. ಬೇಸಗೆಯ ಸೆಕೆಯ ಬೇಗೆಯಲ್ಲಿ, ಬೆಳದಿಂಗಳು ತನ್ನನ್ನು ತಬ್ಬಿದಂತೆ ಅವನ ಸಮಸ್ತ ಅವಯವಗಳೂ ಕಣ್ಣುಗಳೂ ಅಂತಃಕರಣವೂ ತಂಪಾದ ಅಮೃತದಲ್ಲಿ ಮಿಂದು ತೃಪ್ತವಾದವು. ರಾತ್ರಿಯನ್ನು ಹೊಡೆಯಲು ತಾನು ಮಾಡಿದ ತಕ್ಕುವಿದ್ಯವನ್ನು ನೆನೆದು ಅವನಿಗೇ ನಗು ಬಂದಿತು. ಆ ವೇಳೆಗೆ ಕಿಟ್ಟು ಅಲ್ಲಿ ಬಂದು ಕಾದುಕೊಂಡಿದ್ದನು. ಅವತಾರಯ್ಯನವರಿಗೆ ಮಾರನೇ ದಿನದ ಕಛೇರಿಯ ಸಂಭ್ರಮದ್ದೇ ಯೋಚನೆಯಾಗಿದ್ದಿತು. ಗೋಪಾಲ, ಪಿಟೀಲನ್ನು ತಂದಿಲ್ಲದಿರುವುದು ಅವರಿಗೆ ಕಂಡಿತು. ಅವರು ಅಸಮಾಧಾನದ ಧ್ವನಿಯಲ್ಲಿ "ಅಳಿಯಂದಿರೆ ಎಲ್ಲಿ ನಿಮ್ಮ ಪಿಟೀಲು?" ಎಂದರು. ಗೋಪಾಲನು ಕಿಟ್ಟುವಿನ ಮುಖವನ್ನು ನೋಡಿದನು. ಕಿಟ್ಟುವು "ಇದೆ ಇದೆ ನಾಳೆಯ ವೇಳೆಗೆ ಬರುತ್ತೆ" ಎಂದನು. ಅವತಾರಯ್ಯನವರು "ಸರಿ ಹಾಗಾದರೆ" ಎಂದು ಸಮಾಧಾನಗೊಂಡರೂ "ಆ ಪಿಟೀಲು ಬರದಿದ್ದರೂ ಈ ಮನೆಯಲ್ಲಿ ಪಿಟೀಲು ವೀಣೆ ತಂಬೂರಿಗಳಿಗೆ ಕೊರತೆಯಿಲ್ಲ" ಎಂದು ಹೇಳಿ ಮುಗಿಸಿದರು.

ಅಭ್ಯಂಜನ, ಊಟ ಔತಣ ಸೊಗಸಾದ ಭಕ್ಷ್ಯಗಳು; ಶುದ್ಧವಾದ ಎಮ್ಮೆಯ ಹಾಲಿನ ಘಮಘಮಿಸುವ ಬಿಸಿಬಿಸಿ ಕಾಫಿ ಉಡುಗೊರೆ ಎಲ್ಲವೂ ಗಂಡಿನ ಕಡೆಯವರಿಗೆ ಸರ್ವಸಮ್ಮತವೂ ಸರ್ವಪ್ರಿಯವೂ ಆದುವು. ಗೋಪಾಲನಿಗಾದರೂ ಹೆಂಡತಿಯ ದರ್ಶನವೇ ಕಣ್ಣಿಗೆ ಹಬ್ಬ, ಅವಳ ಮಾತೇ ಕಿವಿಗೆ ಗಾನ, ಅವಳು ತಂದುಕೊಡುವ ದಿನಸುಗಳೇ ನಾಲಗೆಗೆ ಅಮೃತ. ಪ್ರೇಮದ ಗುಂಗಿನಲ್ಲಿ ಅವನು ಪುಷ್ಪಮಕರಂದ ಪಾನದಿಂದ ಮತ್ತನಾದ ಭೃಂಗದಂತೆ ತನ್ನನ್ನು ತಾನು ಮರೆತು ರಾತ್ರಿಯಲ್ಲಿಯೇ ನೆಟ್ಟಕಣ್ಣು ಮನಸು ಉಳ್ಳವನಾಗಿ ಒಂದು ದಿವ್ಯ ಲೋಕದಲ್ಲಿ ವಿಹರಿಸಿದನು. ದೀಪಾವಳಿಯ ಮೊದಲ ದಿನ ಒಂದು ಕ್ಷಣದಂತೆ ಕಳೆದು ಹೋಯಿತು.

ಮರುದಿನ ಬೆಳಗಾಯಿತು. ಹಬ್ಬದ ಊಟ ಮಧ್ಯಾಹ್ನ, "ಅವ್ವಲ್ ಲವಾಜಮೆ"ಯಲ್ಲಿ ನಡೆಯಿತು. ನಾಲ್ಕು ಗಂಟೆಯ ಕಛೇರಿಗೆ ಎಲ್ಲರೂ ಸಿದ್ಧರಾಗಬೇಕಾಗಿದ್ದುದರಿಂದ. ಅವತಾರಯ್ಯನವರು ಎರಡು ಗಂಟೆಯ ವೇಳೆಗೆ ಎಲ್ಲರಿಗೂ ಊಟಮುಗಿಯುವಂತೆ ಏರ್ಪಡಿಸಿದ್ದರು. ಸಂಗೀತದ ಏರ್ಪಾಡು ಸುಮಾರು ನೂರು ಜನ ಹಿಡಿಯುವಂತಿದ್ದ ಮಹಡಿಯ ಹಾಲ್‌ನಲ್ಲಿ; ಆಡಂಬರ ಪ್ರಿಯರೂ ಸ್ವಾಭಿಮಾನಿಗಳೂ ಆದ ಅವತಾರಯ್ಯನವರು, ತಮ್ಮ ಮನೆಯಲ್ಲಿದ್ದ ವೀಣೆಗಳು ಪಿಟೀಲುಗಳು ತಬಲ ತಂಬೂರಿ ಎಲ್ಲವನ್ನೂ, ವ್ಯಾಪಾರದ ಅಂಗಡಿ, ನರ್ತನಶಾಲೆ ಅಥವಾ ಸರಸ್ವತೀ ಮಂದಿರದಲ್ಲಿ ಇಡುವಂತೆ ಇಟ್ಟಿದ್ದರು. ಜರ್ಬು ಹೆಚ್ಚಾಗಿ ತೋರಲು ವೀಣೆ ಪಿಟೀಲು ತಂಬೂರಿ ತಬಲ ಎಲ್ಲಕ್ಕೂ ದೊಡ್ಡ ದೊಡ್ಡ ಹೂವಿನ ಹಾರಗಳನ್ನು

ಹಾಕಿದ್ದರು. ಗಳಿಗೆಗೊಂದು ಸಲ ಗೋಪಾಲನ ಕಡೆ ತಿರುಗಿ "ಗಾನವಿಶಾರದ ಸುಬ್ರಾಯ ಬರ್ತಾನೆ. ಪಿಟೀಲು ಪ್ರವೀಣ ಪರ್ವತಪ್ಪನನ್ನು ನೋಡುವಿಯಂತೆ. ವೀಣಾಭವಾನಿ ತಪ್ಪದೇ ಬರುತ್ತಾಳೆ. ಮೃದಂಗದ ಚಂದು ಇವತ್ತು ಊರಲ್ಲಿಯೇ ಇದ್ದಾನೆ. ಹಾಡಬೇಕಾದ ಕೀರ್ತನೆಗಳನ್ನೆಲ್ಲ ರಾತ್ರಿಗೆ ಹೇಳಿದ್ದೇನೆ. ಆಲಾಪನೆ ರಾಗ ತಾನ ಪಲ್ಲವಿಗಳಲ್ಲಿ ನಿನ್ನ ಚತುರತೆಯನ್ನೆಲ್ಲ ತೋರಿಸಬಹುದು" ಎಂದು ಹೇಳುತ್ತಿದ್ದರು. ಸೊಗಸಾಗಿ ಒಂದು ತುತ್ತು ಹೆಚ್ಚು ಎನ್ನುವಂತೆಯೇ ಊಟಮಾಡಿ ಹೊಟ್ಟೆಸವರಿಕೊಂಡು ವಿಶ್ರಾಂತಿಗಾಗಿ ಹೊರಳಾಡುತ್ತಾ ಹಗಲ ಸುಖಸ್ವಪ್ನದಲ್ಲಿ ಹೆಂಡತಿಯನ್ನು ನೆನೆಯುತ್ತಿದ್ದ ಗೋಪಾಲನಿಗೆ, ಅವತಾರಯ್ಯನವರ ಮಾತುಗಳನ್ನು ಕೇಳಿ, ಬೆನ್ನಿನ ಮೇಲೆ ಚಾವಟಿಯಿಂದ ಹೊಡೆದಂತೆ ಆಗುತ್ತಿದ್ದಿತು. ಕಿಟ್ಟುವು ಬರೆದಿದ್ದಂತೆ "ಇನ್ನು ಒಂದುಗಳಿಗೆಯೊಳಗೆ ನನ್ನನ್ನು ಶೂಲಕ್ಕೆ ಏರಿಸುತ್ತಾರಲ್ಲ ಏನು ಮಾಡಲಿ?" ಎಂದು ಅವನು ಸುತ್ತೇ ನೋಡಿದನು. ಕೃಷ್ಣನು ಎಲ್ಲಿಯೂ ಕಣ್ಣಿಗೆ ಬೀಳಲಿಲ್ಲ. ಊಟವಾದ ಕೂಡಲೇ ಅವನು ಪಲಾಯನವಾಗಿದ್ದನು. ಕೃಷ್ಣನಿಗೆ ಯಾವ ಉಪಾಯವೂ ಹೊಳೆಯಲಿಲ್ಲ ಎಂಬುದು ಗೋಪಾಲನಿಗೆ ಸ್ಪಷ್ಟವಾಯಿತು. ಈ ಪ್ರಶ್ನೆಯನ್ನು ಹೇಗೆ ತೀರ್ಮಾನಿಸುವದೆಂದು ಅರಿಯಲಾರದ ಅವನು ಕೃಷ್ಣನ ಕೊಠಡಿಗೆ ಹೋಗಿ ನೋಡಿದಾಗ ಅವನು ಅಲ್ಲಿ ಇರಲಿಲ್ಲ.

ಗೋಪಾಲನಿಗೆ ಯಾವ ಉಪಾಯವೂ ಹೊಳೆಯಲಿಲ್ಲ. ಮನೆಗೇ ಹಿಂದಿರುಗಿ ಹೋಗದೆ ಇದ್ದುಬಿಡೋಣವೆ? ಎಂದು ಅವನು ಯೋಚಿಸಿದನು. "ಹೀಗೆ ಮಾಡಿದರೆ ಮಾನ ಹೋಗುತ್ತೆ. ತಾಯಿ ತಂದೆಯರ ಮಾನವೂ ಹೋಗುತ್ತೆ. ಅದು ಸರಿಯಾದ ದಾರಿಯಲ್ಲ" ಎಂದು ತೋರಿತು. ಹೆಂಡತಿಗೆ ಶರಣಾಗತನಾಗುವುದೊಂದೇ ದಾರಿ ಎಂದುಕೊಂಡನು. ಆದರೆ ಹೇಳಬೇಕಾದರೂ ಅವಳನ್ನು ತನ್ನ ಕೊಠಡಿಗೆ ಕರೆಯಬೇಕು. ಅವಳು ಎಲ್ಲರ ಜತೆಯಲ್ಲಿಯೂ— ತನ್ನ ತಾಯಿ ಅತ್ತೆ ಅಕ್ಕಂದಿರ ಜತೆಯಲ್ಲಿರುವಾಗ ಕರೆಯುವುದು ಹೇಗೆ? ಎಂದು ಗೋಪಾಲನಿಗೆ ಯೋಚನೆಗಿಟ್ಟುಕೊಂಡಿತು. ಆ ವೇಳೆಗೆ ಗೋಪಾಲನ ಭಾವಮೈದುನ್ನ ಹದಿಮೂರು ವರುಷದ ಪೋರ, ಕೇಶವ, ಪೆಚ್ಚು ಮುಖಹಾಕಿಕೊಂಡು ಬರುತ್ತಿರುವುದು ಗೋಪಾಲನಿಗೆ ಕಂಡಿತು. ಗೋಪಾಲನನ್ನು ನೋಡಿದ ಕೂಡಲೇ ಕೇಶವನು "ಭಾವಾ ನನಗೆ ನಿನ್ನ ದೀಪಾವಳಿ ಉಡುಗರೆ ಏನು?" ಎಂದು ಕೇಳಿದನು. ಗೋಪಾಲನು "ನಿನಗೆ ಏನು ಬೇಕು.?" ಎಂದು ಕೇಳಿದನು. ಕೇಶವನು ತಿರಸ್ಕಾರದಿಂದ "ಬೇಕಾದುದನ್ನು ಅಪ್ಪನೇ ತಂದುಕೊಡಲಿಲ್ಲ. ನೀನೆಲ್ಲಿ ತೆಗೆದುಕೊಡುವೆ?" ಎಂದನು. ಗೋಪಾಲನು "ನಾನು ನಿನ್ನ ಭಾವನಲ್ಲವೆ? ತೆಗೆದು ಕೊಡುತ್ತೇನೆ. ಏನು ಬೇಕು ಹೇಳು" ಎಂದನು. ಕೇಶವನು "ಅಟಂಬಾಂಬು ಪಿಸ್ತೂಲು. ಅದರಲ್ಲಿ ಆನೆ ಪಟಾಕಿ ಹಾಕಿ ಹಾರಿಸಿದರೆ, ನಿಜವಾದ ಬಂದೂಕು ಹೊಡೆದಂತೆ ಶಬ್ದವಾಗುತ್ತೆ. ಅದಕ್ಕೆ ಹನ್ನೆರಡು ರೂಪಾಯಿ ಹೇಳುತ್ತಾನೆ. ಅಪ್ಪ 'ಇವತ್ತು ಮನೆಯಲ್ಲಿ ಸಂಗೀತ ಕಛೇರಿ ಗಲಾಟೆ. ನಾಳೆ ನೋಡೋಣ' ಎಂದು ಬಿಟ್ಟರು. ನನ್ನ ಸ್ನೇಹಿತರೆಲ್ಲ ಕೊಂಡುಕೊಂಡಿದ್ದಾರೆ ನನಗೆ ಮಾತ್ರ ಇಲ್ಲ" ಎಂದನು. ಗೋಪಾಲನಿಗೆ ಇದ್ದಕ್ಕಿದ್ದಂತೆ ಒಂದು ಯೋಚನೆ ಹೊಳೆಯಿತು ಅವನು "ನಾನು ಈಗಲೇ ನಿನಗೆ ಪಿಸ್ತೂಲು ತೆಗೆದುಕೊಡುತ್ತೇನೆ. ಆದರೆ ನೀನೂ ನನಗೊಂದು ಉಪಕಾರ ಮಾಡಬೇಕು" ಎಂದನು. ಕೇಶವನು ಕುಣಿಯುತ್ತಾ "ಥ್ಯಾಂಕ್ಸ್ ಭಾವಾ. ಈಗಲೇ ಉಪಕಾರ ಮಾಡಿಬಿಡುತ್ತೇನೆ" ಎಂದನು. ಗೋಪಾಲನು "ಹಾಗಾದರೆ ಮನೆಗೆ ಹೋಗೋಣ ನಡೆ" ಎಂದನು. ಆತುರದಲ್ಲಿ ಕೇಶವ, ಮುಂದೆ ಮುಂದೆ ಓಡುತ್ತಿದ್ದನು. ಅವನ ಜೊತೆ ಹೋಗುವುದೇ ಗೋಪಾಲನಿಗೆ ಕಷ್ಟವಾಯಿತು, ಮನೆಯನ್ನು ತಲಪಿದಕೂಡಲೇ ಗೋಪಾಲ; ಹನ್ನೆರಡು ರೂಪಾಯಿಗಳನ್ನು ಕೈಯಲ್ಲಿ ಹಿಡಿದುಕೊಂಡು "ನೋಡು, ನೀನು ನಿಮ್ಮಕ್ಕನ ಬಳಿ ಹೋಗಿ, ಕೀರ್ತನೆಗಳ ವಿಷಯ ಚರ್ಚಿಸಲು ಭಾವ ಕರೆಯುತ್ತಾರೆ, ಎಂದು ಹೇಳಿ ಕರೆದುಕೊಂಡು ಬಾ. ಗಟ್ಟಿಯಾಗಿ ಕೂಗಬೇಡ, ಮೆತ್ತಗೆ ಹೇಳು. ಅವಳು ಬಂದ ಕೂಡಲೆ ಈ ಹನ್ನೆರಡು ರೂಪಾಯಿ ನಿನಗೆ" ಎಂದನು. ಕೇಶವ ಒಂದೇ ದಾಡಿಗೆ ಓಡಿದನು. ಸ್ವಲ್ಪ ಹೊತ್ತಿನೊಳಗಾಗಿ ರಾತ್ರಿಯನ್ನು ಕರೆದುಕೊಂಡು ಗೋಪಾಲನ ಕೊಠಡಿಗೆ ಬಂದನು, ಗೋಪಾಲನ ಕೈಯಿನ ಹಣ ಅವನ ಕೈಗೆ ಹೋಯಿತು. ಅವನು ಒಂದು ಗಳಿಗೆ ಬಾಗಿಲಿನಲ್ಲಿ ನಿಂತಿದ್ದು, ಗೋಪಾಲ ರಾತ್ರಿಗೆ ಏನೋ ಹೇಳಿದುದನ್ನು ಕೇಳಿ ನಗುತ್ತಾ ಅಂಗಡಿಯ ಕಡೆಗೆ ಪರಾರಿಯಾದನು.

ಗೋಪಾಲ, ತನ್ನ ಇಷ್ಟದೇವತೆಯ ಎದುರಿಗೆ ಏನು ಹೇಳಿದನೋ, ಏನು ಮಾಡಿದನೋ, ತನ್ನನ್ನೇ ಬಲಿಕೊಟ್ಟುಕೊಳ್ಳುವುದಕ್ಕೆ ಹೋದನೋ, ಅವರವರಿಗೇ ಗೊತ್ತು, ದೇವರಿಗೇ ಗೊತ್ತು. ನಾಲ್ಕು ಗಂಟೆಗೆ ಎರಡು ನಿಮಿಷವಿರುವಾಗ ಎಲ್ಲ ಆಹ್ವಾನಿತರೂ ಬಂದು ಸೇರಿದರು. ಅವರಿಗೆಲ್ಲ ಸೊಗಸಾದ ಕಾಫೀ ಸಮಾರಾಧನೆಯಾಯಿತು. ನಾರಣಪ್ಪನವರೂ ಅವರ ಹೆಂಡತಿಯವರೂ ಬಂದು ವೇದಿಕೆಯ ಒಂದು ಪಕ್ಕದಲ್ಲಿ ಕುಳಿತರು. ಇನ್ನೊಂದು ಪಕ್ಕದಲ್ಲಿ ಅವತಾರಯ್ಯನವರ ಮನೆಯವರೆಲ್ಲ ಬಂದು ಕುಳಿತರು. ಮಗಳು ಹಾಡಿ ಅಳಿಯ ಪಿಟೀಲು ಬಾರಿಸುತ್ತಿರುವಾಗ ಫೋಟೊ ತೆಗಿಸಬೇಕೆಂದು ಅವತಾರಯ್ಯನವರು ಕರೆಸಿದ್ದ ಫೋಟೊಗ್ರಾಫರು ತನ್ನ ಉಪಕರಣಗಳೊಂದಿಗೆ ಸಿದ್ಧನಾಗಿದ್ದನು. ಗೋಪಾಲ ಬಂದು ಧೈರ್ಯವಾಗಿ ಪಿಟೀಲಿನ ಮುಂದೆ ಕುಳಿತನು. ಅವನು ಸಂಗೀತಗಾರರಂತೆ ರೇಶಿಮೆಯ ಶರಟು, ಜರಿಯ ಶಲ್ಯ ಎಲ್ಲರಿಗೂ ಕಾಣುವಂತೆ ಕೈಗಡಿಯಾರ, ಘಮಘಮಿಸುವ ಸುಗಂಧಗಳನ್ನು ಧರಿಸಿ, ಅನೇಕ ಕಛೇರಿಗಳಲ್ಲಿ ಕಚಾಯಿಸಿದ ಆತ್ಮಪ್ರತ್ಯಯವುಳ್ಳ ಸಂಗೀತಗಾರನಂತೆ ಗೆಲುವಾಗಿದ್ದನು.





" ಹಾಂ. ತಾತ, ಹೇಗಾಯಿತು. ಎಲೆ ಅಡಿಕೆ ಗುದ್ದಿದರೆ ಪಟಾಕಿ ಹಾರಿತಲ್ಲೊ ''.

ಆಹ್ವಾನಿತರ ಮಧ್ಯದಲ್ಲಿ ಕುಳಿತಿದ್ದ ಕಿಟ್ಟುವಿನ ಮುಖ, ಅವನಿಗೆ ಕಾಣಿಸಿತು. ಅವರಿಬ್ಬರಿಗೂ ಕಣ್ಣು ಸನ್ನೆಯಿಂದಲೇ ಮಾತುಗಳಾದವು.

ನಾಲ್ಕುಕಾಲು ಗಂಟೆಯಾದರೂ ರಾತ್ರಿಯು ಇನ್ನೂ ಬರಲಿಲ್ಲ ಹಾಲ್‌ನಲ್ಲಿ ಬಂದು ಕುಳಿ-ತಿದ್ದ ಅವಳ ತಾಯಿ, ಅವಳು ಯಾಕೆ ಬರಲಿಲ್ಲವೆಂದು ನೋಡಲು ಮಹಡಿ ಇಳಿದುಹೋದರು. ನಾಲ್ಕುವರೆ ಗಂಟೆಯಾದರೂ ಅವರೂ ಮತ್ತೆ ಬರಲಿಲ್ಲ. ಆಗ ಗೋಪಾಲನ ತಾಯಿ ಒಳಕ್ಕೆ ಹೋದರು. ಅವರೂ ಬರಲಿಲ್ಲ, ಆಹ್ವಾನಿತರಲ್ಲಿ ಗುಜುಗುಜು ಪ್ರಾರಂಭವಾಯಿತು. ವಿಚಾರವೇನೆಂದು ನೋಡಲು ಅವತಾರಯ್ಯನವರೇ ಒಳಕ್ಕೆ ಹೋದರು. ಹತ್ತು ನಿಮಿಷಗಳಲ್ಲಿ ಕಾತರಗೊಂಡ ಮುಖಭಾವದಿಂದ ಹಾಲ್‌ಗೆ ಹಿಂದಿರುಗಿ "ನೀವೆಲ್ಲ ನನ್ನನ್ನು ಮನ್ನಿಸಬೇಕು. ನನ್ನ ಮಗಳು ವಿಪರೀತ ತಲೆನೋವಿನಿಂದ ಮಲಗಿದ್ದಾಳೆ. ಇವತ್ತು ಮೂರುವರೆ ಗಂಟೆಯವರೆಗೆ ಆರೋಗ್ಯವಾಗಿಯೇ ಇದ್ದಳು. ಒಂದೇ ಸಮನೆ ಹಾಸಿಗೆಯಲ್ಲಿ ಹೊರಳಾಡುತ್ತಿದ್ದಾಳೆ. ನಿಮ್ಮಂತಹ ರಸಿಕರೆದುರಿಗೆ ಹಾಡುವ ಅದೃಷ್ಟ ಅವಳಿಗೆ ಇಲ್ಲ" ಎಂದು ಹೇಳಿದರು. ಬಂಧುಗಳೆಲ್ಲ ಗಾಬರಿಯಿಂದ ಒಳಕ್ಕೆ ಓಡಿದರು. ಆಹ್ವಾನಿತರೆಲ್ಲ ಸಹಾನುಭೂತಿಯನ್ನು ಕೋರಿ ಒಬ್ಬೊಬ್ಬರಾಗಿ ಜಾಗ ಬಿಟ್ಟರು. ಕೊನೆಗೆ ಹಾಲ್‌ನಲ್ಲಿ ಉಳಿದವರು ಗೋಪಾಲ ಮತ್ತು ಕಿಟ್ಟು ಇಬ್ಬರೇ. ಕಿಟ್ಟುವು "ಹೆಂಡತಿಗೆ ಕಾಯಿಲೆಯಾಗಿ ಮನೆಯವರೆಲ್ಲ ಗಾಬರಿಪಡುತ್ತಿರುವಾಗ ಕಟುಕನಾದ ನೀನೂ ಹೋಗಿ ಏನಾದರೂ ಮಾಡಬಾರದೆ? " ಎಂದನು. ಗೋಪಾಲನು "ನಾನು ಮಾಡುವುದನ್ನು ಆಗಲೇ ಮಾಡಿಯಾಯಿತು" ಎಂದನು. ಕಿಟ್ಟುವು "ಏನು ಮಾಡಿದೆ ಅವನ್ನಾದರೂ ಸ್ವಲ್ಪ ಹೇಳು. ನನಗಂತೂ ಯಾವ ಉಪಾಯವೂ ಹೊಳೆಯಲಿಲ್ಲ" ಎಂದನು. ಯಾವಾಗಲೋ ಬಂದು ಗೋಪಾಲನ ಹಿಂದೆ ನಿಂತಿದ್ದ ಕೇಶವ "ನಾನು ಹೇಳುತ್ತೇನೆ. ಭಾವ ಅಕ್ಕನಿಗೆ ಕೈ ಮುಗಿಯುತ್ತಿದ್ದರು, ಕಾಲಿಗೆ ಬಿದ್ದರು" ಎಂದು ಕಿರಚಿದ. ಗೋಪಾಲನು "ಪೋಕರಿ" ಎಂದು ಅವನನ್ನು ಹೊಡೆಯುವುದಕ್ಕೆ ಹೋದ. ಕೇಶವ ಅವನ ಕಡೆಗೆ ಒಂದು ಸಲ ಆಟಂ ಪಿಸ್ತೂಲನ್ನು ಧಡಾರ್ ಎನ್ನಿಸಿ ಓಡಿಬಿಟ್ಟ.

ಮೊದಲಿನಿಂದ ತನ್ನ ಹೆಂಡತಿಗೆ ತಾನು ಸಂಗೀತದಲ್ಲಿ ಶುದ್ಧ ಶುಂಠಿಕಾಯಿ ಎಂಬುದು ತಿಳಿದಿತ್ತೆ ಎಂಬ ಸಂಶಯ ಗೋಪಾಲನಿಗೆ ಪರಿಹಾರವಾಗಿಲ್ಲ. ಮೋಸಹೋಗದ ನಾಯಿ ಮಾತ್ರ ಈಗಲೂ ಅವನನ್ನು ಕಂಡರೆ ಬಗಳುತ್ತೆ. ಹೀಗೆ ಮುಗಿಯಿತು ಅಳಿಯನ ದಿವಾಳಿ. *





ಶ್ರೀರಂಗ

# ನನಗೆ ಮನಸ್ಸೇ ಇಲ್ಲ

ನನಗೆ ಮನಸ್ಸೇ ಇಲ್ಲ?

ಛೆ! ಎಂತಹ ವಿಷಯ ಇದು!

ಹ್ಞ, ತಡೆಯಿರಿ. ಅದನ್ನೆ ತಿಳಿದುಕೊಳ್ಳೋಣ. ತುಸು ತಾಳ್ಮೆ ಇರಲಿ. ಇದಲ್ಲದೆ ವಿಷಯವನ್ನು ಸೂಚಿಸಿದವರು ಸಂಪಾದಕರು, ಅದನ್ನು ಬರೆಯುವವ ನಾನು; ಅವರು ಕರ್ಮವೀರ, ನನ್ನದು ವೀರ ಕರ್ಮ. ಹೀಗಿರುವಾಗ ಹೊರಗಿನವರಾದ ನೀವು ವಾಚಕರು ಯಾಕೆ ಇಷ್ಟು ಮನಸ್ಸಿಗೆ ಹಚ್ಚಿಕೊಳ್ಳುವಿರಿ? ಅಥವಾ, ನಿಮಗೂ ಮನಸ್ಸಿಲ್ಲ ಎಂದು ಒಪ್ಪುವಿರಾ?

ಒಂದು ಮಾತನ್ನು ಮಾತ್ರ ಪ್ರಾರಂಭದಲ್ಲಿ ನಾನು ಸ್ಪಷ್ಟಪಡಿಸಲೇಬೇಕು. ಅದೆಂದರೆ, ಈ ವಿಷಯ ಮತ್ತು ಈ ಲೇಖನ ಎರಡೂ ಇಂದಿನ ಪರಿಸ್ಥಿತಿಯಲ್ಲಿ ಮಹತ್ತ್ವದ್ದಾಗಿವೆ. ಒಂದು ವೇಳೆ ನಿಮಗೇನಾದರೂ ಎನ್ನಿಸಿರಬೇಕು, ವಿಷಯವನ್ನು ಸೂಚಿಸುವಾಗ ಸಂಪಾದಕರ ಮನಸ್ಸೆಲ್ಲಿದ್ದಿತೊ? ಬರೆಯುವವರಾದರೂ ಮನಸ್ಸಿಲ್ಲದ ಮನಸ್ಸಿನಿಂದ ಬರೀ ಸ್ವಾರ್ಥಕ್ಕಾಗಿ ಬರೀತಾ ಇದ್ದಾರೇನೊ? ಇಂತಹ ಸಂಶಯಗಳಿದ್ದಲ್ಲಿ ದಯವಿಟ್ಟು ಅವನ್ನು ತೊಡೆದುಹಾಕಿರಿ. ಇಂದು ನಮಗೆ ಒಂದು ನಿಶ್ಚಿತ ಧಾರಣೆ—ಕ್ಷಮಿಸಿ—ಧೋರಣೆ ಬೇಕು, ಇಂದು ನಮಗೆ ಒಕ್ಕಟ್ಟು ಬೇಕು, ಒಗ್ಗರಣೆಯಂತಹ ಒಕ್ಕಟ್ಟು, ವ್ಯೆಚುಂಯ್ ಅಂದರೂ ಒಬ್ಬರೊಬ್ಬರನ್ನು ಸೇರಿಕೊಂಡು ಕೆಲಸಮಾಡಬೇಕು. ಇಂದು ನಮಗೆ—ಅಥವಾ ಸದ್ಯದ ವಿಷಯ ಬೇರೆ ಇದ್ದುದರಿಂದ ಒಂದೇ ಮಾತಿನಲ್ಲಿ ಹೇಳುವೆ, ಇಂದು ನಮಗೆ ಅದು ಬೇಕು, ಇದು ಬೇಕು, ಇಂತಹದು ಅನ್ನೋ ಹಟ ಇಲ್ಲ, ಎಲ್ಲ ಬೇಕು. ಯಾಕೆಂದರೆ ನಮಗೆ ಮನಸ್ಸೇ ಇಲ್ಲ!

ಇಂದು ಮನಸ್ಸೇ ಇಲ್ಲ ಎಂದು ಹೇಳುವುದರಲ್ಲಿ ಹಿಂದಿನ ಕಾಲದಲ್ಲಿ ಇದ್ದಿತು ಎಂದು ಹೇಳುವ ಉದ್ದೇಶ ನನ್ನದಿದೆ. ಈಗ ಯಾಕೆ ಇಲ್ಲ ಅನ್ನುವುದನ್ನೂ ಸ್ವಲ್ಪದರಲ್ಲಿಯೆ ತೋರಿಸಿಕೊಡುವೆ.

'ಮನ ಏವ ಮನುಷ್ಯಾಣಾಂ ಕಾರಣಂ ಬಂಧಮೋಕ್ಷಯೋಃ' ಇದನ್ನು ಪರಮಾತ್ಮನೇ ಹೇಳಿದ್ದಾನೆ ಭಗವದ್ಗೀತೆಯಲ್ಲಿ. ಪರಮಾತ್ಮನಾದರೂ ಕೃಷ್ಣ ಸುಳ್ಳಲ್ಲವಲ್ಲ? ಈ ಕೃಷ್ಣಪಕ್ಷಕ್ಕೆ ಸೇರಿದ ಪಾಂಡವರು ಬಂಧುಗಳೊಡನೆ ಜಗಳಾಡಿದರು. ಹಿರಿಯರ ಅದೇ ಚಾಳಿ ಸಾವಿರಾರು ವರ್ಷ ನಡೆದುಬಂದು ನಾವು ಪಾರತಂತ್ರ್ಯಬಂಧನಕ್ಕೆ ಒಳಗಾದೆವು. ಮನಸ್ಸಿತ್ತು. ಏನೋ ಬಯಸಿದರು, ಜಗಳಾಡಿದರು. ಆದರೆ ಅಷ್ಟು ಸಾವಿರ ವರ್ಷಗಳ ತರುವಾಯ, ಸರಿಯಾಗಿ ಹೇಳುವುದಾದಲ್ಲಿ ೧೯೪೭ ರಲ್ಲಿ, ಆ ದಾಸ್ಯದ ಬಂಧ ಹೋಯಿತು, ಮೋಕ್ಷವೂ ಸಿಕ್ಕಿತು. ಹೀಗಾಗಿ ಬಂಧ ಮತ್ತು ಮೋಕ್ಷ ಎರಡೂ ನಮಗೆ ಹಳೆಯ ಮಾತಾದುವು. ಅವೆರಡೆ ಹೋದಮೇಲೆ ಅವಕ್ಕೆ ಕಾರಣವಾದ ಮನಸ್ಸಾದರೂ ಉಳಿಯುವುದು ಹೇಗೆ?

ಆದುದರಿಂದ ನಮಗೆ ಮನಸ್ಸೇ ಇಲ್ಲ.

ಎಂತಹ ಮನಸ್ಸದು! ನೂರಾರು ವರ್ಷಗಳವರೆಗೆ ನಮ್ಮನ್ನು ಬಿಟ್ಟಿರಲಿಲ್ಲ. ಕೇವಲ ೫೦೦ ವರ್ಷಗಳ ಹಿಂದೆಯೆ ಪಾಪ! ಕರ್ನಾಟಕದ ದಾಸರೊಬ್ಬರು ಗೋಳಾಡಿದರು,

'ಮನವೆಂಬ ಮರ್ಕಟವ ತಡೆಯಲಾರೆನೊ, ದೇವ' ತಡೆಯಲಾರೆ, ತಡೆಯಲಾರೆ' ಎಂದು. ಆದರೆ ಮರ್ಕಟಾವಸ್ಥೆಯಿಂದ ಪ್ರಗತಿ ಇದೆ ಎಂದು ಅಂದಿನವರಿಗೆ ತಿಳಿದಿರಲಿಲ್ಲ. ಪ್ರಗತಿಯಾಯಿತು, ಮರ್ಕಟವು ಮನಸ್ಸಿನಿಂದ ಮನುಷ್ಯನಾಯಿತು. ಆ ಮನುಷ್ಯರು ನಾವು,



ನಮಗೆ ಮನಸ್ಸೇ ಇಲ್ಲ.

ನಿಜವಿದ್ದ ಮಾತೆಂದರೆ ಸೃಷ್ಟಿಯ ಮೂಲದಲ್ಲಿಯೆ ಮನಸ್ಸಿದ್ದಿತು.

'ಸೋऽಕಾಮಯತ, ಬಹುಸ್ಯಾಂ, ಪ್ರಜಾಯೇಯ, ಇತಿ' ಆ ಮನಸ್ಸು ಬಯಸಿತಂತೆ, ನಾನು ಏಕದಿಂದ ಅನೇಕವಾಗುವೆ, ಪ್ರಜೆಗಳನ್ನು ಸೃಷ್ಟಿಸುವೆ ಎಂದು. ಸರಿ, ಪ್ರತಿಯೊಂದು ಅವತಾರಕ್ಕೆ ಕೋಟಿಕೋಟಿಗಟ್ಟಲೆ ಪ್ರಜೆಗಳನ್ನು ಸೃಷ್ಟಿಸಿ ಕೊನೆಗೆ ಇದ್ದವರಿಗಿಂತ ಹುಟ್ಟುವವರೆ ಹೆಚ್ಚಾಗುವ ಪರಿಸ್ಥಿತಿ ಒದಗಿತು, ಇದಕ್ಕೆ ಕಾರಣ ಮನಸ್ಸೇ ಆದುದರಿಂದ ನಾವು ಪಂಚಬಾಣನ—ಅಯ್ಯೊ! ಒಳಿತೆನ್ನಿರಿ—ಪಂಚವಾರ್ಷಿಕ ಯೋಜನೆಗಳನ್ನು ಹೂಡಿ ಒಂದೊಂದು ವರ್ಷಕ್ಕೆ ಒಂದೊಂದು ಬಾಣ ಮುರಿಯುವಂತೆ ಆ "ಬಹುಸ್ಯಾಂ, ಪ್ರಜಾಯೇಯ" ಎನ್ನುವ ಮನಸ್ಸಿನ ಉಚ್ಚಾಟನೆಯನ್ನು ಮಾಡಿದೆವು.

ಇನ್ನೆಲ್ಲಿಂದ ಬರಬೇಕು ಮನಸ್ಸು?

ಹೀಗೆ ಐತಿಹಾಸಿಕ ದೃಷ್ಟಿಯಿಂದ, ಪರಿವರ್ತನೆ (evolution) ಯ ದೃಷ್ಟಿಯಿಂದ ಈ ಪ್ರಶ್ನೆ ಎಷ್ಟೊಂದು ಮಹತ್ತ್ವದ್ದಾಗಿದೆ ಎಂದು ಬೇರೆ ಹೇಳಬೇಕಾಗಿಲ್ಲ.

ಮನಸ್ಸಿನಿಂದ ಧ್ಯಾನ ಮಾಡಿದರೆ ಸಂಗ, ಸಂಗದಿಂದ ಕಾಮ, ಕಾಮದಿಂದ ಕ್ರೋಧ, ಕ್ರೋಧದಿಂದ ಸಮ್ಮೋಹ, ಸಮ್ಮೋಹದಿಂದ ಸ್ಮೃತಿ-ಭ್ರಮ, ಸ್ಮೃತಿ-ಭ್ರಮದಿಂದ ನಾಶ ಎಂದು ಭಗವದ್ಗೀತೆ

ಶ್ರೀರಂಗರು ಹೀಗೆ ಹೇಳುವರೇ ಎಂದು ಈ ತಲೆಬರೆಹ ನೋಡಿದ ಕೂಡಲೇ ನಿಮಗೆಅಚ್ಚರಿಯೆನಿಸುವದಲ್ಲವೆ. ಹೀಗೆಂದರೇನು ಎಂದುಕೊಳ್ಳುವಿರೇನೊ. ಮನಸ್ಸು ಹಿಂದೆ ಇದ್ದಿತು, ಈಗ ಇಲ್ಲ ಎಂದು ಅವರು ಹೇಳುತ್ತಾರೆ. ಈಗ ಯಾಕ ಇಲ್ಲ ಅನ್ನುವದನ್ನು ಅವರು ಸ್ವಲ್ಪದರಲ್ಲಿ ಇಲ್ಲಿ ತೋರಿಸಿಕೊಟ್ಟಿದ್ದಾರೆ.



ಯಲ್ಲಿ ಘಂಟಾಘೋಷವಾಗಿ ಸಾರಲಾಗಿದೆಯಷ್ಟೇ! ಮೊದಲು ಗಂಟೆಯನ್ನು. ತರುವಾಯ ಘೋಷವನ್ನು ಬಲಗೊಳಿಸಿ ಮೂಲದಲ್ಲಿದ್ದ ಮನಸ್ಸನ್ನೆ ನಾವು ನಾಶಗೊಳಿಸಿದ್ದೇವೆ. ನಮಗಿಂದು ಸಂಗ, ಕಾಮ, ಕ್ರೋಧ, ಸಮ್ಮೋಹ, ಸ್ಮೃತಿ-ಭ್ರಮ ಒಂದೂ ಇಲ್ಲ. ಇನ್ನೊಬ್ಬರ ಸಂಗವನ್ನು ಬಯಸದ ತಟಸ್ಥ (non-alignment) ಧೋರಣ ನಮ್ಮದು, ಯಾವ ಉದ್ದೇಶಕ್ಕೂ ಸಿಕ್ಕಿಕೊಳ್ಳದ "ರಿಕಾಮ" ನಾವು, ಲಂಚ ತಿನ್ನುವವರ ಲಂಚದ ವಿರುದ್ಧ ಭಾಷಣ ಬಿಗಿದರೆ ಸಿಟ್ಟಿಗೇಳದ ಸಾಧುಗಳು ನಾವು, ಪ್ರಜಾಪ್ರಭುತ್ವ ಎಂದರೆ ಎಲ್ಲರಿಗೂ ಸಮಾನಾವಕಾಶ ಎಂಬ ಸಮ್ಮೋಹ ನಮಗಿಲ್ಲ, ಇಷ್ಟೇಕೆ ಒಂದು ಕಾಲದಲ್ಲಿ ಗಾಂಧಿ ಎನ್ನುವವರು ನಮ್ಮ ದೇಶದಲ್ಲಿ ಬಾಳಿದರೆ—? ಎಂಬ ಸ್ಮೃತಿ-ಭ್ರಮ ಕೂಡ ನಮಗಿಲ್ಲ (ಯಾಕೆಂದರೆ ಅಂತಹರಾರೂ ಇರಲಿಲ್ಲ ಎಂಬುದನ್ನು ಖಂಡಿತ ಬಲ್ಲೆವು); ಹೀಗಿರುವಾಗ ನಮಗೆ ನಾಶದ ಹೆದರಿಕೆಯೇ ಇಲ್ಲ. ಮೂಲಕಾರಣವನ್ನೇ ಹೊಡೆದು ಹಾಕಿಲ್ಲವೆ?

ಎಂದರೆ ನಮಗೆ ಮನಸ್ಸೇ ಇಲ್ಲವಲ್ಲ?

ಆರನೆಯ ಬೆರಳಿನ ಹಾಗೆ ಈ ಹನ್ನೊಂದನೆಯ ಇಂದ್ರಿಯವನ್ನು ಕತ್ತರಿಸಿ ಒಗೆದಿದ್ದೇವೆ.

ನಿಜವಿದ್ದ ಮಾತೆಂದರೆ ವೈಜ್ಞಾನಿಕ ಸಂಶೋಧನೆಯ ಇಂದಿನ ಪ್ರಗತಿ ಕಾಲದಲ್ಲಿ ಮನಸ್ಸಿನ ಅಸ್ತಿತ್ವವನ್ನು ತಜ್ಞರು ಮನ್ನಿಸುವುದಿಲ್ಲ, ಜೀವಿಸುವುದಕ್ಕೆ ಅಗತ್ಯವಿದ್ದುದನ್ನಲ್ಲದೆ ಪ್ರಕೃತಿಮಾತೆಯು ಪ್ರಾಣಿಗೆ ಹೆಚ್ಚಿನ ಸರಾಬರಾಜನ್ನೆ ಕೊಟ್ಟಿಲ್ಲ, Travel as you light, ಬಾಳ್ವೆಯ ಪ್ರವಾಸದಲ್ಲಿ ಎಷ್ಟು ಬೇಕೊ ಅಷ್ಟು ಲಗೇಜು, ರಕ್ತಾಭಿಸರಣಕ್ಕೆ ಎದೆ, ಉಸಿರಾಟಕ್ಕೆ ಪುಪ್ಪುಸ—ಮುಂತಾಗಿ. ಮನಸ್ಸೆಂಬುದಕ್ಕೆ ಜೀವಿಸುವುದರಲ್ಲಿ ಯಾವ ಅಗತ್ಯದ ಕೆಲಸವಿದೆ? ವ್ಯವಹಾರಜ್ಞಾನವಿಲ್ಲದ ಭಾಷಾ ಪಂಡಿತರು ಹೇಳಬಹುದು, 'ಮನ್' ಅಂದರೆ "ಯೋಚಿಸು, ವಿಚಾರ ಮಾಡು" ಎಂಬರ್ಥದ ಸಂಸ್ಕೃತಧಾತುರೂಪ, ಅದರಿಂದ "ಮನಸ್"—ವಿಚಾರಮಾಡುವ, ಯೋಚಿಸುವ ಇಂದ್ರಿಯ ಎಂದು. ಧಾತು-ಶಬ್ದ-ಅರ್ಥ ಅದೆಲ್ಲ ಸರಿ, ಆದರೆ ಅಷ್ಟಕ್ಕೆ ಆ ವಸ್ತು ಇದೆ ಎಂಬುದು ಯಾವ ಆಧಾರದಿಂದ? ಶಬ್ದ ಇದೆ ಎನ್ನುವುದಕ್ಕೆ ಆ ಅರ್ಥದ ವಸ್ತು ಇರಬೇಕು ಎನ್ನುವುದು ಎಲ್ಲಿಯ ನಿಯಮ? "ಕರ್ನಾಟಕ" ಎಂದರೆ ಕನ್ನಡ ಮಾತನಾಡುವ ಜನಾಂಗ ಎಂದು ಹಿಂದಿನ ಕಾಲದಿಂದ ಶಬ್ದವಿದೆ, ಅರ್ಥವಿದೆ; ಅಷ್ಟಕ್ಕೆ "ಕರ್ನಾಟಕ" ಎಂಬುದೊಂದು ಇದೆ ಎಂದು ಯಾರಾದರೂ ಹೇಳಬಹುದೆ?

ಇದಲ್ಲದೆ ಈ 'ಯೋಚಿಸು, ವಿಚಾರಮಾಡು' ಎನ್ನುವ ಕಲ್ಪನೆಯೇ ಮೋಸ, ಸಹಜ, ಅಸಹಜ ಇಂದಿನಕಾಲದಲ್ಲಿ ಚುನಾವಣೆಯ ಹುರಿಯಾಳುಗಳು ಆಶೆಯನ್ನು ತೋರುಸುವದಿಲ್ಲವೆ? ಹಾಗೆಯೆ ಹಿಂದಿನಕಾಲದ ಚಾಣಿಕ್ಯ-ಚಾರ್ವಾಕರು ಮಕ್ಕವರಿಗೆ ಹೇಳಿದರು "ನೀವು ಸ್ವತಂತ್ರರು, ನೀವು ಮಾನವರು, ನಿಮಗೆ ವಿಚಾರಶಕ್ತಿಇದೆ, ವಿಚಾರ ಸ್ವಾತಂತ್ರ್ಯಇದೆ" ಮುಂತಾಗಿ-ಆಯಿತು, ನಾವೂ ನಂಬಿದೆವು. ಚಾಣಿಕ್ಯ-ಚಾರ್ವಾಕರು ಹೇಳುವುದನ್ನು ಕೇಳುವ ಶಕ್ತಿ, ಕೇಳಿದಮೇಲೆ ತನ್ನ ಬಾಯಿಯಿಂದ ಮತ್ತೆ ಹೇಳುವ ಸ್ವಾತಂತ್ರ್ಯ! ಚಿಕ್ಕಂದಿನಲ್ಲಿ ತಾಯ್ತಂದೆಯರು, ಬಾಲ್ಯದಲ್ಲಿ ಗುರು-ಹಿರಿಯರು, ತರುವಾಯ ಮೇಲಧಿಕಾರಿ



ಗಳು, ಯಾವಾಗಲೂ ಧರ್ಮಾಧಿಕಾರಿಗಳು, ಅಕಸ್ಮಾತ್ ಇದು ತಪ್ಪಿದಲ್ಲಿ ನಮ್ಮದಿನಪತ್ರಿಕೆಗಳು, ಪ್ರಚಾರ ಪುಸ್ತಕಗಳು ಇತ್ಯಾದಿ-ಇವೆಲ್ಲ ಯಾವ ಯಾವ ವಿಚಾರಗಳನ್ನು ಮಾಡಬೇಕು ಮುಂತಾಗಿ ಸದಾ-ಕಾಲವೂ ಹೇಳಿಕೊಡುತ್ತಿರುವುದರಿಂದ ವ್ಯಕ್ತಿಗಳಿಂದ ಬರುವುದು ವಿಚಾರ ಶಕ್ತಿಯ ಅಗತ್ಯತೆ ಮತ್ತು ಉಪಯುಕ್ತತೆ.

ಪ್ರಾಮಾಣಿಕವಾಗಿ ಹೇಳುವದಾದರೆ ಜೀವನವು ಕೊಡಕೊಳ್ಳುವ ಲೆಕ್ಕ. ಇಲ್ಲಿ ವೈಜ್ಞಾನಿಕರು ಹೇಳುವಂತೆ Action and re-action are equal and opposite, ಎಂದರೆ ಪ್ರಕೃತಿಯಲ್ಲಿ ಯಾವಾಗಲೂ ವ್ಯವಹಾರ "ಚುಕ್ತಾ"!

ದೃಷ್ಟಾಂತ ನೋಡಿರಿ. ನಮ್ಮಲ್ಲಿಂದ ಪ್ರಜಾಪ್ರಭುತ್ವ; ಇದು ಪಂಚವಾರ್ಷಿಕಯೋಜನೆಯ ತಳಹದಿಯಮೇಲೆ ನಿಂತಿದೆ ಎಂದರೆ ಪ್ರತಿ ಅಯ್ದು ವರ್ಷಗಳಲ್ಲಿ ಒಂದು ಸಲ ಪ್ರಜೆಗಳು ತಾವೇ ಪ್ರಭುಗಳೆಂದು ತಿಳಿಯುವದು. ಈ ಸಂದರ್ಭಕ್ಕೆ ಚುನಾವಣೆ ಇಲ್ಲವೆ ಪ್ರಜಾಪ್ರಭುತ್ವದ ಪಂಚವಾರ್ಷಿಕ ಯೋಜನೆ ಎನ್ನುವರು. ಇದರಲ್ಲಿ ಲಕ್ಷಾಂತರ ರೂಪಾಯಿಗಳ ಬಂಡವಳ-ಹುರಿಯಾಳುಗಳಿಂದ. ಜೊತೆಗೆ Equal distribution of wealth— ಎಂದರೆ ಪ್ರತಿಯೊಬ್ಬ ಮತದಾರನಿಗೂ ಅಷ್ಟೆಕೊಡುವದು, ಅಂತೂ ಮತದಾರನ ಮುಷ್ಟಿಯಲ್ಲಿ ಸಂಪತ್ತನ್ನಿಡುವುದು. action (ಕ್ರಿಯೆ)ಆಯಿತು; ಇನ್ನು re-action (ಪ್ರತಿಕ್ರಿಯೆ) ಯಾವುದೆನ್ನುವಿರಿ? ಆರಿಸಿ ಬಂದ ಸರಕಾರಗಳು ವರ್ಷವರ್ಷಕ್ಕೆ ಬೆಲೆಗಳನ್ನು ಏರಿಸುವಂತೆ ಮಾಡಿ ಕ್ರಮೇಣ ಮುಂಚೆ ಕೊಟ್ಟದ್ದನ್ನೆಲ್ಲ ಬಡ್ಡಿಸಮೇತ re- ವಸೂಲಮಾಡುವದು! ಪ್ರತಿ ಪಂಚವಾರ್ಷಿಕ ಯೋಜನೆಯಿಂದ ವ್ಯಕ್ತಿಯ ಉತ್ಪನ್ನ ಹೆಚ್ಚುವುದಂತೆ! ಎಂದರೇನು? ಮುಂದಿನ ಚುನಾವಣೆಯಲ್ಲಿ ಮುಂಚೆನಕಿಂತ ಹೆಚ್ಚುಬೆಲೆ ಕೊಟ್ಟು ಮತವನ್ನು ಕೊಳ್ಳುವದು! ಮತ್ತೆ ಸರಕುಗಳ ಬೆಲೆಯನ್ನೇರಿಸಿ ವಾಪಸು ಪಡೆಯುವದು!

ಮಹಾಶಯರೆ, ಹೀಗಿದೆ ಜೀವನ! ಒಂದು ಚೊಕ್ಕ ಲೆಕ್ಕ! ಕೊಡಬೇಕು ಕೊಳ್ಳಬೇಕು, ತಿಂದುದು ರಕ್ತವಾದರೆ ರಕ್ತಕ್ಕಾಗಿ ತಿನ್ನಬೇಕು. ಮುಂತಾಗಿ, ಹೀಗಿರುವಾಗ ಮನ್ ಎಲ್ಲಿಂದಬಂತು? ವಿಚಾರಮಾಡುವ ಅಗತ್ಯವೆಲ್ಲಿದೆ? ಆದ್ದರಿಂದ ಮನಸ್ಸೆಂಬುದರ ಅಗತ್ಯವಾಗಲಿ ಅಸ್ತಿತ್ವವಾಗಲಿ ಇಲ್ಲ.

ಮನಸ್ಸು ಮಾಡಿರೆ ನಾವು ನಮ್ಮ ದೇಶದ ಸಲುವಾಗಿ ಏನೇನು ಮಾಡಬಲ್ಲೆವು-ಎಂದು ಸಾರುವವರನ್ನು ಕಂಡು ನಗೆ ಬರುವುದು. ಆ ಪ್ರಶ್ನೆಕ್ಕೆ ಉತ್ತರ- "ಏನೂ ಮಾಡಲಾರೆವು, ಯಾಕೆಂದರೆ ಮನಸ್ಸೇಇಲ್ಲ" ಎಂದು ನಿಮ್ಮ ಮನಸ್ಸಿಗೆ ಒಪ್ಪಿತೋ ನನ್ನ ವಿಚಾರ? ✱



# ಮೂಢನಂಬಿಕೆಗಳು



**ಜಗತ್ತಿನ ಮಹಾ ಮಹಾ ಎನ್ನುವವರೆಲ್ಲ ಮೂಢನಂಬಿಕೆಗಳಲ್ಲಿ ವಿಶ್ವಾಸವಿರಿಸಿದವರು; ಕೆಲವರು ನಂಬಿ ಕೆಟ್ಟರೆ, ಇನ್ನು ಕೆಲವರು ನಂಬದೆ ಕೆಟ್ಟಿದ್ದಾರೆ. ಹಾಗೆಂದೂ ನೀವೇನಾದರೂ ಅದರ ಪ್ರಯೋಗ ಮಾಡಲು ಹೋದೀರಿ, ಜೋಕೆ ಎಂದು ಲೇಖಕರು ನಿಮಗಿಲ್ಲಿ ಎಚ್ಚರಿಕೆ ನೀಡುತ್ತಾರೆ.**


ಶ್ರೀ ರಾ. ಯ. ಧಾರವಾಡಕರ
ಪ್ರಿನ್ಸಿಪಾಲ
ಜೆ. ಎಸ್. ಎಸ್. ಕಾಲೇಜ್ ಧಾರವಾಡ


"The forms change: but the Substance remains'' Aldous Huxley

ಮನುಷ್ಯ ಸರಿಸಮಾನರನ್ನು ಹಳಿಯಲು ಸಾಧ್ಯವಿಲ್ಲದಾಗ, ಸತ್ತವರನ್ನು ಹಳಿದೇ ತನ್ನ ಅಹಂಕಾರವನ್ನು ಪೂರೈಸಿಕೊಳ್ಳಬೇಕು. ಸಮಕಾಲೀನರ ಬಗ್ಗೆ ಬೆರಳೆತ್ತದಿದ್ದ ಹಂಬೇಡಿ ಪ್ರಾಚೀನ ಅಜ್ಜಂದಿರನ್ನು ಹಳಿದೇ ತನ್ನ ಪೌರುಷವನ್ನು ಪ್ರದರ್ಶಿಸಬೇಕಲ್ಲವೇ...? "Kill that infamous wrech" ಎಂದು ಶಾಪ ಎತ್ತಿದ Voltaire ಸತ್ತ; ಸೂತ್ರದ ಮೂಢನಂಬಿಕೆ ಉಳಿದವು. ನಿಜವಾಗಿ, ಹೇಳಿರಿ ನಮ್ಮ ಪ್ರಾಚೀನ ಸೊತ್ತಾದ ಮೂಢನಂಬಿಕೆಗಳಲ್ಲಿ ವಿಶ್ವಾಸವಿಲ್ಲದವರು ಈ ಪ್ರಪಂಚದಲ್ಲಿ ಯಾರಿದ್ದಾರೆ? ಕನ್ನಡಿಯ ಮುಂದೆ ನಿಂತವರು ಹಲ್ಲುಕಿರಿಯದೆಬಿಟ್ಟಾರೇ? ಜ್ಯೋತಿಷಿಯನ್ನು ಕಂಡಾಗ ಹಿಂದು ಮುಂದು ನೋಡಿಯಾದರೂ ಕೈಚಾಚದವರಿದ್ದಾರೆಯೋ? ಮೂಢನಂಬಿಕೆ ನಮ್ಮ ಹಿರಿಯರು ನಮಗೆ ಬಳುವಳಿಯಾಗಿ ಕೊಟ್ಟ ದೊಡ್ಡ ಆಸ್ತಿ; ಅದು ನಮ್ಮ ಜೀವನದ ಹಾಸು-ಹೊಕ್ಕು; ನಮ್ಮ ಪ್ರಾಚೀನರ ಜ್ಞಾನಸುಧೆ; ಜೀವನದಾಯಿಯಾದ ಕಾಂತಾಸಮ್ಮಿತಿ; ಈ ಭಾವಜೀವಿಯ ಅಭಯಹಸ್ತ; ಸಂಸ್ಕೃತ ಹೃದಯದ ಪರಿಪಕ್ವತೆ; ಮಾನವ್ಯದ ಪಕ್ವತೆಯ ಹೆಗ್ಗುರುತು. ಕಾವ್ಯದ ನೆಲೆಗಟ್ಟು. ಇದಕ್ಕೂ ಹೆಚ್ಚಿಗೆ ಏನು ಬೇಕು? ಸಾವನ್ನು ಮೀರಿದವರು ಯಾರಿದ್ದಾರೆ? ಮೂಢನಂಬಿಕೆಗಳನ್ನು ಕಳಚಿದವರು ಯಾರಿದ್ದಾರೆ? ಸುಮ್ಮನೆ ಯಾತಕ್ಕೆ ಈ ಬರಿಯ ಮಾತಿನ ಜಂಭ? ವ್ಯರ್ಥ ಕಲ್ಪನೆ !! ಎಂತೆಂಥ ವೀರಾಧಿವೀರರು ಇದರ ಜಾಜ್ವಲ್ಯಮಾನವಾದ ಪ್ರಖರ ಪ್ರಕಾಶದಲ್ಲಿ ನಡೆದಿದ್ದಾರೆಂಬುದನ್ನು ನೆನೆದರೆ, ನಮ್ಮ ಪೌರುಷ ಇಲಿಯ ಬಾಲದ ಹಾಗೆ ಮುದುಡಿ ಬಿದ್ದೀತು! ಯಾರೋ ಒಂದು ಸಲ ಡಾ. ಜಾನ್ಸನ್ ಅವರನ್ನು ಕೇಳಿದರಂತೆ "ಜಾನ್ಸನ್‌ರೇ, ದೆವ್ವಗಳ ಬಗ್ಗೆ ನಿಮ್ಮ ಅಭಿಪ್ರಾಯ ಏನು?" ಆಗ ಅವರು ಹೇಳಿದರಂತೆ "All argument is against it and all belief for it" ದೆವ್ವಗಳ ಈ ಮಾತೇ ಮೂಢ ನಂಬಿಕೆಗಳಿಗೂ ಅನ್ವಯಿಸುತ್ತಿದೆ. ಯಾಕೆ ಸುಮ್ಮನೆ ಪೌರುಷ! ರೋಮ್ ಚಕ್ರಾಧಿಪತ್ಯದ ಏಕೈಕ ವೀರರು ಸೀಜರ್, ಪಾಂಪೆ, ಕ್ಯಾಶಿಯಸ್- ಮೂರು ಲೋಕದ ಗಂಡ. ಚಂಡಪ್ರಚಂಡ. ವೀರಾಧಿವೀರ ದೊರೆ ಅಲೆಕ್ಝಾಂಡರ್-ವಾಣಿವಲ್ಲಭ ರೋಮೀಯ ಸಿಸಿರೋ-ಇನ್ನೂ ಎಷ್ಟು ಹೆಸರು ಬೇಕು ಹೇಳಿರಿ ನಿಮಗೆ-ಇಂಥವರ ಶೌರ್ಯದ ಎದುರಿಗೆ ಹುಲು ಮಾನವರಾದ ನೀವೆಲ್ಲಿ? "ಕಲಿಗಳಿವರಿಂತು ನಿಷ್ಠೆಯನಿಟ್ಟಿರಲು, ನಿನ್ನ ಹವಣೆಷ್ಟೊ ಪ್ರಾಣೀ" ಗೊತ್ತಿಲ್ಲವೇ ನಿಮಗೆ, ಸೀಜರ ತನ್ನ ಕನಸಿನಲ್ಲಿ ಕಂಡ ಚಿತ್ರ,



ರೋಮದ ಕ್ಯಾಪಿಟಾಲದಲ್ಲೆಲ್ಲ ಸಿಂಹಗಳು ಓಡಾಡುತ್ತಿರುವುದು, ಅಲ್ಲಿ ರಕ್ತ ಹರಿಯುತ್ತಿರುವುದು, ಜನ ಬಂದು ಆ ರಕ್ತದಲ್ಲಿ ಸ್ನಾನ ಮಾಡುತ್ತಿರುವುದು- ಅಂತಲೇ ಸೀಝರ್ ಕಿರೀಟ ಸಮಾರಂಭಕ್ಕೆ ಹೋಗಬಾರದೆಂದು ಬಯಸಿದ್ದ. ಅವನ ಹೆಂಡತಿ ಹಾಗೆ ಹೇಳಿಯೂ ಕಳಿಸಿದ್ದಳು. ಆದರೆ, ನಿಮ್ಮಂಥ ಅವಿವೇಕ "ಬುದ್ಧಿವಂತರು" ಉಪದೇಶಿಸಿದ್ದರ ಮೂಲಕವಾಗಿಯೋ, ಸೀಝರ್ ಮೂಢನಂಬಿಕೆಗಳ ಕರ್ಣಕವಚವನ್ನು ಕಳಚಿ ಕಿರೀಟ ಸಮಾರಂಭಕ್ಕೆ ಹೋದ; ಅಲ್ಲಿ ಆದದ್ದೇನು? ನಿಮಗೆ ಗೊತ್ತೇ ಇದೆ. ಮುತ್ತುಗದ ಮರದ ಹಾಗೆ ಸೀಝರ್ ಕ್ಯಾಪಿಟಲ್‌ದಿಂದ ಉರುಳಿ ಬಿದ್ದ. ನೀವು ಬದುಕಬೇಕೆಂದು ಆಶೆ ಇದ್ದರೆ, ಸರ್ವಥಾ ನಿಮ್ಮ ಮೂಢನಂಬಿಕೆಗಳನ್ನು ಬಿಡಬೇಡಿರಿ. ಅದು ನಿಮ್ಮ ಜೀವನದ ವಜ್ರಕವಚ-ನಿಮ್ಮ ಜೀವನಾಧಾರ. ನೀವು ಮೂಢನಂಬಿಕೆ ಬಿಟ್ಟಿರೋ, ಇಂದೇ ಸತ್ತಂತೆ, ಹೋಗಲಿ. ಪಾಂಪಿ ಏನು ಮಾಡಿದ ಗೊತ್ತೇ? ಅವನು ಮೂಢಾರಾಧಕನಿದ್ದಷ್ಟೇ (ಮೂಢನಂಬಿಕೆ Short orm ಮಾಡೋಣ) ಬುದ್ಧಿವಂತನೂ ಇದ್ದ.

ಆಕಾಶದಲ್ಲಿ ಗುಡುಗು ಮೊಳಗಿದ ಕೂಡಲೇ, ರೋಮೀಯರು ಯಾವ ಕೆಲಸವನ್ನು ಮಾಡದೇ ಮುಂದೂಡುವರೆಂದು ಅವನಿಗೆ ಗೊತ್ತಿತ್ತು. ಅದಕ್ಕೆಂದೋ ಒಂದು ಸಲ ಅವನು ಹೀಗೆ ಮಾಡಿದ. ಅವನ ಮೂಢನಂಬಿಕೆ ಅವನಿಗೆ ಜೀವದಾನ ಮಾಡಿತು. ರೋಮದ ಒಂದು ಸಭೆಯಲ್ಲಿ ತನ್ನ ಮನಸ್ಸಿಗೆ ಬಾರದ ಕ್ಯಾಟೋನನ್ನು ಸೈನ್ಯಾಧಿಕಾರಿಯನ್ನಾಗಿ ರೋಮಿಯರು ಚುನಾಯಿಸಲಿದ್ದಾರೆಂದು ಕಂಡಕೂಡಲೇ, ಪಾಂಪಿ ಮೊಳಗಿದ. ತಾನು ಆಕಾಶದಲ್ಲಿ ಗುಡುಗಿದ ಸಪ್ಪಳ ಕೇಳಿದನೆಂದು. ತತ್‌ಕ್ಷಣ ಯಾವ ಕೆಲಸವನ್ನೂ ಕೈಕೊಳ್ಳದೆ ರೋಮಿಯರು ಪಲಾಯನ ಮಾಡಿದರು. ಮೂಢನಂಬಿಕೆಯ ಈ ಹಿಡಿತ ಪಾಂಪಿಗೆ ಗೊತ್ತಿರದಿದ್ದರೆ ಏನಾಗುತ್ತಿತ್ತು ಗೊತ್ತೇ? ವಾಚ್ಯವ್ಯಾಕೆ ಬೇಕು. ಹೋಗಲಿ ಚಂಡವಿಕ್ರಮಿ ಅಲೆಕ್ಝಾಂಡರ್ ಇಪ್ಪತ್ನಾಲ್ಕು ವರುಷದವನಿದ್ದಾಗಲೇ ಅಖಂಡ ಪ್ರಪಂಚವನ್ನೆಲ್ಲ ಗೆದ್ದು, ಇನ್ನು ಮುಂದು ಜಗತ್ತನ್ನೇ ಗೆಲ್ಲಲು ಭೂಭಾಗ ಉಳಿಯಲಿಲ್ಲವಲ್ಲಾ ಎಂದು ಒಂದೇ ಸವನೆ ಧ್ವನಿತೆಗೆದು ಅತ್ತ. ಆದರೆ, ನಿಮಗೆ ಗೊತ್ತೇ ಅಲೆಕ್ಝಾಂಡರನ ಸುತ್ತು ಸೈನಿಕರಿದ್ದಷ್ಟೇ ಜೋಯಿಸರೂ ಇದ್ದರೆಂಬುದು. ಅಲೆಕ್ಝಾಂಡರನ ಈ ಶೌರ್ಯದ ಗುಟ್ಟು ಇದ್ದುದು ಅವನ ಈ ಜೋತೀಷ್ಯರ ತಂಡದಲ್ಲಿ. ಇದು ಅವನಿಗೆ ಗೊತ್ತಿತ್ತು. ಅಂತಲೇ ಲೋಕೈಕವೀರನಾದ. ನೀವು? ಹೋಗಲಿ ಬಿಡಿ; ಯಾಕೆ ಪ್ರತಿಸಲ ನಿಮ್ಮ ಕಣ್ಣಲ್ಲಿ ಬೊಟ್ಟು ಚುಚ್ಚುವುದು!... ಸಿಸಿರೊ ಏನು ದಡ್ಡನೇ? ಬುದ್ಧಿವಂತ! ಅವನು ಮಾತನಾಡಿದರೆ ಮುತ್ತು ಉದುರುತ್ತಿದ್ದವು. ಗುಡುಗು ಸಿಡಿಲು ಮೊಳಗುತ್ತಿದ್ದವು. ಮಾನವ್ಯಕ್ಕೆ ಮಾತಾಡುವ ನಾಲಗೆ ಮೊದಲಿಗೆ ಕೊಟ್ಟವ ಸಿಸಿರೋ, ಅವನ ನಾಲಗೆ "ವಿದ್ಯಾನಟೀ ನಾಟ್ಯವೇದಿಕಲ್ಪ" ಆದರೆ ಸಿಸಿರೋನನ್ನು ಕಾಗೆ ಕೊಂದಿತು. ಹೇಗೆಂದು ಕೇಳುತ್ತೀರಾ? ಜ್ಯೂಲಿಯಸ್ ಸೀಝರನ ಮರಣಾನಂತರ, ಎಂಟೊನಿ, ಮತ್ತು ಅಗಸ್ಟಸ್ ಸೀಝರ್ ಸಿಸಿರೊ

ನನ್ನು ಕೊಂದುಹಾಕಲು ಬೆನ್ನಟ್ಟಿದರು. ಸಿಸಿರೋ ರಣಾಂಗಣದಿಂದ ಓಡಿದ. ಅಂತೂ ಪಾರಾದ. ಪಾರಾಗಿ ಸಮುದ್ರದಡಕ್ಕೆ ಬಂದ. ಒಂದು ನಾವೆ ಹತ್ತಿ ಮುನ್ನುಗಿದ. ಇನ್ನೇನು ನಾಲ್ಕು ಕ್ಷಣ-ವೈರಿಗಳೆಲ್ಲೋ ತಾನೆಲ್ಲೋ-ಅಷ್ಟರಲ್ಲಿಯೇ ಅವನ ನಾವೆಯ ಸುತ್ತಲೂ ಹತ್ತಾರು ಕಾಗೆಗಳು ಪ್ರದಕ್ಷಿಣೆ



ಹಾಕುತ್ತಿರುವದನ್ನು ಕಂಡ. ಕಾಗೆ ನಾವೆಯ ಸುತ್ತಲೂ ಪ್ರದಕ್ಷಿಣೆ ಹಾಕುವದು ಅಶುಭ ಸೂಚಕವೆಂದು ರೋಮ ಪರಂಪರೆ ಅವನಿಗೆ ಹೇಳಿತ್ತು. ನಾವೆ ತಿರುಗಿಸಿದ; ದಡಕ್ಕೆ ಬಂದ; ಅಷ್ಟರಲ್ಲಿಯೇ ಸಮುದ್ರದ ತೀರಕ್ಕೆ ಬಂದಿದ್ದ ವೈರಿಗಳು ಸಿಸಿರೋನ ರುಂಡವನ್ನು ಹಾರಿಸಿದರು. ವೈರಿಗಳು ಅವನನ್ನು ಕೊಲ್ಲಲಿಲ್ಲ; ಕಾಗೆ ಸಿಸಿರೋನನ್ನು ಕೊಂದವು... ಹಾಂ— ತಡೆಯಿರಿ; ಮುನ್ನುಗ್ಗಬೇಡಿರಿ. ನಿಮ್ಮ ಆಕ್ಷೇಪಣೆ ಅರ್ಥವಾಯಿತು. ಏನು "ಸಾಯಲು ಮೂಢನಂಬಿಕೆಗಳಲ್ಲಿ ವಿಶ್ವಾಸವಿಡಬೇಕೆ?" ಎಂದು ಕೇಳಬೇಡಿರಿ. ಇಲ್ಲಿ ಸಿಸಿರೋ ಸತ್ತದ್ದು ಮಹತ್ವವಲ್ಲ; ಸಿಸಿರೋನಂಥ— ಜ್ಞಾನಿಗಳೂ ವಾಣಿವಲ್ಲಭರೂ- ನಮ್ಮ ಈ ಮೂಢನಂಬಿಕೆಗಳ ಈ ಆಸ್ತಿಯನ್ನು ಎಷ್ಟು ಜತನವಾಗಿ ಕಾಯ್ದುಕೊಂಡು ಬಂದರೆಂಬುದು ಪ್ರಕೃತ. ಅಥವಾ ನಮ್ಮ ಭಾರತದ ದುಷ್ಯಂತ-ಕಟ್ಟಡವಿಯಲ್ಲಿ ಅವನ ಬಲಭುಜ ಸ್ಫುರಿಸಿತು. ಬಲಭುಜ ಸ್ಫುರಣ ಸುಖವನ್ನು ತರಲೇಬೇಕು. ಅದು ನಂಬಿಕೆಯ ಶಾಸ್ತ್ರ. ಆಗ ದುಷ್ಯಂತ ಹಾಗೇ ತಿರುಗಿದ್ದರೆ ಅವನಿಗೆ ಶಕುಂತಲೆ ದೊರಕುತ್ತಿದ್ದಳೋ?

ಆದ್ದರಿಂದ "ಕಲಿಗಳಿವರಿರತು ನಿಷ್ಠೆಯನಿಟ್ಟಿರಲು, ನಿನ್ನ ಮತಿ ಎಷ್ಟರದೋ ಎಲೆ ಮೂಢ ಮಾನವಾ" ಮೂಢನಂಬಿಕೆ ನಮ್ಮ ಜೀವನದ ಹಾಸು-ಹೊಕ್ಕು. ಅದು ನಿಜವಾದ ಜ್ಞಾನಸುಧೆ. ಮೂಢನಂಬಿಕೆ ಅನ್ನುವಲ್ಲಿ, ನಿಮಗೆ ನಂಬಿಕೆ ಇರಲಿ, ಬಿಡಲಿ, ಮೂಢ ಅನ್ನುವದಾದರೂ ಏನು? ನೀವೇ ಏನು ಜಗತ್ತಿನ ಬುದ್ಧಿಯ ಮಕ್ತೆ ಹೊತ್ತಿದ್ದೀರಾ? ಎಲ್ಲಿದೆ ನಿಮಗೆ ಬುದ್ಧಿ? ನಮ್ಮ ನಂಬುಗೆ ನಮಗೆ ಏನು ಹೇಳುತ್ತಿದೆ?... ಮನೆಯಲ್ಲಿ ಯಾರಾದರೂ ಅನಾರೋಗ್ಯವಾಗಿದ್ದಾಗ, ರಾತ್ರಿ ನಾಯಿ ಅಳಬಾರದೆಂದು ಒಂದು ನಂಬುಗೆ, ನಾಯಿ ಆ ರೀತಿ ಅತ್ತರೆ, ಊಳಿದರೆ, ಆ ರೋಗಿ, ಸಾಯುತ್ತಾನೆಂದು ಬುದ್ಧಿವಾದ. ಇದರಲ್ಲಿ ಮೂಢವಾದದ್ದೇನಿದೆ? ರಾತ್ರಿ ಅಳುವ ನಾಯಿ ಏನು ಕೋಗಿಲೆ ಹಾಡಿದ ಹಾಗೆ ಹಾಡುತ್ತದೆಯೋ? ರೋಗಿಗೆ ಮೊದಲೇ ಶತಾಯ-ಗತಾಯ ಆಗಿದೆ. ಅದರಲ್ಲಿ ಸತ್ತಾಗ ಸುತ್ತಲಿನವರು ಅಳುವ ಹಾಗೆ, ಸುತ್ತಲೂ ನಾಯಿ ಅಳುವುದು, ನರಿ ಅಳುವುದು, ಬೆಕ್ಕು ಕಿರಚುವದು ಇವೆಲ್ಲ ನಡೆದರೆ, ಪಾಪ ರೋಗಿ ಬದುಕಿಯಾನು ಹೇಗೆ? ಅವನ ಮೆದುಳೆಲ್ಲ ಕಿತ್ತುಬಂದಾವು. ರೋಗಿಯು ಸಾಯುವದೊತ್ತಟ್ಟಿಗಿರಲಿ, ಅಶಕ್ತ ಮನುಷ್ಯನೂ ಈ ಕೀಸರ-ಬಾಸರ ಕೇಳಿ ಸತ್ತಾನು. ಇದರಲ್ಲಿ ಮೂಢವಾದದ್ದು ಹಾಗಾದರೆ ಏನಿದೆ? ಇದನ್ನು ನಂಬದ "ಬುದ್ಧಿವಂತರಾದ" ಬುದ್ಧುಗಳು-ನೀವೇ ಮೂಢರು-ಅಥವಾ ಇಂಗ್ಲೀಷರಲ್ಲಿ ಒಂದು ನಂಬುಗೆ ಇದೆ-ಯಾರೂ ನಿಚ್ಚಣಿಕೆಯ ಬುಡದಲ್ಲಿ ಹಾಯ್ದು ಹೋಗಬಾರದೆಂದು-ಇದರಲ್ಲಿ ಮೂಢವಾದದ್ದು ಏನಿದೆ? ನೀವು ನಿಚ್ಚಣಿಕೆಯ ಬುಡದಲ್ಲಿ ಹಾಯ್ದು ಹೋಗುವಾಗ, ಏಣಿಯ ಮೇಲೆ ನಿಂತಿದ್ದ ಕೆಲಸಗಾರರಾರಾದರೂ ಕೈಯಲ್ಲಿಯ ಇಟ್ಟಿಗೆ, ಕಲ್ಲು, ಬುಟ್ಟಿಗಳನ್ನು ನಿಮ್ಮ ಮೇಲೆ ಚೆಲ್ಲಿದರೆ, ಎಲ್ಲಿದ್ದೀತು ನಿಮ್ಮ ಬುದ್ಧಿವಂತ- ಬುದ್ಧು ತಲೆ? ಇದರಲ್ಲಿ ನಿಮಗೆ ವಿಶ್ವಾಸವಿಲ್ಲವೆಂದು ತೋರಲು ನೀವು ಗೋಡೆಗೆ



ಹೋಗಿ ತಲೆ ಹಾಯಿಸುವದಿದೆಯೆ? ಯಾಕೆ ನಿಮಗೆ ಈ ಪೌರುಷ? ಬೆಂಕಿಯಲ್ಲಿ ಕಾಲಿಟ್ಟರೆ, ಕಾಲು ಸುಡುವುದೆಂದು ಹೇಳುವ ಬುದ್ಧಿವಾದಕ್ಕೂ ಇದಕ್ಕೂ ಏನಿದೆ ಅಂತರ? ಆದರೂ ಮೂಢ ನಂಬಿಕೆ—! ಅಥವಾ ಇಂಗ್ಲೀಷರಲ್ಲಿ ಇನ್ನೂ ಒಂದು ನಂಬಿಕೆ ಇದೆ. ಪಾವಟಿಗೆಗಳನ್ನು ಎದುರು ಬದುರಾಗಿ ಸರಸರನೆ ಹತ್ತಬಾರದೆಂದು. ಹಾಗೆ ಹತ್ತಿದರೆ ಯಾರಾದರೊಬ್ಬರು ಸಾಯುತ್ತಾರೆಂದು. ಹತ್ತುವದೇ ಆದರೆ, ಒಬ್ಬರನ್ನೊಬ್ಬರು ಸಂಧಿಸಿದಾಗ, ಬೆರಳು ಬೆರಳು ಜೋಡಿಸಿ ಇಲ್ಲವೆ ಮಾತಾಡಿ ಮುಂದುಹೋಗಬೇಕೆಂದು. ಇದರಲ್ಲಿಯಾದರೂ ಮೂಢವಾದದ್ದೇನಿದೆ? ಇಕ್ಕಟ್ಟಾದ ಪಾವಟಿಗೆಗಳನ್ನು ಎದುರುಬದುರಾಗಿ ರಭಸದಿಂದ ಹತ್ತುವಾಗ, ಒಬ್ಬರಿಗೊಬ್ಬರು ತಾಕಲಾಡಿ, ಯಾರಾದರೂ ಕೆಳಗೆ ಬಿದ್ದು ಪ್ರಾಣನೀಗಬಹುದೆಂದು ಹೇಳುವದರಲ್ಲಿ ಮೂಢವಾದದ್ದೇನು? ಅಥವಾ ಬೆರಳು ಬೆರಳು ಸೇರಿಸಿ, ಇಲ್ಲವೇ ಮಾತನಾಡಿ ಸಾಗಬೇಕೆಂದಾಗ, ಸ್ವಾಭಾವಿಕವಾಗಿಯೇ ನೀವು ನಿಮ್ಮ ವೇಗಕ್ಕೆ ಬ್ರೆಕ್ ಹಾಕುತ್ತೀರೆಂಬ ಮಾನಸಶಾಸ್ತ್ರದ ಬುದ್ಧಿವಂತಿಕೆಯನ್ನು ಮೆಚ್ಚುವ ಬದಲು ಮೂಢನಂಬಿಕೆಯೆಂದು ಹಕ್ಕಳಿಸುವದರಲ್ಲಿ ಅರ್ಥವೇನಿದೆ?... ಅಥವಾ ಇಂಗ್ಲೀಷರಲ್ಲಿ ಇನ್ನೂ ಒಂದು ನಂಬಿಕೆ ಇದೆ. ಮನೆಯ ಕೋಣೆಯಲ್ಲಿದ್ದಾಗ ಛತ್ರಿಗೆಯನ್ನು ತೆರೆಯಬಾರದೆಂದು. ಇದಕ್ಕಿಂತ ಬುದ್ಧಿವಂತಿಕೆಯ ಮಾತು ಇನ್ನೇನು ಬೇಕು?



ಇರುವವೇ ಇಕ್ಕಟ್ಟಾದ ಕೋಣೆಗಳು. ಅವುಗಳಲ್ಲಿ ನೀವು 'ಫಲ್' ಎಂದು ಛತ್ರಿಗೆಯನ್ನು ಬಿಡಿಸಿ ಬಿಟ್ಟರೆ, ಮಗ್ಗುಲಿದ್ದವರ ಹಣೆ ಕಣ್ಣುಗುಡ್ಡೆಗಳ ಗತಿಯೇನು? ಇದರ ಬುದ್ಧಿವಂತಿಗೆ ಸೂರ್ಯ ಪ್ರಕಾಶದಷ್ಟು ಸ್ಪಷ್ಟ. ಕಣ್ಣಿಗೆ ಕಾಮಾಲೆಯಾದವರಿಗೆ ಯಾರ ಬುದ್ಧಿಯ ಬೆಳಕು ಸರಿಯಾಗಿ ಕಂಡೀತು. ಅಥವಾ ಅವರಲ್ಲಿ ಇನ್ನೂ ಒಂದು ನಂಬಿಕೆ ಇದೆ. ಛತ್ರಿಗೆಯನ್ನು ಗಾದೆಯ ಮೇಲೆ ಇಟ್ಟುಕೊಂಡು ಮಲಗಬಾರದೆಂದು, ಇದರಲ್ಲಿಯೂ ಮೂಢವಾದುದೇನು? ಮಳೆಯಲ್ಲಿ ತೋಯಿಸಿಕೊಂಡು ಬಂದಿದ್ದರೆ, ಗಾದೆ ತೊಯ್ದೀತು. ಇಲ್ಲವಾದರೆ ರಾತ್ರಿ ಉರುಳಾಡುವಾಗ ಕಡ್ಡಿ ಕಣ್ಣಿಗೆ ಚುಚ್ಚಿಯಾವು? ಅಥವಾ ವಿದೇಶಿಯರ ನಂಬಿಕೆಯೇ ಏಕೆ? ನಮ್ಮಲ್ಲಿಯೂ ಹೇಳುತ್ತಾರೆ. ಸಂಜೆಯಾದ ಮೇಲೆ ಕಸಗುಡಿಸಬಾರದೆಂದು. ಅದರಿಂದ ಲಕ್ಷ್ಮಿ ಹೊರಗೆ ಹೋಗುತ್ತಾಳೆ— ಅಶುಭಸೂಚಕವೆಂದು ಇದಕ್ಕಿಂತ ಹೆಚ್ಚಿನ ಹಿತವಾದ ನಿಮಗೇನು ಬೇಕು? ಮರಗುಳಿಗಳಾದ ನೀವು ಏನಾದರೂ ಅಲ್ಲಲ್ಲಿ ಚೆಲ್ಲಿರಬಹುದೆಂದು. ಹಗಲು ಕಸಗೂಡಿಸಿದರೆ, ಕಸದಲ್ಲಿ ಏನು ಹೋಗಿದೆಯೆಂಬುದಾದರೂ ತಿಳಿದೀತು. ಸಂಜೆಯಾದರೆ, ಕಸವೂ ಹೋದೀತು, ಕಸವರವೂ ಹೋದೀತು. ಕಸವನ್ನೂ ಉಳಿಸಿಕೊಳ್ಳಬೇಕಾದ ಈ ಕಾಲದಲ್ಲಿ ಅಲ್ಲಲ್ಲಿ ಬಿದ್ದ ಎರಡು ಪೈಸಾಗಳನ್ನಾದರೂ ಉಳಿಸಿಕೊಳ್ಳೋಣ. ಇಂಗ್ಲೀಷ ನಂಬುಗೆಯೂ ಇದನ್ನೇ ಹೇಳುತ್ತದೆ. ಇಂಗ್ಲಂಡದಲ್ಲಿ ಆದೇ ಮದುವೆಯಾದ ನವದಂಪತಿಗಳಂತೂ ಸುತರಾಂ ಸಂಜೆ ಕಸಗುಡಿಸಬಾರದೆಂದು ಸರಿಯೇ. ಮೊದಲೇ ಯೌವ್ವನ! ಅದರಲ್ಲಿ ಹೊಸ ದಂಪತಿಗಳು—! ಮರಗುಳಿತನಕ್ಕೆ ಇದಕ್ಕಿಂತ ಹೆಚ್ಚಿನ ಇಂಧನ ಏನು ಬೇಕು? ನೀವು ಶುಭ ಕೆಲಸದ ಸಲುವಾಗಿ ಹೊರಟಾಗ ಬೊಕ್ಕತಲೆಯವರು ಎದುರು ಬಂದರೆ ಅಪಶಕುನ. ಹೆಣ ಹೂರಲಿಕ್ಕೆ ಹೋದಾಗ ಜನ ಬೊಕ್ಕತಲೆ ಬರಿಗಾಲಿದಲ್ಲಿರುವರು. ಆದ್ದರಿಂದ ಅಂದ ಮೇಲೆ ಬೊಕ್ಕತಲೆ ಅಪಶಕುನವಲ್ಲದೆ ಏನು? ಮೂಢ ನಂಬಿಕೆಯೆಂದರೆ, ನಗಬೇಡಿ. ನಿಜವಾಗಿ ಮೂಢನಂಬಿಕೆಯೆಂದರೆ ನಲ್ಲೆ ಜ್ಞಾನದ ಸುಧೆ— ಕಾಂತಾ ಸಮ್ಮಿತತೆಯ ಉಪದೇಶ— ಆ ಮೃದು ವಾಣಿಯನ್ನು ಆಲಿಸುವ ಬುದ್ಧಿಯನ್ನು ನಾವು ಕಲಿಯಬೇಕು.

ನಿಜವಾಗಿ, ಮೂಢನಂಬಿಕೆ ಎಂದರೆ ಗಾರ್ಡಿನರ್ ಹೇಳಿದ ಹಾಗೆ ಭಾವಜೀವಿಯ ವರದ ಹಸ್ತ. ಈಗ ೧೩ನೆಯ ಅಂಕಿಯನ್ನೇ ತೆಗೆದುಕೊಳ್ಳೋಣ. ೧೩ನೆಯ ಅಂಕಿ ಅಶುಭಸೂಚಕವೆಂದು ಜಗತ್ತೇ ಸಾರುತ್ತದೆ. ಒಬ್ಬ ರೋಗಿಯನ್ನು ೧೩ನೆಯ ನಂಬರಿನ ಕೋಣೆಯಲ್ಲಿ ೧೩ನೆಯ ಮಂಚದ ಮೇಲೆ ಮಲಗಿಸಿದರೆ ಎಂದಾದರೂ ಅವನು ಬದುಕಿಯಾನೆ?

ರೋಗನಿವಾರಣೆ ದೈಹಿಕ ಪ್ರಗತಿಯನ್ನವಲಂಬಿಸಿದಷ್ಟೇ ಮಾನಸಿಕ ನೆಮ್ಮದಿಯನ್ನೂ ಅವಲಂಬಿಸಿದೆ. ರೋಗಿ ಮಲಗಿದ್ದ ಸ್ಥಳಕ್ಕೆ ಬಂದು ಎಲ್ಲರೂ ನೀನು ಸಾಯುತ್ತೀ ಎಂದು ಹೇಳಹತ್ತಿದರೆ, ಬದುಕಬಲ್ಲ ರೋಗಿ ಯಾರಿದ್ದಾರೆ ಹೇಳಿರಿ. ಅಂತಲೇ ಲಂಡನ್ನಲ್ಲಿ ಎಷ್ಟೋ ಕಡೆಗೆ ೧೨ ಆದಕೂಡಲೆ ೧೪ನೆಯ ನಂಬರಿನ ರಸ್ತೆಯೇ ಬರುತ್ತದೆ; ಎಷ್ಟೋ ಹೋಟೆಲುಗಳಲ್ಲಿ ೧೩ನೆಯ ನಂಬರಿನ ಕೋಣೆಗಳೇ ಇಲ್ಲ, ಅಥವಾ ನಮ್ಮಲ್ಲಿಯ ಪರಂಪರೆಯನ್ನೇ ತೆಗೆದುಕೊಳ್ಳಿರಿ. ನೀವು ಬ್ರಾಹ್ಮಣರೋ ? ಚಿಕ್ಕವರಿರು



ವಾಗ ನಿಮಗೆ ದೆವ್ವಗಳ ಭಯ ಎಷ್ಟಿತ್ತು ? ಅದೇ ನಿಮ್ಮ ಉಪನಯನವಾದಕೂಡಲೇ ದೆವ್ವಗಳಿಗೆ ನೀವು ಬ್ರಹ್ಮಗಂಟನ್ನು ತೋರಿಸಿದಿರೆಂದರೆ,ದೆವ್ವಗಳು ಓಡಿ ಹೋಗುತ್ತವೆ ಎಂದಾಕ್ಷಣಕ್ಕೆ ನಿಮ್ಮ ಮನಸ್ಸಿನಲ್ಲಿ ಎಷ್ಟು ಧೈರ್ಯ ಉಕ್ಕಿಬಂದಿತು, ಎಷ್ಟುಸಲ ನೀವು ಕತ್ತಲೆಯಲ್ಲಿ ಹೋಗುವಾಗ ಬ್ರಹ್ಮಗಂಟಿನ ಮೇಲೆ ಬೆರಳಿಟ್ಟು ನಡೆದಿಲ್ಲ ? ಅಥವಾ ಎಷ್ಟು ಜನ ವಟುಗಳು ಈ ಭೂತನಿವಾರಣೆಯ ಬ್ರಹ್ಮಗಂಟಿಗಾಗಿ ಉಪನಯನವಾಗಲಿಕ್ಕೆ ಧಾವಿಸಿಲ್ಲ ? ಬ್ರಹ್ಮನನ್ನು ಅರಿಯದ, ಯಾವ ಗಂಟೂ ಇಲ್ಲದ ಇಂದಿನ ಜನಾಂಗಕ್ಕೆ ಯಾವ ಭಾಷೆಯಲ್ಲಿ ಬುದ್ಧಿವಾದವನ್ನು ಹೇಳಬೇಕು? — ಅದೂ ಹೋಗಲಿ, ರಾತ್ರಿ ನೀವು ನಡೆದಾಡುವಾಗ ಹಾವು-ಹುಳ-ಹುಪ್ಪಡಿಗಳ ಭಯ ನಿಮಗೆ ಎಷ್ಟುಸಲ ಆಗಿಲ್ಲ? ಆಗ ಹಿರಿಯರು ನಿಮಗೆ ಹೇಳಿಕೊಟ್ಟ "ಆಸ್ತಿಕ, ಆಸ್ತಿಕ, ಕಾಳಭೈರವ" ಎಂಬ ಮಂತ್ರದ ದೊಣ್ಣೆಗೋಲನ್ನು ಕೈಯಲ್ಲಿ ಹಿಡಿದುಕೊಂಡು ನೀವು ಎಂಥೆಂಥ ನಾಗಲೋಕವನ್ನು ಪ್ರವೇಶಿಸಿಲ್ಲ. ಸುಮ್ಮನೆ ಯಾಕೆ ಸ್ವಾಮೀ ನಿಮ್ಮ ಜೀವನಕ್ಕೆ ಮಂದರ ಪರ್ವತದ



ಧೈರ್ಯವನ್ನು ತಂದು ಕೊಟ್ಟುದೆಂದರೆ "ಮೂಢ" ನಂಬಿಕೆಯೇ. ಬ್ರಹ್ಮಗಂಟಿನ ಹಾಗೆ ಜಟಿಲವಾಗಿ ಆಶ್ರಯಿಸಿರಿ, ಅದನ್ನು ಬಿಡಬೇಡಿ ಅಷ್ಟೇ ಅಲ್ಲ; ನಿಜವಾಗಿ ಮೂಢನಂಬಿಕೆಗಳೆಂದರೆ ಸು-ಸಂಸ್ಕೃತ ಹೃದಯದ ಪರಿಪಕ್ವತೆ—ಜಾಣನಿಗೆ ಮಾತಿನ ಪೆಟ್ಟಂತೆ—ಕೋಣನಿಗೆ ಲತ್ತೆಯಪೆಟ್ಟಂತೆ-ಮೂಢನಂಬಿಕೆ ಮಾನವಹೃದಯದ ಸೂಕ್ಷ್ಮತೆಯ ಪರಾಕಾಷ್ಠೆ, ವಾಚ್ಯವಾಗಿ, ಸ್ಪಷ್ಟವಾಗಿ, ಕಿರಚಿ, ಮಾರ್ಕೆಟ್ಟಿನಲ್ಲಿ ಹೇಳಿದ ಹಾಗೆ ಬೊಗಳಿ ಹೇಳದೆ, ಮೂಢನಂಬಿಕೆ ಮಧುರವಾಗಿ, ಸುಲಲಿತವಾಗಿ, ಮೃದುವಾಗಿ ಸೂಚ್ಯವಾಗಿ ನಿಮಗೆ ಹೇಳುತ್ತದೆ. ಮನೆಯಲ್ಲಿ ಮನೆಯ ಸುತ್ತ ಗೂಗೆ ಕಿರಚಿದರೆ ಕೆಟ್ಟ ಎಂದು ಹೇಳುತ್ತಾರೆ. ಕಿರುಚುವದಂತೂ ಹೋಗಲಿ ಗೂಗೆಯನ್ನು ಕಂಡರೆ ಹೆದರದಿದ್ದವರು ಯಾರು? ಏನು ಅದರ ಗಿಡ್ಡ ದೇಹ! ಏನು ಅದರ ದೊಡ್ಡ ತಲೆ! ಏನು ಅದರ ಭಯಂಕರ ರಾವ ಕಣ್ಣು! ಏನು ಧಾವಿಸಿಬರುವ ಅದರ ಚುಂಚು. ಅದರ "ಗುಟುರ್ ಗುಟರ್" ಅಹು ಗೋಣು ಹೊರಳಿಸಿದರೆ ಸಾಕು-ನನಗಂತೂ ನನ್ನ ಎದೆ ನಡುಗಿದ ಹಾಗೆ ಆಗುತ್ತದೆ. ನಯವಿಲ್ಲ—ವಿನಯವಿಲ್ಲ—ಹಾರುವದಿಲ್ಲ—ನುಡಿಯುವದಿಲ್ಲ—ಮಾತಿಲ್ಲ—ಕಥೆಯಿಲ್ಲ-ಭೂತಕೂತ ಹಾಗೆ ಕೂತಿರುತ್ತದೆ ದೇವರ ಈ ಸೃಷ್ಟಿ! ಇದನ್ನು ನೋಡಿ ಎದೆ ನಡುಗದವರಾರು? ಇದು ಮನೆ ಹೊಕ್ಕರೆ ಪ್ರಾಣ ನೀಗದವರಾರು? ರಾತ್ರಿ ಓಡಾಡುವ ಈ ರಾತ್ರಿಂಚರ ಪಿಶಾಚಿ ಹಗಲು ಮನೆಯ ಮುಂದೆ ಲಬೋಲಬೋ ಮಾಡಿದರೆ ಗತಿ ಏನು? ಸು-ಸಂಸ್ಕೃತ ಹೃದಯ ಬದುಕೀತೆ? ಗೂಗೆಯಂತೆಯೇ ಬೆಳವ ಕಣ್ಣುಕಪ್ಪಡಿ. ಬೆಳವ ಹೊಕ್ಕ ಮನೆ ಹಾಳು. ಅಧ್ಭುತ ರೂಪಕ್ಕಲ್ಲದಿದ್ದರೂ ಅದರ ಗುಟುರುವಿಕೆಗೆ. ಕಣ್ಣು ಕಪ್ಪಡಿಯಂತೂ ಪಕ್ಷಿಯೂ ಅಲ್ಲ; ಪಶುವೂ ಅಲ್ಲ. ಸಾವೂ ಅಲ್ಲ; ಬದುಕೂ ಅಲ್ಲ; ಭೂತವೂ ಅಲ್ಲ-ಬೆಂತರವೂ ಅಲ್ಲ; ಹಾಳಿನ ಪ್ರತೀಕ ಕಣ್ಣುಕಪ್ಪಡಿ.

ಅಮೇರಿಕೆಯಲ್ಲಿ ಒಂದು ನಂಬುಗೆಯಿದೆ. ಹೆಣದ ಹಿಂದಿಂದ ಹೋಗಬಾರದೆಂದು. ನಿಮ್ಮ ಮುಂದು ಹೆಣದ ಮೆರವಣಿಗೆ ಸಾಗಿದ್ದರೆ, ನೀವು ಅದರ ಹಿಂದಿಂದು ಹೋಗದೆ, ಅದನ್ನು ದಾಟಿ ಸಾಗಿ ಹೋಗಬೇಕೆಂದು. ಇದು ಮಾನವನ ನಿಜವಾದ ಸೌಕುಮಾರ್ಯ ದೃಷ್ಟಿ. ಹೆಣದ ಹಿಂದಿನಿಂದ ಸಾಗಿ ನೀವು ಹೆಣದ ಎರಡನೆಯ ನಂಬರ್ ಸೀಟ್ ರಿಝರ್ವ ಮಾಡಿಸುವವಿದೆಯೇ? ಅದಕ್ಕಾಗಿಯೇ ಹೆಣವನ್ನು ಹಿಂದೆ ಸರಿಸಿ ನೀವು ಮುಂದೆಸಾಗಿ ಹೋಗಬೇಕು ಅಂದರೆ, ಹೆಣ ಹಿಂದಿನಿಂದ ನಿಮ್ಮನ್ನು ಬರಮಾಡಿಕೊಳ್ಳುವವಿಲ್ಲ. ನೀವು ಮರಣವನ್ನು ದಾಟಿ ಮುಂದೆ ಹೋಗಿರುತ್ತೀರಿ. ಆದ್ದರಿಂದ ಮೂಢನಂಬಿಕೆಯೆಂದರೆ ಸುಸಂಸ್ಕೃತ ಹೃದಯದ ಅಭಿವ್ಯಕ್ತಿ.

ಅಂತಲೇ ನೂರಾರು—ಸಾವಿರಾರು ನಂಬಿಕೆ—ಗಳು ದೇಶ—ಕಾಲಗಳ ಮಿತಿಯನ್ನು ಮೀರಿ ಮಾನವನ ಅನುಭವದ ಅಮೌಲ್ಯಪರಂಪರೆ ಆಗಿವೆ. ಬೆಕ್ಕು, ಕಾಗೆ, ಗೂಗೆ, ಬೆಳವ, ಕಣ್ಣುಕಪ್ಪಡಿ, ಹಲ್ಲಿ, ನರಿ, ನವಿಲು, ಮೊಲ—ಎಲ್ಲವೂ ತಮ್ಮ ತಮ್ಮದೇ ಆದ ಭಾಷೆಯಲ್ಲಿ ಮಾನವತೆಗೆ ಉಪದೇಶಿಸುತ್ತಿವೆ—ನಮ್ಮ ಹಿರಿಯರಲ್ಲಿ ಒಂದು ಸಂಪ್ರದಾಯವಿತ್ತು. ಯಾರಾದರೂ ಸೀತಡೆ ಸಾಕು "ಚಿರಾಯುಷಿ" ಎನ್ನುತ್ತಿದ್ದರು. ಒಂದು ಸೀತರೆ ಅಪಸವ್ಯ; ಎರಡು ಶುಭ. ಪಾಶ್ಚಿಮಾತ್ಯರಲ್ಲೂ ಇದೇ ನಂಬುಗೆ ಇದೆ. ಯಾರಾದರೂ ಸೀತರೆ ಸಾಕು ಹತ್ತಿರದ್ದವರು "God bless you' ಎನ್ನುತ್ತಾರೆ, ಅಂದರೇನು? ಸೀತು ಬಾಯಿತೆಗೆದರೆ, ದೇವರು ಏಕೆ ಆಶೀರ್ವದಿಸಬೇಕು. ಬರ್ಟ್ರಾಂಡ್ ರಸೆಲ್ ಈ ಪ್ರಶ್ನೆಗೆ ಉತ್ತರ ಹೇಳುತ್ತಾರೆ. ನಮ್ಮ ಪ್ರಾಚೀನರ ಕಲ್ಪನೆ ಇತ್ತು— ಮನುಷ್ಯ ಸೀತಾಗ ಅವನ ಆತ್ಮ ಆ ಕ್ಷಣದ ಮಟ್ಟಿಗೆ ಹೊರಗೆ ಹೋಗುತ್ತದೆಂದು. ಆಗ ತೆರ

ವಾದ ಅವನ ಹೃದಯಪೀಠದಲ್ಲಿ ಭೂತ ಸಂಚಾರ ವಾಗುವ ಹೆದರಿಕೆ ಇದೆ. ಆದ್ದರಿಂದ, "ಈ ತೆರವಿನ ವೇಳೆಯಲ್ಲಿ "ದೇವರು ಆಶೀರ್ವದಿಸಲಿ" ಎಂದಾಕ್ಷಣಕ್ಕೆ ಹತ್ತಿರ ಬಂದಿದ್ದ ಭೂತ ಓಡಿ ಹೋಗುತ್ತದೆ. ಒಂದು ಸೀತರೆ ಅಶುಭ—ಎರಡು ಶುಭ ಏಕೆ? ಸೀನು ಬರುವುದು ಮಸ್ತಕದಿಂದ.

ಮಸ್ತಕ ಪರಮಾತ್ಮನ ಸ್ಥಾನ. ಆದ್ದರಿಂದ ಸೀನು ಪರಮಾತ್ಮ ಕಳಿಸಿದ ಸಂದೇಶ. ಒಂದು ಅಶುಭ — ಎರಡು ಶುಭ — ಮೂರು ಅತಿಶಯ ಶುಭ ಇತ್ಯಾದಿ ಇಡೀ ಮಾನವ್ಯವನ್ನೇ ವ್ಯಾಪಿಸಿ ಸಾಮಾನ್ಯವಾದ ಅನೇಕ ನಂಬಿಕೆಗಳನ್ನು ಹೇಳಬಹುದು, ನಮ್ಮಲ್ಲಿ ಒಂದು ಕಲ್ಪನೆ ಇದೆ—ಸೌಂದರ್ಯಕ್ಕೆ ದೃಷ್ಟಿ ತಾಕೀತೆಂದು. ಅಂಥ ಕಿಸುಗಣ್ಣವರು ನಮ್ಮಲ್ಲಿಯೂ ಇದ್ದಾರೆ. ಪಾಶ್ಚಿಮಾತ್ಯರಲ್ಲೂ ಇದ್ದಾರೆ. ಇಂಥವರು ಒಳ್ಳೆಯ ಕಲ್ಲುಗಳನ್ನು ನೋಡಿದರೆ ಸಾಕು. ಕಲ್ಲುಗಳು ಒಡೆದಾವು. ನೀವು ಮುದ್ದುಮುದ್ದಾದ ಸುಂದರವಾದ ದಷ್ಟಪುಷ್ಟವಾದ ಪುಟ್ಟ ಮಗುವನ್ನು ನೋಡುತ್ತೀರಿ. ನೋಡಿದ ಕೂಡಲೇ ನಿಮ್ಮ ಮನಸ್ಸು ಆನಂದದಿಂದ ಉಕ್ಕಿ ಹರಿಯುತ್ತದೆ, ವರ್ಣನೆ ಓತಪ್ರೋತವಾಗಿ ಬರುತ್ತದೆ. "ಏನು ಮಗು ಇದು! ಪುಟಚೆಂಡು ಆಗಿದೆ ಏನು ಸೌಂದರ್ಯ" ತಾಯಿಯಾದವಳೂ ಮಗ್ಗುಲಿದ್ದವಳೂ ಹೇಳುತ್ತಾಳೆ. "ಒಳಿತೆನ್ನು" ಇಲ್ಲವಾದರೆ, "ಅಂಗಾಲಿಗೆ ಏನು ಹತ್ತಿದೆ ನೋಡು" ಎಂದು ವರ್ಣನೆ ಮಾಡುವಾಗ ನೀವು ಅಂಗಾಲೇಕೆ ನೋಡಿಕೊಳ್ಳಬೇಕು? ನಿಮ್ಮ ದೃಷ್ಟಿ ಆ ಮಗುವಿಗೆ ತಾಕಬಾರದೆಂದು. ಮಗುವಿನ ಆ ಮುದ್ದು ಮುಖ ಬಿಂಬದಿಂದ, ನಿಮ್ಮ ಲಕ್ಷ ನಿಮ್ಮ ಹೇಸಿ ಕಾಲಿನ ಕಡೆಗೇ ಹೋಗಲಿ ಎಂದು. ಇಂಗ್ಲಂಡದಲ್ಲಿಯಂತೂ ಒಳ್ಳೆಯ ಆಹಾರವನ್ನು ಕೂಡ ನೀವು ಈ ರೀತಿ ವರ್ಣಿಸಿದರೆ, ಹೆಣ್ಣುಮಕ್ಕಳು ಅದರ ಮೇಲೆ ಶಿಲುಬೆಯ ಚಿಹ್ನವನ್ನು ಬರೆಯುತ್ತಾರೆ. ದೇವತಾ ಪ್ರತೀಕ ಶಿಲುಬೆಯ ಚಿಹ್ನ ಆ ವಸ್ತುವನ್ನು ನಿಮ್ಮ ಕಾಕ ದೃಷ್ಟಿಯಿಂದ ರಕ್ಷಿಸಲೆಂದು.

ಆದ್ದರಿಂದ, ಮೂಢನಂಬಿಕೆ ಎಂದಾಕ್ಷಣಕ್ಕೆ ಮೂಗು ತಿರುವದಿರಿ. ಹುಲ್ಲಿನ ಬುಡದಲ್ಲಿ ಹಾವಿರುತ್ತದೆ ಎಂದಾಕ್ಷಣಕ್ಕೆ ಒಂದು ಹುಲ್ಲಿನ ಎಸಳನ್ನು ಎತ್ತಿ ಹಿಡಿದು ಹಾವೆಲ್ಲಿದೆ ತೋರಿಸಿರಿ ಎಂಬ ಬುದ್ಧಿಯ ಪ್ರಕಾಂಡತೆಯನ್ನು ಪ್ರದರ್ಶಿಸಬೇಡಿರಿ. ಜನ ನಿಮ್ಮ ಗೇಲಿ ಮಾಡಿಯಾರೆಂದು ಗಾಬರಿಯಾಗಿ ನಿಮ್ಮ ಅನೂನ ಪರಂಪರೆಯಾದ ಅಮೌಲ್ಯ ಸೊತ್ತಾದ ಮೂಢನಂಬಿಕೆಗಳನ್ನು ಮೂಲೆಗೆ ಒತ್ತದಿರಿ. "ಜನ ಮೆಚ್ಚ ನುಡಿದರೇನುಂಟು ಲೋಕದಲಿ ಮನಮೆಚ್ಚ ನುಡಿಯಬೇಕು." ಪರೀಕ್ಷೆಗೆ ಕೂಡ್ರುವಾಗ ಮಾತ್ರ ಎಲ್ಲರ ಕಣ್ಣು ತಪ್ಪಿಸಿ ದೇವಾಲಯಗಳಿಗೆ ಹೋಗುವ ಅಧಮತನದಕ್ಕಿಂತ ಹೆಚ್ಚಿನ ಅಪರಾಧವೇನಿದೆ—? ಪರೀಕ್ಷೆಗೆ ಬರೆಯುವಾಗ ತನ್ನ ಕಣ್ಣಿಗೆ ಮಾತ್ರ ಕಂಡು, ಯಾರ ಕಣ್ಣಿಗೂ ಕಾಣದ ಹಾಗೆ ಟಾಚಣಿಯ ಮೊನೆಯಿಂದ ಪೇಪರುಗಳ ಮೇಲೆ "ಶ್ರೀ ರಾಮ ಜಯ ರಾಮ" ಎಂದು ಲಿಖಿಸುವ ಹೇಡಿತನಕ್ಕಿಂತ ಹೀನ ಕೆಲಸವೇನಿರಬೇಕು? ಧೈರ್ಯವಿದ್ದರೆ ಮುನ್ನುಗ್ಗಿರಿ ; "ನಡೆ ಮುಂದೆ, ನಡೆ ಮುಂದೆ, ಹಿಗ್ಗಿ ನಡೆ ಮುಂದೆ ಜಗ್ಗದೆಯೆ ಕುಗ್ಗದೆಯೆ ನುಗ್ಗಿ ನಡೆ ಮುಂದೆ" ಅಂಜುಬುರುಕರು ಮಾತ್ರ ಮೂಢ ನಂಬಿಕೆಗಳಲ್ಲಿ ವಿಶ್ವಾಸವಿಲ್ಲದವರು. ನಿಜವಾದ ವೀರರು ಯಾವಾಗಲೂ ಮೂಢನಂಬಿಕೆಯಲ್ಲಿ ಅಚಲವಾದ ವಿಶ್ವಾಸವಿಟ್ಟು ಆ ರೀತಿ ಆಚರಿಸುವವರು. ಆದ್ದರಿಂದ, ಜನಕ್ಕೆ ಅಂಜಿ ನಡೆಯಬೇಡಿರಿ.

ಎಂಥ ಜಗತ್ತಿದೆ ನಮ್ಮ ಈ ಮೂಢ ನಂಬಿಕೆಗಳ ವರ್ಣಮಯ ಜಗತ್ತು. ನೀವು ಆ ಕಾರ್ಯ ಸಾಮ್ರಾಜ್ಯದ ಬೃಹಸ್ಪತಿಗಳಾಗಿರಿ. ಎಡದಿಂದ ಬಲಕ್ಕೆ ಬರುವ ಬೆಕ್ಕು; ಎದುರಾಗಿ ಹಾರುವ ಕಾಗೆ ಮುಂಜಾವು ಮುಖ ತೋರಿಸುವ ನರಿ; ಲಾಸ್ಯಗೈಯುವ ನವಿಲು; ಅಡ್ಡ ಗೋಡೆಯ ಮೇಲೆ ಲೊಚಗುಡುವ ಹಲ್ಲಿ; ಒಂದೇ ಎರಡೇ ಎಂಥ ಅದ್ಭುತ ಪ್ರಾಣಿಸಂಗ್ರಹಾಲಯ ನಮ್ಮ ಈ ಮೂಢ ನಂಬಿಕೆಗಳ ಜಗತ್ತು. ಇಂಥ ಕಾವ್ಯಸಾಮ್ರಾಜ್ಯವನ್ನು ಬಿಟ್ಟು, ಚಿಲ್ಲರೆ ಪೈಸಾದ ವ್ಯವಹಾರ ರಾಜ್ಯದ ಅಧಃಪತನಕ್ಕೆ ಮನಸ್ಸು ಮಾಡುತ್ತೀರಾ? ಸುತರಾಂ ಬೇಡ. ಎಂದಿಗೂ ಬಿಡಬೇಡಿರಿ-ನಮ್ಮ ಹಿರಿಯರು ಗಳಿಸಿಕೊಟ್ಟ ಈ ಆಸ್ತಿಯನ್ನು.

# ನ್ಯಾಯದಾನದಲ್ಲಿ ಆಗುವ ವಿಲಂಬಗಳು



ಸೇವ ನಮಿರಾಜ ಮಲ್ಲ

ನಮ್ಮ ನ್ಯಾಯಾಲಯಗಳಲ್ಲಿ ಆಗುತ್ತಿರುವ ನ್ಯಾಯದಾನದ ವಿಲಂಬವು ಇಂದು ನಾಣ್ಣುಡಿಯಾಗಿದೆ. ವಿಲಂಬ ಮಾಡಲ್ಪಟ್ಟ ನ್ಯಾಯದಾನವು ನ್ಯಾಯದಾನವನ್ನೇ ನಿರಾಕರಿಸಿದಂತೆ ಎಂಬ ಮಾತು ಬಹಳ ಹಳೆಯದು. ಆದ್ದರಿಂದಲೋ, ಏನೋ ಕಾನೂನೆಂಬುದು ಕತ್ತೆ ಎಂಬ ತಿರಸ್ಕಾರವಾದ ನಾಡೆಯ ಮಾತೂ ರೂಢಿಯಲ್ಲಿದೆ.

ನ್ಯಾಯದಾನದ ವ್ಯವಸ್ಥೆಯಲ್ಲಿ ವಿಚಾರಣೆಯ ವಿಧಾನಕ್ಕೆ ಅತ್ಯಂತ ಮಹತ್ವವಿದೆ. ಇಂದಿನ ವಿಚಾರಣೆಯ ವಿಧಾನವು ರೋಮನ್ ಮೂಲವಾದ ಬ್ರಿಟಿಷ್ ಸಂಪ್ರದಾಯದ ಪ್ರತೀಕವಾಗಿದ್ದರೂ, ತತ್ವಶಃ ಇದು ನಮ್ಮ ಹಿಂದಿನ ನ್ಯಾಯವಿಚಾರಣಾ ಪರಂಪರೆಗೂ ಅನುಗುಣವಾಗಿದೆ. ನಮ್ಮ ರಾಜರುಗಳ ಕಾಲದಲ್ಲೂ ನ್ಯಾಯವಿಚಾರಣೆ ವಿವಾದಗ್ರಸ್ತರಾದ ಇತ್ತಂಡದವರ ಸಮಕ್ಷಮದಲ್ಲಿ ನಡೆಯುತ್ತಿತ್ತು. ಆಗಲೂ ಈಗಿನಂತೆ ಸಾಕ್ಷ್ಯ, ಲೇಖ್ಯ ಪುರಾವೆಗಳನ್ನು ಆಯಾಪಕ್ಷದವರು ತಮ್ಮ ತಮ್ಮ ವಾದಗಳ ಸಮರ್ಥನೆಗಾಗಿ ಒದಗಿಸಬೇಕಾಗುತ್ತಿತ್ತು. ಆಗ ಪ್ರಚಲಿತದ್ದ 'ದಿವ್ಯ' ಎಂಬ ಪುರಾವೆಯ ವಿಧಾನಕ್ಕೆ ಮಾತ್ರ ನಮ್ಮ ಆಧುನಿಕ ನ್ಯಾಯದಾನ ವ್ಯವಸ್ಥೆಯಲ್ಲಿ ಮನ್ನಣೆ ಸಿಕ್ಕಿಲ್ಲ. ದಿವ್ಯ ಎಂದರೆ ಅಗೋಚರ ಸಂಭವಿಕೆಯ ಮೂಲಕ ತನ್ನ ವಾದವನ್ನು ಸಮರ್ಥಿಸುವುದಾಗಿತ್ತು. ರಾಮಾಯಣದಲ್ಲಿ ಬರುವ ಸೀತೆಯ ಅಗ್ನಿಪರೀಕ್ಷೆ ಈ 'ದಿವ್ಯ' ಪುರಾವೆಗೆ ಶ್ರೇಷ್ಠ ಉದಾಹರಣೆ. ಪ್ರಾದೇಶಿಕವಾಗಿ ಈಗಲೂ ಈ ವಿಧದ ಪುರಾವೆಯ ಅವಶೇಷ ನಮ್ಮಲ್ಲಿ ಉಳಿದಿದೆಯೆನ್ನುವುದಕ್ಕೆ ದಕ್ಷಿಣ ಕನ್ನಡ ಜಿಲ್ಲೆಯಲ್ಲಿರುವ 'ಆಣೆ' ಹಾಕುವ ಮತ್ತು 'ಹ್ಯೊಲು' ಮಾಡುವ ಪದ್ಧತಿಗಳು ಸಾಕ್ಷಿ. ಆಣೆ ಹಾಕುವವನು ಒಂದು ದೇವಾಲಯಕ್ಕೆ ಹೋಗಿ ಅಲ್ಲಿ ತನ್ನ ವಾದ ಸತ್ಯವೆಂದು ದೇವರಾಣೆಮಾಡಿ ಸಾರಬೇಕು. ಹೀಗೆ ಮಾಡಿದ್ದಲ್ಲಿ ಎದುರಾಳಿಯು ತನ್ನ ಸಾಧನೆಯನ್ನು ಬಿಟ್ಟು ಬಿಡುವನು. ಉದಾಹರಣೆಗೆ ಒಬ್ಬನು ತನಗೆ ಇನ್ನೊಬ್ಬನಿಂದ ಒಂದು ಸಾವಿರ ರೂಪಾಯಿ ಬರಲಿಕ್ಕಿದೆ ಎಂದು ಆಣೆ ಹಾಕಿ ನುಡಿಯುತ್ತಾನೆನ್ನೋಣ. ಆಗ ಎದುರಾಳಿಯು ಅವನಿಗೆ ಆ ಹಣವನ್ನು ಕೊಡಬೇಕಾಗುತ್ತದೆ. ಈ ಆಣೆಯ ಸತ್ಯ-ಮಿಥ್ಯಗಳು ಮುಂದೆ ದರ್ಶನವಾಗುವುವು ಎಂಬ ಶ್ರದ್ಧೆ ಇದ್ದವರೇ ಈ ಆಣೆ ಹಾಕುವ ವಿಧಾನಕ್ಕೆ ಒಪ್ಪುತ್ತಾರೆವಿನಾ ಇದ ಕಡ್ಡಾಯದ ವಿಧಾನವಲ್ಲ. ಧರ್ಮಸ್ಥಳವೇ ಮುಂತಾದ ಪ್ರಸಿದ್ಧ ದೇವಾಲಯಗಳಲ್ಲದೆ, ಮುಸಲ್ಮಾನರ ಮಸೀದಿಗಳಲ್ಲೂ, ಕ್ರೈಸ್ತರ ಇಗರ್ಜಿಗಳಲ್ಲೂ ಕೂಡಾ ಈ ಆಣೆ ಹಾಕುವ ವಾಡಿಕೆ ಇದೆ. ಇದರಿಂದಾಗಿ ನ್ಯಾಯವಿಚಾರಣೆಯು ಬಹಳ ಕ್ಷಿಪ್ರವಾಗಿ ತೀರುವುದು. ಇನ್ನು ಕೆಲವರು ಧರ್ಮಸ್ಥಳಕ್ಕೆ ತಮಗೆಬರಬೇಕಾದ ಹಣದಬಗ್ಗೆ 'ಹ್ಯೊಲು' ಎಂಬ ಪತ್ರ ಬರೆದುಕೊಡುವರು. ಇದರ ವಿಚಾರಣೆ ಅಲ್ಲೇ ನಡೆಯುವುದು ಸಾಲ ವಸೂಲಾದರೆ ದೇವರಭಂಡಾರಕ್ಕೆ ಇಂತಿಷ್ಟೇ ಪ್ರಮಾಣದಲ್ಲಿ ಹಣ ತೆರಬೇಕೆಂಬ ನಿಯಮವಿದೆ. ಅಲ್ಲಿನ ಶಾಸ್ತಿಗೆ ಒಳಗಾದವನು ದೈವಿಕ ಆಪತ್ತುಗಳಿಗೆ ಬಲಿಯಾಗುತ್ತಾನೆ, ಅವನ ವಂಶ ನಾಶವಾಗುತ್ತದೆ ಎಂಬಿತ್ಯಾದಿ ಪ್ರತೀತಿಗಳು, ಇಂದಿನ ಸುಸಜ್ಜಿತ ನ್ಯಾಯಾಲಯಗಳ ಯುಗದಲ್ಲೂ ದಟ್ಟವಾಗಿ ಹಬ್ಬಿದೆ.

ಏಕಪಕ್ಷೀಯವಾಗಿ ನಡೆಯುವ ವಿಚಾರಣೆ ಅಥವಾ ತೀರ್ಮಾನ ನ್ಯಾಯದಾನವಲ್ಲ ಎಂಬುದು ನಮ್ಮ ನ್ಯಾಯದಾನ ಪದ್ಧತಿಯ ಮುಖ್ಯ ನೀತಿಯಾಗಿದೆ. ಇದು ನೈಸರ್ಗಿಕ ನ್ಯಾಯಕ್ಕೆ ವಿರೋಧವಾದುದು. ಆದ್ದರಿಂದ ಯಾವುದೇ ವಿವಾದದ ವಿಚಾರಣೆಯೂ ನ್ಯಾಯಾಲಯದಲ್ಲಿ ಇತ್ತಂಡದವರ ಸಮಕ್ಷಮ ನಡೆಯಬೇಕಾಗಿದೆ. ಅವರು ಒಂದುವೇಳೆ ಹಾಗೆ ಸಮಕ್ಷಮ ಇರದಿದ್ದರೂ, ಅವರಿಗೆ ಹಾಗೆ ಇರುವ ಮತ್ತು ತಮ್ಮ ಹೇಳಿಕೆಗಳನ್ನು ಸಾಧಿಸುವ ಅವಕಾಶವನ್ನು ನ್ಯಾಯಾಲಯ ಕಲ್ಪಿಸಬೇಕು. ಇಂಥ ಅವಕಾಶವನ್ನೊದಗಿಸುವುದರಲ್ಲಿ ಒಂದಿಷ್ಟು ಚ್ಯುತಿಯಾದರೆ ಹಾಗೆ ಕೊಡಲಾಗುವ ತೀರ್ಮಾನವು ಅದೊಂದೇ ಕಾರಣಕ್ಕಾಗಿ ಕಿತ್ತುಹಾಕಲ್ಪಡಲು ಬದ್ಧವಾಗಿದೆ.

ಹೀಗೆ ನ್ಯಾಯಾಲಯದ ವಿಚಾರಣೆಯ ಪ್ರಥಮ ಕಾರಣ ಉಂಟಾಗುತ್ತದೆ. ಒಬ್ಬನು ಇನ್ನೊಬ್ಬನು ಒಂದು ವ್ಯಾಜ್ಯವನ್ನು ದಾಖಲು ಮಾಡಿದೊಡನೆಯೇ ಎದುರಾಳಿಯು ನ್ಯಾಯಾಲಯದ ಮುಂದೆ ಬರುವುದಿಲ್ಲ. ಅವನಿಗೆ ಯಾವಾಗ ಹಾಜರಾಗಬೇಕೆಂಬ ದಿನವನ್ನು ನಿರ್ದಿಷ್ಟಪಡಿಸಿ ವ್ಯಾಜ್ಯದ ಒಂದು ಪ್ರತಿಯನ್ನು ಕಳಿಸಲಾಗುತ್ತದೆ. ಈ ವಿಧಾನಕ್ಕೆ ಎರಡು ಮೂರು ತಿಂಗಳಿನಿಂದ ಹಿಡಿದು ಒಂದೆರಡು ವರ್ಷಗಳೂ ಹಿಡಿಯಬಹುದು. ನ್ಯಾಯಾಲಯದ ನೋಟೀಸು ಹೋಗುವಾಗ ಅವನು ಮನೆಯಲ್ಲಿರದಿರಬಹುದು, ಇಲ್ಲವೇ ವಿಳಾಸ ತಪ್ಪಿ ಹೋಗಿರಬಹುದು. ಆಗ ಪುನಃ ನೋಟೀಸು ಹೋಗಬೇಕಾಗುವುದು. ಒಂದು ವೇಳೆ ಅವನು ಹಲವು ಬಾರಿ ಪ್ರಯತ್ನಗಳಿಗೂ ಸಿಗದಿದ್ದರೆ ಮತ್ತೆ ನೋಟೀಸನ್ನು ಪತ್ರಿಕೆಗಳಲ್ಲಿ ಪ್ರಸಿದ್ಧಿಸಲಾಗುವದು. ಆ ಮೇಲೆ ಅವನು ಹಾಜರಾದರೂ ಮತ್ತೆ ಅವನಿಗೆ ವಕೀಲರನ್ನು ನೇಮಿಸುವ ಅವಕಾಶವನ್ನೊದಗಿಸಬೇಕು. ಮೇಲೆ ತನ್ನ ಉದಾಹರಣೆಯನ್ನು ದಾಖಲ ಮಾಡಲು ನಾಲ್ಕೈದು ಸಲ ಬೇಕೆಂದಾದರೆ ಸಂದರ್ಭವನ್ನೊದಗಿಸಬೇಕು. ಇಷ್ಟಾದ ಮೇಲೆ ನ್ಯಾಯಾಲಯ ವಿವಾದಾಂಶಗಳನ್ನು ಸಿದ್ಧಪಡಿಸುವದು. ಆ ಬಳಿಕ ಇತ್ತಂಡದವರೂ ತಮ್ಮ ಪುರಾವೆಗಳನ್ನೊದಗಿಸುವ ಸನ್ನಾಹ ಮಾಡಬೇಕು. ಇಷ್ಟಾಗುವಾಗ ಕನಿಷ್ಠಪಕ್ಷ ಆರೇಳು ತಿಂಗಳು ಸಾಮಾನ್ಯವಾಗಿ ವ್ಯಯವಾಗುವದು. ಅದರಲ್ಲೂ ಹೆಚ್ಚು ಮಂದಿ ಪ್ರತಿಕಕ್ಷಿಗಳಿದ್ದರೆ, ಇಲ್ಲವೇ ಅವರಲ್ಲಿ ಜನನಮರಣಗಳಾದರೆ ಈ ಅವಧಿ ಎಷ್ಟೋ ಹೆಚ್ಚು ವಿಸ್ತರಿಸಬಹುದು.

ಇತ್ತಂಡದವರೂ ಹೀಗೆ ಒಂದು ವೇಳೆ ಸಿದ್ಧರಾದರೂ ನ್ಯಾಯಾಲಯದಲ್ಲಿ ಅವರ ವ್ಯಾಜ್ಯದ ವಿಚಾರಣೆಗೆ ಅವಕಾಶ ಸಿಗುವುದು ಸುಲಭವಲ್ಲ. ಪ್ರತಿಯೊಂದು ನ್ಯಾಯಾಲಯದಲ್ಲೂ ಹಲವಾರು ವ್ಯಾಜ್ಯಗಳಿರುತ್ತವೆ. ಅವುಗಳಲ್ಲೂ ಹಳೆಯ ವ್ಯಾಜ್ಯಗಳನ್ನು ಇತ್ಯರ್ಥಪಡಿಸಲು ನ್ಯಾಯಾಲಯಗಳು ಅಗ್ರಪ್ರಾಶಸ್ತ್ಯ ಕೊಡುತ್ತವೆ. ಈ ಮಧ್ಯೆ ಸ್ಥಳ ತನಿಖೆಯೇ ಮುಂತಾದ ಉಪವಿಚಾರಣೆಗಳೂ ಅಂತಿಮ ವಿಚಾರಣೆಯನ್ನು ಮುಂದೆ ಹಾಕಬಹುದು.

ವಿಚಾರಣೆ ನಡೆಯಬೇಕಾದರೆ ಹೀಗೆ ಇತ್ತಂಡದವರೂ ಸಿದ್ಧರಾದರೆ ಸಾಲದು. ಅವರ ಪುರಾವೆ ಪತ್ರಗಳೆಲ್ಲ ದಾಖಲಾಗಿರಬೇಕು. ಅವರ ಸಾಕ್ಷಿಗಾರರು ನ್ಯಾಯಾಲಯದಲ್ಲಿ ಹಾಜರಿರಬೇಕು.

ಭಾರತದಲ್ಲಿ ನ್ಯಾಯದಾನದಲ್ಲಿ ತುಂಬ ವಿಲಂಬವಾಗುತ್ತದೆ. ಬಡಪಕ್ಷಕಾರರು ಬಹಳ ಹಾನಿಸೋಸಬೇಕಾಗುತ್ತದೆ. ಇದನ್ನು ಸರಿಗೊಳಿಸಬೇಕು ಎಂದೆಲ್ಲ ಮಾತುಗಳು ಕೇಳಬರುತ್ತಿವೆ. ಆದರೆ ಈ ರೀತಿ ವಿಲಂಬವಾಗುವದಾದರೂ ಏಕೆ? ಯಾರು ಯಾರು ಕಾರಣರು ಎಂಬುದನ್ನು ಲೇಖಕರು ಸ್ವಾನುಭವದಿಂದ ಇಲ್ಲಿ ವಿವರಿಸಿದ್ದಾರೆ.

ಅವರ ವಕೀಲರು ತನಿಖೆಗೆ ಸಿದ್ಧರಿರಬೇಕು. ಎಲ್ಲಕ್ಕಿಂತ 'ಮೇಲಿ ನ್ಯಾಯಾಲಯದಲ್ಲಿ ಆ ದಿನ ಆ ವ್ಯಾಜ್ಯದ ವಿಚಾರಣೆಗೆ ಕಾಲಾವಕಾಶವಿರಬೇಕು. ಇಂಥದೊಂದು ಮಹಾಯೋಗ ಕೂಡುವುದಿಲ್ಲವೆಂದಲ್ಲ ಕೂಡಿಯೇ ಕೂಡುತ್ತದೆ. ಆದರೆ ವಿವಾದವುಂಟಾದ ಎಷ್ಟೋ ಸಮಯದ ಮೇಲೆ. ಆಗ ಕಕ್ಷಿ—ಪ್ರತಿಕಕ್ಷಿಗಳಲ್ಲಿ ಕೆಲವರು ಸತ್ತು ಹೋಗಲೂಬಹುದು. ಈ ವಿಲಂಬಕ್ಕೆ ಯಾರು ಹೊಣೆಯೆಂದು ವಿಶಿಷ್ಟವಾಗಿ ಬೊಟ್ಟಿಟ್ಟು ತೋರಿಸುವುದು ಸಾಧ್ಯವಿಲ್ಲ. ಆದರೆ ಹೆಚ್ಚಿನ ಸಂದರ್ಭಗಳಲ್ಲಿ ಪಕ್ಷಗಾರರೇ ಇದಕ್ಕೆ ಕಾರಣರಾಗುತ್ತಾರೆ. ಒಮ್ಮೆ ಅವರ ಸಾಕ್ಷ್ಯಗಾರರು ಬಂದಿರುವುದಿಲ್ಲ. ಇನ್ನೊಮ್ಮೆ ಅವರ ವಕೀಲರಿಗೆ ಬರಲಾಗುವುದಿಲ್ಲ. ಮತ್ತೊಮ್ಮೆ ಅವರಿಗೇ ಹಾಜರಾಗಲು ಆತಂಕ. ಹೀಗೆ ವ್ಯಾಜ್ಯದ ಕಾಗದಪತ್ರಗಳಲ್ಲಿ ವಾಯಿದೆ ಅಥವಾ ಮುದ್ದತಿನ ವಿನಂತಿಗಳು ಹನುಮಂತನ ಬಾಲದಂತೆ ಬೆಳೆಯುತ್ತ ಹೋಗುತ್ತವೆ.

ಆಯಿತು, ಒಮ್ಮೆ ವ್ಯಾಜ್ಯವಿಚಾರಣೆ ಆರಂಭವಾಯಿತೆನ್ನುವ. ಅದಾದರೂ ನಿರಾತಂಕವಾಗಿ, ಸುಗಮವಾಗಿ ನಡೆದೀತೆಂಬ ಭರವಸೆಯಿಲ್ಲ. ಥಕ್ಕನೆ ಏನಾದರೂ ಲೋಪದೋಷಗಳ ಉದ್ಭವವಾಗುತ್ತದೆ. ಆಮೇಲೆ ತಿದ್ದುಪಡಿಗಳ ವಾದ ವಿವಾದ. ತನ್ಮಧ್ಯೆ ಪಕ್ಷಗಾರರೊಳಗೆ ವ್ಯರ್ಥವಾದ ರಾಜಿಯ ಯತ್ನಗಳು ನಡೆಯುತ್ತವೆಂಬ ನೆವದಿಂದಲೂ ವಿಚಾರಣೆ ಮುಂದೆ ಬೀಳುವುದಿದೆ. ಹೀಗೆ ವ್ಯಾಜ್ಯ ದಾಖಲಾಗಿ ಒಂದೆರಡು ವರ್ಷಗಳಲ್ಲೇ ಅದು ತೀರ್ಮಾನವಾಗಿ ಬಿಟ್ಟಿತೆಂದರೆ ಅದೊಂದು ದೊಡ್ಡ ಸೋಜಿಗದ ಸಂಗತಿಯೆಂದು ನಂಬುತ್ತಾರೆ.

ಶ್ರೇಷ್ಠ ನ್ಯಾಯಾಲಯವನ್ನು ಬಿಟ್ಟರೆ ಬೇರೆ ಯಾವ ನ್ಯಾಯಾಲಯದ ತೀರ್ಮಾನವೂ ಅಂತಿಮವಲ್ಲ ಎಂಬುದನ್ನು ಈ ಸಂದರ್ಭದಲ್ಲಿ ನೆನೆಯಬೇಕು. ಬೇರೆ ನ್ಯಾಯಾಲಯಗಳ ಅಂತಿಮ ತೀರ್ಮಾನದ ಮೇಲೆ ಅಥವಾ ಮಧ್ಯಕಾಲೀನ ತೀರ್ಮಾನಗಳ ಮೇಲೆ ಮೇಲಿನ ನ್ಯಾಯಾಲಯಕ್ಕೆ ಪುನರ್ವಿಮರ್ಶೆ ಅಥವಾ ರಿವಿಜನ್‌ಗಾಗಿ ಅಥವಾ ಅಪೀಲಿನ ಮೂಲಕ ಪುನರ್ತೀರ್ಮಾನದ ಬಗ್ಗೆ ನೊಂದ ಪಕ್ಷಗಾರನು ಹೋಗಬಹುದು. ಅವನ ಮನವಿಯು ಮೇಲಿನ ನ್ಯಾಯಾಲಯದಲ್ಲಿ ವಿಚಾರಣೆಗೆ ಸ್ವೀಕೃತವಾದರೆ ಸಾಮಾನ್ಯವಾಗಿ ಕೆಳಗಿನ ನ್ಯಾಯಾಲಯದ ತೀರ್ಮಾನದ ಕಾರ್ಯಾಚರಣೆಯ ವಿರುದ್ಧ ತಡೆಯಾಜ್ಞೆ ಸಿಗುತ್ತದೆ. ಈ ತಡೆಯಾಜ್ಞೆಯಿಂದ ಪುನಃ ವಿಲಂಬಕ್ಕೆ ಎಡೆಯಾಗುತ್ತದೆ. ಜಿಲ್ಲಾ ನ್ಯಾಯಾಲಯಗಳ ಮಟ್ಟದಲ್ಲಿ ಈ ವಿಲಂಬ ಎರಡು ಮೂರು ವರ್ಷಗಳಷ್ಟಿದ್ದರೆ, ಹೈಕೋರ್ಟು ಸುಪ್ರೀಂ ಕೋರ್ಟುಗಳ ಮಟ್ಟದಲ್ಲಿ ಇದು ಐದಾರು ವರ್ಷಗಳಷ್ಟೂ ವಿಸ್ತರಿಸುವ ಸಂಭವವಿದೆ. ಹೈಕೋರ್ಟು ಮತ್ತು ಸುಪ್ರೀಂ ಕೋರ್ಟುಗಳ ಮಟ್ಟದಲ್ಲಿ ನಡೆಯುವ ಅಪೀಲು ವಿಚಾರಣೆಗೆ ಸಾಮಾನ್ಯವಾಗಿ ಎಲ್ಲ ಪುರಾವೆಗಳ ಮುದ್ರಣವಾಗಬೇಕಾಗುತ್ತದೆ, ದೊಡ್ಡ ದೊಡ್ಡ ವ್ಯಾಜ್ಯಗಳಲ್ಲಿ ಇಂಥವುಗಳ ಪುರಾವೆಗಳು ಸಾವಿರಾರು ಪುಟಗಳಷ್ಟಿರುವುದು ಅಸಾಮಾನ್ಯವಲ್ಲ. ಇವುಗಳ ಮುದ್ರಣಕ್ಕೇ ಕೆಲವು ಸಂದರ್ಭಗಳಲ್ಲಿ ವರುಷಗಳು ಹಿಡಿಯುತ್ತವೆ

ಮೇಲಿನ ನ್ಯಾಯಾಲಯಗಳಲ್ಲಿಯೂ ಹೆಚ್ಚಾಗಿ ಆಯಾವ್ಯಾಜ್ಯದ ವಯಸ್ಸಿಗನುಗುಣವಾಗಿ ವಿಚಾರಣೆ ನಡೆಯುತ್ತದೆ. ಆದ್ದರಿಂದ ಯಾವುದೇ ಅಪೀಲು ಅಥವಾ ಪುನರ್ವಿಮರ್ಶೆಯ ಮನವಿಯು ಇಷ್ಟೇ ಕಾಲದೊಳಗೆ ತೀರ್ಮಾನವಾಗಬಹುದೆಂದು ಊಹಿಸುವುದೂ ಸಾಧ್ಯವಿಲ್ಲ. ಈ ನ್ಯಾಯಾಲಯಗಳ ಅಧಿಕಾರ ಕ್ಷೇತ್ರ ವ್ಯಾಪಕವಾಗಿದೆಯಲ್ಲದೆ, ಕಂಪನಿ ಕಾನೂನು, ರಾಜ್ಯಾಂಗಕ್ಕೆ ಸಂಬಂಧ ಪಟ್ಟ ವಿವಾದ ಮುಂತಾದ ವಿಷಯಗಳು ಈ ನ್ಯಾಯಾಲಯಗಳಿಗೆ ವಿಶಿಷ್ಟವಾದ ಮೂಲ ಅಧಿಕಾರ ಕ್ಷೇತ್ರಕ್ಕೆ ಒಳಗಾಗಿವೆ. ಆದ್ದರಿಂದ ಅಲ್ಪಸಂಖ್ಯೆಯಲ್ಲಿ ನ್ಯಾಯಾಧೀಶರಿರುವ ಈ ನ್ಯಾಯಾಲಯಗಳು ಒಮ್ಮೆಲೇ ತಮ್ಮ ಮುಂದಿರುವ ವಿವಾದಗಳನ್ನೆಲ್ಲ ತೀರಿಸಲಾರವು, ಆದ್ದರಿಂದ ಇವುಗಳ ಕಾರ್ಯಾಚರಣೆಯ ಇತಿ-ಮಿತಿಗಳು ಕೂಡಾ ಕ್ಷಿಪ್ರನ್ಯಾಯದಾನದ ದಾರಿಯಲ್ಲಿ ಆತಂಕವನ್ನುಂಟು ಮಾಡುತ್ತವೆ.

ಇವುಗಳನ್ನೆಲ್ಲ ಅವಲೋಕಿಸುವಾಗ ನಮ್ಮ ನ್ಯಾಯಾಲಯಗಳಲ್ಲಾಗುವ ವಿಲಂಬಗಳು ಕೇವಲ ಅನಿವಾರ್ಯವೆಂಬುದು ವಿದಿತವಾಗದಿರದು. ಈ ವಿಲಂಬದಿಂದಾಗಿ ಅನೇಕರಿಗೆ ನ್ಯಾಯದಾನವು ಸಮರ್ಥವಾಗಿ ಸಿಗದಿರಬಹುದು. ಅನೇಕರ ವ್ಯವಹರಣೆಗಳು ಲಂಬಾಯಮಾನವಾಗಿ ಬೆಳೆಯಬಹುದು. ಆದರೆ ಇದಕ್ಕೆ ಪರಿಹಾರವಾದರೂ

ಏನು ? ಆಸ್ಪತ್ರೆಯಲ್ಲಿ ರೋಗಿಗಳಿಗೆ ತಕ್ಷಣ ಚಿಕಿತ್ಸೆಯನ್ನು ನೀಡುವಂಥ ಕ್ಷಿಪ್ರ ಪರಿಹಾರವು ನಮ್ಮ ಇಂದಿನ ಶಾಸನವ್ಯವಸ್ಥೆಯಿಂದ ಸಿಗಲಾರದು. ಆದ್ದರಿಂದ ನ್ಯಾಯಾಲಯದ ಮೆಟ್ಟಲು ಹತ್ತುವವರಿಗೆ ಸಾಕಷ್ಟು ಸಹನೆ ಬೇಕು. ಸಮಾಧಾನ ಬೇಕು, ಸ್ಥೈರ್ಯಬೇಕು,

ಡ್ರೈಫಸ್ ಎಂಬ ಫ್ರೆಂಚ್ ನಾಗರಿಕನು ಅನ್ಯಾಯವಾಗಿ ಅನುಭವಿಸಿದ ಬವಣೆಯು ನ್ಯಾಯದಾನದ ವಿಲಂಬಕ್ಕೆ ಪ್ರಸಿದ್ಧ ನಿದರ್ಶನವಾಗಿದೆ. ಆಲ್ಫ್ರೆಡ್ ಡ್ರೈಫಸ್ ಫ್ರಾನ್ಸಿನ ಸೇನಾಧಿಕಾರಿಯಾಗಿದ್ದ. ೧೮೯೪ ರಲ್ಲಿ ಅವನು ಜರ್ಮನ್‌ರಿಗೆ ರಹಸ್ಯ ಮಾಹಿತಿಯನ್ನು ಒದಗಿಸಿದನೆಂಬ ಅಪಾದನೆಯ ಮೇಲೆ ಬಂಧನಕ್ಕೊಳಗಾದ. ಅವನ ವಿಚಾರಣೆಯು ಸೈನಿಕನ್ಯಾಯಾಲಯದಲ್ಲಿ ರಹಸ್ಯವಾಗಿ ನಡೆದು ಅವನಿಗೆ ಗಡೀಪಾರಿನ ಶಿಕ್ಷೆಯು ವಿಧಿಸಲ್ಪಟ್ಟಿತು. ಡ್ರೈಫಸ್ ಯಹೂದಿ ಜನಾಂಗದವನಾಗಿದ್ದರಿಂದ ಜನಾಂಗದ್ವೇಷದ ದ್ವೇಷವು ಈ ವಿಚಾರಣೆಯಲ್ಲಿ ಮೂಡಿ ಬಂತು. ಅವನು ನಿರ್ದೋಷಿಯೆಂದು ನಂಬಿದ ಬರೇ ಕೆಲವರಲ್ಲಿ ಪ್ರಸಿದ್ಧ ಲೇಖಕ ಎಮಿಲಿ ಜೋಲಾ ಮತ್ತು ಕ್ಲೆಮೆಂಕೋ ಸೇರಿದ್ದರು. ಈ ವಿಚಾರಣೆ ಮುಗಿದ ಸ್ವಲ್ಪ ಸಮಯದಲ್ಲಿ ಪಿಕಾರ್ಟ್ ಎಂಬ ಹೊಸ ಗುಪ್ತದಳದ ಅಧಿಕಾರಿಯು ಡ್ರೈಫಸ್ ಬರೆದನೆಂದಿದ್ದ ಪತ್ರಗಳು ಕೃತಕವೆಂದು ಕಂಡುಹಿಡಿದ. ಆದರೆ ಡ್ರೈಫಸ್‌ನನ್ನು ಪುನಃ ವಿಚಾರಣೆಗೊಳಪಡಿಸಿ ಅವನು ನಿರ್ದೋಷಿಯೆಂದಾದರೆ ಸೈನ್ಯದ ಪ್ರತಿಷ್ಠೆಗೆ ಕುಂದು ಬರುವುದೆಂದು ಮೇಲಧಿಕಾರಿಗಳು ಭಾವಿಸಿ ಪಿಕಾರ್ಟನ ಸಲಹೆಯನ್ನು ಕಡೆಗಣಿಸಿದರು. ಆ ಕಾಗದಗಳನ್ನು ಕೃತಕವಾಗಿ ತಯಾರಿಸಿದವನೆನ್ನಲಾದ ಎಸ್ಟರ್ ಹೇಜಿ ಎಂಬವನು ವಿಚಾರಣೆಯಲ್ಲಿ ನಿರ್ದೋಷಿಯೆಂದು ಸಾರಲ್ಪಟ್ಟ. ಆದರೆ ಇದನ್ನೆಲ್ಲ ನೋಡುವಾಗ ಡ್ರೈಫಸನು ನಿರ್ದೋಷಿಯೆಂದು ಎಮಿಲಿ ಜೋಲಾನಿಗೆ ಮನದಟ್ಟಾಯಿತು. ಅವನು 'ನಾನು ಅಪಾದಿಸುತ್ತೇನೆ' (I'accuse) ಎಂಬ ಬಹಿರಂಗಪತ್ರವನ್ನು ಫ್ರಾನ್ಸಿನ ಅಧ್ಯಕ್ಷರಿಗೆ ಬರೆದು ಮಾನಹಾನಿಯ ಖಟ್ಲೆಗೊಳಗಾಗಿ ಶಿಕ್ಷಿಸಲ್ಪಟ್ಟು, ದೇಶಭ್ರಷ್ಟನಾದ. ಆದರೆ 'ಸತ್ಯವು ಮುಂದರಿಯುತ್ತಿದೆ, ಯಾವುದೂ ಅದನ್ನು ನಿಲ್ಲಿಸಲಾರದು' ಎಂದು ಅವನು ಹೇಳಿದ ಮಾತು ಸಾರ್ಥಕವಾಯಿತು. ಮುಂದೆ ಕೋಲಾಹಲಕಾರೀ ರೀತಿಯಲ್ಲಿ ಡ್ರೈಫಸ್‌ನು ಬರೆದಿದ್ದನೆಂಬ ಪತ್ರಗಳು ಕೃತಕವೆಂದು ಸಿದ್ಧವಾಗಿ ಹೆನ್ರಿ ಎಂಬ ಅಧಿಕಾರಿ ತಪ್ಪೊಪ್ಪಿಕೊಂಡ. ಆದರೂ ಸೇನಾಧಿಕಾರಿಗಳು ತಮ್ಮ ಮುಖಭಂಗವಾಗದಂತೆ ಇನ್ನೊಮ್ಮೆ ವಿಚಾರಣೆನಡೆಸಿ ಡ್ರೈಫಸ್‌ನ ಶಿಕ್ಷೆಯ ಅವಧಿಯನ್ನು ಇಳಿಸಿದರು ಮತ್ತು ಇದರೊಡನೆ ಅವನಿಗೆ ಕ್ಷಮಾದಾನವನ್ನು ನೀಡಲಾಯಿತು. ಕೊನೆಗೆ ೧೯೦೬ ರಲ್ಲಿ ಅವನ ಮೇಲಿನ ಆಪಾದನೆಗಳನ್ನು ಕಿತ್ತುಹಾಕಿ ಅವನನ್ನು ಪುನಃ ಸೇನೆಗೆ ಸೇರಿಸಿಕೊಳ್ಳಲಾಯಿತು. ಹೀಗೆ ಈ ನ್ಯಾಯದಾನಕ್ಕೆ ಹನ್ನೆರಡು ವರ್ಷ ಹಿಡಿಯಿತು.

ನಮ್ಮ ನ್ಯಾಯಾಲಯಗಳಲ್ಲಾಗುವ ವಿಲಂಬ ನಿವಾರಿಸಲು ಶಾಸನ ಆಯೋಗವು ದಾರಿಗಳನ್ನು ಹುಡುಕುತ್ತಿದೆ, ಪರಿಹಾರೋಪಾಯಗಳನ್ನು ಸೂಚಿಸುತ್ತಿದೆ. ವಿಚಾರಣೆಯ ವಿಧಾನದಲ್ಲಿ ಅದು ಸೂಚಿಸಿರುವ ಹೆಚ್ಚಿನ ಬದಲಾವಣೆಗಳು ಸರ್ವಮಾನ್ಯವಾಗಿಲ್ಲ. ಎಲ್ಲ ನ್ಯಾಯಾಲಯಗಳೂ ನ್ಯಾಯದಾನವನ್ನು ಮಾಡಬೇಕಲ್ಲದೆ, ಪ್ರತ್ಯಕ್ಷವಾಗಿಯೂ ನ್ಯಾಯದಾನವಾಗುವಂತೆ ನೋಡಬೇಕಾಗಿದೆ. ಆದ್ದರಿಂದ ಅವುಗಳ ಕಾರ್ಯಾಚರಣೆಯ ವಿಧಾನದಲ್ಲಿ ಹೆಚ್ಚಿನ ಇಲ್ಲವೇ ಮೂಲಭೂತ ಬದಲಾವಣೆಗಳು ಪಕ್ಕನೆ ನಡೆಯುವಂತಿಲ್ಲ. ಅವುಗಳೆಲ್ಲ ಕಾನೂನಿನ ಚೌಕಟ್ಟಿನೊಳಗೆ ಸೀಮಿತವಾಗಿವೆ. ಪ್ರಜಾರಾಜ್ಯ ಸರ್ಕಾರೀ ವ್ಯವಸ್ಥೆಯಲ್ಲಂತೂ ಹೀಗೆ ಮಿತವೇಗದ ಆದರೂ ಸಮತೂಕದ ನ್ಯಾಯದಾನದ ವ್ಯವಸ್ಥೆಯಿರುವುದು ಭೂಷಣವೇ ಸೈ. ಒಂಬತ್ತು ಜನ ದೋಷಿಗಳು ತಪ್ಪಿಸಿಕೊಂಡರೂ ಚಿಂತಿಲ್ಲ, ಒಬ್ಬ ನಿರ್ದೋಷಿಯೂ ಶಿಕ್ಷೆಗೊಳಗಾಗಬಾರದು ಎಂಬ ಮೂಲಭೂತ ತತ್ವವನ್ನು ಪ್ರಜಾಸತ್ತೆಯಲ್ಲಿ ಶ್ರದ್ಧೆಯುಳ್ಳ ನಾವು ಮನ್ನಿಸಬೇಕಾಗಿದೆ. ಶಾಸನವೇ ಸರ್ವಶ್ರೇಷ್ಠವಾಗಿರುವ ಪ್ರಜಾಸತ್ತೆಯಲ್ಲಿ ನ್ಯಾಯದಾನದಲ್ಲಾಗುವ ಹೆಚ್ಚಿನ ವಿಲಂಬಗಳು ಸ್ವಾಭಾವಿಕವೆಂದು ಒಪ್ಪಿಕೊಳ್ಳಲೇಬೇಕು.

*



# ಮನದ ಮೂರುತಿ ನೆಹರೂ



ಕಾಶ್ಮೀರದಿಂದ ಕನ್ಯಾಕುಮಾರಿಯ ವರೆಗೆ
ಅಖಿಲ ಭಾರತವಿತ್ತ
ರಾಜ ಮನ್ನಣೆವೆತ್ತ
ಅಪ್ರತಿಮ ಲೋಕನಾಯಕನು ಆತ
ಅನುಪಮ ಅಸಾಮಾನ್ಯ
ಅವನ ತೇಜ
ಸಹಜ ಧೀರೋದಾತ್ತ
ಸಾಹಸೋಜ.

ನಿಂದಿಹುದು ನೆನಹಿನಲಿ
ಅವನ ಪ್ರತಿಬಿಂಬ
ಅವನ ನೆನೆವಾಗೆಲ್ಲ
ಹೊಳೆಯುವುದು ಮನ ಮನದಿ
'ಭಾರತದ ದರ್ಶನ'ದ
ದೀಪಮಾಲೆಯ ಕಂಬ
ಪೂರ್ವ ಪಶ್ಚಿಮ ದಕ್ಷಿಣೋತ್ತರದೊಳೆಲ್ಲಲ್ಲೂ
ಬೆಳಕನೆರೆದಕ್ಷಿ
ಎನಿತು ಎತ್ತರ ಸಿರಿ
ಎನಿತು ಬಿತ್ತರದ ಸಿರಿ
ಬಗೆಗೆ ಬೀರಿಹುದವನ
ಸಾಹಿತ್ಯ ಪಕ್ಷಿ!
ಸಹಜ ಸಜ್ಜನಿಕೆಯಲಿ
ಪಡೆದ ಲೋಕಪ್ರಿಯತೆ
ಸುವಿಶಾಲ ಕೀರ್ತಿಲತೆ
ತೊಂಗೆ ತೊಂಗೆಯು ಚಾಚಿ
ಸೌರಭವ ಸೂಸುತಿದೆ.
ಜಗದಂತರಂಗದಲಿ
ತರತರಂಗಿಸುವ ಸ್ಫೂರ್ತಿ
ಜಗದ ಪರಮೋನ್ನತಿಗೆ
ಪರಮ ಸಾಕ್ಷಿ
ಕಾಶ್ಮೀರದಿಂದ ಕನ್ಯಾಕುಮಾರಿಯ ವರೆಗೆ
ಅಖಿಲ ಭಾರತವಿತ್ತ
ರಾಜಮನ್ನಣೆವೆತ್ತ
ಲೋಕ ವಿಖ್ಯಾತ ನಾಯಕನು ಆತ

ಮನದ ಮೂರುತಿ ನೆಹರು
ನೆನಹು ನೆನಹಿಗೆ ನವಿರು:
ಅವನ ಬಿರಡಿಯ ಕಿರಿಯ
ಚೆಂಗುಲಾಬಿಯ ಕೆಂಪು
ಹರಡಿಹುದು ಜಗದಗಲ
ಅದರ ಸ್ಮರಣದೊಳಿಹುದು
ಸದ್ಭಾವ ಸ್ಫುರಣ

ಮಕ್ಕಳೆಂದರೆ ಅವಗೆ
ಇನು ಆನಂದ
ಅವರ ಮಧ್ಯದೊಳ ನಗೆ
ಆಟ ಚಕ್ಕಂದ
ಬಾಲರಿಗೆ ಅವನೊಲುಮೆ
ಚೊಕ್ಕ ಚಿನ್ನ;
ಮಾಣಿಕ್ಯಗಳಲಿ ಮಾಣಿಕ್ಯವಣ್ಣ
ಎಂಥ ಹೊರೆಯೇ ಇರಲಿ
ಅವನ ಹೆಗಲಿನ ಮೇಲೆ
ಜಗವೆಲ್ಲ ಹಗುರಹುದು
ತರಳರಾ ಹರುಷದೊಳೆ
ಬೆಳೆವ ಎಳೆಯರಿಗವನ
ಸ್ಮರಣ ಸ್ವರ್ಣ
ಬರಲಿರುವ ಯುಗ ಯುಗವ
ಅರುಣ ಕಿರಣ
ಕಾಶ್ಮೀರದಿಂದ ಕನ್ಯಾಕುಮಾರಿಯ ವರೆಗೆ
ಅಖಿಲ ಭಾರತವಿತ್ತ
ರಾಜಮನ್ನಣೆವೆತ
ಲೋಕವಿಖ್ಯಾತ ನಾಯಕನು ಆತ

ಅವನ ಅಭಿರುಚಿಯೆ ರುಚಿ
ಅದು ನೈಜ, ವಿವಿಧ, ರುಚಿ
ಸಹಜ ಸಮರಸ ಸಂಗಮ.
ಅವನು ಒಲಪಿನೊಳಿತ್ತ
ಉತ್ತೇಜನಕೆ ಮತ್ತೆ
ಗರಿಗೆದರಿ ಆಡಿತ್ತು
ಈ ನಾಡ ರಸರಾಗ
ಸುಕಲಾ-ವಿಹಂಗಮ
ಅರಳಿತ್ತು ಈ ಭರತ
ವರ್ಷದ ಸಹಸ್ರದಳ
ಹೃದಯ ಕಮಲ
ಕಂಡಿತು ನವೋದಯವ
ನವಭಾರತ
ನೆಹರು-ಭಾವ-ಸ್ಫುರಿತ

ಕಾಶ್ಮೀರದಿಂದ ಕನ್ಯಾಕುಮಾರಿಯ ವರೆಗೆ
ಈಜಾಡಿತವನ ಬಗೆ
ಸಮದೃಷ್ಟಿಯಲ್ಲಿ
ನಿರ್ಮಿಸಲು ನೈಜದಲಿ
ಭಾವೈಕ್ಯ ಸೃಷ್ಟಿ
ನಾಡಿನೇಳ್ಗೆಗೆ ದುಡಿತ
ನಾಡಿನಾಡಿಯು ನುಡಿತ
ಪಂಚಪ್ರಾಣಗಳಲ್ಲಿ
ನಿಷ್ಠೆಯೆಂಬುದ ತುಂಬಿ
ಪಂಚವಾರ್ಷಿಕದ ನೆಲೆ
ನೆಲೆಯ ಪ್ರಗತಿ
ಯೋಜಿಸಿದನವನವೋಭ್ಯುದಯ ಬಯಸಿ
ವಿಶ್ವಕಲ್ಯಾಣ ಸೋಲರಿಯದ ಶ್ರುತಿ

ಮಾತೃಭೂಮಿಯ ಜಲದಿ
ಕರಗಿ ಒಂದಾಯ್ತು ತನು
ನೆಲ ಜಲದ ನರುಗಂಪ
ನೆತ್ತಿ ಸೂಸಿತ್ತೂ ಮನ
ಜಗದಲ್ಲಿ ನೆಹರುಯುಗ
ಅದು ಅಮೋಘ
ಎಂದೊ ಏನೋ! ಒಮ್ಮೆ
ಬರುವ ಯೋಗ
ಆಲಿಸಾಲಿಸು ಅದೋ
ಆತ ಹುಮ್ಮಸದಲ್ಲಿ
'ಹಿಂದ ಜೈ, ಜೈ ಹಿಂದ'
ಎಂದ ದನಿ ನಿನದಿಸಿದೆ
ವ್ಯೋಮ ವ್ಯೋಮದಿ ಹೋಮ
ರೋಮಾಂಚನ!
ಕ್ಷಿತಿಜದಲಿ ಅದೊ ಮಿತ್ರ
ಚೇತನದ ಜನನ!
ಕ್ಷಿತಿಯೆ ನೀಡಿದೆ ಕೋಟಿ
ಕೋಟಿ ನಮನ.

ಕಾಶ್ಮೀರದಿಂದ ಕನ್ಯಾಕುಮಾರಿಯ ವರೆಗೆ
ಅಖಿಲ ಭಾರತವಿತ್ತ
ರಾಜಮನ್ನಣೆವೆತ್ತ
ವಿಖ್ಯಾತ ಲೋಕನಾಯಕನು ಆತ
ಅನುಪಮ ಅಸಾಮಾನ್ಯ
ಅವನ ತೇಜ
ಸಹಜ ಧೀರೋದಾತ್ತ
...ಸಾಹಸೋಜ

—ಡಿ. ಎಸ್. ಕರ್ಕಿ



[ಧಾರವಾಡ ಆಕಾಶವಾಣಿ ಕೃಪೆಯಿಂದ]

# ಭಾರತದಲ್ಲಿಯ ಇಝಂಗಳು

> ಭಾರತದಲ್ಲಿ ಇಂದು ಎಷ್ಟೊಂದು 'ಇಝಂ'ಗಳು ಇವೆ ಎಂದರೆ "ನನ್ನಿಝಂ - ನಿನ್ನಿಝಂ" ಎಂದು ಹೇಳುವಂತಾಗಿರುವುದು. ರಾಜಕೀಯ ವಾದಗಳಷ್ಟೇ ಅಲ್ಲದೆ ಪ್ರತ್ಯೇಕವಾದ, ಅಳಿಯವಾದ, ಭಾಷಾವಾದ ಹೀಗೆ ಹಲವಾರು ವಿಶಿಷ್ಟ ವಾದಗಳೂ ತಲೆಯೆತ್ತಿವೆ. ಇವು ಉಂಟುಮಾಡುವ ಗೊಂದಲವೇನು, ಸಮಾಜದ ಮೇಲೆ, ಜನರ ಮೇಲೆ ಆಗುವ ಪರಿಣಾಮವೇನೆಂಬುವನ್ನು ಶ್ರೀ ಕಾಯ್ಕಿಣಿ ಅವರು ಬಹು ಸೊಗಸಾಗಿ ಇಲ್ಲಿ ಬಿಡಿಸಿ ತೋರಿಸಿರುವರು. . . . . .

ಶ್ರೀ ಗೌರೀಶ ಕಾಯ್ಕಿಣಿ, ಗೋಕರ್ಣ

ಇದೊಂದು ಬಹಳ ವ್ಯಾಪಕವಾದ ವಿಷಯ. ವಿಷಯದ ಹೆಸರನ್ನು ಎತ್ತಿದಾಗಲೇ ನಮ್ಮ ಕವಿ ಮಿತ್ರ ಶ್ರೀ ವಿ. ಜಿ. ಭಟ್ಟರ ಒಂದು ಹಳೆಯ ಕವಿತೆಯು ನೆನಪಿಗೆ ಬಂದಿತು. ಅದರ ಆರಂಭವು "ನನ್ನಿಝಂ ನಿನ್ನಿಝಂ" ಎಂದು ಸಿಗುತ್ತದೆ. ಭಾರತದಲ್ಲಿಯ ವಿಧವಿಧದ ಇಝಂಗಳ ಬಗೆಗೆ ಒಂದು ಭಾವಾವೇಶದ ಕವಿಹೃದಯವು ಚಿಮ್ಮಿಸಿದ ಪ್ರತಿಕ್ರಿಯೆಯ ಕಿಡಿಗಳು ಅಲ್ಲಿ ಹಾರಿರುತ್ತವೆ. (ಚಿಮ್ಮಿದ್ದು ರಸದ ಹನಿಯಾಗಿದ್ದರೂ ಅದು ಕಿಡಿಯ ಕಾವನ್ನೆ ಕೊಡುವಂತಹದು; ಬೆಳಕನ್ನೆ ಚೆಲ್ಲುವಂತಹದು! ಅಂತೆಯೇ ಈ ಮಿಶ್ರರೂಪಕದ ಉಪದ್ವ್ಯಾಪ!)

ನನ್ನ ಮಾತು ನನ್ನ ಮತ. ನಿನ್ನ ಮಾತು ನಿನ್ನ ಮತ. ತಲೆಗೊಂದು ಮತ, ಮತಕ್ಕೊಂದು ವಾದ; ವಾದಕ್ಕೆ ಒಂದು ವೈಶಿಷ್ಟ್ಯ; ಅದಕ್ಕೆ ಒಪ್ಪುವಂತೆ ಒಂದು ನಾಮಕರಣ! ಅದನ್ನು ಕೂಗುವ ಬಾಯ್ತುಂಬ ಆಡಿತೋರಿಸುವ ಒಂದು ಗಾಳಿ ತುಂಬಿದ ಗೂಳಿಗಳಂದದ ಗಾಂಪರ ಗುಂಪು. ಆಯಿತು ಆಗಲೆ ಒಂದು "ಇಝಂ" ಹುಟ್ಟಿತು! ಅದುವೆ ನನ್ನಿಝಂ ಇಲ್ಲವೆ ನಿನ್ನಿಝಂ. ಆದರೆ ನನ್ನಿ–ಸತ್ಯ–ಅದರ "ಇಝಂ" ಬೇರೆಯೇ! ಆದರೆ ಸತ್ಯವೆಂದರೇನು? ಹಾಗೆ ಕೇಳಿದವರು ಯಾರು ಉತ್ತರಕ್ಕಾಗಿ ತಡೆದದ್ದುಂಟು?

ನಾವು ಗಾಂಧೀವಾದ, ಮಾರ್ಕ್ಸವಾದ, ಎಂದೆಲ್ಲ ಅನ್ನುವದುಂಟು. ಆದರೆ ಗಾಂಧೀಜಿಯಾಗಲಿ, ಕಾರ್ಲ್ ಮಾರ್ಕ್ಸನಾಗಲಿ ತಾನೊಂದು ಇಝಂ ಅಥವಾ ವಾದವನ್ನು ಸಾರುತಿದ್ದೇನೆ, ತಾನೊಬ್ಬ ಪ್ರವಾದಿ–ಎಂದು ಎಂದಾದರೂ ಹೇಳಿದ್ದು ಉಂಟೆ? ಇವರು ಮಾತ್ರವಲ್ಲ, ಬಸವಣ್ಣ, ಕ್ರೈಸ್ತ, ಬುದ್ಧ ಯಾರೂ ತಮ್ಮದೊಂದು ಧರ್ಮ–ಪಂಥವೆಂದು ಪಂಥ ಹೊಟ್ಟು, ಹೆಸರಿಟ್ಟುಕೊಂಡಿದ್ದಿಲ್ಲ. ಅವರ ಅನುಯಾಯಿಗಳು ಒಂದು ಅನುಸರಣ ಪದ್ಧತಿಯಲ್ಲಿ ಆ ಮಹಾತ್ಮರ ಮತಗಳನ್ನು, ಮನೋಗತಗಳನ್ನು ಕಲಿಹಾಕಿ ಕ್ರೋಢೀಕರಿಸಿ ಪೃಥಕ್ಕರಿಸಿ ಅದಕ್ಕೆ ಒಂದು ಮತವೆಂದು—ಈಗಿನ ಭಾಷೆಯಲ್ಲಿ ಒಂದು "ಇಝಂ" ಎಂದು ಕರೆದು ಕೊಂಡಾಡಿ ನಡೆದುಕೊಳ್ಳುತ್ತ ಬಂದರು. ಹೀಗೆ ಕ್ರೈಸ್ತ ಧರ್ಮದ ಆದ್ಯಪ್ರವರ್ತಕ ಕ್ರೈಸ್ತನಲ್ಲ, ಸಂತ ಪಾಲ್! ಕ್ರೈಸ್ತ ಜಗದ್ಗುರು ಪೋಪನೆಂದು ರೋಮದ ಧರ್ಮಗುರುವು ಮನ್ನಣೆಪಡೆದದ್ದು ರೋಮನ್ ಸಾಮ್ರಾಜ್ಯದ ಇತಿಹಾಸದ ಒಂದು ಯೋಗಾಯೋಗ!

"ಒಂದು ಮತವು ಸತ್ತಾಗ ಮಠವಾಗುತ್ತದೆ."—ಎಂದಿದ್ದರು ಕವಿವರ್ಯ ಬೇಂದ್ರೇಜೀ ಒಮ್ಮೆ ಸ್ವಾರಸ್ಯದ ಮಾತುಕತೆಯಲ್ಲಿ! ಇದು ಅಕ್ಷರಶಃ ಸತ್ಯ. ಆದರೆ ನಾವು ಈ ಲೇಖದಲ್ಲಿ ಗಮನಿಸಬೇಕಾದದ್ದು ಇಂಥ ಕರ್ಮಠ ಮಠವಾದಿಗಳನ್ನಲ್ಲ. ಭಾರತದಲ್ಲಿಯ "ಇಝಂ"ಗಳೆಂದಾಗ ಅನೇಕ ಸಂಗತಿಗಳು ತಲೆಯಲ್ಲಿ ತಾಂಡವವಾಡುತ್ತವೆ. "ಇಝಂ" ಶಬ್ದವೇ ಆಂಗ್ಲ ಪ್ರತ್ಯಯ. ಅಂದಾಗ ಅದರಿಂದ ವಿಶಿಷ್ಟವಾದ ತತ್ವಪ್ರಣಾಲಿಯು ಒಮ್ಮೆಲೆ ವಿದೇಶೀಯ ಸಿದ್ಧಾಂತವೋ, ಮತವಾದವೋ—ಎಂದು ಅನಿಸುವದು ಸ್ವಾಭಾವಿಕ. ಅಂದರೆ ಭಾರತದಲ್ಲಿ ಪಾಶ್ಚಾತ್ಯರಿಂದ ಹರಿದುಬಂದ ಇಲ್ಲವೆ ಎರವಲುವಾಗಿ ತಂದ "ಇಝಂ"ಗಳು ಯಾವವೆಂಬ ಬಗೆಗೆ ಇದೊಂದು ಉಪನ್ಯಾಸವೇ?

ಕಮ್ಯುನಿಝಂ, ಸೋಶಾಲಿಝಂ, ಕ್ಯಾಪಿಟಾಲಿಝಂ, ಸಿಂಡಿಕ್ಯಾಲಿಝಂ, ಅನಾರ್ಕಿಝಂ ಮುಂತಾದ ರಾಜಕೀಯ ಆರ್ಥಿಕ ತತ್ವಪ್ರಣಾಲಿಗಳನ್ನು ಮಾತ್ರವೇ ಇಲ್ಲಿ ವ್ಯಾಖ್ಯಾನಿಸಬೇಕೆ? ಆದರೆ ಈ ಅಗತ್ಯವೇ ಇಲ್ಲ. ಏಕೆಂದರೆ ಇಂಥ ಇಝಂಗಳು ದೇಶ ಕಾಲ ಪರಿಭೇದವಿಲ್ಲದೆ ಕೇವಲ ಪರಿಸ್ಥಿತಿಗೆ ವಿಶಿಷ್ಟವಾದ ವಿಪಾಕವಾಗಿ ಪ್ರಪಂಚದ ಇತರ ರಾಷ್ಟ್ರಗಳಲ್ಲಿಯಂತೆ ಭಾರತದಲ್ಲಿಯೂ ಬೇರೂರಿ ಬೆಳೆದವು. ವಿಚಾರಗಳಿಗೆ ತನ್ನದೇ ಆದ ಗತಿ-ಧರ್ಮವಿರುತ್ತದೆ. ಪೃಥ್ವಿಯಲ್ಲಿ ಒಂದೆಡೆಗೆ ಹುಟ್ಟಿದ ವನಸ್ಪತಿ-ಗಾಳಿ-ಹಳ್ಳ-ಕಡಲುಗಳ ಸೆಳೆತಕ್ಕೆ ಸಿಲುಕಿ ಅನುಕೂಲವಾದ ಬೇರೆಡೆಗೆಲ್ಲ ಹಬ್ಬಿಕೊಬ್ಬಿ ನಿಲ್ಲುವಂತೆಯೇ ಈ ಲೋಕದಲ್ಲಿ ವಿಚಾರದ ಅನಿರುದ್ಧ ಗತಿ. ಈ ದೃಷ್ಟಿಯಿಂದ ಇಂಥ ಒಂದು ಇಝಂ ಇಂಥ ಒಂದು ದೇಶದ್ದೇ ಸೊತ್ತು ಇಂಥ ಒಂದು ಜನಕ್ಕೇ ಗೊತ್ತು—ಎಂದು ಹಟಹಿಡಿಯುವದೂ ಹಾಸ್ಯಾಸ್ಪದವೆನಿಸೀತು.

ಹೀಗೆಂದಮಾತ್ರಕ್ಕೆ ತತ್ವ-ವಾದಗಳಿಗೆ ಐತಿಹಾಸಿಕ ವೈಶಿಷ್ಟ್ಯ, ಸಾಮಾಜಿಕ ವೈಚಿತ್ರ್ಯವೆಂಬುದು ಇಲ್ಲವೆ? ಹಾಗೂ ಅಲ್ಲ. ಬೆಳಕು ಬೆಳ್ಳಗೆ ಬೆಳಗುವದು. ಆದರೆ ಅದು ಬಣ್ಣದಕಾಜುಗಳಲ್ಲಿ ಆಯಾ ಬಣ್ಣದ ಕಿರಣವಾಗಿಯೆ ತೂರಿಬರುವದು. ಸತ್ಯವು ಒಂದೇ ಆದರೂ ಅದನ್ನು ತಿಳಿಯುವ ತಿಳಿಸುವ ತಿಳುವಳಿಕೆಯ ಮಟ್ಟ ಮಜಲುಗಳಿಗೆ ತಕ್ಕಂತೆ ಅದರ ಬೇರೆಬೇರೆ ಆವಿಷ್ಕಾರವಾಗುವದು. "ಏಕಂ ಸತ್ ವಿಪ್ರಾಃ ಬಹುಧಾ ವದಂತಿ!" ಎಂಬ ಆರ್ಷವಾಣಿಯ ಮರ್ಮವೂ ಇದೇ ಸರಿ.

ಅಂದಾಗ ಒಂದು ಲೋಕದಲ್ಲಿ ಪ್ರಚಲಿತವಿರುವ ಊರ್ಜಿತವಿರುವ "ಇಝಂ"ಗಳು ತತ್ವತಃ ಒಂದೇ ಬಗೆಯವಾಗಿದ್ದರೂ ಆಯಾ ರಾಷ್ಟ್ರಗಳ ಬದುಕಿನ ಮಾದರಿ ಮಟ್ಟ ಮನೋವೃತ್ತಿಗಳಿಗಾಗಿ ವಸ್ತುತಃ ವ್ಯತ್ಯಾಸ ಹೊಂದದೇ ಉಳಿದಿಲ್ಲ. ಹಾಗಲ್ಲದಿದ್ದರೆ, ಅತ್ಯಂತ ಏಕಮುಖವೂ ಅಖಂಡ ರೂಪಿಯೂ ಎಂದೆನಿಸಿಕೊಳ್ಳುವ ತೀರ ಕರ್ಮಠವೂ ನಿಷ್ಠಾನಿಷ್ಠುರವೂ ಆದ ಕಮ್ಯುನಿಝಂವನ್ನೆ ನಂಬಿ ಅದರ ಬೆಳಕಿನಲ್ಲಿಯೂ ನೆರಳಿನಲ್ಲಿಯೂ ಬದುಕುವ ರಾಷ್ಟ್ರಗಳ ವೃತ್ತಿ ವರ್ತನೆಗಳಲ್ಲಿಯೇ ಇಂದು ವೈಷಮ್ಯ ವೈಪರೀತ್ಯಗಳು ಕಂಡುಬರುತ್ತಿದ್ದಿಲ್ಲ.

ಈ ಅರ್ಥದಲ್ಲಿ ನೋಡಿದಾಗ, ಪಾಶ್ಚಾತ್ಯ "ಇಝಂ"ಗಳನ್ನು ಭಾರತೀಯ ಸಂದರ್ಭದಲ್ಲಿ ಅರಿತುಕೊಂಡಾಗ ಅವುಗಳ ತಿರುಳು ಒಂದೇ ಆಗಿದ್ದರೂ ಹುರುಳು ಹೆಚ್ಚುಕಡಿಮೆ ಆಗಿರುವದನ್ನು ನಾವು ಮನಗಾಣಬಹುದು. ಈ ಮಾತು ಘನಗಹನವಾದ ತತ್ವಪ್ರಣಾಲಿಗೆ ಎಷ್ಟೋ ಅಷ್ಟೇ ಚಿಕ್ಕಪುಟ್ಟ ವಿಚಾರ–ಧಾರಣೆಗಳಿಗೂ ಅನ್ವಯಿಸುತ್ತದೆ. ಅವನ್ನೆಲ್ಲವನ್ನೂ ಇದೊಂದು ಲೇಖನದಲ್ಲಿ ಪರಿಶೀಲಿಸುವದು ಕೈಮೀರಿದ ಕೆಲಸ!

ಅಲ್ಲದೆ ಭಾರತೀಯ ರಾಜಕೀಯ ರಂಗದಲ್ಲಿ [illegible] ನೇ ಶತಮಾನದಲ್ಲಿ ೩ ನೇ ದಶಕದಲ್ಲಿ ಕಮ್ಯು[illegible]

ಪಕ್ಷವು ಆರಂಭವಾಯಿತು, ೪ನೇ ದಶಕದಲ್ಲಿ ಸೋಶಲಿಸ್ಟ್ ಪಕ್ಷವು ತಲೆ ಎತ್ತಿತು. ಹೀಗೆಲ್ಲ ನಾವು ಇಲ್ಲಿ ಬೇರೆಬೇರೆ ಪಕ್ಷಗಳನ್ನೂ ಅವು ಪಣಕಟ್ಟಿ ನಿಂತ "ಇಝಂ"ಗಳನ್ನೂ ವಿವರಿಸುತ್ತ ಹೋಗುವದು ಜೋಗದ ಜಲಪಾತವನ್ನು ಬೊಗಸೆಯಲ್ಲಿ ಹಿಡಿದಿಡಲು ಹೊರಟಂತೆ ಆದೀತು!

ಕೆಲವು ಉಪಯುಕ್ತ ಬೀಜಗಳನ್ನೂ ಸಸಿಗಳನ್ನೂ ನಾವೇ ನಡುತ್ತೇವೆ, ಬೆಳೆಯಿಸುತ್ತೇವೆ. ಆದರೆ ಬಹಳಷ್ಟು ಕಳೆ ಕರಿಕೆ ಕಳ್ಳಿ-ಕಂಟಿಗಳು ತಾವಾಗಿ ಬೆಳೆಯುತ್ತವೆ. ಮತ್ತು ನಮ್ಮ ಲಾಗು ಪಾಡಿನ ಲಾಭಪಡೆದುಕೊಂಡು ಹುಲುಸಾಗಿ ಹಬ್ಬುತ್ತವೆ. ಈ "ಇಝಂ"ಗಳ ರೀತಿಯೂ ಹಾಗೆಯೇ. ನಮ್ಮ ಭಾರತದಲ್ಲಿ ಸ್ವಾತಂತ್ರ್ಯಕ್ಕೆ ಪೂರ್ವದಲ್ಲಿ ಮತ್ತು ಅನಂತರ ಹಲವಾರು "ಇಝಂ"ಗಳನ್ನೂ ನಮ್ಮ ಸಾರ್ವತ್ರಿಕ ಜನಾಭಿಪ್ರಾಯವೇ ಜತನಮಾಡಿ ಬೆಳೆಯಿಸಿಕೊಂಡು ಬಂದಿತು. ಆದರೆ ಕೆಲವು ಅನಿಷ್ಟ "ಇಝಂ"ಗಳು ಅರಿಷ್ಟಕಾರಿಯಾಗಿ ಸ್ವಾತಂತ್ರ್ಯದ ನಂತರವೇ ಸ್ವರಾಜ್ಯದ ಸ್ವಚ್ಛಂದ ವಾತಾವರಣದಲ್ಲಿ ಭರದಿಂದ ಬೆಳೆದು ಸಾರ್ವಜನಿಕ ಜೀವನವನ್ನೆಲ್ಲ ಹಬ್ಬಿಕೊಂಡಿವೆ. ಈ ಕಳೆಯನ್ನು ಕಿತ್ತಹೊರತು ಬೆಳೆಯನ್ನು ಪಡೆಯುವಂತಿಲ್ಲ. ಆದ್ದರಿಂದ ಈ ಕಳೆಯ ಮತ್ತು ಕೊಳೆಯ "ಇಝಂ"ಗಳನ್ನು ಮೊದಲಿಗೆ ಗುರುತಿಸೋಣ.

ಇವುಗಳಲ್ಲಿ ರಾಷ್ಟ್ರೀಯ ಐಕ್ಯದ ಅಕ್ಷಯವಾದ ವೃಕ್ಷದ ಕಟ್ಟೆಯನ್ನು ಭೇದಿಸಲು ಹೊರಟ "ಇಝಂ" **"ಪ್ರತ್ಯೇಕತಾವಾದ'** ( **ಸೆಪರೇಟಿಝಂ** ) ಅಖಂಡ ಭಾರತಕ್ಕಾಗಿ ಅಹರ್ನಿಶಿಯಾಗಿ ಹೋರಾಡಿ ನಾವು ರಾಷ್ಟ್ರದ ವಿಭಜನೆಯನ್ನೆ ಪಡೆದೆವು! "ಕ್ವಿಟ್ ಇಂಡಿಯಾ" ಎಂಬ ನಮ್ಮ ಘೋಷಣೆಯನ್ನು ಬ್ರಿಟಿಶರು "ಸ್ಪ್ಲಿಟ್ ಇಂಡಿಯಾ" ಎಂದು ಅರ್ಥಮಾಡಿಕೊಂಡು ಹಾಗೆಯೇ ಮಾಡಿಯೂ ಹೋದರು. ಇದನ್ನು ನಾವು ಕಳೆ ತಗ್ಗಿಸಿ ಒಪ್ಪಿಯೂಕೊಂಡಾಯಿತು. ಸಾಧ್ಯಕ್ಕಿಂತ ಸಾಧನದ ಶುಚಿತ್ವಕ್ಕಾಗಿಯೇ ಹೆಚ್ಚಿನ ಗಮನವನ್ನು ಕೊಡುವ ನಮ್ಮ ರಾಷ್ಟ್ರಭಕ್ತಿಯೂ ಅದರ ಆಂದೋಲನವೂ ಕೊನೆಗೂ ಸಾಧ್ಯವನ್ನೆ ಲೆಕ್ಕಿಸಿ ಸಾಧನವನ್ನು ಕಡೆಗಣಿಸಿದಂತಾಯಿತು. ಐಕ್ಯದ ಬೆಲೆ ತೆತ್ತು ಸ್ವಾತಂತ್ರ್ಯವನ್ನು ಕೊಂಡು ಸಾಲ-ಮೂಲಗಳೊಂದಿಗೆ [illegible] ೧೯೪೭ ರ ಸ್ವಾತಂತ್ರ್ಯದ ಪ್ರಸವಕಾಲದಲ್ಲಿ ಜವಳಿಮಕ್ಕಳನ್ನು ಅಕಾಲಕ್ಕೆ ಹೆತ್ತಾಗಿನ ರಕ್ತಸ್ರಾವವೂ, ಆತ್ಯಂತಿಕ ವೇದನೆಯೂ ನಮ್ಮ ಭಾರತಮಾತೆಯ ಮೈಯಲ್ಲಿ ಇಂದಿಗೂ ಅನೇಕ ಕುತ್ತುಗಳ ಹುತ್ತವಾಗಿ ನಿಂತಿದೆ.

ಹಾಗೆ ನೋಡಿದರೆ, ಮಗಧ ಸಾಮ್ರಾಜ್ಯ, ಮೊಗಲ ಸಾಮ್ರಾಜ್ಯ ಬ್ರಿಟಿಶ್ ಸಾಮ್ರಾಜ್ಯ ಹೀಗೆಲ್ಲ ಯಾವದ್ದಾದರೊಂದು ಹೊರಗಿನ ಒಂದು ಪ್ರಬಲ ಶಕ್ತಿಯ ಹೇರಿಕೆಯಡಿಗಲ್ಲದೆ ನಮ್ಮ ಭಾರತವು ಒಂದು ಸಹಜವಾದ ಸಾಮಾಜಿಕ ರಾಜಕೀಯ ಏಕಾತ್ಮತೆಯನ್ನು, ಅಖಂಡ ಜೀವನವನ್ನು ಅನುಭವಿಸಿದ್ದೂ ಅಪರೂಪವೇ ಸರಿ. ಅಂಗ-ವಂಗ-ಕಲಿಂಗಾದಿ "ಛಪ್ಪನ್ನೈವತ್ತಾರು" ದೇಶಗಳನ್ನೊಳಗೊಂಡ ನವಖಂಡ ಪೃಥ್ವಿಯನ್ನು ಚಕ್ರವರ್ತಿಯೇ ಒಕ್ಕೊಡೆಯಿಂದ ಆಳಬೇಕು (ಆಗಲೂ ಕಾಶೀಖಂಡವು ಪೃಥ್ವಿಯ ಹೊರಗೇ!)

ಭಾರತದಲ್ಲಿ ಸಾಂಸ್ಕೃತಿಕ ಮತ್ತು ಧಾರ್ಮಿಕ ಭಾವೈಕ್ಯ ಅನಾದಿಯಿಂದಲೂ ಇದೆ. ಅದಕ್ಕೆ ಭೌಗೋಲಿಕ ಅಖಂಡತೆಯು ಆಧಾರವಾಗಿ ನಿಂತಿದೆ. ಆದರೆ ಈ ಐಕ್ಯ, ಅಖಂಡತೆ ಕ್ರೈಸ್ತ ಧರ್ಮಕ್ಕೆ ಒಳಪಟ್ಟ— ಕ್ಯಾಥೋಲಿಕ್ ಜಗದ್ಗುರುವನ್ನು ಒಪ್ಪಿಕೊಳ್ಳುವ— ಯುರೋಪಕ್ಕೂ ಇದೆ. ಆದರೆ ಆ ಮಾತ್ರಕ್ಕೆಯುರೋಪವು ಏಕರಾಷ್ಟ್ರವಾಯಿತೇ? ಗುರುದೇವ ಟಾಗೋರರೇ ಅಂದಂತೆ, ನಿಜವಾಗಿಯೂ ಒಂದು ಸಂಸ್ಕೃತಿಯ ಯುರೋಪವು ಹಲವು ರಾಷ್ಟ್ರಗಳಾಗಿ ಒಡೆದು ಸಿಂಡಿದೆ. ಅನೇಕ ಸಂಸ್ಕೃತಿಗಳ ದೇಶ, ವೇಷ, ಭಾಷೆ, ಭೂಷೆಗಳ— ಭಾರತವು ಒಂದು ರಾಷ್ಟ್ರವಾಗಿ ಕಾಣುತ್ತಿದೆ! ಅಂದಾಗ ಹೊರಗಿನ ಶಕ್ತಿಯ ಒತ್ತಾಯವು ಎದ್ದು ಹೋದಾಗ ಅದರ ಒಳಗಿನ ವೈವಿಧ್ಯವು ಒಡೆದೆದ್ದು ಪ್ರಕಟವಾಗಲು ಹೆಣಗುವದು ಸೋಜಿಗವಲ್ಲ. ಪ್ರತ್ಯೇಕತಾವಾದವು ಭಾರತೀಯ ಅವಿಭಕ್ತ ಅಕುಟುಂಬವನ್ನು ವಿಭಕ್ತಗೊಳಿಸುವ ಹವ್ಯಾಸವಾಗಿದೆ. ನಾಗಾಲ್ಯಾಂಡ್ ಇರಲಿ, ಡಿ. ಎಂ. ಕೆ. ಇರಲಿ, ಗೋವಾಂತಕವಿರಲಿ, ನಮ್ಮ ಜನಗಳು ಪ್ರಾದೇಶಿಕಸಂಸ್ಕೃತಿಯ ಸ್ವಾಯತ್ತಶಕ್ತಿಯಿಂದ ಕೇಂದ್ರದಿಂದ ದೂರ ಸಿಡಿಯಲು ತುಡಿಯುತ್ತಿವೆ. "Things fall apart, centre can not hold". ಪ್ರತ್ಯೇಕತಾವಾದವು ರಾಷ್ಟ್ರದ ಹಡಗಕ್ಕೆ ಬೀಳುವ ಬಿರುಕು. ಆದರೆ ರಾಷ್ಟ್ರೀಯ ನೌಕೆಯನ್ನು ಭಾಗ್ಯದ ಬಂದರಿಗೆ ಒಯ್ಯುವ ನಾವಿಕರ ಪಡೆಯಾದರೂ ಒಕ್ಕಟ್ಟಾಗಿದೆಯೇ? ಅಲ್ಲಿ **ಗುಂಪುಗಾರಿಕೆ( ಗ್ರುಪಿಝಂ )**ಯು ವಾದದ ವಾತರೋಗ ಉಲ್ಬಣಿಸಿದೆ. ನಾವು ಇಂದು ಗುಂಪುಗಾರಿಕೆಯನ್ನು ಹಳಿಯುತ್ತೇವೆ. ಆದರೆ ಅದರ ಬೇಕು ಸಾಕು ಏನು ಎಂತು ಎಂಬದನ್ನು ಅಭ್ಯಸಿಸುತ್ತೇವೆಯೇ? ಒಂದು ವಿಚಾರ, ಕಾರ್ಯಕ್ರಮ ಅಥವಾ ಉದ್ದೇಶವನ್ನು ಇಟ್ಟುಕೊಂಡು ಅದನ್ನು ನಂಬಿ, ನೆಚ್ಚಿ ನಡೆಯುವ ಎಷ್ಟು ಜನಸಮುದಾಯವನ್ನು ಒಟ್ಟಾಗಿ ಕಟ್ಟಿ ಇಡಲು ಬರುತ್ತದೆ?

ಸಾಮಾನ್ಯವಾಗಿ ಒಂದು ಸಭೆ, ಸತ್ಕಾರಕೂಟದಲ್ಲಿ ಹೋದಾಗಲೂ ನಾವು ಕಾಣುವುದೇನು? ಅಲ್ಲಲ್ಲಿ ಹಲ ಕೆಲವು ಜನರ ಚಿಕ್ಕ ದೊಡ್ಡ ಹರಟೆಯ ಗುಂಪುಗಳು. ಒಂದು ಪ್ರವಾಹಿಯ ಸಾಂದ್ರತೆ. ಅದರ ಕಣಗಳ ಅನ್ಯೋನ್ಯ ಆಕರ್ಷಣೆ ಅದನ್ನು ಸೆಳೆಯುವ ಹೊರಗಿನ ಶಕ್ತಿ. ಇವೆಲ್ಲವನ್ನು ಹೊಂದಿಕೊಂಡು ಅದರ ಹಿರಿಕಿರಿ ಹನಿಗಳು ಸಿಗುತ್ತವೆ. ಈ ಹನಿಗೂಡುವಿಕೆಯ ಗುಣಧರ್ಮವೇ ಮಾನವಜೀವನದ ಪ್ರವಾಹದಲ್ಲಿ ಗುಂಪು ಪಂಗಡಗಳ ರಚನೆಗೂ ಹೆಚ್ಚು ಕಡಿಮೆ ಅನ್ವಯಿಸುತ್ತದೆ. ಗುಣಕ್ಕೂ ಪರಿಮಾಣಕ್ಕೂ ಒಂದು ಒಳತೋಟಿ ಯಾವಾಗಲೂ ಇದೆ. ಒಂದು ರಾಜ್ಯ ವಿಪರೀತ ವಿಸ್ತಾರವಾದಂತೆ ಅದು ಸಿಡಿದು ಅಲ್ಲಲ್ಲಿ ಸಂಸ್ಥಾನಗಳು ತಲೆದೋರುತ್ತವೆ. ಒಂದು ಧರ್ಮ ದೊಡ್ಡದಾಗಿ ವಿಕಾಸಗೊಂಡಂತೆ ಅದರಲ್ಲಿ ಹಲವಾರು ಪಂಥಗಳು ಉಂಟಾಗುತ್ತವೆ, ಮಠಗಳು ಎದ್ದು ನಿಲ್ಲುತ್ತವೆ. ದೊಡ್ಡ ನೆರೆಯ ನೆಗಸು ನುಗ್ಗಿ ಹಬ್ಬಿ ಹಿಂಜರಿದಾಗ ಅಲ್ಲಲ್ಲಿ ನೀರು ಮಡುವುಗಟ್ಟಿ ನಿಲ್ಲುವದಿಲ್ಲವೇ? ಹಾಗೆಯೇ ಈ ಮಾರ್ಪಾಟ.

ಮಂದಿಯ ನಿಷ್ಠೆಗೆ ಒಂದು ತೆಕ್ಕೆ ಇದೆ. ಅದರಾಚೆಗೆ ಅವರು ಒಂದುಗೂಡಿ ನಿಲ್ಲುವದಿಲ್ಲ. ರಾಷ್ಟ್ರೀಯ ಆಂದೋಲನ ದೇಶವ್ಯಾಪಿಯಾದ ಕ್ರಾಂತಿಯಂಥ ಒಂದು ನೆರೆಹಾವಳಿಯಲ್ಲಿ ಎಲ್ಲರೂ ಎಲ್ಲವೂ ಒಮ್ಮೊಗವಾಗಿ ತೇಲಿ ನುಗ್ಗಬಹುದು. ಆದರೆ ಆ ಕಾವು ಆವೇಶ ಇಳಿದಾಗಲೂ ಸದಾ ಕಾಲವೂ ಭಾರತೀಯರಲ್ಲಿ ಒಂದು ಪಕ್ಷವನ್ನೋ ಒಂದೇ ನಿಷ್ಠೆಯನ್ನೋ ಏಕೋಭಾವದಿಂದ ಅಪ್ಪಿ ಒಪ್ಪಿಕೊಂಡು ಉಳಿಯುವದು ಸ್ವಾಭಾವಿಕವೇ?

ಇದೂ ಅಲ್ಲದೆ ಭಾರತದಂಥ ಒಂದು ಉಪಖಂಡದ ವಿಶಾಲವಾದ ಸಾರ್ವಜನಿಕ ರಂಗದಲ್ಲಿ

ಹುರಿಕಟ್ಟಾದ ಅಚ್ಚುಕಟ್ಟಾದ ಎರಡೇ ವಿರೋಧಿ ಪಕ್ಷಗಳು ಬೆಳೆದು ನಿಲ್ಲುವದು ಗಾಳಿಗೋಪುರ ಕಟ್ಟಿದಂತೆಯೇ ಸರಿ. ಅಲ್ಲಿಯೂ ಏಕಪಕ್ಷೀಯ ಪ್ರಜಾಪ್ರಭುತ್ವವು ಪ್ರಚಂಡ ಸರ್ವಾಧಿಕಾರದಂತೆ ಸ್ಥಾಪಿತವಾದಲ್ಲಿ (ರಶಿಯಾ, ಚೀನ, ಫ್ಯಾಸಿಸ್ಟ ರಾಷ್ಟ್ರಗಳು) ಹೊರಗಿನ ವಿರೋಧವನ್ನು ಹತ್ತಿಕ್ಕಿ ಆ ಪಕ್ಷವು ತ್ರಿವಿಕ್ರಮವಾಗಿ ಬೆಳೆದು ನಿಂತಾಗ ಅದಕ್ಕೆ ಒಳಗಿನಿಂದಲೇ ವಿರೋಧಿ ಒತ್ತಡಗಳು ಉಂಟಾಗುವದು ಅಪರಿಹಾರ್ಯ ಮಾತ್ರವಲ್ಲ ಪಕ್ಷದ ಆರೋಗ್ಯದ ಮತ್ತು ರಾಷ್ಟ್ರದ ಭವಿತವ್ಯದ ದೃಷ್ಟಿಯಿಂದ ಬಹುಮಟ್ಟಿಗೆ ಸ್ವಾಗತಾರ್ಹವೇ ಸರಿ.

ಕಾಂಗ್ರೆಸಿನಂಥ ಹಳೆಯ ಹೆಮ್ಮರಕ್ಕೆ ಬೀಳಲುಗಳೆಷ್ಟೇ ಬಿರುಸಾಗಿ ಬಹಳವಾಗಿ ಬೇರೆ ಬೇರೆ ಬಂಡಳಿಕೆಗಳು ಮೈತುಂಬ ಚಿಗಿತು ಹಬ್ಬುವದು ಸಹಜ ಛಲ. ಇನ್ನು ಇಂಥ ಪ್ರಚಂಡ ಪಕ್ಷವನ್ನು ಪ್ರತಿಭಟಿಸಲು ತಲೆ ಎತ್ತುವ ವಿರೋಧಿ ಶಕ್ತಿಗಳು ಅಲ್ಲಲ್ಲಿಯ ಸ್ಥಾನಿಕ ಪ್ರಾದೇಶಿಕ ನೈಮಿತ್ತಿಕ ಹಾಗೂ ಪ್ರಾಸಂಗಿಕ ಪ್ರಚೋದನೆ ಉತ್ತೇಜನಗಳಿಂದಾಗಿ ಚಿಕ್ಕ ಚೂರಾಗಿ ಉದ್ದೇಶ ಒಂದೇ ಇದ್ದರೂ ಉಪಾಯಭೇದದಿಂದ ಅಥವಾ ಉಪಾಯ ಒಂದೆ ಆಗಿಯೂ ಉದ್ದೇಶಭೇದದಿಂದ ಅನೇಕ ಪಂಗಡಗಳಾಗಿ ಸಂಘಟಿತವಾಗುವದು ಕ್ರಮಪ್ರಾಪ್ತ. ಇಂಥಲ್ಲಿ ಈ ಗುಂಪುಗಳು ಪಂಗಡಗಳು ಗುಣಪರಿಣಾಮದ ಸೂತ್ರವಿಟ್ಟುಕೊಂಡು ಒಟ್ಟಾಗಿ ಮುಂದೆ ಒಂದಾಗಿ ಒಂದು ಅಭೇದ್ಯ ವ್ಯೂಹವನ್ನು ಕಟ್ಟಿದರೇನೇ ಬಲಿಷ್ಠವಾದ ವಿರೋಧಿ ಪಕ್ಷವನ್ನು ಭಾರತದ ಆದ್ಯಂತ ನಿಲ್ಲಿಸುವದು ಸಾಧ್ಯ.

ಈ ದೃಷ್ಟಿಯಿಂದ ಭಾರತೀಯ ರಾಜಕೀಯ ಪಕ್ಷಗಳ ಪುನರ್ಘಟನೆಯೂ ಪರಿಸೀಮನವೂ ಅಗತ್ಯ. ಸಮಾಜವಾದೀ ಶಕ್ತಿಗಳೆಲ್ಲ ಕಾಂಗ್ರೆಸನ್ನು ಸೇರಿ ಸಾಂಪ್ರದಾಯಿಕ ಸನಾತನೀ ಶಕ್ತಿಗಳೆಲ್ಲ ಬಲಬದಿಯ ವಿರೋಧಿ ಶಕ್ತಿಯಾಗಿ ಕಮ್ಯುನಿಸ್ಟ ಬಲವೆಲ್ಲ ಎಡಬದಿಯ ಪಕ್ಷವಾಗಿ ಭಾರತದ ರಾಜಕೀಯ ಪಂದ್ಯಾಟವು ಒಂದು ತುರುಸಿನ ತ್ರಿಭುಜ ಸ್ವರೂಪವನ್ನು ತಾಳಿದರೇನೆ ರಾಷ್ಟ್ರದ ರಾಜಕಾರಣವು ನಿರಾಮಯವಾದೀತು. ಆ ತನಕವೂ ಶರೀರದಲ್ಲಿಯ "ಎಂಟೀ—ಬೋಡೀಜ್"ಗಳಂತೆ ಈ ಒಳ ಒತ್ತಡದ ಗುಂಪುಗಾರಿಕೆಯ ಗತ್ತುಗಾರಿಕೆ ಹೀಗೆಯೇ ಮುಂದರಿಯತಕ್ಕದ್ದೇ!

ಸ್ವಾತಂತ್ರ್ಯೋತ್ತರ ಕಾಲದಲ್ಲಿ ಹುಲುಸಾಗಿ ಬೆಳೆದ ಇನ್ನೊಂದು ಕೆರಿಕೆಯ ಪೊದೆ **ಅನುಗ್ರಹವಾದ (ಫೆವರಿಟಿಝಂ).** ಹಿಂದೆ ಸರಂಜಾಮೀ ಯುಗದಲ್ಲಿ ಪಾಳೆಯಗಾರಿಕೆಯ ಪಂದ್ಯಾಟದಲ್ಲಿ ಒಂದು ರಾಜ್ಯವನ್ನು ಗೆದ್ದಾಗ ಅರಸನು ಅಥವಾ ಆ ಪುಂಡ ಪಾಳೆಯಗಾರನು ತನ್ನ ಬೆಂಬಲಿಗರಿಗೆಲ್ಲ ಅವರವರ ಭಕ್ತಿ--ಶಕ್ತಿಗಳಿಗೆ ತಕ್ಕಂತೆ ಉಂಬಳಿಯನ್ನು 'ಉಡುಗೊರೆಯನ್ನು ಹಂಚುವದು ಕ್ರಮವಾಗಿತ್ತು. ಅದೇ ಕ್ರಮವು ಇಂದು ಅಧಿಕಾರಕ್ಕೆ ಬಂದ ರಾಜಕೀಯ ಪಕ್ಷವು ಮಾಡುತ್ತದೆ. ಚುನಾವಣೆಗಳಲ್ಲಿ ಅಳಲಿ ಸೇವೆ ಅಳಲೇಕಾಯಿ ಸೇವೆ ಸಲ್ಲಿಸಿದ ನಿಷ್ಠಾವಂತ ಕಾರ್ಯಕರ್ತರಿಗೆಲ್ಲ ಅವರವರ ಕೂವತ್ತಿನಂತೆ ಸರಕಾರೀ ಪಕ್ಷವು ಚಿಕ್ಕ ದೊಡ್ಡ ಪದವಿಗಳನ್ನೂ ಪದಾಧಿಕಾರಗಳನ್ನೂ ಹಂಚುತ್ತದೆ. ಅನೇಕ ಬೋರ್ಡು, ಕಮಿಟಿಗಳಲ್ಲಿ ಅವರಿಗೆ ಗೌರವ ವೇತನ, ಭತ್ತೆ ಮುಂತಾದವನ್ನು ಕಟ್ಟಿಕೊಟ್ಟು ಸೇರಿಸಿಕೊಳ್ಳುತ್ತದೆ. ಈ ಬಗೆಯ ಅನುಗ್ರಹ ವಿತರಣೆಯಲ್ಲಿ ಕೇವಲ ಅರ್ಹತೆ ಕಾರ್ಯಕ್ಷಮತೆಯನ್ನು ನೋಡಿ ಸ್ಥಾನಮಾನಗಳನ್ನು ಹಂಚಿದರೆ ಅದಕ್ಕೆ ಆಕ್ಷೇಪವೇನೂ ಇಲ್ಲ. ಆದರೆ ಅನೇಕ ಸಲ ಇದು ಶುದ್ಧ ಅನುಗ್ರಹ ಅಥವಾ ಉಪಕಾರಾರ್ಥಿಯವಾಗಿಬಿಡುತ್ತದೆ.

ಚುನಾವಣೆಗಳನ್ನು ಗೆಲ್ಲಲಿಕ್ಕೆ ಎಲ್ಲ ಮಾದರಿಯ ಜನರ ನೆರವು ಬೇಕಾಗುತ್ತೆ. ಆದರೆ ಆಡಳಿತಕ್ಕೆ, ವಿಧಾಯಕ ಕಾರ್ಯಕ್ಕೆ ವಿಶಿಷ್ಟ ಯೋಗ್ಯತೆಯ ಜನವೇ ಬೇಕು. ಅಲ್ಲಿ ಸಲ್ಲುವವರು ಇಲ್ಲಿ ಸಲ್ಲುವದಿಲ್ಲ. ಆದರೆ ಕೇವಲ ಜನಪ್ರಿಯತೆಯ ಹುಲಿಯ ಬೆನ್ನೇರಿ ರಾಜಧಾನಿಗೆ ಹೊರಟ ವಕ್ರಶ್ರೇಷ್ಠಿಗಳಿಗೆ ಆ ವಿವೇಕ ಉಳಿಯುವದಿಲ್ಲ, ಅಥವಾ ಅಂಥ ಜನರು ಅದನ್ನು ಉಳಿಯಗೊಡುವದಿಲ್ಲ. ಆ ಹುಲಿಯೇ ಓಟದ ನಿಟ್ಟನ್ನೂ ನೇರವನ್ನೂ ನಿರ್ಣಯಿಸುತ್ತದೆ. ಏರಿ ಕೂತ ಕದೀಮ ಕೆಳಗೆ ಇಳಿಯುವಂತಿಲ್ಲ! ಆದ್ದರಿಂದ ಪಾತ್ರಾಪಾತ್ರ ವಿವೇಕವನ್ನು ಕಟ್ಟಿಟ್ಟು ಕಾಂಗ್ರೆಸ್ ಮಂತ್ರಿಯು ಹಿಂದಿನ ಸಂಸ್ಥಾನೀ ದೊರೆಯಂತೆ ತನ್ನ ಒಡ್ಡೋಲಗ ಕಟ್ಟಬೇಕಾಗುತ್ತದೆ. ಅನೇಕ ಸಲ ಯೋಗ್ಯರನ್ನು ತಳ್ಳಿ, ನ್ಯಾಯಕ್ರಮವನ್ನು ಬದಿಗೊತ್ತಿ ತಮ್ಮ ಇಷ್ಟಸಿದ್ಧಿಯ ಪ್ರಮಥಗಣವನ್ನು ಸಂತುಷ್ಟಪಡಿಸಲು ಸರಕಾರ ಕಟ್ಟಿದ ಅಕ್ರಮಾದಿತ್ಯರು ಹೆಣಗಾಡುತ್ತಾರೆ. ಇದರಿಂದ ಆಡಳಿತವು ಕೆಟ್ಟು ಸರಕಾರದ ಪತ್ತುಗೇಡಾಗಿ, ರಾಜ್ಯದ ರಥವು ರಾಡಿಯಲ್ಲಿ ಸಿಲುಕಿ ಮುಗ್ಗರಿಸುತ್ತದೆ.

ಅನುಗ್ರಹವಾದದ ತೀವ್ರ ಸ್ವರೂಪವೇ **ಅಳಿಯಾವಾದ**(ನೆಪ್ಪೊಟಿಝಂ). ಇದು ಅಧಿಕಾರ ಕಚೇರಿಯ ಅಳಿಯಸಂತಾನದ ಕಟ್ಟು! ರಾಜಶಾಲಕನಿಗೆ ನಗರಾಧ್ಯಕ್ಷತೆ ಕೊಟ್ಟರೆ ಸಾತ್ವಿಕರು ಹೇಗೆ ಶೂಲಕ್ಕೇರುತ್ತಾರೆ---ಎಂಬುದನ್ನು ಸಾವಿರ ವರ್ಷಗಳ ಹಿಂದೆಯೇ "ಮೃಚ್ಛಕಟಿಕ" ನಾಟಕವು ಅತ್ಯಾಧುನಿಕ ರೀತಿಯಲ್ಲಿ ಕಣ್ಣುಕಟ್ಟುವಂತೆ ಚಿತ್ರಿಸಿದೆ! ಇಂಥ ಶಕಾರರ ಪಿದ್ವತ್ತು ಪ್ರಭುತ್ವ ಏನು ಕೇಳಬೇಕು! ಶಕಾರನ ಆಡಳಿತದಲ್ಲಿ ಶರ್ವಿಲಕನೂ ಸಂಭಾವಿತ ಕ್ರಾಂತಿಕಾರಿಯಾಗಿ ಕಾಣುತ್ತಾನೆ! ಆಂಗ್ಲ "ನೆಪೋಟಿಝಂ" ಶಬ್ದವು "ನೇಪ್ಸ್ಯೂ" (ಸೋದರಳಿಯ) ಎಂಬ ಶಬ್ದದಿಂದ ಹುಟ್ಟಿದೆ. ಅಧಿಕಾರಿಯು ತನ್ನ ಬಂಧು ಬಳಗದವರನ್ನೇ ಉನ್ನತ ಪದವಿಗೆ ಏರಿಸುವ ಸ್ವಜನ ಪಕ್ಷಪಾತವಿದು. ಇಲ್ಲಿಯೂ ಕೇವಲ ಯೋಗ್ಯತೆ ಪಾತ್ರತೆಯನ್ನು ಗಮನಿಸಿದರೆ ಹಾನಿ ಇಲ್ಲ. ಆದರೆ, ಆಗ ಅದು ಸ್ವಜನಪಕ್ಷಪಾತವೇ ಅಲ್ಲ. ಯೋಗ್ಯ ಸತ್ಪಾತ್ರನು ಆಪ್ತನಾಗಿರುವದು ಒಂದು ಯೋಗಾಯೋಗ. ಇಂದು "ದಾಸ ಸಮಿತಿ"ಯು ಬಹಿರಂಗವಾಗಿ ಬೆಳಕು ಬೀರಿದ ಕೈರಾನರ ಹಾಗೂ ಇನ್ನೂ ಬೀರಲು ಶಕ್ಯವಿದ್ದ ಅನೇಕ "ಕೈಮಾರ" ಮಂತ್ರಿ ಮಹಾಶಯರ ಪ್ರತಾಪ ಚರಿತ್ರೆಯು ಇಂಥ ಭ್ರಷ್ಟಾಚಾರಕ್ಕೆ ಕಗ್ಗಟ್ಟ ಸಾಕ್ಷಿ!

ಇಂದು ಭಾರತದಲ್ಲಿ ತಲೆ ಎತ್ತಿದ ಇನ್ನೊಂದು ವಾದವು **ಭಾಷಾವಾದ**. ಇದಕ್ಕೆ ಮಾನ್ಯ ಆರ್. ಆರ್. ದಿವಾಕರರೇ "ಲಿಂಗ್ವಿಝಂ" ಎಂದು ಮೊದಲು ಕರೆದದ್ದು ಇರಬೇಕು. ಭಾಷಾಭಿಮಾನ, ಭಾಷಾನುಗುಣ ಪ್ರಾಂತೀಕರಣ ಇದೆಲ್ಲ ಸಾಧುವಾದ ವಾದ. ಆದರೆ ಅನೇಕ ಸಲ ಗುಣದ ಅತಿರೇಕವೂ ದೋಷವಾಗುತ್ತದೆ. ಅಭಿಮಾನವು ದುರಭಿಮಾನವಾದರೆ ಆಕ್ರಮಕವಾಗುತ್ತದೆ. ಅಭಿಮಾನವು ಅಭಿರುಚಿಯಾಗಿ ಕಾಣಬೇಕೇ ಹೊರತು ಅಭಿನಿವೇಶವಾಗಿ ಕಾಣಬಾರದು. ಇಂದು ನಾವು ಕಾಣುತ್ತಿರುವದು ಭಾಷೆಯ ಹೆಸರಿನಿಂದ ಕಟ್ಟಿದ ಇಂಥ ರಾಜಕೀಯ ಹಗಲು ವೇಷ! ಇದರದೊಂದು ಸೋಜಿಗದ ಉದಾಹರಣೆಯನ್ನು ಕೊಡಬಹುದು.

ಧಾರವಾಡ, ಹುಬ್ಬಳ್ಳಿ, ಗದಗದಂಥ ಕನ್ನಡದ ಒಳನಾಡುಗಳಲ್ಲಿಯೂ ಮಹಾರಾಷ್ಟ್ರ ಮಂಡಳಗಳು ಉತ್ತಮವಾಗಿ ವಿಧಾಯಕವಾಗಿ ಎಂದಿನಿಂದಲೂ ಕೆಲಸ ಮಾಡುತ್ತಿವೆ. ಆದರೆ ಕಾರವಾರದಲ್ಲಿ "ಝಾಲಾಚ್ ಪಾಹಿಜೇ"ಯ ಕೋಲಾಹಲವೇ ಉಗ್ರವಾಗಿದೆ. ಅಂದಾಗ ಅಲ್ಲಿಯ ಮಹಾರಾಷ್ಟ್ರವಾದೀ ಜನಕ್ಕೆ ಮರಾಠೀ ವಾಙ್ಮಯದ ಪ್ರೀತ್ಯಾದರಗಳು ಉಕ್ಕಿಬಂದದ್ದಿದೆಯೆಂದು ಭಾವಿಸಬೇಕೇ? ಇಲ್ಲ. ಅಲ್ಲಿಯ ಈ ಜನಕ್ಕೆ ಕೇವಲ ಮಹಾರಾಷ್ಟ್ರವಾದದ ರಾಜಕೀಯ "ಗೊಂದಲ" ಬೇಕು. ಅಲ್ಲಿಯ ಮರಾಠೀ ಪ್ರಜೆಗೆ ಮರಾಠೀ ಮಂಡಳದಂಥ ಯಾವ ಒಂದು ಸಂಸ್ಥೆಯನ್ನು ಕಟ್ಟಿದ ಶ್ರೇಯಸ್ಸೂ ಇಲ್ಲ! ಇದು ಈ "ಲಿಂಗ್ವಿಝಂ"ದ ಲಜ್ಜಾಸ್ಪದ ಲಕ್ಷಣ! ರಾಜ್ಯದ ಗಡಿಗಳನ್ನು ರಾಷ್ಟ್ರದ ಗಡಿಗಳೋ ಎಂಬಂತೆ ಅತಿರೇಕದ ವಿಕಾರಗೆಟ್ಟ ಮಹತ್ವ ಕೊಟ್ಟು ಹೋರಾಡಿ ಶಕ್ತಿಪಾತ ಮಾಡಿಕೊಳ್ಳುವ ಅತಿವಾದ(ಎಕ್ಸ್‌ಟ್ರೀಮಿಝಂ) ಇದು!

ಸದ್ಯದ ಈ ಕಳೆ-ಕರಿಕೆಗಳ ಕಂಟಿ ಕಿತ್ತು ಆಚೆಗಿಟ್ಟರೆ, ಭಾರತೀಯ ರಂಗದಲ್ಲಿ ಎದ್ದು ಕಾಣುವ ಪ್ರಮುಖ "ಇಝಂ"ಗಳು ಯಾವವು? ಇಲ್ಲಿ "ಕಮ್ಯುನಿಝಂ" ಬದಿಗೆ ಇಟ್ಟಿದ್ದೇವೆ. ಅದು ಮೂಲದಲ್ಲಿ ಭಾರತೀಯವಲ್ಲ. ತತ್ವತಃ ಜಾಗತಿಕ "ಸೋಶಾಲಿಝಂ" ಕೂಡ ಹಾಗೆಯೇ ಎನ್ನಬಹುದು. ಆದರೂ ನೆಹರೂಜಿಯು **ಭಾರತೀಯ ಸಮಾಜವಾದಕ್ಕೆ** ಒಂದು ವಿಶಿಷ್ಟ ಒಲವನ್ನು ಕೊಟ್ಟರು. ಈ ಮಟ್ಟಿಗೆ ಅದು ನಮ್ಮಲ್ಲಿಯ ಒಂದು "ಇಝಂ" ಎಂದೇ ತಿಳಿಯಬಹುದು.

ಆಂಗ್ಲರ ಉದಾರಮತವಾದದ ಅಚ್ಚಳಿಯದ ಸಂಸ್ಕಾರದಲ್ಲಿ ಬೆಳೆದ ನೆಹರೂಜಿಯವರು ತಾರುಣ್ಯದಲ್ಲಿಯೇ ಅಲ್ಲಿಯ ಫೇಬಿಯನ್ ಸಮಾಜವಾದದತ್ತ ಆಕರ್ಷಿತರಾದರು. ಲಖನೌ ಕಾಂಗ್ರೆಸಿನ ಅಧ್ಯಕ್ಷಪೀಠದಿಂದ ಅವರು ಸೊವಿಯೆಟ್ ಸಮಾಜವಾದವನ್ನು ಹೊಗಳಿದಾಗಲೂ ಅವರು ಉಲ್ಲೇಖಿಸಿದ್ದು ಲೆನಿನ್-ಸ್ಟಾಲಿನ್‌ರ ಗ್ರಂಥಗಳನ್ನಲ್ಲ. ಸಿಡ್ನೆ ವೆಬ್ ದಂಪತಿಗಳು ಸೋವಿಯಟ್ ನವಸಂಸ್ಕೃತಿಯ ಕುರಿತು ಬರೆದ ಉಜ್ವಲ ಉದ್ಗ್ರಂಥವನ್ನು!

ಭಾರತದ ಸ್ವಾತಂತ್ರ್ಯದ ಆಂದೋಲನದಲ್ಲಿ ಮೂರು ಶಕ್ತಿಗಳ ಸಂಗಮವಿತ್ತು. ಒಂದು ರಾಷ್ಟ್ರೀಯ ಪ್ರತೀಕಾರದ ಶಕ್ತಿ. ಅದಕ್ಕೆ ವಿದೇಶೀ ಸತ್ತೆಯ ಬಗೆಗೆ ಜೀವಂತ ಜ್ವಲಂತ ದ್ವೇಷ. ಇದು ಸಾಂಪ್ರದಾಯಿಕ ಸನಾತನೀ ಹಿಂದೂ ಇತಿಹಾಸದಿಂದ ಸ್ಫೂರ್ತಿ ಪಡೆದಾಗ ಶುದ್ಧ ಹಿಂದೂ ಸಂಘಟನಾನಿಷ್ಠ ಸಾವರಕರೀವಾದ, **ಯುಯುತ್ಸು ಹಿಂದುತ್ವ ( ಮಿಲಿಟಂಟ್ ಹಿಂದುಯಿಝಂ )** ಆಗಿ ಪ್ರಕಟವಾಯಿತು. ಇದೇ ತೀವ್ರ ರಾಷ್ಟ್ರೀಯ ಅಭೀಪ್ಸೆ. ಇಝಂ ಕ್ರಾಂತಿಕಾರಿಗಳ (ಸಿನ್‌ಫೇನ್) ಚಳವಳಿಯಿಂದ ಪ್ರೇರಿತರಾದಾಗ ಭಗತಸಿಂಗ, ಜತೀನ್‌ದಾಸ ಪ್ರಭೃತಿಗಳ **ಆತಂಕವಾದ ( ಟೆರೊರಿಝಂ)**, ಆಗ ಭುಗಿಲೆದ್ದಿತು—ಮುಂದೆ ಇವರದೇ ಪ್ರಚಂಡ ಸಶಸ್ತ್ರ ಉದ್ಘಾಟನೆಯು ನೇತಾಜಿ ಬೋಸರ ಅಝಾದ ಹಿಂದ ಸೇನೆಯ ಮಹಾಸ್ಫೋಟದಲ್ಲಿ ಕಂಡುಬಂದಿತು.

**ಯುಯುತ್ಸು ಹಿಂದುತ್ವವು** ಭಾರತದ ಪುಣ್ಯಯುಗವಾದ ಚಂದ್ರಗುಪ್ತನಿಂದ ಹರ್ಷವರ್ಧನನವರೆಗಿನ ಕಾಲಖಂಡದ ಸಾಂಸ್ಕೃತಿಕ ಸ್ಫೂರ್ತಿಯಿಂದ ರೋಮಾಂಚಿತವಾಗಿದೆ. ಈ ವಾದಕ್ಕೆ ಮಾರ್ಕ್ಸ ಎಂಜಲ್ಸರಲ್ಲ, ಶ್ರೀರಾಮ ಶ್ರೀಕೃಷ್ಣರು ಮಾರ್ಗದರ್ಶಕರು. ಅಶೋಕಚಕ್ರವಲ್ಲ ಸುದರ್ಶನ ಚಕ್ರ ಇವರಿಗೆ ಸ್ಫೂರ್ತಿಯ ಕೇಂದ್ರ. ಸೈದ್ಧಾಂತಿಕ ಮತಭೇದ ಮತ್ತು ಯುಕ್ತಾಯುಕ್ತತೆ ಏನೇ ಇದ್ದರೂ ಹಿಂದುತ್ವದ ಆ ವಾದವು ಸುಸಂಘಟಿತವಿದೆ. ಭಾರತದ ಪ್ರಾಚೀನ ಪರಂಪರೆಯ ತಾಯ್ಬೇರಿನಿಂದ ಚಿಗಿದಿದೆ. ಸ್ವತ್ವದಲ್ಲಿಯೆ ಸತ್ಯವನ್ನು ಕಂಡುಕೊಳ್ಳುವ ಶುದ್ಧ ಭಾರತೀಯ "ಇಝಂ" ಆಗಿದೆ.

ಆತಂಕವಾದಿ ರಾಷ್ಟ್ರೀಯತ್ವವು ವೈಯಕ್ತಿಕ ಸಾಹಸದ ರೋಮಹರ್ಷದ ಪ್ರತಿಕ್ರಿಯೆಯೆ. ಆದರೆ ನೇತಾಜಿ ಬೋಸರ ಸಶಸ್ತ್ರ ಕ್ರಾಂತಿಯ (ಇನ್‌ಸರಕ್ಶನ್) ವಾದವು, ಸಾಮುದಾಯಿಕ ಮತ್ತು ಹೊರಗಿನ ನೆರವನ್ನೂ ಅಪೇಕ್ಷಿಸಿದ, ಲಷ್ಕರೀ ಶಿಸ್ತಿನ ಒಂದು ಬಗೆಯ ಸರ್ವಾಧಿಕಾರಿತ್ವದ ವಿಚಾರಧಾರೆ.

ಇದೇ ರೀತಿ ಶುದ್ಧ ಭಾರತೀಯ ಸಂಸ್ಕೃತಿಯ ಪ್ರೇರಣೆಯಿಂದ ಹೊರಟ ಇನ್ನೊಂದು ಇಝಂ ಮಹಾತ್ಮಾಜಿಯವರದು. ಅದರ ಸುಸಂಘಟಿತ ವಿಕಾಸವನ್ನು ವಿನೋಬಾಜಿಯವರ **ಸರ್ವೋದಯ** ತತ್ವದಲ್ಲಿ ಕಾಣಬಹುದು. ಗಾಂಧೀವಾದವೆಂಬುವದು ಮೂಲತಃ ಭಾರತೀಯವಾದರೂ ಅದೂ ತತ್ವತಃ ಜಾಗತಿಕವೇ ಸರಿ. ಗಾಂಧೀ-ವಿನೋಬಾ ಪ್ರಭೃತಿಗಳಿಗೆ ಭಾರತದ ಐತಿಹಾಸಿಕ ಸಂದರ್ಭವು ಒಂದು ಪ್ರಯೋಗಶಾಲೆ ಆಯಿತು. ಅವರು ಇಲ್ಲಿ **ಸತ್ಯದ ಪ್ರಯೋಗಗಳನ್ನು** ಮಾಡಿನೋಡಿದರು.

ಸರ್ವೋದಯವಾದವೂ ಸೈಜವಾದ ಭಾರತೀಯ ಕೊಡುಗೆ—ಜಗತ್ತಿನ "ಇಝಂ"ಗಳ ಕೋಶಕ್ಕೆ! ಸರ್ವೋದಯದ ಮೂಲ ಗಾಂಧೀಜಿಯವರ ಸತ್ಯಾಗ್ರಹದ ಅಹಿಂಸಾಮಯ ಅಸಹಕಾರದ ಏಕಾಂಗಿಕ ಹೃದಯಪರಿವರ್ತನೆಯ ತತ್ವದಲ್ಲಿದೆ. ಅದು ಕೇವಲ ಆತ್ಮಸ್ವಾತಂತ್ರ್ಯದ ನಿಲುವು "ಆತ್ಮಾರ್ಥಂ ಪೃಥಿವೀಂ ತ್ಯಜೇತ್"----ಎಂಬ ಆವ್ಹಾನ ಇದರ ಮೂಲ ಪ್ರೇರಣೆ. ಯೇಸು ಕ್ರಿಸ್ತ, ಸೇಂಟ್ ಫ್ರಾನ್ಸಿಸ್. ನಮ್ಮ ಭಕ್ತಿಪಂಥೀಯ ಸಾಧು-ಸಂತರು ಪ್ರಕಟಿಸಿದ ಚಾರಿತ್ರ್ಯದಿಂದ. **ಕ್ರಿಶ್ಚನ್ ಸೋಶಾಲಿಝಂ, ಮೋರಲ್ ಡಿಸ್‌ಆರ್ಮಾಮೆಂಟ್** ಮುಂತಾದ ಪಾಶ್ಚಾತ್ಯ ಆಂದೋಲನಗಳಲ್ಲಿಯೂ ಗಾಂಧೀವಾದದ ಪ್ರತಿಧ್ವನಿಯು ಸಿಗಬಹುದು. ಗಾಂಧೀಜಿ ಮೂಲತಃ ಅರಾಜಕವಾದಿಗಳು. ಆತ್ಮಸ್ವಾತಂತ್ರ್ಯ ಅಂತರ್ಧ್ವನಿಯನ್ನೊಂದೇ ಒಪ್ಪಿ ನಡೆಯುವ ಸತ್ಯಾಗ್ರಹಿ. ಸಂಪತ್ತಿನ ಕುರಿತು ವಿಶ್ವಾಸಿಕೆ(ಟ್ರಸ್ಟಿಶಿಪ್)ಯ ಸಿದ್ಧಾಂತ, ವಿನೋಬಾಜಿಯವರ ಭೂದಾನ—ಜೀವನದಾನಗಳ ಸಿದ್ಧಾಂತ. ಇವೆಲ್ಲವೂ ಮೂಲದಲ್ಲಿ ತನ್ನನ್ನು ತಿದ್ದಿ ಪರರನ್ನು ತನ್ನ ತತ್ವಕ್ಕೆ ಒಲಿಸಿ ತಿದ್ದುವ ಪ್ರಕ್ರಿಯೆಯದೇ ವಿವಿಧ ವಿನ್ಯಾಸವು. ವ್ಯಷ್ಟಿ ಸತ್ಯವನ್ನು ಸಮಷ್ಟಿಯ ಸತ್ತೆಗೂ ಅನ್ವಯಿಸಿ ಮಾನವ್ಯ—ಬಾಂಧವ್ಯದಲ್ಲಿ ನವ್ಯವಾದ ಕ್ರಾಂತಿಯನ್ನು ಉಂಟುಮಾಡಲು ಹೊರಟ ಧೀರ ಮನಸ್ವಿಗಳು ಇವರು. ಸರ್ವೋದಯದ ಈ ಸಂದೇಶದ ಬಗೆಗೆ ಹೆಚ್ಚಿನ ಸಂಶೋಧನೆ ಸಂಚಾಲನೆ ಇನ್ನೂ ಸಿಗಬೇಕು.

ಅಸಹಕಾರವನ್ನು ನಿಃಶಸ್ತ್ರ ಪ್ರತೀಕಾರದ ಅಸ್ತ್ರವಾಗಿ ಅಭಿಯೋಗಿಸಿ ಭಾರತವು ಎರಡು ಆಂದೋಲನಗಳನ್ನು ಹೂಡಿತು, ಸ್ವರಾಜ್ಯ ಪ್ರಾಪ್ತಿಗಾಗಿ. ಹೃದಯ ಪರಿವರ್ತನೆಯ ಈ ದಿವ್ಯಾಸ್ತ್ರವು ಹೃದಯವಿಲ್ಲದ ಸಾಮ್ರಾಜ್ಯಶಾಹಿಯ ಶೋಷಣೆ

ಮಂತ್ರದ ಮೇಲೆ ಪ್ರಭಾವ ಬೀರುವದೆಂತು? ಆಗ ಅದರ ಕೆಲವೊಂದು ಇತಿಮಿತಿಗಳು ಕಂಡು ಬಂದವು. ೨೦ನೆಶತಕದ ೨ನೆ ದಶಕದಲ್ಲಿ ಚೌರಿಚೌರಾದ ಹತ್ಯಾಕಾಂಡದ ನಂತರ ಜೇಲು ತುಂಬುವ ಚಳವಳಿಯು ಸ್ಥಗಿತವಾದ ಮೇಲೆ, ಶಾಸನಸಭೆಗಳ ಒಳಗಿಂದ ವೈಧವಾಗಿ ಪ್ರತೀಕಾರವನ್ನು ಮಾಡಲು ಸ್ವರಾಜ್ಯಪಕ್ಷವು ಕಾಂಗ್ರೆಸಿನ ಶಾಖೆಯಾಗಿ ಹುಟ್ಟಿತು. ಮುಂದೆ ೩ ನೇ ದಶಕದಲ್ಲಿಯೂ ಇದೇ ಪಾರ್ಲಿಮೆಂಟರಿ ಮನೋವೃತ್ತಿಯು ನಮ್ಮಲ್ಲಿ ಸ್ಥಾಯಿಯಾಯಿತು. ಒಂದೆರಡು ಸಂದರ್ಭಗಳಲ್ಲಿ ಪ್ರಕಟವಾದ ಮನೋವೃತ್ತಿಯು ಮೂಲ ಲೋಕಮಾನ್ಯ ತಿಲಕರು ಮಂಡಾಲೆಯಿಂದ ಬಂದು "ಪುನಶ್ಚ ಹರಿಃ ಓಂ" ಎಂದು ರಾಷ್ಟ್ರೀಯ ರಾಜಕಾರಣದ ಸಂಕಲ್ಪದ ನೀರು ಬಿಟ್ಟಮೇಲೆ ಪ್ರತಿಪಾಲಿಸಿದ **ಪ್ರತಿಯೋಗಿ ಸಹಕಾರತತ್ವದಲ್ಲಿ ( ರಿಸ್ಪೊನ್ಸಿವ್ ಕೋಆಪರೇಶನ್)** ಇರುತ್ತದೆ. "ಇಝಂ" ಪ್ರತ್ಯಯವಿಲ್ಲದೆಯೂ ಒಂದು ತತ್ವವಾದವೆಂದೇ ಇದರವ್ಯತ್ಯಯವು, "ಶಠಂ ಪ್ರತಿ ಸತ್ಯಂ" ಅಂದರು ಗಾಂಧೀಜಿ. "ಶಠಂ ಪ್ರತಿ ಶಾಠ್ಯಂ'' ಅಂದರು ಈ ಲೋಕಮಾನ್ಯರು. "ಸರ್ವಧರ್ಮಾನ್ ಪರಿತ್ಯಜ್ಯ—'' ಇದು ಗಾಂಧೀಜಿಯು ಕಂಡ ಗೀತಾಬೋಧ ( "Vengence is Mine. I will repay"). ಆದರೆ ಲೋಕಮಾನ್ಯರು ತಿಳಿದ ಗೀತಾರಹಸ್ಯ " ಯೇ ಯಥಾ ಮಾಂ ಪ್ರಪದ್ಯಂತೇ ತಾನ್ ತಥೈವ ಭಜಾಮ್ಯಹಂ!" ಎಂಬ ವಾಕ್ಯದಲ್ಲಿ. ಇದು ಅವರ ರಾಜಕಾರಣದ ಸೂತ್ರ. ಸಿಕ್ಕಿದ್ದನ್ನು ಸ್ವೀಕರಿಸಿ ಮಿಕ್ಕದ್ದನ್ನು ಸೆಳೆದುಕೊಳ್ಳಲು ಹೋರಾಡುವದು. ಇದರಲ್ಲಿ ಸಹಕಾರವೂ ಇದೆ, ಪ್ರತೀಕಾರವೂ ಇದೆ. ಇದು **ಪ್ರತಿಯೋಗ** ಖರೆ ಪ್ರತೀಕಾರವಲ್ಲ. ನಮ್ಮ ಜೀವನವು ಕೇವಲ ಆ ಪ್ರತಿಭಟನೆ ಅಲ್ಲ. ಜೀವನದಲ್ಲಿ ಅಸಹಕಾರಕ್ಕಿಂತ ಸಹಕಾರದ ಸಂಧಾನದ ಸಂದರ್ಭಗಳೇ ಬಹುಲ, ಬಹುಮುಖ. ನಿಜವಾಗಿಯೂ ಆ ಪ್ರತಿಯೋಗೀ ಸಹಕಾರವಾದವೇ ಅಂತಾರಾಷ್ಟ್ರೀಯ ರಂಗದಲ್ಲಿ ಇಂದು ನಿರ್ಲಿಪ್ತ ತಾಟಸ್ಥ್ಯ ಸಹಜೀವನ ಇತ್ಯಾದಿ ರೂಪಗಳಲ್ಲಿ ಪರಿಷ್ಕೃತವಾಗಿ ಪ್ರಚಲಿತವಾಗಿದೆಯೆನ್ನಬಹುದು. ಈ ತತ್ವದಿಂದ ಇಂದು ವಿರೋಧಿ ಪಕ್ಷಗಳು ತಮ್ಮೊಳಗೇ ಮತ್ತು ಸರಕಾರದೊಂದಿಗೆ ಹೊಂದಾಣಿಕೆ ಮಾಡಿಕೊಂಡು ಒಟ್ಟು ದೇಶದ ಸರ್ವಾಂಗೀಣ ಅಭಿವೃದ್ಧಿಯ ಕಾರ್ಯವನ್ನು ಮುಂದುವರಿಸಬಹುದು.

ಇವೆಲ್ಲವುಗಳನ್ನೂ ಅಂಶತಃ ಅರಗಿಸಿಕೊಂಡು ತನ್ನ ಉನ್ನತ ಧ್ಯೇಯವಾದದ ಆವೇಶದಲ್ಲಿ ಉಜ್ವಲ ಪ್ರಜಾಪ್ರೇಮದ ಕಾವಿನಲ್ಲಿ ಕರಗಿಸಿಕೊಂಡು ಎರಕ ಹೊಯ್ದು ನೀಡಿದ್ದಾಗಿದೆ **ನೆಹರೂವಾದ.** ಇದೇನು? ನೆಹರೂವಾದವೆಂಬುದೂ ಒಂದು ಇದೆಯೆ? ಇದೀಗ ನೆಹರೂಜಿ ಕಣ್ಮರೆಯಾದಾಗ ಅವರ ವಿಚಾರ ವಿಧಾನಗಳಲ್ಲೆಲ್ಲ ಒಟ್ಟಾಗಿ ಅವರ ವ್ಯಕ್ತಿತ್ವದ ಬದಲು ಶ್ರೀಮದೂರ್ಜಿತ ವಿಭೂತಿಯನ್ನು ಒಂದು "ಇಝಂ" ಆಗಿ ಜನತೆಯು ಎದೆಯಲ್ಲಿ ರೂಪಗೊಳ್ಳಬೇಕು.

ಈ ನೆಹರೂವಾದವನ್ನೇ ನಾವು **ಪ್ರಜಾಸತ್ತಾತ್ಮಕ ಸಮಾಜವಾದ** (ಡೆಮಾಕ್ರಾಟಿಕ್ ಸೋಶಾಲಿಝಂ) ಎಂದು ಕರೆಯಬಹುದು. ಇದರ ಅರ್ಥವೆಂದರೆ ವರ್ಗಕಲಹವಿಲ್ಲದೆ ಸಮಾಜವಾದಿ ಕ್ರಾಂತಿಯನ್ನು ಜನತೆಯ ಸಹಕಾರದಿಂದ ಸರಕಾರದ ದಬ್ಬಾಳಿಕೆಯಿಲ್ಲದೆ ದೇಶದಲ್ಲಿ ಉಂಟುಮಾಡುವದು. ಆರಂಭದಲ್ಲಿ ಅಂದಿದ್ದೆ ನೆಹರೂರ ಮೇಲೆ ಬ್ರಿಟಿಶ್ ರಾಜಕೀಯ ತತ್ವಜ್ಞರ ಪ್ರಭಾವ ಆಳವಾಗಿತ್ತೆಂದು. ಅದು ಅರ್ಧ ಸತ್ಯ. ಲಿಬರಲ್ ಸಂಪ್ರದಾಯದಿಂದ ಪ್ರಜಾಪ್ರಭುತ್ವದ ಸಂಸದೀಯ ಗೌರವ, ವ್ಯಕ್ತಿವಿಕಾಸದ ಸ್ವಾತಂತ್ರ್ಯ ಪ್ರೇಮಗಳನ್ನು ಫೇಬಿಯನ್ ಗುಂಪಿನಿಂದ ಸಮಾಜವಾದವನ್ನು ಸ್ವೀಕರಿಸಿದ ನೆಹರೂರ ಪ್ರತಿಭೆಯು ಭಾರತದ ಪ್ರಾಚೀನ ಸಂಸ್ಕೃತಿಯಿಂದಲೂ ಸಂಸ್ಕಾರವನ್ನು ಪಡೆಯಿತು. ಆದರೆ ಅವರು ಪ್ರೇರಣೆ ಪಡೆದದ್ದು ಗೌತುಮ ಬುದ್ಧನಿಂದ, ಸಮ್ರಾಟ್ ಅಶೋಕನಿಂದ. ಅದು ಮಾನವತೆಯ ವಿಶಾಲ ಮನೋಭಾವದ ಪ್ರೇರಣೆ. ವರ್ಗಕಲಹವನ್ನು ತಪ್ಪಿಸಬೇಕೆಂಬ ಆಗ್ರಹವು ಗಾಂಧೀಜಿಯು ಕಲಿಸಿದ ಅಹಿಂಸಾ ಪಾಠದ ಫಲವು.

ಹಿಂದೆ ಹೇಳಿದಂತೆ ನಮ್ಮ ರಾಷ್ಟ್ರೀಯ ಆಂದೋಲನದಲ್ಲಿಯ ಇನ್ನೊಂದು ಶಕ್ತಿಯು ಪಾಶ್ಚಾತ್ಯ ಬಂಡವಾಳಗಾರಿಕೆ ಮತ್ತು ಉದ್ದಿಮೆಗಾರಿಕೆಯ ಮಾದರಿಯನ್ನು ಭಾರತದಲ್ಲಿ ಸ್ಥಾಪಿಸಬೇಕೆಂಬ ವೃತ್ತಿಯದು. ಗಾಂಧೀಜಿಯ ಸರ್ವೋದಯವಾದವು ಇಂಥ ಪ್ರಚಂಡ ಯಾಂತ್ರೀಕರಣ, ಔದ್ಯೋಗೀಕರಣ, ಬಂಡವಾಳದ ಕೇಂದ್ರೀಕರಣಗಳಿಗೆ ತೀವ್ರ ವಿರೋಧಿ. ಅದು ಪ್ರಚಾರಮಾಡಿದ ವಿಧಾಯಕ ಕಾರ್ಯಕ್ರಮದ ಗುರಿ. ಸ್ವಯಂಪೂರ್ಣ ಸ್ವಾವಲಂಬನದ ಹಳ್ಳಿಗಳು ಅವುಗಳ ಜೀವನ ಒಂದು ಬಗೆಯ ಪ್ರಾಥಮಿಕ ಅಥವಾ ಬುನಾದಿಯ ಸಾಮ್ಯವಾದದ್ದು.

ಆದರೆ ನೆಹರೂವಾದದಲ್ಲಿ ಈ ಪ್ರತಿಗಾಮೀ ವಿಚಾರವಿಲ್ಲದೆಯೂ ಗಾಂಧೀಜಿ ಪ್ರತಿಪಾದಿಸಿದ ವಿಕೇಂದ್ರೀಕರಣ, ಸಂಪತ್ತಿನ ಸಮವಿತರಣೆಗೆ ಅನುಕೂಲವಾಗುವಂತೆ ಸಹಕಾರಿ ಆಂದೋಲನದ ಪ್ರಸಾರ, ಅದರಿಂದ ಶೋಷಣೆಯ ನಿವಾರಣೆ ಸಾಮಾಜಿಕ ನ್ಯಾಯ ಮತ್ತು ಸಮೃದ್ಧಿಯೊಂದಿಗೆ ಸಮಾನತೆಯ ಸ್ಥಾಪನೆ ಇವುಗಳ ಲಕ್ಷ್ಯವೂ ಇದೆ.

ಸತ್ತೆಯ ವಿಕೇಂದ್ರೀಕರಣ, ಸಮಿಶ್ರ ಅರ್ಥವ್ಯವಸ್ಥೆ, ಪಂಚಾಯತ ರಾಜ್ಯ, ಹಿರಿಯ ಮೂಲ ಉದ್ದಿಮೆಗಳ ಸ್ಥಾಪನೆ, ದೊಡ್ಡ ಪ್ರಮಾಣದ ಔದ್ಯೋಗೀಕರಣದೊಂದಿಗೆ ಚಿಕ್ಕ ಉದ್ದಿಮೆ ಕೈಗಾರಿಕೆಗಳಿಗೆ ಯೋಗ್ಯ ಪ್ರೋತ್ಸಾಹ — ಇದೆಲ್ಲ ಇಂದು ನಾವು ನೆಹರೂವಾದವೆನ್ನಬಹುದಾದ ತತ್ವಪ್ರಣಾಲಿಯ ಕಾರ್ಯಕ್ರಮ. ಇದರ ಗುರಿ **ಸಮಾಜವಾದೀ ಸ್ವರೂಪದ ಸಮಾಜ ರಚನೆ.** ಈ ಪದಾವಲಿಯು ಮಹತ್ವದ್ದು. ನೆಹರೂಜೀ ಪ್ರತಿಪಾದಿಸಿದ್ದು ಸಮಾಜವಾದೀ ರಾಜ್ಯ(ಸೋಶಲಿಸ್ಟ್ ಸ್ಟೇಟ್)ಸತ್ತೆ ಅಲ್ಲ. ರಶಿಯಾ, ಚೀನಗಳಲ್ಲಿ ಒಂದು ಪಕ್ಷವು ಅಸತ್ಯದ ದೀಕ್ಷೆ ತೊಟ್ಟು ಸರಕಾರವನ್ನು ಆಕ್ರಮಿಸಿ ಸತ್ತೆಯ ಬಲದಿಂದ ಸಮಾಜವಾದೀ ಕ್ರಾಂತಿಯನ್ನು ಸ್ಥಾಪಿಸಿತು. (ಅದೂ ಇನ್ನೂ ಪೂರ್ತಿ ಆಗಿಲ್ಲ!) ಭಾರತದಲ್ಲಿ ಸಮಾಜ ರಚನೆಯನ್ನೆ ಸಮಾಜವಾದೀ ಸ್ವರೂಪದ್ದಾಗಿ ಮಾಡಿ ಆ ಮೂಲಕ ಕ್ರಮೇಣ ಪ್ರಜಾಪ್ರಭುತ್ವದ ತಂತ್ರದಿಂದ ಸರಕಾರವನ್ನೆ ಸಮಾಜವಾದಿಯಾಗಿ ಮಾರ್ಪಡಿಸುವದು ನೆಹರೂವಾದದ ಕಾರ್ಯತಂತ್ರ. ಇಲ್ಲಿ ಜನತೆಯ ಮನವೊಲಿಸುವದರಿಂದ ಈ ಕಾರ್ಯದ ಆರಂಭ. ಇದು ಜನ–ಸಮ್ಮತಿಯಿಂದ ಒದಗಿಬರುವ ಕ್ರಾಂತಿಯು.

ಕ್ರಾಂತಿಯ ಮೂಲದ, ಜನತಾ ಪಾತಳಿಯ ಸಾಧನವು ಸಮಾಜವಿಕಾಸದ ಮತ್ತು ರಾಷ್ಟ್ರೀಯ ವಿಸ್ತರಣೆಯ ಯೋಜನೆ. ಗ್ರಾಮಾಂತರದ ಪ್ರದೇಶದಲ್ಲಿಯ ಸ್ಥಾನಿಕ ಶಕ್ತಿ ಶ್ರಮ, ಸಾಮುಗ್ರಿ ಸಲಕರಣೆಗಳಿಂದ ಅಲ್ಲಲ್ಲಿಯ ಜನತೆಯ ಜೀವನದ ಬಹುಮುಖವಾದ ಬೇಡಿಕೆಗಳನ್ನು ಪೂರೈಸುವ ಅಭಿವೃದ್ಧಿ ಕಾರ್ಯವನ್ನು ಸಾಧಿಸುವದು. ಇಲ್ಲಿ ಸರಕಾರವು, ಮಾರ್ಗದರ್ಶಕವು. ಜನತೆಯೇ ಪ್ರಭುವು. ಇದರ ಯಶಸ್ಸಿಗೆ ಪ್ರಜೆಯ ಹೊಣೆ

ಯಾವದು ಪ್ರಭುವಿನ ಹೊಣೆ ಯಾವದು ಎಂಬುದರ ಇತ್ಯರ್ಥವಾಗಬೇಕು. ಹಳ್ಳಿಗಳ ಮಧ್ಯಯುಗೀನ ವಾತಾವರಣ ಪೂರ್ತಿ ಅಳಿಯಬೇಕು. ಆಧುನಿಕತೆಯು ಉದಯವಾಗಬೇಕು. ಸಾಮಾನ್ಯ ಮಾನವನು ಹಳೆಯ ಸೆಣ-ದುಡಿತದಿಂದ ಬಿಡುಗಡೆ ಆಗಬೇಕು. ವಿಜ್ಞಾನ ಮತ್ತು ತಂತ್ರವಿದ್ಯೆ ಹಳ್ಳಿಗರ ಹೊಲವನ್ನು, ಮನೆಯನ್ನು, ಮನಸ್ಸನ್ನು, ಕೇರಿಯನ್ನು ಹಸನಗೊಳಿಸಬೇಕು; ಹದಗೊಳಿಸಬೇಕು. ಅಲ್ಲಿಯ ವರ್ಗಭೇದ, ಬಣಗಾರಿಕೆ, ಜಾತಿವೈರ, ಬದುಕಿನ ಘೋರ ವೈಷಮ್ಯ ಕ್ರಮೇಣ (ಬಲಾತ್ಕಾರದಿಂದ ಅಲ್ಲ!) ಮಾಯವಾಗಿ ಇಡಿಯ ಹಳ್ಳಿಯ ಹಿತಾಸಕ್ತಿಯು ಒಂದಾಗಿ ಅದಕ್ಕೆ ಎಲ್ಲರೂ ಒಟ್ಟಾಗಿ ನಿಜವಾದ ಅರ್ಥದಲ್ಲಿ ಒಂದು ಸಮಾಜವು ರೂಪುಗೊಳ್ಳಬೇಕು.

ಇಂದು ನಮ್ಮಲ್ಲಿ ಪ್ರಜೆ ಇದೆ; ಜನತೆ ಇಲ್ಲ. ಜಾತಿ ಇದೆ; ಸಮಾಜವಿಲ್ಲ. ಸಮಾಜವೇ ಇಲ್ಲದಿದ್ದಲ್ಲಿ ಸಮಾಜವಾದವೆಲ್ಲಿಯದು ?

ನಮ್ಮ ರಾಷ್ಟ್ರೀಯ ಆಂದೋಲನದ ಮೂರನೆಯ ಶಕ್ತಿ ಕೂಲಿಕಾರ ಕೆಲಸಗಾರರ ಶಕ್ತಿ. ಕೇವಲ ಶಕ್ತಿಯಿಂದ ಕ್ರಾಂತಿಯನ್ನು ಉಂಟು ಮಾಡಿ, ಕೇವಲ ಶ್ರಮಜೀವಿಗಳ ಕತ್ತಿ-ಕುಡಗೋಲಿನ ರಾಜ್ಯ ಸ್ಥಾಪಿಸಬೇಕೆಂಬ ಕಾರ್ಮಿಕ ಸಂಘಟನೆಯ ಅಂಗವದು. ಇಂದಿನ ಕಮ್ಯುನಿಸ್ಟ ಪ್ರಭೃತಿ ತೀವ್ರ ಎಡಪಕ್ಷಗಳು ಪ್ರೇರಣೆಯಿಂದ ಬೆಳೆದುಬಂದವು.

ಇನ್ನು ಈ ಕಮ್ಯುನಿಝಂದಲ್ಲಿಯೂ ಇತ್ತೀಚೆಗೆ ಇಬ್ಬಣವಾಗಿದೆ. ಆ ಅಖಂಡ ಶಿಲೆಯು ಭಾರತದಲ್ಲಿಯೂ ಬಿರುಕುಬಿಟ್ಟಿದೆ. ಜಗತ್ತಿನ ಕೆಲಸಗಾರರೆಲ್ಲ ಒಂದು. ಕಾರ್ಮಿಕರಿಗೆ ರಾಷ್ಟ್ರವೆಂಬುದು ಇಲ್ಲ. ವರ್ಗಕಲಹವೇ ಜಗತ್ತಿನ ಇತಿಹಾಸವನ್ನು ರಚಿಸುತ್ತದೆ. ಜಗತ್ತಿನಲ್ಲಿ ಕೊನೆಗೂ ಎರಡೇ ವರ್ಗಗಳು—ಶೋಷಕರು ಮತ್ತು ಶೋಷಿತರು. ಆದ್ದರಿಂದ ವರ್ಗಕಲಹದ ಯುದ್ಧರಂಗವು ರಾಷ್ಟ್ರರಾಷ್ಟ್ರಗಳ ಗಡಿ ಗೆರೆಗಳನ್ನು ದಾಟಿ ಪ್ರಪಂಚದ ಉದ್ದಕ್ಕೂ ಚಾಚಿದೆ— ಎಂದೆಲ್ಲ ಘೋಷಿಸುತ್ತ ಬಂದ ಕಮ್ಯುನಿಝಂ ಪಕ್ಷಪಾತಿಗಳು ತಮ್ಮ ಪ್ರಾದೇಶಿಕ ರಾಷ್ಟ್ರೀಯ ಸಂಸ್ಕೃತಿಯ ಬಣ್ಣವನ್ನು ತಾಳಿ ವೈಶಿಷ್ಟ್ಯದೊಂದಿಗೆ ಪ್ರತ್ಯೇಕತೆಯನ್ನು ಪ್ರಕಟಿಸಹತ್ತಿದ್ದಾರೆ. ರಶಿಯಾ ಅಥವಾ ಚೀನವು ತನ್ನ ರಾಷ್ಟ್ರೀಯ ಹಾಗೂ ಪರಂಪರಾಗತ ಸಂಸ್ಕೃತಿಗೆ ಅವಿರೋಧವಾಗಿಯೇ ಕಮ್ಯುನಿಸ್ಟ ಸತ್ತೆಯನ್ನೂ ಸಮಾಜರಚನೆಯನ್ನೂ ಸ್ಥಾಪಿಸಿ ರೂಪಿಸಿ ಬಿಡಿಯಾಗಿಯೇ ನಿಂತದ್ದೂ ನಾವು ನೋಡುತ್ತೇವೆ. ಅಂದಾಗ ಭಾರತೀಯ ಸಂಸ್ಕೃತಿ ಪರಂಪರೆಯ ಉತ್ತಮ ಮತ್ತು ಉನ್ನತ ಮೌಲ್ಯಗಳನ್ನು ಅರಗಿಸಿಕೊಂಡು ನಮ್ಮ ಸಮಾಜವಾದವಾಗಲಿ ಕಮ್ಯುನಿಸ್ಟ ಪ್ರಣಾಲಿಯಾಗಲಿ ಏಕೆ ವಿಕಾಸಗೊಳ್ಳಬಾರದು ? ಈ ದೃಷ್ಟಿಯಿಂದ ಒಂದೊಮ್ಮೆ ಹಿಂದೂ ಕಮ್ಯುನಿಝಂ ಎಂಬ ಪದಪ್ರಯೋಗ ಆ ಪದದ ಬೆನ್ನಿಗೆ ಒಂದು ಅರ್ಥವನ್ನು ಪಡೆದು ಒಂದು ಪದಾರ್ಥವಾಗಿ ನಿಲ್ಲಬಾರದೇಕೆ ?

ನಿಜವಾಗಿಯೂ ನಾವು ಇಂದಿನ ಜಗತ್ತಿನಲ್ಲಿ ಕಮ್ಯುನಿಝಮ್ಮಿಗೂ ಆಚೆಗೆ ಹೋಗಬೇಕಾಗಿದೆ. ಯಾವದೇ ಸಿದ್ಧಾಂತವು ಶುಷ್ಕವಾಗಿರುತ್ತದೆ, ನರೆತು ಮುಗ್ಗುವಂತಿರುತ್ತದೆ. ಆದರೆ ಬಾಳಿನ ವೃಕ್ಷವು ಅಚ್ಚ ಹಚ್ಚಗಾಗಿ ನಿರಂತರವೂ ನಿಂತು ಅರಳುತ್ತದೆ. ಇದು ನನ್ನ ಮಾತಲ್ಲ, ಲೆನಿನ್‌ನದೇ ವಾಕ್ಯ. “Theory is green. But ever green is the tree of life!” ಗಾಂಧೀಜಿ ಏನು ಕಾರ್ಲ್ ಮಾರ್ಕ್ಸನೇನು? ಅವರ ಎಲ್ಲ ಸಿದ್ಧಾಂತ ಸಾಧನೆಗಳ ಸ್ಫೂರ್ತಿಯು ಮಾನವ್ಯದ ಉಪಾಸನೆಯಿರದ ಮಾನವತೆಯ ಜೋಪಾಸನೆಗಾಗಿ ಚಿಮ್ಮಿ ಚೆಲ್ಲುವದಿತ್ತು. ಮಾರ್ಕ್ಸ್ ಮೂಲತಃ ಮಾನವತಾವಾದಿಯು. ಮೂಲಗಾಮಿಯಾದ ಮಾನವತೆಯ ನವೀನೀಕರಣವು ಇಂದು ಸಿಗಬೇಕು.

ಇದುವೆ ಭಾರತದಲ್ಲಿಯೇ ಉದಿಸಿದ ನವಮಾನವತಾವಾದದ ಗುರಿ. ಇದರ ದ್ರಷ್ಟಾರ ದಿವಂಗತ ಮಾನವೇಂದ್ರನಾಥ ರಾಯರು. ಮೊದಲು ಆತಂಕವಾದೀ ರಾಷ್ಟ್ರೀಯ ಕ್ರಾಂತಿಕಾರಿಯಾಗಿ ಒಂದು ಕೈಯಲ್ಲಿ ಭಗವದ್ಗೀತೆ ಇನ್ನೊಂದು ಕೈಯಲ್ಲಿ ಬಾಂಬನ್ನು ಹಿಡಿದು ಹೊರಟ ಈ ಮಹಾಮೇಧಾವಿಯು ನಿರ್ವಾಸಿತನಾಗಿ ದೀರ್ಘಕಾಲ ಯುರೋಪ್ ಅಮೇರಿಕಾಗಳಲ್ಲಿ ಅಲೆದು ವಿಶಾಲ ರಾಜಕೀಯ ಅನುಭವವನ್ನು ಪಡೆದು ಮೆಕ್ಸಿಕೋದ ಕ್ರಾಂತಿಗೆ ಸೇವೆ ಸಲ್ಲಿಸಿ ಕಮ್ಯುನಿಸ್ಟ ತತ್ವದ ಉಪಾಸಕನಾಗಿ ರಶಿಯಾಕ್ಕೆ ಲೆನಿನ್‌ನಿಂದ ಆಮಂತ್ರಿಸಲ್ಪಟ್ಟು ಅಂತಾರಾಷ್ಟ್ರೀಯ ಕಮ್ಯುನಿಸ್ಟ ಸಂಸ್ಥೆಯ ಮೂಲ ಸದಸ್ಯರಲ್ಲಿ ಒಬ್ಬನಾದನು. ಸ್ಟಾಲಿನ್‌ನೊಂದಿಗೆ ಲೆನಿನ್‌ನ ಸಹಕಾರ್ಯಕರ್ತನಾದನು. ಎಳೆಯ ವಯಸ್ಸಿನಲ್ಲಿಯೇ ಸಾಮ್ರಾಜ್ಯಶಾಹಿಯ ಅನಿವಾರ್ಯ ಪರಿಣಾಮವಾದ ವಸಾಹತುವಿಮೋಚನೆ (ಡಿಕಾಲೋನಾಯಝೇಶನ್) ಸಿದ್ಧಾಂತವನ್ನು ಪ್ರತಿಪಾದಿಸಿ ತಾನು ಕಂಡ ಸತ್ಯಕ್ಕಾಗಿ ರಶಿಯಾ ಬಿಟ್ಟು ಭಾರತದ ರಾಷ್ಟ್ರೀಯ ಬಿಡುಗಡೆಯ ಕಾರ್ಯದ ಕರೆಗೆ ಧಾವಿಸಿ ಬಂದನು. ಭಾರತೀಯ ಕಮ್ಯುನಿಸ್ಟ ಪಕ್ಷದ ಆದ್ಯಸ್ಥಾಪಕರಲ್ಲಿ ಒಬ್ಬನಾದ ಎಂ. ಎನ್. ರಾಯ ಮುಂದೆ ದೀರ್ಘ ಕಾರಾವಾಸದಿಂದ ಹೊರಗೊಂದು ಕಾಂಗ್ರೆಸಿನ ಸಾರ್ವಭೌಮ ಜನಪ್ರಿಯತೆಯನ್ನು ಗುರುತಿಸಿ ಅದನ್ನೇ ಸೇರಿ ಮೂಲಗಾಮಿಯಾದ ಪರಿವರ್ತನವನ್ನು ಮಾಡಿ ನಿಜವಾದ ಸಮಾಜವಾದೀ ಕ್ರಾಂತಿಗೆ ಕಾಂಗ್ರೆಸನ್ನು ಹರಿತವಾದ ಶಸ್ತ್ರವನ್ನಾಗಿ ಮಾರ್ಪಡಿಸಲು ಹೆಣಗಿ ಹತಾಶನಾಗಿ ಹೊರ ಬಿದ್ದನು.

ಈ ಆತ್ಮಶೋಧನೆಯಲ್ಲಿ ರಾಯಿಝಂ ಹೊಸ ರೂಪತಾಳಿತು. ಕೇವಲ ಕಮ್ಯುನಿಝಂದ ಒಂದು ವಾಮಪಂಥವಾಗಿ ಉಳಿಯದೆ ನವಮಾನವತಾವಾದದ ಸ್ವರೂಪದಲ್ಲಿ ಅದು ವಿಶ್ವಕ್ಕೆ ಹೊಸ ಸಂದೇಶವನ್ನು ಸಾರಿತು. ಈ ಸಂದೇಶದ ಸಾರತತ್ವವೇ ಪಕ್ಷರಹಿತವಾದ ಪ್ರಜಾಪ್ರಭುತ್ವವಿರಬೇಕು. ಇತಿಹಾಸ ಕ್ರಮದಲ್ಲಿ ಪ್ರಜಾಪ್ರಭುತ್ವಕ್ಕೂ ಪಕ್ಷೀಯ ರಾಜಕಾರಣಕ್ಕೂ ಕಾರ್ಯ-ಕಾರಣ ಸಂಬಂಧವೇನೂ ಇಲ್ಲ. ಅದೊಂದು ಆಗಂತುಕ ಸಂಬಂಧ, ಸಮುದಾಯವಾಗಿ ಮುಂದರಿದು ಬಂದದ್ದು. ಜನತೆಯ ಸರಕಾರ ಜನತೆಯಿಂದಲೇ ಹೊರತು ಜನತೆಯ ಪರವಾಗಿ ರೂಪಗೊಳ್ಳಬಾರದು. ಈ ಪ್ರಾತಿನಿಧ್ಯವು ಕೇವಲ ಔಪಚಾರಿಕವಾಗಿ ಚುನಾವಣೆಗೊಮ್ಮೆ ಈ ಒತ್ತಾಯದಿಂದ ಕೈಯೆತ್ತಿ ಜನತೆ ಜಡಬಧಿರವಾಗಿ ೫–೬ ವರ್ಷ ಬಿದ್ದುಳಿಯುತ್ತದೆ. ಪ್ರಜೆ ಮತ್ತು ಅದರ ಪ್ರಭುತ್ವ ಇವುಗಳ ನಡುವೆ ಪ್ರತಿಷ್ಠಿತ ಸ್ವಾರ್ಥದ ರಾಜಕೀಯ ಪಕ್ಷವು ಅಡ್ಡ ನಿಲ್ಲುತ್ತದೆ.

ಈ ಪಕ್ಷಗಳ ನಕ್ರವ್ಯೂಹದಿಂದ ಜನತಾ ಗಜೇಂದ್ರನ ಬಿಡುಗಡೆಯಾಗಬೇಕು. ಮಾನವ್ಯಕ್ಕೆ ಅಗ್ರಪಟ್ಟವಿರಬೇಕು. ಜನತೆ ಅಂದರೆ ಬರೇ ಕಾರ್ಮಿಕರಲ್ಲ, ಬರೇ ಬಂಡುವಾಳಗಾರರೂ ಅಲ್ಲ. ಹಳ್ಳಿಹಳ್ಳಿಗೂ ಪ್ರಜಾತಂತ್ರ ಒಂದು ಸಜೀವ ಸತ್ಯವಾಗಿ ಸರ್ವರ ಪ್ರಾಮಾಣಿಕ ಪ್ರಾತಿನಿಧ್ಯದ ಸಂಸ್ಥೆಯಾಗಬೇಕು. ಇವುಗಳ ಪ್ರತಿನಿಧಿಗಳು ತಾಲೂಕಿನ, ಜಿಲ್ಲೆಯ, ರಾಜ್ಯದ ಮತ್ತು ಕೇಂದ್ರದ ಶಾಸನದ ಹಂತಗಳನ್ನು ಕಟ್ಟಬೇಕು. ಹೀಗೆ ಅಪಕ್ಷೀಯ ಪ್ರಾತಿನಿಧ್ಯವು ಮೂಲದ ನೇರವಾದ ಪ್ರಜಾಸಂಸ್ಥೆಗಳೊಳಗಿಂದ ಎದ್ದು ಪಿರಾಮಿಡ್ಡಿನಂತೆ ಎದ್ದು ನಿಲ್ಲಬೇಕು. ಎಲ್ಲ ಮೌಲ್ಯಗಳ ಅಳತೆಗೋಲು ಅನುಗೋಲು ಮಾನವನು. ನೀತಿ, ಕಲೆ, ಧರ್ಮ, ಸತ್ತೆ, ಸಂಪತ್ತು, ಸಂಸ್ಕೃತಿ ಇವೆಲ್ಲವು ಮಾನವತೆಯ ಪರಿಪಾಕಗಳೆಂಬುದನ್ನು ಎಂದಿಗೂ ಮರೆಯಬಾರದು. ಪೂರ್ಣ ಸಹಕಾರ, ಎಲ್ಲ ಬಗೆಯ

ಸರ್ವಾಧಿಕಾರದ ಅಂತ, ವಿಚಾರವಾದದ ಅನುಸರಣೆ, ಜನಜಂಗುಳಿಯನ್ನು ಮಾನವ ವ್ಯಕ್ತಿಗಳಾಗಿ ವಿಕಾಸಗೊಳಿಸುವ ವ್ಯವಸ್ಥೆ. ಇದಕ್ಕಾಗಿ ಪಕ್ಷಗಳಿಲ್ಲದ ದಕ್ಷ ಆಡಳಿತ— ಇವು ನವಮಾನವತಾವಾದದ ಮುಖ್ಯ ಲಕ್ಷಣಗಳು.

ಇದುವರೆಗೆ ಚರ್ಚಿಸಿದ "ಇಝಂ"ಗಳ ಸಾರಸರ್ವಸ್ವವೆಲ್ಲ, ಶಾಶ್ವತ ಮೌಲ್ಯಗಳೆಲ್ಲ ಈ ಮಾನವತಾವಾದ (ಹ್ಯೂಮನಿಝಂ)ದಲ್ಲಿ ಅಡಕವಾಗಿವೆ. ಈ ಆಧುನಿಕ ರಾಜಕೀಯ ಪ್ರವಾದಿಯ ಅನೇಕ ಭವಿಷ್ಯ ಕಥನಗಳು ಸತ್ಯವಾಗಿ ಕಂಡುಬಂದಿವೆ. ಅವರ ಮೂಲಗಾಮಿಯಾದ ಈ ನವಮಾನವತಾವಾದದ ಅನೇಕ ಅಂಶಗಳನ್ನು (ಅವತರಣ ಚಿನ್ಹಗಳಿಲ್ಲದೆ!) ಜವಾಹರಲಾಲರೂ ಜಯಪ್ರಕಾಶ ನಾರಾಯಣ ಪ್ರಭೃತಿಗಳೂ ಇತ್ತೀಚೆಗೆ ತಮ್ಮ ವಿಚಾರಸರಣಿಯಲ್ಲಿ ಪವಣಿಸಿದ್ದೂ ಕಂಡುಬಂದಿದೆ.

ಪಶ್ಚಾಸುರನ ವಿರಾಧಬಾಹುಗಳ ಗಾಢಾಲಿಂಗನದಿಂದ ಮಾನವ್ಯವನ್ನು ಉಳಿಸುವದು ಅವಶ್ಯವಾದರೆ ಅದಕ್ಕೆ ನಾಳೆ ಅಲ್ಲ ನಾಡಿದ್ದು ನವಮಾನವತಾವಾದವೇ ಒಂದು ತಾರಕತಂತ್ರ. ಆರ್ಥಿಕ ಮಾನವನು ಯಂತ್ರವನ್ನು ಸೃಷ್ಟಿಸಿ ಅದಕ್ಕೆ ತಾನೇ ಗುಲಾಮನಾದನು. ಸಾಮಾಜಿಕ ಮಾನವನು ಪಕ್ಷವನ್ನು ಸೃಜಿಸಿ ಅದಕ್ಕೆ ತಾನೇ ತೊತ್ತಾದನು, ತುತ್ತಾದನು. ಗನಿಯೇನು ಗುಡಿಯೇನು, ಮಠವೇನು ಮಾರ್ಕೇಟು ಏನು—ತಾನು ಮಾಡಿದ ಮೂರ್ತಿಯ ಮುಂದೆ ತನ್ನನ್ನೆ ಮುಡಿಪಾಗಿ ಇಡುವ ತನ್ನನ್ನೆ ಮಾರಿಕೊಳ್ಳುವ ದೈವವಾದವೂ ಕರ್ಮವಾದವೂ ವಿಕ್ರಯ ವೃತ್ತಿಯ ವಣಿಕ್‌ವಾದವೂ ಇಂದು ಭಾರತದಲ್ಲಿಯೂ ಹೊರಗಿನ ಪ್ರಪಂಚದಲ್ಲಿಯೂ ಮಾನವನನ್ನು—ಅಸಹಾಯ ಅಸಮರ್ಥ ಮಾನವನನ್ನು—ಬೇಟೆಯಾಡುತ್ತಿವೆ. ಹಿಂದೆ ಸತ್ಯಕ್ಕಾಗಿ ಹರಿಶ್ಚಂದ್ರ ಮಡದಿ ಮಕ್ಕಳನ್ನು ತನ್ನನ್ನು ಮಾರಿಕೊಂಡಿದ್ದನಂತೆ. ಇಂದು ಅಸತ್ಯಕ್ಕಾಗಿ ಈತ ಪೇಟೆಯಲ್ಲಿ, ಪಕ್ಷದ ಕಚೇರಿಯಲ್ಲಿ, ಸರಕಾರೀ ಸಚಿವಾಲಯದಲ್ಲಿ, ಚುನಾವಣೆಯ ಕಟ್ಟೆಯಲ್ಲಿ, ಕಾರಖಾನೆಯಲ್ಲಿ, ಶಾಲೆಯಲ್ಲಿ, ಸಭೆಯಲ್ಲಿ, ಗಲಭೆಯಲ್ಲಿ, ಏಕಾಂತದಲ್ಲಿ ಮಾರಿಕೊಳ್ಳುತ್ತಿದ್ದಾನೆ.

ಈ ಪ್ರಯೋಜನ ದೃಷ್ಟಿಯ ವಿಕ್ರಯ ವೃತ್ತಿಯ ಜಡವಾದದಿಂದ ಮಾನವನ ಬಿಡುಗಡೆ ಆಗುವದೆಂತು? ಇದು ಕಾಲಯಕ್ಷನ ಕೂಟಪ್ರಶ್ನೆ. ಈ ಪ್ರಶ್ನೆಯನ್ನು ಲೆಕ್ಕಿಸದೆ ನೀರಿಗೆ ನುಗ್ಗಿದವರು ಸತ್ತಂತೆಯೇ. ವಿಜ್ಞಾನ, ಅಧ್ಯಾತ್ಮ, ತಂತ್ರವಿದ್ಯೆ, ಸಮಾನತೆ ಮತ್ತು ಶಾಂತಿ ವಿವೇಕಗಳ ಮೇಲೆ ನಿಂತ ಸಹಕಾರ ಈ ಷಡ್ಗುಣೈಶ್ವರ್ಯದಿಂದ ಸಂಪನ್ನವಾದ ಮಾನವತಾವಾದವೊಂದೇ ಈ ಯಕ್ಷಪ್ರಶ್ನೆಗೆ ಉತ್ತರವನ್ನು ಕೊಡಬಹುದು ಮತ್ತು ಮನುಕುಲವನ್ನು ಉದ್ಧರಿಸಬಹುದು. ಭಾರತದಲ್ಲಿಯ ಎಲ್ಲ "ವಾದ"ಗಳೊಳಗಿಂದ ಹುಟ್ಟುವ "ತತ್ವಬೋಧ" ಇದು.



# ಮುಖವಾಡ

ಶ್ರೀ. ವ್ಯಾಸರಾಯ ಬಲ್ಲಾಳ

ಮುಂಬಯಿ

“ಇದು ಮುಖವಾಡದ ಜಗತ್ತು ಸುನಂದಾ... ಅಂತರಂಗಕ್ಕೂ ಬಾಹ್ಯ ಪರಿಸರಕ್ಕೂ ಯಾವರೀತಿಯ ಸಂಬಂಧವನ್ನೂ ಕಲ್ಪಿಸದೇನೇ ಬದುಕಲು ಕಲಿತರೆ ಅದು ಜಾಣತನದ ಲಕ್ಷಣ” ಎಂದು ಹೇಳಿದ ಹರ್ಷದ್‌ನಲ್ಲೇ ಇದನ್ನು ಸುನಂದೆ ಗುರುತಿಸಬೇಕಾಗಿ ಬಂತು. ಅದು ಅವಳ ಜೀವನವನ್ನು ಪರಿವರ್ತಿಸಿದ ರೀತಿಯನ್ನು ಲೇಖಕರು ಈ ಕಥೆಯಲ್ಲಿ ಸೊಗಸಾಗಿ ಮಾರ್ಮಿಕವಾಗಿ ಚಿತ್ರಿಸಿದ್ದಾರೆ.

ಸೂರ್ಯಪ್ರಕಾಶದ ಸಂಪರ್ಕವೇ ಇರದಂತಿದ್ದ ಆ ಕೋಣೆಯ ತುಂಬ ಹರಡಿದ್ದುದು ಮಂದವಾದ, ಹಿತವಾದ, ಕೃತ್ರಿಮ ಬೆಳಕು. ಕೋಣೆಯ ಗೋಡೆಗಳಿಗೆ ಹೊಂದಿಸಿದ್ದ 'ಲಿನೀರ್' ಹಲಗೆಗಳಿಂದಾಗಿ, ಆ ಕೃತ್ರಿಮ ಆವರಣಕ್ಕೂ ಶೋಭೆ ಬಂದಂತಿತ್ತು. ಒಂದು ಗೋಡೆಯ ಮೇಲೆ, ತೂಗುದೀಪದ ಕೆಳಗೇ, ಸಂಸ್ಥೆಯ ಕೆಲಸಗಾರ ಕಲಾವಿದನೇ ಚಿತ್ರಿಸಿದ್ದ 'ದಾರ್ಜಿಲಿಂಗ್'ನ ಒಂದು ನಿಸರ್ಗ ಚಿತ್ರ, ಇನ್ನೊಂದು ಗೋಡೆಯ ಮೇಲೆ ಸಂಸ್ಥೆಯ ಆಶ್ರಯದಾತ ಗಿರಾಕಿಗಳ ಬೇಡಿಕೆಗಳ ಏರಿಳಿತಗಳನ್ನು ಸೂಚಿಸುವ 'ಗ್ರಾಫ್'.

ಕೋಣೆಯ ಮೂಲೆಯಲ್ಲಿ ಕೆಲಸಕ್ಕೆ ಸಂಬಂಧಿಸಿದ ಪುಸ್ತಕಗಳ ಕಪಾಟು. ಅದರ ಮೇಲೆ ಹಿತ್ತಾಳೆಯ ಬುದ್ಧನ ಪ್ರತಿಮೆ.

ಎರಡು ಕ್ಷಣ ಸುನಂದೆ ಆ ಬುದ್ಧನ ಪ್ರತಿಮೆಯನ್ನೆ ದಿಟ್ಟಿಸಿ ನೋಡಿದಳು. ಮನಸ್ಸಿಗೆ ಏಕಾಗ್ರತೆ ಬೇಕಾದಾಗ ವಿಚಾರ ತುಂಬ ಕಳವಳವಾದಾಗ, ಕೆಲವೊಮ್ಮೆ ಸಿಟ್ಟು ವಿಪರೀತವಾದಾಗ, ಆ ಮೂರ್ತಿಯನ್ನೇ ದಿಟ್ಟಿಸಿ ನೋಡುವುದು ಆಕೆಗೆ ರೂಢಿ.

ಟ್ರೇ ತುಂಬ ಕಾಗದಗಳು ಬಿದ್ದಿದ್ದವು. ಒಂದು ಘಂಟೆ ಕಾಲ ಮಾತನಾಡಿ ದಣಿದಿದ್ದ ಆಕಗೆ ಈಗ ಕೆಲಸ ಮಾಡುವದೇ ಬೇಕಿರಲಿಲ್ಲ. ಅಭ್ಯಾಸ ಬಲ_ ಕೆಲಸ ಮಾಡುದಿರುವಂತೆಯೂ ಇರಲಿಲ್ಲ. ಚಹದ 'ಟ್ರೇ' ತರಿಸಲು ಕರೆಗುಂಡಿಯೊತ್ತುತ್ತಿದ್ದಂತೆಯೇ 'ಫೆರೆಸ್ಯಾಟ್ಸ್' ಎಂದಳು ಸುಂನದೆ—ತನ್ನ ಮನಸ್ಸಿನ ತೀವ್ರ ಭಾವನೆಗಳೆಲ್ಲವುಗಳ ಉಚ್ಚಾಟನೆಗೆಂಬಂತೆ– ಆಕೆಯ ಪ್ರೀತಿಯ ಶಬ್ದ.

"ಓ! ಡಿಯರ್... ಹೆಂಗಸರ ಬಾಯಿಂದ ಇಂಥ ಶಬ್ದಗಳು ಹೊರಡಲೇಬಾರದು.. ಅದೂ ನನ್ನಿಂದ" ಎನ್ನುತ್ತಲೇ ಬಾಗಿಲು ದೂಡಿಕೊಂಡು ಒಳಗೆ ಬಂದ ಹರ್ಷದ್ ಶಹಾ ನಗುತ್ತಲೇ ಹೇಳಿದ.

"ನೀನು ಅಂಥದೇ ಇನ್ನೊಂದು 'ಪೆರೆಸ್ಯಾಟ್'" ಎಂದಳು ಸುನಂದೆ ನಗುತ್ತಲೇ.. ತನ್ನ ಮೇಲಧಿಕಾರಿಯೊಂದಿಗೆ ಇಷ್ಟು ಸಲಿಗೆ ಕ್ಷಮ್ಯ ಎಂದು ಆಕೆ ತಿಳಿದಿದ್ದುದರಿಂದಲೇ ಆ ರೀತಿ ಮಾತು ಹೊರಟಿತ್ತು

"ನಿನ್ನಿಂದ ಆ ಮಾತು ಕೇಳಲೂ ಯೋಗ್ಯತೆ ಬೇಕು ನೋಡು" ಎಂದ ಹರ್ಷದ್. ಆಕೆಯ ಇದಿರಿಗೇ ಒಂದು ಕುರ್ಚಿಯೆಳೆದು ಕುಳಿತುಕೊಂಡ. "ಏನಾಯಿತು ಹೇಳಲ್ಲ! ಕೆಲಸ ವಿಪರೀತವಾಯಿತೆ, ಅಥವಾ ಇವೊತ್ತು ಮನೆಯಲ್ಲಿ ಗಂಡನೊಡನೆ ಜಗಳವಾಡಿ ಮನೆ ಬಿಟ್ಟಿದ್ದೀಯೇನು ?"

ನಗುತ್ತಿದ್ದ ಸುನಂದೆಯ ಮುಖದಲ್ಲಿ ಒಂದು ಕ್ಷಣ ಮಾತ್ರ ವಿಷಾದದ ಛಾಯೆ.. ಛಾಯೆಯಷ್ಟೆ ..ನಗುವಿನ ಮುಖವಾಡ ಅದಕ್ಕೆ ತೆರೆಯೆಳೆದಿತ್ತು.

"ಅಲ್ಲ ಹರ್ಷದ್..ನಮ್ಮ ಎಲ್ಲ ಮಾರವಾಡಿ ಗಿರಾಕಿಗಳೂ ಇದೇ ರೀತಿಯಾದರೆ, ನಾನಿನ್ನು ಆರು ತಿಂಗಳಲ್ಲೇ ರಾಜೀನಾಮೆ ಕೊಡಬೇಕಾದೀತು ..'ಫೆರೆಸ್ಯಾಟ್ಸ್'"

ಇದೂ ಸಲಿಗೆಯ ಮಾತೆಂದು ಸುನಂದೆಗೂ ತಿಳಿದಿತ್ತು; ಹರ್ಷದ್ ಶಹಾನಿಗೂ ತಿಳಿದಿತ್ತು. ಆತ ನಗುತ್ತಲೇ ಕುಳಿತಿದ್ದ. ಆ ಶಬ್ದ ಆಕೆಗೆ ಪ್ರಿಯವಾದುದೆಂದು ಆತನಿಗೆ ಗೊತ್ತು. ತಾನು ಮೇಲಧಿಕಾರಿಯಾದರೂ ಸುನಂದೆ ಮಾತಿನಲ್ಲಿ ತೋರಿದ್ದ ಸ್ವಾತಂತ್ರ್ಯ ಸಲಿಗೆಯಿಂದಷ್ಟೆ; ಅದಕ್ಕೂ ಆಕೆಯ ಕೆಲಸದ ಯೋಗ್ಯತೆಗೂ ಸಂಬಂಧವೇ ಇಲ್ಲವೆಂದು ಆತನಿಗೆ ತಿಳಿದಿತ್ತು. ಎಂತಲೇ ಹರ್ಷದ್ ಕೇಳಿದ.

"ಏನಾಯಿತು ಸುನಂದಾ? ಯಾರು ಬಂದಿದ್ದರು? ನೂತನ್ ಸಿಲ್ಕ್ಸ್ ಎಂಡ್ ಟೆಕ್ಸ್‌ಟೈಲ್ಸ್!"

"ಅವನೇ ಪ್ರವೀಣ್ ಪೊರಾ....ಈ ನಾಲ್ಕು 'ಮಾಡೆಲ್'ಗಳನ್ನೂ ತೋರಿಸಿದೆ, ಈ ಚಿತ್ರಗಳು ಎಷ್ಟು ಸಮರ್ಪಕವಾಗಿವೆಯೆಂದು ಒಂದು ಘಂಟೆ ಉಪದೇಶ ಕೊಟ್ಟ. ಆತ ಹೇಳಿದ್ದೇನು ಗೊತ್ತೇ? "ಚಿತ್ರಗಳೇನೋ ಚೆನ್ನಾಗಿವೆ. ಆದರೆ ಸೆರಗು ತೋಳಿನ ಮೇಲೆ ಇನ್ನಷ್ಟು ಜಾರಿರಬೇಕು; ಎದೆ ಕಾಣುವಂತಿರಬೇಕು;"

ಹರ್ಷದ್ ಗಹಗಹಿಸಿ ನಗತೊಡಗಿದ.

"ಅಷ್ಟೆಯೇ ಹರ್ಷದ್! ಆತ ಮತ್ತೇನು ಹೇಳಿದ ಗೊತ್ತೇ ? ಈ ಮಾಡೆಲ್‌ಗಳಿಗಿಂತಲೂ ನಿಮ್ಮ ಫೋಟೋವೇ ನಮ್ಮ ಸಿಲ್ಕ್‌ನಲ್ಲಿ ಇನ್ನಷ್ಟು ಸುಂದರವಾಗಿ ಕಾಣಬಹುದಿತ್ತೇನೋ" ಎಂದ...ನನಗೆ.. ಛೀಕ್ಸ್ ! ನಮ್ಮ ಅನುಭವವೆಲ್ಲ ವ್ಯರ್ಥ !"

ಮಾತನಾಡುತ್ತಿದ್ದ ಸುನಂದೆಯ ಮುಖ ಕೆಂಪೇರಿತ್ತು. ಹರ್ಷದ್ ತಡೆಯಲು ಸಾಧ್ಯವಾಗದಂತೆ ನಗುತ್ತಿದ್ದ. ನಗುತ್ತ ಸುನಂದೆಯನ್ನೆ ನೋಡುತ್ತಿದ್ದ. ತುಂಬು ತಾರುಣ್ಯದ ಮಾಟವಾದ ದೇಹ..ತುಸುವೆ ಸ್ಥೂಲವಾಯಿತೇನೋ ಎಂಬ ಸಂದೇಹ ಚಿಗುರಬಹುದಿತ್ತು. ಅಷ್ಟೆ..ದುಂಡಾದ ಮುಖ. ಹೊಳೆಯುವ ಕಣ್ಣುಗಳು. 'ಬಾಬ್' ಮಾಡಿದ ಕೂದಲು, ರೂಜ್, ಲಿಪ್‌ಸ್ಟಿಕ್‌ಗಳ ಒಪ್ಪ, ಹಿತವರಿತು ಎಂಬಂತೆ.

ಪೇದೆ ಚಹ ತಂದಿರಿಸಿದ್ದ........ಹರ್ಷದ್ 'ಇನ್ನೊಂದು' ಎಂದು ಸಂಜ್ಞೆ ಮಾಡಿದ ಮೇಲೆ, ಮತ್ತೊಂದು ಟ್ರೇ ತಂದಿರಿಸಿದ..ಇಬ್ಬರೂ ಚಹ ಕುಡಿಯುತ್ತಿದ್ದಂತೆಯೇ ಹರ್ಷದ್ ಹೇಳಿದ:

"ನೋಡು, ಸುನಂದಾ..ನಮ್ಮ ವ್ಯವಹಾರದ ಮಾರುಕಟ್ಟೆಯಲ್ಲಿ ಇಂಥ ಅಸಾಮಿಗಳ ಉಪಟಳ ಇದ್ದದ್ದೆ....ಮುಖ್ಯ. ಇವರ ಸರಕುಗಳಿಗೂ ಕೊಳ್ಳುವ ಗಿರಾಕಿಗಳ ಅಭಿರುಚಿಗೂ ಸಂಬಂಧವನ್ನು ಕಲ್ಪಿಸಿಕೊಡಲು ನಾವೊಂದು ಸಾಧನ, ಅಷ್ಟೆ..ಕೃತ್ರಿಮ ಸಾಧನವೆಂದೇ ಹೇಳು, ಬೇಕಾದರೆ..ಇಂದಿನ ಜಗತ್ತಿನ ರೀತಿಯೇ ಹಾಗೆ..ಮಾರುವವರಿಗೆ ತಮ್ಮ ಸರಕಿನ ಯೋಗ್ಯತೆ ಮುಖ್ಯವಲ್ಲ, ಅದರ ಮಾರಾಟ ಮುಖ್ಯ..ಕೊಳ್ಳುವವರಿಗೆ ಅದರ ಬಣ್ಣವೆ ಮುಖ್ಯ..ನಿನಗೆ ನಾನು ಈ ವಿಚಾರ ಉಪದೇಶ ಕೊಡುವ ಅಗತ್ಯವೇ ಇಲ್ಲ. ಐದು ವರ್ಷಗಳ ಅನುಭವ ಅಷ್ಟನ್ನು ಏಕೆ ಅದಕ್ಕಿಂತ ಹೆಚ್ಚಿಗೆಯೇ ನಿನಗೆ ಕಲಿಸಿದೆಯೆಂದು ನನಗೆತಿಳಿದಿದೆ..ಪ್ರವೀಣ್ ಆ ರೀತಿ ಮಾತನಾಡಬಾರದಿತ್ತು. ಅದರೆ ಅಷ್ಟಕ್ಕೆಯೇ-ನೀನು ನೊಂದುಕೊಳ್ಳುವ ಅಗತ್ಯವಿಲ್ಲ.

ಸುನಂದೆ ಮಾತನಾಡುತ್ತಿದ್ದ ಹರ್ಷದ್‌ನನ್ನೇ ನೋಡುತ್ತಿದ್ದಳು.. ತನ್ನದೇ ವಯಸ್ಸು ಅಥವಾ ಒಂದೆರಡು ವರ್ಷ ಹೆಚ್ಚಿರಬಹುದು. ಜಾಹೀರಾತಿನ ಸಂಸ್ಥೆಗೇ ಹೇಳಿ ರೂಪಿಸಿದಂಥ ನಗುಮುಖ..ಆ ನಗುವಿನಲ್ಲಿ ಪ್ರಕಟವಾಗುತ್ತಿದ್ದ ಅಪರಿಮಿತ ಆತ್ಮವಿಶ್ವಾಸ..

'ಅಥವಾ ಇವೊತ್ತು ಗಂಡನೊಡನೆ ಜಗಳವಾಡಿ ಮನೆ ಬಿಟ್ಟಿದ್ದಿಯೇನು !'

ಗೋಡೆಯ ಮೇಲಿದ್ದ ಗ್ರಾಫ್‌ನಲ್ಲಿ ಆ ಮಾತು ಬರೆದಿದ್ದಂತೆ ಸುನಂದೆಗೆ ಭಾಸವಾಯಿತು, ಒಂದು ಕ್ಷಣ.

ಹರ್ಷದ್ ಮಾತನಾಡುತ್ತಿದ್ದ ;

"ಇದು ಮುಖವಾಡದ ಜಗತ್ತು ಸುನಂದಾ.. ಎಲ್ಲ ಒಂದಿಲ್ಲ ಒಂದು ರೀತಿಯ ಮುಖವಾಡ ಧರಿಸಿ ತಿರುಗಲೇಬೇಕು.. ನಿನ್ನ ಅಂತರಂಗಕ್ಕೂ ಬಾಹ್ಯ ಪರಿಸರಕ್ಕೂ ಯಾವ ರೀತಿಯ ಸಂಬಂಧವನ್ನೂ ಕಲ್ಪಿಸದೆನೇ ಬದುಕಲು ಕಲಿತರೆ, ಅದು ಜಾಣತನದ ಲಕ್ಷಣ."

"ನಿನ್ನ ವೇದಾಂತ ಮುಗಿಸು ಹರ್ಷದ್..ನನ್ನ ಬಿ. ಎ. ಗೆ ಫಿಲಾಸಫಿ ತೆಗೆದುಕೊಂಡೇ ಸಾಕಷ್ಟು ತಲೆಬಿಸಿ ತಂದುಕೊಂಡಿದ್ದೆ....ಈಗ ಸ್ವಲ್ಪ

ಕೆಲಸ ಮಾಡುತ್ತೇನೆ" ಎಂದಳು ಸುನಂದೆ, ಪೇದೆ ಟೀ-ಟ್ರೇಗಳನ್ನೆತ್ತಿಕೊಂಡು ಹೋದಾಗ..

"ಇದು ವೇದಾಂತವಲ್ಲ ಸುನಂದಾ.. ಇನ್ನಾರು ತಿಂಗಳೊಳಗೆ 'ಜುನಿಯರ್ ಎಕ್ಸಿಕ್ಯುಟಿವ್' ಆಗಲಿರುವವಳಿಗೆ ತುಸುವೆ ವ್ಯವಹಾರಜ್ಞಾನ....." ಎನ್ನುತ್ತಲೇ ಹರ್ಷದ್ ಅಲ್ಲಿಂದೆದ್ದ.

ಸುನಂದೆಯ ಮುಖದಲ್ಲಿ ನಗುವರಳಿತ್ತು "ಥ್ಯಾಂಕ್ಸ್" ಎಂದಳು ನಗುತ್ತಲೇ...

ಎರಡು ವರ್ಷಕಾಲ 'ಮಾರ್ಕೆಟ್ ರಿಸರ್ಚ್' ವಿಭಾಗದಲ್ಲಿ ಸಾಮಾನ್ಯ ಕಾರಕೂನಳಾಗಿ ದುಡಿದು ಎರಡು ವರ್ಷಕಾಲ 'ಕಾಪಿ ರೈಯಟರ್' ಎಂದು ಕೆಲಸಮಾಡಿ ಹರ್ಷದ್‌ನ ಕಣ್ಣಿಗೆ ಬಿದ್ದು, ತರಬೇತಿ ಹೊಂದುತ್ತಿರುವ ಆಫೀಸರ್ ಎಂದು ಈ ಕೋಣೆಗೆ ಬರುವಂತಾದಾಗಲೇ, ತನ್ನ ಪ್ರಗತಿಯ ಹಾದಿ ತೆರೆದಿದೆಯೆಂದು ಆಕೆಗೆ ಮನವರಿಕೆಯಾಗಿತ್ತು. ಸಂದರ್ಭ ದೊರಕಿದಾಗಲೆಲ್ಲ ಹರ್ಷದ್ ಅದನ್ನೆ ಸೂಚ್ಯವಾಗಿ ಸಾರುತ್ತಿದ್ದ.

ಆದರೆ...

"ಒಂದು ನಿಮಿಷ ಹರ್ಷದ್.. ನನಗೆ ಅದರ ಅಪೇಕ್ಷೆಯೇ ಇಲ್ಲವಾದರೆ....?"

"ನನ್ನ ಮುಂದೆ ಈ 'ಸೋಗು' ಬೇಡ ಸುನಂದಾ ....ಬೇರೇನಾದರೂ ಸಮಸ್ಯೆಯಿದೆಯೆ, ಕೆಲಸಕ್ಕೆ ಸಂಬಂಧಿಸಿದ್ದು ?" ಎಂದ ಹರ್ಷದ್ ಬಾಗಿಲ ಬಳಿ ನಿಂತವನು.

'ಬಜೆಟ್'ನ ವಿಚಾರ ಚರ್ಚಿಸಲು ಅವಕಾಶ ವಿದ್ದಾಗ ತಿಳಿಸು. ಮತ್ತೆಲ್ಲ ನಿತ್ಯದ ಸಮಸ್ಯೆಗಳೇ—ನಾನು ಬಗೆಹರಿಸಲಾರದಂಥವೇನಿಲ್ಲ...."

"ಬ್ಯಾ ಬ್ಯಾ....ಹೋಗುವಾಗ ತಿಳಿಸು.... ಚರ್ಚಗೇಟ್‌ನ ತನಕ ಬಿಡುತ್ತೇನೆ" ಎಂದ ಹರ್ಷದ್....

ಹರ್ಷದ್ ಹೊರಟುಹೋಗಿ ಎರಡು ನಿಮಿಷಗಳ ಕಾಲ ಸುನಂದೆ ಬುದ್ಧನ ಪ್ರತಿಮೆಯನ್ನೆ ನೋಡುತ್ತಿದ್ದಳು. ಆ ಮೇಲೆ ಒಂದೊಂದೆ ಕಾಗದವನ್ನು ಎತ್ತಿಕೊಂಡಳು... ಆದರೆ ಆಕೆ ಮೆಲಕುಹಾಕುತ್ತಿದ್ದುದು ಹರ್ಷದ್ ಹೇಳಿದ ಮಾತನ್ನೆ. 'ನನ್ನ ಮುಂದೆ ಈ ಮುಖವಾಡ ಬೇಡ ಸುನಂದಾ.... ಈ ಆಫೀಸಿನಲ್ಲಿ ಐದು ವರ್ಷಕಾಲ ಎಲ್ಲ ಗುರುತಿಸಿದ್ದು ತನ್ನ ಮಹತ್ವಾಕಾಂಕ್ಷೆಯನ್ನೇ.. ಮಾತಿನ ಚುರುಕುತನ, ತೀಕ್ಷ್ಣವಾದ ಬುದ್ಧಿ ಮತ್ತೆ ಮೈಛಳಿ ಬಿಟ್ಟು ತನ್ನ ಕರ್ತವ್ಯಕ್ಷೇತ್ರದಲ್ಲಿ ದುಡಿಯುವ ಚೈತನ್ಯ, ಇವೆಲ್ಲವುಗಳಿಂದಾಗಿ ಆಕೆ ಗಳಿಸಿದ ಕೀರ್ತಿ ಆಕೆಗೆ ತಿಳಿದಿರಲಿಲ್ಲವೆಂದಲ್ಲ.....'ಹೆಣ್ಣು ಹುಲಿ' ಎಂದಿದ್ದರು ಕೆಲವರು. ಈಗ ಹರ್ಷದ್ ಅದಕ್ಕಾಗಿ ಬೇಟೆಯಾಡುತ್ತಾನೆ' ಎಂದವರೂ ಕೆಲವರು. ನೂರು ಜನಕ್ಕೂ ಮಿಕ್ಕಿ ಕೆಲಸ ಮಾಡುವ ಬೃಹತ್ ಜಾಹೀರಾತು ಸಂಸ್ಥೆಯಲ್ಲಿ ಹಲವು ನಾಲಿಗೆಗಳು ಹಲವು ರೀತಿ ಮಾತನಾಡುವುದು ಸ್ವಾಭಾವಿಕವೆಂದೇ ಬಗೆದಿದ್ದ ಸುನಂದೆ ಆ ಮಾತುಗಳಿಗೆ ಮಹತ್ವ ಕೊಟ್ಟಿರಲೇ ಇಲ್ಲ... ಪ್ರತಿಭೆಯನ್ನು ಗುರುತಿಸುವ ಯೋಗ್ಯತೆಯುಳ್ಳ ಅಧಿಕಾರಿ ಆತ...ಕಲಿತ ವಿದ್ಯೆ, ಗಳಿಸಿದ ಅನುಭವಗಳಿಂದಾಗಿ, ಸಹಜವಾದ ಪ್ರತಿಭೆಯನ್ನು ಮಹತ್ವಾಕಾಂಕ್ಷೆಗಾಗಿ ಬಳಸಲು ಪ್ರಯತ್ನಿಸುತ್ತಿರುವ ಯುವತಿ ತಾನು...

"ಇನ್ನಾರು ತಿಂಗಳಲ್ಲಿ 'ಜ್ಯೂನಿಯರ್ ಎಗ್ಸಿಕ್ಯುಟಿವ್' ಆಗಲಿರುವವಳಿಗೆ ತುಸುವೆ ವ್ಯವಹಾರಜ್ಞಾನ..."

ಹರ್ಷದ್ ಹೊರಟುಹೋಗಿದ್ದರೂ ಆತನ ಮಾತು ಪದೇ ಪದೇ ನೆನಪಾಗುವಂತಿತ್ತು. ಮಾಡಲು ಕೈತುಂಬ ಕೆಲಸ. ಕೆಲಸದ ನಡುವೆ ಈ ನೆನಪು ಕಚಕುಳಿಯಾಡಿ ಕುದುರಿಸಿದ ಅಹಂಕಾರ..ಆತ್ಮವಿಶ್ವಾಸ. ತನ್ನ ಕೆಲಸಕ್ಕೆ ಸಂಬಂಧಿಸಿದ ಕೆಲಸಗಾರರೊಡನೆ, ಬರಹಗಾರರೊಡನೆ, ಕಲಾವಿದರೊಡನೆ ಮಾತನಾಡುವಾಗಲೆಲ್ಲ ಸುನಂದೆಯ ಆತ್ಮವಿಶ್ವಾಸ ಸ್ಪಷ್ಟವಾಗಿ ಪ್ರಕಟವಾಗುತ್ತಿತ್ತು... ಸಮಯ ಸಂದಾಯವಾಗುತ್ತಿತ್ತು.

ಕೆಲಸ ತಂದುಕೊಟ್ಟ ಏಕಾಗ್ರತೆಯಲ್ಲಿ ಸುನಂದೆಗೆ ಮನೆಯ ನೆನಪೆ ಹಾರಿಹೋಗಿತ್ತು. ಸಂಜೆ ಐದೂವರೆ ಘಂಟೆಗೆ ಟೆಲಿಫೋನ್ ಬಾರಿಸಿದಾಗ ಸುನಂದೆ ಬೇಸರದಿಂದಲೇ ರಿಸೀವರ್ ಎತ್ತಿಕೊಂಡಳು. ಕರೆದುದು ಆಪರೇಟರ್.

"ನೋಡಿ ಮಿಸೆಸ್ ರಾವ್.. ನಿಮ್ಮ ಗಂಡನ ಲ್ಯಾನ್ ಹೊಂದಿಸಿಕೊಳ್ಳಲು ಹತ್ತು ಸಲವಾದರೂ ಪ್ರಯತ್ನಿಸಿದೆ..ಈಗಷ್ಟೆ ಸಿಕ್ಕಿತು..ಆದರೆ ಮಿಸ್ಟರ್ ರಾವ್ ಇವೊತ್ತು ಮೂರು ಘಂಟೆಗೇ ಥ್ಯಾಕ್ಟರಿ ಬಿಟ್ಟಿದ್ದಾರಂತೆ..ಬ್ಯಾ..ಬ್ಯಾ.."

ಗಂಡನೊಡನೆ ಮಾತನಾಡಬೇಕು ಎಂದು ಸುನಂದೆ ನಿರ್ಧರಿಸಿದ್ದು ಮಧ್ಯಾಹ್ನ ಲಂಚ್ ಬಿಡುವಿನ ವೇಳೆಯಲ್ಲಿ..ಬೆಳಿಗ್ಗೆ ಮನೆ ಬಿಡುವುದಕ್ಕೆ ಮೊದಲು ನಡೆದ ಘಟನೆಗಳನ್ನೆಲ್ಲ ವಿಮರ್ಶಿಸಲು ಅವಕಾಶ ಸಿಕ್ಕಿದ್ದು ಆಗ ಮಾತ್ರ—ತನ್ನ ಕೋಣೆಯಲ್ಲಿ ಕುಳಿತು ಒಬ್ಬಳೇ 'ಸ್ಯಾಂಡ್‌ವಿಚ್' ತಿನ್ನುತಿದ್ದಾಗ..ಗಂಡನೊಡನೆ ಜಗಳವಾಡಿ ಮನೆ ಬಿಟ್ಟಿದ್ದಿಯೇನು ?' ಎಂದು ಹರ್ಷದ್ ಕೇಳಿದ್ದ...ಆದರೆ ನಡೆದದ್ದು ಜಗಳವೆ!

ಏಳೂವರೆ ಘಂಟೆಗೆ ನಿತ್ಯದಂತೆ ವಸಂತ ಥ್ಯಾಕ್ಟರಿಗೆ ಹೊರಡುವ ಸಿದ್ಧತೆ ನಡೆಸಿದ್ದ...ಬೆಳಗಿನ ಸರದಿಯೆಂದು ಅಂಥ ಅವಸರ.' ಸುನಂದೆ ಇನ್ನೂ ಹಾಸಿಗೆ ಬಿಟ್ಟಿದ್ದಿರಲಿಲ್ಲ. ಅಡಿಗೆಯ ಮನೆಯಲ್ಲಿ ಮಾತು ಕೇಳಿಬರುತ್ತಿತ್ತು...ಕೆಲಸದಾಳಿನೊಂದಿಗೆ ನಿತ್ಯದಂತೆ ಜಗಳ...ಒಂದೇ...ಚಹ ಸರಿಯಾಗಿಲ್ಲವೆಂದು; ಅಥವಾ ಮಡಿವಾಳನಿಂದ ಬಟ್ಟೆ ಪಡೆಯಲು ಮರೆತನೆಂದು; ಹಾಲು ಚೆಲ್ಲಿದನೆಂದು; ಮುಖಕ್ಷೌರದ ಬ್ಲೇಡು ಕದ್ದನೆಂದು.

ಇಂಥ ಜಗಳ ರೂಢಿಯಾಗಿ, ವಸಂತನಿಗೆ ಬೆಳಗಿನ ಸರದಿ ಬಂದಾಗಲೆಲ್ಲ ಈ ಪರಿಚಿತ ಸದ್ದಿಗೆ ಎಚ್ಚರಾಗುವುದು ಸುನಂದೆಗೆ ರೂಢಿಯಾಗಿತ್ತು.

"ಓ ! ದೇವರೆ ! ಪ್ಲೀಸ್...ಸ್ವಲ್ಪ ಸುಮ್ಮಗಿರಬಾರದೆ!" ಎನ್ನುವುದೂ ಆಕೆಗೆ ರೂಢಿಯಾಗಿತ್ತು.

ಸುನಂದೆಯ ಮಾತು ಕೇಳಿ ವಸಂತ ಅವಳ ಬಳಿಗೆ ಬಂದಿದ್ದ...

"ನಾಳೆ ಒಂದು ದಿನ ರಜೆ ತೆಗಿ ಸುನ್ನಾ...ಸಂಜೆ ಪುಣೆಗೆ ಹೋಗೋಣ."

"ಪುಣೆಗೆ?"

"ಹೌದು, ಪುಣೆಗೆ! ನಾಳೆ ಪಂಚ್‌ಗನಿ...ನಾಳೆನಾಡಿದ್ದು ಎರಡು ದಿನ ಪುಣಾವನ್ನು ನೋಡಿಕೊಂಡು ಸೋಮವಾರ ಬೆಳಗಿನ ಜನತಾ ಅಥವಾ ಡೆಕ್ಕನ್ ಕ್ವೀನ್‌ನಲ್ಲಿ ಮರಳಬಹುದು...ನನಗೆ ಹೇಗೂ ಸೋಮವಾರ ರಾತ್ರಿಯ ಸರದಿ..."

"ಏನಾದರೂ ಹುಚ್ಚುಗಿಚ್ಚು ಹಿಡಿದಿಲ್ಲವಷ್ಟೆ!" ತಾನು ಆತುಕೊಂಡಿದ್ದ ದಿಂಬನ್ನು ಬದಿಗೆ ಸರಿಸಿ ಸುನಂದೆ ಕೇಳಿದ್ದಳು. "ಹೋಗಿ ಎರಡು ವಾರ ಕೂಡ ಆಗಿಲ್ಲ ಅಷ್ಟರೊಳಗೇ ಪುನಃ ಯೋಚನೆಯೆ !"

ವಸಂತ ಉತ್ತರ ಕೊಟ್ಟದ್ದು ಈ ರೀತಿ—

"ಹಾಗಾದರೆ ನೀನು ಬರುವದಿಲ್ಲ !"

"ನಾನು ಬರುವದಿಲ್ಲವಷ್ಟೇ ಅಲ್ಲ, ನೀವು ಹೋಗುವುದು ಕೂಡ ಬೇಡ."

ವಸಂತ ಉತ್ತರ ಕೊಡದೆಯೆ ಹೋಗಿದ್ದ....... ಮಾತಿನಲ್ಲಿ ಸೋತಾಗ ಆತ ಮೌನವನ್ನವಲಂಬಿಸುವುದು ರೂಢಿ. ಈ ಸೋಲಿನ ನೋವಿನ ಸಮಾಧಾನಕ್ಕಾಗಿ ಗಂಡನೊಡನೆ ಟೆಲಿಫೋನ್‌ನಲ್ಲಿ ಮಾತನಾಡಬೇಕೆಂದು ಸುನಂದೆ ಯತ್ನಿಸಿದಾಗ ಲ್ಯಾನ್ ಸಿಗಲಿಲ್ಲ.



"ಮೂರು ಘಂಟೆಗೇ ಫ್ಯಾಕ್ಟರಿ ಬಿಟ್ಟಿದ್ದಾರೆ.."

ಸಂಶಯದ ಸುಳಿಯೊಂದು ಸುನಂದೆಯ ಮನಸ್ಸಿನಲ್ಲಿ ಸುಳಿದು ತಿಳಿಯಾಯಿತು. ಇಲ್ಲ; ಸಾಧ್ಯವೇ ಇಲ್ಲ ತಾನು ಒಪ್ಪಿಗೆ ಕೊಡದೆ ವಸಂತ ಮಗುವನ್ನು ನೋಡಲು ಹೋಗುವುದಿಲ್ಲ; ಖಂಡಿತವಾಗಿಯೂ ಇಲ್ಲ.

ಯೋಚನೆಯಲ್ಲಿ ಬುದ್ಧನ ಪ್ರತಿಮೆಯನ್ನೇ ನೋಡುತ್ತ ಕುಳಿತಿದ್ದ ಸುನಂದೆಯನ್ನು ಎಚ್ಚರಿಸಿದುದು ಹರ್ಷದ್‌ನ ದನಿ "ಹೊರಡುವ ಯೋಜನೆಯೆ ಇಲ್ಲವೆ, ಘಂಟೆ ಆರೂಕಾಲಾಯಿತು."

ಸುನಂದೆ ನಕ್ಕಳು "ಬಂದೆ. ಎರಡೇ ನಿಮಿಷ" ಎಂದು ಮೇಜಿನ ಮೇಲಿದ್ದ ಕಾಗದಗಳನ್ನೆಲ್ಲ ಒಳಗೆ ತುರುಕಿ ಹರ್ಷದ್‌ನ ಜತಗೇ ಹೊರಹೊರಟಳು.

ತನ್ನ ಮೇಲಧಿಕಾರಿಯ ಜತೆಗೆ ಸುನಂದೆ ಕಾರಿನಲ್ಲಿ ಪ್ರಯಾಣ ಮಾಡುತ್ತಿದ್ದುದು ಇದೇ ಮೊದಲ ಬಾರಿಯಾಗಿರಲಿಲ್ಲ. ಆಫೀಸರ್ ಪದವಿಗೆ ತರಬೇತಿಯಲ್ಲಿರುವಾಕೆಯೆಂದು ನಿರ್ಧರಿಸಲ್ಪಟ್ಟ ಮೇಲೆ ಹರ್ಷದ್‌ನ ಜತೆಗೆ ಹೊರಟಾಗಲೆಲ್ಲ ಆತ 'ಬಾ' ಎನ್ನುತ್ತಿದ್ದ. ಚರ್ಚ್‌ಗೇಟ್ ನಿಲ್ದಾಣದಲ್ಲಿ ಸುನಂದೆಯನ್ನು ಬೀಳ್ಕೊಡುತ್ತಿದ್ದ. ಇಂದು ಕೂಡ ಅಂತೆಯೆ ಎಂದು ಬಗೆದು ಹೊರಟ ಸುನಂದೆಗೆ ಕಾರು ನಡೆಸುತ್ತಿದ್ದ ಹರ್ಷದ್ "ತುಂಬ ಹಸಿವಾಗಿದೆ ಸುನಂದಾ, ಅವಸರವಿದೆಯೆ? ಎಲ್ಲಾದರೂ ಸ್ವಲ್ಪ ಚಹ ಸೇವಿಸೋಣವೆ?" ಎಂದು ಕೇಳಿದಾಗ ತುಸು ಆಶ್ಚರ್ಯವಾದರೂ ಆಕೆ ತೋರಗೊಡಲಿಲ್ಲ.

"ಮಧ್ಯಾಹ್ನದ 'ಲಂಚ್' ಇರಲಿಲ್ಲವೇನೊ ?" ಎಂದಳು ನಗುತ್ತಾ.

"ಇಲ್ಲ."

"ಮನೆಯಲ್ಲಿ ಜಗಳವಾಡಿ ಬಂದಿದ್ದಿಯೇನು ?" ಎಂದು ಕೇಳಿದಳು ಸುನಂದೆ ನಗುತ್ತಲೇ.

"ಮುಚ್ಚು ಬಾಯಿ; ನೀನೇ ಈಗೊಂದು 'ಪೆರಿಸ್ಸಾರ್ಟ್'" ಎಂದ ಹರ್ಷದ್. ಆ ಮಾತಿನ ಹಿಂದೆ ನಗುವಿತ್ತು. ಆದರೆ ಅಷ್ಟೇಕೆ ಅವಸರವಾಗಿ ಈ ಮಾತು ಹೊರಟಿತೆಂಬ ಕುತೂಹಲದಿಂದ ಸುನಂದೆ ಹರ್ಷದ್‌ನ ಕಡೆ ನೋಡಿದಳು. ಆದರೆ ಆ ಕಪ್ಪು ಕನ್ನಡಕಗಳಡಿ ಮುಖದ ಯಾವ ಗಮನಾರ್ಹ ಬದಲಾವಣೆಯೂ ಗೋಚರಿಸುವಂತಿರಲಿಲ್ಲ.

ವೀರ ನರಿಮಾನ್ ರಸ್ತೆಯಲ್ಲೇ ಕಾರು ನಿಲ್ಲಿಸಿ ಇಬ್ಬರೂ ನಡೆದು ಹೋಗಿ 'ಬಿಸ್ಟ್ರೋ' ತಲುಪಿದಾಗ ಸಂಜೆಗತ್ತಲು ಕವಿಯತೊಡಗಿತ್ತು. ರೆಸ್ಟೋರದಲ್ಲಿ ಒಂದು ಮೇಜನ್ನಾರಿಸಿ ಕುಳಿತುಕೊಳ್ಳುವ ವರೆಗೂ ಹರ್ಷದ್ ಮಾತನಾಡಲಿಲ್ಲ. ಒಳ್ಳೆಯ ಅಭಿರುಚಿಯ ವರ್ಣಯೋಜನೆ, ಮಂದವಾದ ಬೆಳಕು— ಹಿತವಾದ ಪಾಶ್ಚಾತ್ಯ ಸಂಗೀತ.

"ಇಲ್ಲಿಗೆ ಬಂದಾಗಲೆಲ್ಲ ಮನೆಗೆ ಬಂದಂತಾಗುತ್ತದೆ" ಎಂದ ಹರ್ಷದ್.

ಈಗ ಸುನಂದೆಯ ಕುತೂಹಲ ಪುನಃ ಚಿಗುರಿತ್ತು "ಹಾಗಿದ್ದರೆ ಜಗಳವಾಡಿ ಮನೆ ಬಿಟ್ಟಿದ್ದು ನಿಜವೇ?" ಎಂದಳು ನಗುತ್ತಲೇ.

"ಎಂಥ ದಪ್ಪತಲೆಯ ಹುಡುಗಿ ನೀನು? ಈಗೇನು ಬೇಕು ಹೇಳು ?"

"ಬರೀ ಕಾಫೀ."

"ಕಾಫಿ ಮತ್ತು ಕಟ್ಲೆಟ್ಸ್ !"

"ನನಗೆ ಬರೀ ಕಾಫಿ— ಬಿಸ್ ಹಾಕಿದ್ದು."

ಕಾಫಿ, ಕಟ್ಲೆಟ್ಸ್ ಬಂದಾಗ ಸುನಂದೆ ಮಾತನಾಡದೆ ತನ್ನ ಕಾಫಿ ಹೀರಲಾರಂಭಿಸಿದಳು. ಹರ್ಷದ್ ಚೂರಿ, ಫೋರ್ಕ್‌ಗಳೊಡನೆ ಆಡಲಾರಂಭಿಸಿದ. ಅಂಥ ಆಟ ಸೂಚಿಸಿದ ಅವಸರದಲ್ಲಿ ಹಸಿವು ಸ್ಪಷ್ಟವಾಗಿ ವ್ಯಕ್ತವಾಗುತ್ತಿತ್ತು. ಮಧ್ಯಾಹ್ನದ 'ಲಂಚ್' ಹರ್ಷದ್‌ನಿಗೆ ಸಿಕ್ಕಿರಲಿಲ್ಲ.

ಸುನಂದೆ ಮಾತನಾಡದೆ ಹರ್ಷದ್‌ನನ್ನೆ ನೋಡುತ್ತಿದ್ದಳು. ಇದಿರಿಗೆ ಕುಳಿತಿದ್ದ ಹರ್ಷದ್‌ನ ಮುಖವೇ ಕರಗಿದಂತಾಗಿ ಗಂಡನ ನೆನಪಾಯಿತು. 'ಆತ ನಿಜವಾಗಿಯೂ ಪುಣೆಗೆ ಹೋಗಿದ್ದಿರಬಹುದೆ? 'ಇಲ್ಲ' ಎಂದಿತು ಮನಸ್ಸು. ತಾನು ಮನೆಗೆ ಮರಳುವಾಗ ಆತ ಸುಖವಾಗಿ ನಿದ್ರಿಸಿರುತ್ತಾನೆ. ತಾನು ಮನೆಗೆ ಹೋಗಿ, ಸ್ನಾನ ತೀರಿಸಿ, ರಾತ್ರಿಯ ಊಟ ಸಿದ್ಧವಾಗುವ ತನಕ ರೆಕಾರ್ಡ್ ಸಂಗೀತ ಕೇಳುತ್ತ ಕುಳಿತರೂ ಆತನಿಗೆ ಎಚ್ಚರವಾಗುವುದಿಲ್ಲ. ಅಡಿಗೆಯ ಹುಡುಗ ಊಟ ತಯಾರಾಗಿದೆಯೆಂದು ಒದರಿಕೊಂಡಾಗಲೂ ವಸಂತ ಏಳುವುದು ಅರೆಮನಸ್ಸಿನಿಂದ. ಆಮೇಲೆ ಇದಿರಿದಿರು ಕುಳಿತು ಊಟ—ಹೆಚ್ಚಾಗಿ ಸದ್ದಿರದೇ..ಮಗು ಧಿಲೀಪನ ವಿಚಾರ ಮಾತು ಬಂದರೂ ಆತ ಬೇಕೆಂದೇ ವಿಷಯ ಬದಲಿಸುತ್ತಾನೆ— ಆ ನೆನಪು ಈಗ ಬೇಡವೆಂಬಂತೆ. ಊಟವಾದ ಮೇಲೆ ಒಮ್ಮೊಮ್ಮೆ—ಹೆಚ್ಚಾಗಿ ತನ್ನ ಒತ್ತಾಯಕ್ಕೆಂಬಂತೆ—ಶಿವಾಜಿ ಪಾರ್ಕ್ ಸಮುದ್ರ ತೀರದ ವರೆಗೆ ನಡೆದಾಟ.. ಇಲ್ಲವಾದರೆ ಸ್ವಲ್ಪ ಹೊತ್ತು ಆತನಿಗೆ 'ಪೇಶನ್ಸ್' ಆಟ, ತನಗೆ ಓದು, ಆಮೇಲೆ ನಿದ್ರೆ..ರೂಢಿ..

"ಏನು ಅಷ್ಟು ದೀರ್ಘ ಯೋಚನೆ! ಮನೆಯ ನೆನಪಾಯಿತೇನು? ಹೇಗಿದ್ದಾನೆ ನಿನ್ನ ಮಗ ಪಂಚಗನಿಯಲ್ಲಿ ?" ಹಸಿವು ತೃಪ್ತಿಯಾದಂತೆ ಚೂರಿ ಕೆಳಗಿಟ್ಟು ಹರ್ಷದ್ ಸುನಂದೆಗೆ ಹೇಳಿದ.

"ಚೆನ್ನಾಗಿದ್ದಾನೆ... ಶಾಲೆಯ ವ್ಯವಸ್ಥೆ ಚನ್ನಾಗಿದೆ... ಚೆನ್ನಾಗಿ ನೋಡಿಕೊಳ್ಳುತ್ತಾರೆ."

"ತುಂಬ ಯೋಚನೆಯಾಗುತ್ತದೆಯೆ ?"

"ಇಲ್ಲ.." ಎಂದಳು ಸುನಂದೆ, ನಿರ್ಧಾರದ ದನಿಯಲ್ಲಿ. ಹರ್ಷದ್‌ನ ಮುಖ ನೋಡದೇನೇ ಕಾಫಿ ಹೀರುತ್ತಾ..

"ಎಷ್ಟು ವರ್ಷ ಈಗ ಅವನಿಗೆ ?"

ಯಾಕೆ ಈ ಪ್ರಶ್ನೆ ಎಂಬಂತೆ ಸುನಂದೆ ಹರ್ಷದ್‌ನನ್ನೆ ನೋಡಿದಳು. ಆಮೇಲೆ ನಿಧಾನವಾಗಿ ಹೇಳಿದಳು "ಏಳು."

"ಇನ್ನೊಂದಕ್ಕೆ ಸಮಯವಾಯಿತಲ್ಲ—"

"ಇಲ್ಲ.. ಅಂದಳು ಸುನಂದೆ.. "ಇನ್ನಿಲ್ಲ.."

"ಯಾಕೆ, ಆಫೀಸು- ಮನೆಗಳನ್ನು ಹೊಂದಿಸಲು ಸಾಧ್ಯವಾಗುತ್ತಿಲ್ಲ ಎಂತಲೆ ?"

"ಹೌದು" ಎಂದಳು ಸುನಂದೆ... "ಆ ತಡೆ, ತೊಂದರೆ, ನನ್ನ ಕೆಲಸಕ್ಕಿಲ್ಲವಾದರೂ, ನನ್ನ ಪ್ರಗತಿಗೆ ಸಂಚಕಾರ ಕೊಟ್ಟೀತು, ಎಂತ."

"ಅದೂ ಸರಿಯೆ" ಎಂದ ಹರ್ಷದ್.

ಹರ್ಷದ್ ಹೀಗೇಕೆ ತನಗೆ ಸಂಬಂಧಿಸಿದ ಪ್ರಶೆಗಳನ್ನೆ ಕೇಳುತ್ತಿದ್ದಾನೆ? ಎಂಬ ಯೋಚನೆ ಸುನಂದೆಯ ಮನಸ್ಸಿನಲ್ಲಿ ಮಿಂಚಿತು. 'ಜ್ಯೂನಿಯರ್ ಎಗ್ಸಿಕ್ಯುಟಿವ್' ಆಗಲು ಇದೂ ಒಂದು ಪರೀಕ್ಷೆಯೆ? ಎಂದು ಮನಸ್ಸು ಕೇಳಿತು. ಹಾಗೆ

ಮನಸ್ಸು ತೊಳಲಾಡುತ್ತಿದ್ದಾಗಲೇ ಬಂತು ಹರ್ಷದ್‌ನ ಇನ್ನೊಂದು ಪ್ರಶ್ನೆ.

"ನಾವು ಯಾಕೆ ನಿನ್ನ ಗಂಡನನ್ನು ಯಾವ ಸಂತೋಷಕೂಟದಲ್ಲೂ, ಸ್ನಾಫ್ ಪಾರ್ಟಿಯಲ್ಲೂ ನೋಡುವುದಿಲ್ಲ?"

"ನಾವೇಕೆ ನಿನ್ನ ಹೆಂಡತಿಯನ್ನು ನೋಡುವುದಿಲ್ಲ?"

"ಓ!" ಎಂದ ಹರ್ಷದ್ ಈ ಪ್ರಶ್ನೆಗೆ ಸಿದ್ಧನಾಗಿರದಂತೆ. ಆಮೇಲೆ ಚೇತರಿಸಿಕೊಂಡು ಹೇಳಿದ. "ಸುನಂದಾ ನೀನು ಆಕೆಯನ್ನು ನೋಡಿಯೇ ಇಲ್ಲ ಅಲ್ಲವೇ! ಅವಳು ನಿತ್ಯ ರೋಗಿ."

"ಏನು ರೋಗ?" ಎಂದಳು ಸುನಂದೆ ತುಸು ಆಶ್ಚರಿಯಿಂದಲೇ.

"ಮುಖ್ಯ ಮನೋರೋಗ...ಆಕೆ ಹದಿನೆಂಟನೆಯ ಶತಮಾನದ ರಾಜಕೋಟೆಯ ವಾತಾವರಣವನ್ನು ನೆಚ್ಚಿಕೊಂಡವಳು...ಸರಿ ಹೊರಡೋಣವೆ?" ಎಂದ ಹರ್ಷದ್—ತನ್ನ ಮನಸ್ಸಿನ ಅತೃಪ್ತಿಯನ್ನು ಹೆಚ್ಚು ವಿವರಿಸಲು ಇಷ್ಟವಿಲ್ಲವೆಂಬರ್ಥದ ಸೂಚನೆ.

ಸುನಂದೆ ಹೊರಟು ನಿಂತಳು. ಹರ್ಷದ್ ಕೇಳಿದ ಪ್ರಶ್ನೆ ಉತ್ತರಿಸದೆಯೆ ಉಳಿದಿತ್ತು. 'ನಾವೇಕೆ ನಿನ್ನ ಗಂಡನನ್ನು ಯಾವ ಸಂತೋಷಕೂಟದಲ್ಲೂ, ಸ್ನಾಫ್ ಪಾರ್ಟಿಯಲ್ಲೂ ನೋಡುವುದಿಲ್ಲ?"

'ಆತ ತಿಫ್ಟ್ ಕೆಮಿಸ್ಟ್' ಎನ್ನುವ ಉತ್ತರ ಸುನಂದೆಯ ನಾಲಗೆಯಲ್ಲಿತ್ತು. ಆದರೆ ಆ ಉತ್ತರ ಹೇಳದೆಯೇ ಉಳಿಯಿತು.

ಕಾರು ಸೇರಿದ ಮೇಲೂ ಹರ್ಷದ್ ಮಾತನಾಡಲಿಲ್ಲ. ಸಂಜೆಯ ವಾಹನಪ್ರವಾಹ......ಮಂದವಾದ ಗತಿಯಿಂದ ಕಾರು ಸಾಗುತ್ತಿತ್ತು. ಫ್ಲೋರಾ ಫೌಂಟೆನ್‌ನಲ್ಲಿ ಬಲಕ್ಕೆ ತಿರುಗಿದ ಹರ್ಷದ್ ಚರ್ಚ ಗೇಟ್ ರಸ್ತೆಯನ್ನು ಬಿಟ್ಟು ಮಹಾತ್ಮಾ ಗಾಂಧಿ ರಸ್ತೆಯಲ್ಲಿ ಮುಂದುವರಿದ. ಸುನಂದೆ ಒಮ್ಮೆಗೇ ಎಚ್ಚರವಾದಂತವಳಾಗಿ ಸ್ಟೇರಿಂಗ್ ಚಕ್ರದ ಮೇಲಿದ್ದ ಹರ್ಷದ್‌ನ ಕೈಯ ಮೇಲೆ ತನ್ನ ಬಲಗೈಯನ್ನಿಟ್ಟು "ಹರ್ಷದ್ ಚರ್ಚ್‌ಗೇಟ್‌ನ ದಾರಿ ತಪ್ಪಿತೇನು?" ಎಂದಳು.

"ಇಲ್ಲ" ಎಂದು ಉತ್ತರವಿತ್ತ ಹರ್ಷದ್, ಹಾಗೆಯೇ ಮುಖ ತಿರುಗಿಸಿ ಸುನಂದೆಯನ್ನು ನೋಡಿ ನಕ್ಕ.."ನಿನ್ನನ್ನು ದಾದರ್‌ನಲ್ಲಿ ಬಿಟ್ಟು ಬರುತ್ತೇನೆ."

"ಛೆ! ಅಷ್ಟು ದೂರ! ಬೇಡವೆ ಬೇಡ..ನೀನು ಮನೆ ಸೇರುವಾಗ ರಾತ್ರಿ ಎಂಟು ಘಂಟೆಯಾಗಬಹುದು."

"ಅದು ನಿತ್ಯದ ಮಾತು ಸುನಂದಾ..ನಾನು ಜಮ್ಖಾನಾ ಬಿಟ್ಟು ಮನೆ ಸೇರುವಾಗ ನಿತ್ಯ ರಾತ್ರಿ ಒಂಭತ್ತು ಘಂಟೆ"

ಆಮೇಲೆ ತುಸು ವೇಳೆ ಸುನಂದೆ ಮಾತನಾಡಲಿಲ್ಲ. ಹರ್ಷದ್ ಕೂಡ ಮಾತನಾಡಲಿಲ್ಲ. ಹರ್ಷದ್‌ನ ದೀರ್ಘ ಮೌನ ಕಂಡಾಗ ಮಾತ್ರ ಸುನಂದೆಯ ಮನಸ್ಸಿನಲ್ಲಿ ಆಶ್ಚರ್ಯ ಕುದರಲಾರಂಭಿಸಿತು. ಹರ್ಷದ್‌ನ ಕಾರು ದಾರಿ ಬದಲಿಸಿದಾಗ ತನಗಾದ ಆಶ್ಚರ್ಯದ ಒಂದು ಕ್ಷಣದಲ್ಲಿ ತನ್ನ ಕೈ ಹರ್ಷದನ ಕೈಯೆಡೆ ಸರಿದಿತ್ತು—ಅದನ್ನು ತಡೆಯುವಂತೆ ವ್ಯವಹಾರದ ನೆವದಲ್ಲಿ ಹಲವು ಸಲ ಕುಲುಕಿದ ಕೈ. ಅಂಥ ಪರಿಚಯಕ್ಕೂ ಇಂದಿನ ಆತ್ಮೀಯತೆಗೂ ಸಂಬಂಧವೇ ಇಲ್ಲವೆ? ಈ ಸಲಿಗೆ ಅತಿಯಾಯಿತೆಂದು ಇಂಥ ಮೌನವೆ?

"ಏನು ದೀರ್ಘ ಯೋಚನೆ ಹರ್ಷದ್! ಒಂದು ಘಂಟೆ ವ್ಯರ್ಥವಾಯಿತೆಂದೆ?"

ಹರ್ಷದ್ ಕೂಡಲೆ ಮಾತನಾಡಲಿಲ್ಲ. ಮುಂದೆ ದಾರಿ ನೋಡುತ್ತಿದ್ದವನು ಮುಖ ತಿರುಗಿಸಿ ನಕ್ಕ ಆಮೇಲೆ "ಗುಡ್ ಗರ್ಲ್... ರಮ್ಮಿ ಆಡಿ ಹತ್ತಿಪ್ಪತ್ತು ರೂಪಾಯಿ ಕಳೆದುಕೊಳ್ಳಲಿಲ್ಲ. ಒಂದು ಘಂಟೆ ನಿನ್ನ ಸಹವಾಸದ ಲಾಭ ಪಡೆದೆ.." ಎಂದು ತನ್ನ ಎಡಗೈಯಿಂದ ಸುನಂದೆಯ ಭುಜವನ್ನು ತುಸುವೆ ಹಿಸುಕಿದ..,

ಮತ್ತೆ ಮಾತು ಸರಾಗವಾಗಿ ಹೊರಟಿತು... ಆಫೀಸಿನ ಕೆಲಸ, ಸಹೋದ್ಯೋಗಿಗಳ ಸ್ವಭಾವ ವೈಶಿಷ್ಟ್ಯಗಳು— ಗಿರಾಕಿಗಳ ಬೇಡಿಕೆಗಳ ವೈಚಿತ್ರ್ಯಗಳು...

ಕೆಡೆಲ್‌ರೋಡ್‌ನಲ್ಲಿ ಮನೆ ಸಮೀಪಿಸಿದಾಗ ಸುನಂದೆಯ ನಿರ್ದೇಶನದಂತೆ ಹರ್ಷದ್ ಕಾರು ನಿಲ್ಲಿಸಿದ ಸುನಂದೆ ಕಾರಿನಿಂದಿಳಿಯುತ್ತಿದ್ದಂತೆಯೇ "ಬಾ ಹರ್ಷದ್ ಮನೆಗೆ ಹೋಗೋಣ...ಒಂದರ್ಧ ತಾಸು ನಿಂತು ಹೋಗು,.. ನನ್ನ ಗಂಡನ ಭೇಟಿ ಮಾಡಿಸುತ್ತೇನೆ" ಎಂದಳು.

"ಇಲ್ಲ ಸುನಂದಾ, ಇನ್ನೊಮ್ಮೆ ನೋಡೋಣ" ಎಂದ ಹರ್ಷದ್. ಆದರೆ ಸಾಧ್ಯವಿಲ್ಲ. ಇಂದು ಬರಲೇಬೇಕು" ಎಂದು ಸುನಂದೆ ಒತ್ತಾಯಿಸಿದಾಗ ಆತ ಕಾರಿನಿಂದಿಳಿದ.

ಇಬ್ಬರೂ ಮಾಳಿಗೆಯ ಮೆಟ್ಟಲೇರುತ್ತಿದ್ದಾಗ ಸುನಂದೆ ಯೋಚಿಸುತ್ತಿದ್ದುದು ಗಂಡನ ವಿಚಾರವೇ. ವಸಂತನಿಗೆ ಬೆಳಗಿನ ಸರದಿಯಿದ್ದಾಗ, ಊಟಕ್ಕೂ ಮೊದಲು ಸಂಜೆಯ ನಿದ್ದೆ ಕೆಡುವಂತಾದರೆ ಕೆಂಡದಂಥ ಕೋಪ. ಹಾಗೆ ಎಬ್ಬಿಸಿದಾಗ ಪ್ರಕಟವಾಗುವುದು ಅಸಹ್ಯ ತರಿಸುವ...

ಕರೆಗಂಟೆ ಬಾರಿಸಿದಾಗ ಕೆಲಸದ ಹುಡುಗ ಬಾಗಿಲು ತೆರೆದ. ಹರ್ಷದ್‌ನನ್ನು ಡ್ರಾಯಿಂಗ್ ರೂಮ್‌ಗೆ ಕರೆತಂದು ಕುಳ್ಳಿರಿಸಿದ ಸುನಂದೆ ಅಡಿಗೆಯ ಮನೆಗೆ ಬಂದು ಅವನೊಡನೆ ಅವಸರದಲ್ಲೇ "ರಾಯರನ್ನು ಎಬ್ಬಿಸು, ಹೋಗು" ಎಂದಳು.

ಹುಡುಗ ತಬ್ಬಿಬ್ಬಾದ... "ಅವರು ಪೂನಾಕ್ಕೆ ಹೋಗಿದ್ದಾರೆ" ಎಂದ. "ಏನು!" ಎಂದಳು ಸುನಂದೆ ಸಿಟ್ಟಿನಿಂದ. ಒಳಗೆ ಹೋಗಿ ನೋಡಿದಾಗ ತನ್ನ ಡ್ರೆಸ್ಸಿಂಗ್ ಮೇಜಿನ ಮೇಲೊಂದು ಚೀಟಿಯಿತ್ತು. "ನೀನು ಬರುವುದಿಲ್ಲವಾದ ಕಾರಣ ನಾನೊಬ್ಬನೇ ಪಂಚ್‌ಗನಿಗೆ ಹೋಗುತ್ತೇನೆ. ನಾಳೆ ರಜೆ ಪಡೆದಿದ್ದೇನೆ. ಬೇಬಿಯನ್ನು ನೋಡಿಕೊಂಡು ಸೋಮವಾರ ಹಿಂದುರುಗುತ್ತೇನೆ. ನಮಗಾಗಿರುವುದು ಕೊನೆಯ ತನಕ ಒಂದೇ ಮಗು. ಎಷ್ಟು ಸಲ ಹೋದರೇನು ಕೇಡು? ಸಿಟ್ಟಾಗಬೇಡ."

ಸುನಂದೆಯ ಶರೀರ ಮಾತ್ರ ಅವಮಾನದ ನೋವಿನಿಂದ ಕಂಪಿಸಿತು. ಆ ಚೀಟಿಯನ್ನು ಕಿಟಕಿಯಿಂದ ಹೊರಗೊಗೆದಳು. ಹರ್ಷದ್ ಬಳಿಯ ಕೋಣೆಯಲ್ಲಿದ್ದಾನೆಂಬತಿಳಿವಳಿಕೆಯಿಂದಾಗಿ ಸ್ಮರಣೆ ತಂದುಕೊಂಡು ಡ್ರಾಯಿಂಗ್ ರೂಮ್‌ಗೆ ಬಂದಳು. ನಗುವಿನ ಮುಖವಾಡ ಧರಿಸಿ.

"ತಪ್ಪಿದೆ ಹರ್ಷದ್...ನೀನೆ ಗೆದ್ದಿರುವಿ—ನನ್ನ ಗಂಡ ಅವಸರದಲ್ಲಿ ಪೂನಾಕ್ಕೆ ಹೋಗಿದ್ದಾರೆ. ಮನೆಯಲ್ಲಿ ತಿಳಿಸಿ ಮಗುವನ್ನು ನೋಡಬೇಕು ಎನಿಸಿದಾಗಲೆಲ್ಲ ಅವರು ಹೀಗೆ ಹೇಳದೆಯೇ ಹೋಗುವುದು ರೂಢಿ...ನಿನ್ನನ್ನು ಸುಮ್ಮಗೆ ಮೇಲಕ್ಕೆ ಕರೆದು ತಂದೆ,"

"ಹೀಗೇನು? ತಾಯಿಗಿಂತಲೂ ತಂದೆಗೆ ಮಗು ವಿನ ಯೋಚನೆ ಹೆಚ್ಚೆನೋ!" ಎಂದ ಹರ್ಷದ್ ನಗುತ್ತಲೇ.

ಸುನಂದೆ ಬರೀ ನಕ್ಕಳಷ್ಟೆ. ಹರ್ಷದ್‌ನ ಯಾವ ಮಾತಿಗೂ ತಕ್ಷಣ ಉತ್ತರ ಕೊಡುವಾಕೆಗೆ ಈಗ ಏನು ಹೇಳಬೇಕೆಂದು ಹೊಳೆಯಲಿಲ್ಲ.

"ಚಹ ತರಿಸಲಿ?"

"ನಿನ್ನಿಷ್ಟ.." ಎಂದ ಹರ್ಷದ್.."ಹೇಗೂಬಂದೆ. ನಿನ್ನ ಗಂಡನನ್ನು ಕಾಣುವುದಾಗಲಿಲ್ಲ; ಮನೆಯನ್ನಾದರೂ ನೋಡುತ್ತೇನೆ."

"ನೋಡುತ್ತೇನೆ" ಎಂದ ಹರ್ಷದ್‌ನ ಕಣ್ಣು ಕೋಣೆಯನ್ನೆ ಅರಸುತ್ತಿದ್ದವು—ಅಲ್ಲಿಯ ಸೋಫಾ, ಮೇಜು, ಕಿಟಕಿಯ ಪರದೆ, ಗೋಡೆಯ ಬಣ್ಣ ಇವೆಲ್ಲವುಗಳ ಸಂಯೋಜನೆ ತಮಗೆ ಅರ್ಥವಾಗುತ್ತಿವೆಯೆಂಬಂತೆ.

ಸುನಂದೆಯೊಡನೆ ಆ ಮೂರು ಕೋಣೆಗಳ ಬ್ರಹ್ಮಾಂಡವನ್ನು ಸುತ್ತಿಬಂದ ಹರ್ಷದ್ ಆಕೆಯ ಡ್ರೆಸ್ಸಿಂಗ್ ಮೇಜಿನ ಮೇಲಿದ್ದ ಭಾವಚಿತ್ರವನ್ನು ಎರಡು ನಿಮಿಷ ನೋಡುತ್ತ ನಿಂತ. ಅದು ಸುನಂದೆಯದೆ. ಆದರೆ ಆಕೆಯ ಕೈಯಲ್ಲಿ ಮೂರು ವರ್ಷದ ಮಗು ದೀಲಿಪ್.

"ನಿನ್ನ ಮಗ ನಿನ್ನಂತೆಯೆ ಇದ್ದಾನೆ ಬಿಟ್ಟಿರಲು ಬೇಸರವಾಗುವುದಿಲ್ಲ?" ಎಂದ.

"ಅದಕ್ಕೇನು ಮಾಡಲು ಸಾಧ್ಯ?" ಎಂದಳು ಸುನಂದೆ.

"ಒಬ್ಬ ತಮ್ಮನೋ ತಂಗಿಯೋ ಮನೆಯಲ್ಲಿರಬೇಕಿತ್ತು.."

"ಸಾಧ್ಯವೇ ಇಲ್ಲ.."

"ಸಾಧ್ಯವೇ ಇಲ್ಲವೆ? ಇಷ್ಟವಿಲ್ಲವೆ?" ಸುನಂದೆಯ ಮಲಗುವ ಮನೆಯ ಆಪ್ತಆವರಣದಲ್ಲಿ, ಮನೆ ನೋಡುವ ನೆವದಿಂದ ಬಂದ ತಾನು ಇಂಥ ಮಾತು ಆಡಬಹುದೇ ಬಾರದೇ ಎಂದು ಹರ್ಷದ್ ಯೋಚಿಸಲಿಲ್ಲ. ಆ ಮಾತಿಗೆ ಹಿನ್ನೆಲೆಯಾಗಿ ನಗುವಿನ ಅಲೆಯೊಂದು.

ಸುನಂದೆ ಉತ್ತರಿಸಲಿಲ್ಲ "ಚಹ ನಿನ್ನ ದಾರಿ ಕಾಯುತ್ತಿದೆ ಬಾ" ಎಂದಳು.... ಇಬ್ಬರೂ ಡ್ರಾಯಿಂಗ್ ರೂಮಿಗೆ ಮರಳಿ ಬಂದರು.

ಚಹ ಕುಡಿಯುತ್ತಿದ್ದಂತೆಯೇ ಸುನಂದೆ ಹರ್ಷದ್‌ನೊಡನೆ ಹೇಳಿದಳು,

"ಹರ್ಷದ್! ನಾನು ನಿನ್ನ ಹೆಂಡತಿಯನ್ನೊಮ್ಮೆ ನೋಡಬಯಸುತ್ತೇನೆ."

ಚೀಸ್ ತುಂಬಿದ್ದ ಸ್ಯಾಂಡ್‌ವಿಚ್ ಕಚ್ಚುತ್ತಿದ್ದ ಹರ್ಷದ್ "ಸ್ವಾಗತ" ಎಂದ,

"ಹೇಳು, ಯಾವಾಗ?"

"ಅಷ್ಟೇಕೆ ಅವಸರ ಸುನಂದಾ.. ಒಂದಲ್ಲ ಒಂದು ದಿನ ನೀನು ನೋಡುವಿ, ನಿನ್ನ ಆಫೀಸರ್ ಪದವಿ ಖಾಯಂ ಆದಾಗ ನೀನೇ ಪೆದ್ದರ್‌ರೋಡ್‌ಗೆ ಬರುವುದಿಲ್ಲವೆ!"

"ಆ ಮಾತು ಹಾಗಿರಲಿ ಹರ್ಷದ್.. ಅದಕ್ಕೂ ಮೊದಲೇ ನಾನು ನಿನ್ನ ಹೆಂಡತಿಯನ್ನೂ ಮಕ್ಕಳನ್ನೂ ನೋಡಬಯಸುತ್ತೇನೆ."

ಚಹ ಕುಡಿಯುತ್ತಿದ್ದ ಹರ್ಷದ್ ಸುನಂದೆಯನ್ನೇ ನೋಡುತ್ತಿದ್ದ—ತಾನು ಗುರುತಿಸಿದ ಪ್ರತಿಭೆಯನ್ನೆ.. ಆ ಪ್ರತಿಭೆ ತುಂಬಿದ ಕಣ್ಣುಗಳನ್ನೆ.. ಮಾಟವಾದ ಮುಖವನ್ನೆ.. ತುಂಬು ತಾರುಣ್ಯದ ದೇಹವನ್ನೆ..

ಎರಡು ನಿಮಿಷ ಹರ್ಷದ್ ಮಾತನಾಡಲಿಲ್ಲ. ಆಮೇಲೆ ಹೇಳಿದ: "ಹಾಗಾದರೆ ನಾಡಿದ್ದು ಭಾನುವಾರ ಬೆಳಿಗ್ಗೆ ನಮ್ಮ ಜೊತೆಗೇ ಲೊನಾವಳಕ್ಕೆ ಬಾ ಸುನಂದಾ.. ಸಂಜೆ ಮರಳೋಣ.. ನಿನ್ನ ಗಂಡನೂ ಮನೆಯಲ್ಲಿಲ್ಲವಲ್ಲ.. ಮುಂಬಯಿಯಿಂದ ದೂರಹೋಗಿ ಒಂದು ದಿನ ಜತೆಗೆ ಸಂತೋಷದಿಂದ ಕಳೆಯೋಣ.."

ಸುನಂದೆ ಉತ್ತರಿಸಲು ಒಂದು ಕ್ಷಣವೂ ಅನುಮಾನಿಸಲಿಲ್ಲ. "ಸರಿ, ಬರುತ್ತೇನೆ" ಎಂದಳು.

ಚಹ ತೀರಿಸಿದ ಮೇಲೆ, ಸುನಂದೆಯ ಒತ್ತಾಯದಿಂದಾಗಿ ಹುಸುವೆ 'ಜಾಜ್' ಸಂಗೀತ ಕೇಳಿಯಾದ ಮೇಲೆ, ಹರ್ಷದ್ ಹೊರಟು ನಿಂತ. ಮನೆ ಬಿಡುವಾಗ "ನಿನ್ನ ಗಂಡನನ್ನು ಕಾಣಲಾಗಲಿಲ್ಲ.. ಇನ್ನೊಮ್ಮೆ.. ಆದರೆ ಭಾನುವಾರ ಬೆಳಿಗ್ಗೆ ಕಾದಿರು ..ನಾಳೆ ಸಿಗುವಿಯಲ್ಲ" ಎಂದ.

ಸುನಂದೆ ಕೈಯಾಡಿಸಿ "ಒಪ್ಪಿದೆ" ಎಂದಳು.

ಹರ್ಷದ್ ಹೊರಟು ಹೋಗಿ ಅರ್ಧ ತಾಸಿನ ತನಕ ಸುನಂದೆ ಬಟ್ಟೆ ಕೂಡ ಬದಲಿಸದೆ ಮೌನವಾಗಿ ಡ್ರಾಯಿಂಗ್ ರೂಮಿನಲ್ಲೇ ಕುಳಿತಿದ್ದಳು, ಯೋಚಿಸುತ್ತ. ತನ್ನ ದುಡಿಮೆಯ ಜೀವನದ ಕಾರಣಪುರುಷ, ಮಹತ್ವಾಕಾಂಕ್ಷೆಗೆ ನೀರೆಟ್ಟ, ಪ್ರಗತಿಯ ದಾರಿಯಲ್ಲಿ ಎಳೆಯುವ ಸೂತ್ರಧಾರ — ಹರ್ಷದ್ ಶಹಾ.. ಆತನನ್ನು ಮನೆಗೆ ಕರೆಸಬೇಕು— ಸನ್ಮಾನ್ಯ ಅತಿಥಿಯಂತೆ ಸತ್ಕರಿಸಬೇಕು ಎಂಬ ಬಹು ದಿನದ ಬಯಕೆ ಈಗ ನೆರವೇರಿದ್ದುದು ಸಾಮಾನ್ಯ ರೀತಿಯಲ್ಲಿ— ತನ್ನ ಗಂಡ ತನ್ನ ಮಾತನ್ನು ಧಿಕ್ಕರಿಸಿ ಮಗುವನ್ನು ನೋಡಲು ಹೋದ ಸಂದರ್ಭದಲ್ಲಿ— ಆತ ಮನೆಯಲ್ಲಿರುವ ವೇಳೆಯಲ್ಲಿ.

'ಒಬ್ಬ ತಮ್ಮನೋ ತಂಗಿಯೋ ಮನೆಯಲ್ಲಿರಬೇಕಿತ್ತು.'

'ಸಾಧ್ಯವಿಲ್ಲ'

'ಸಾಧ್ಯವಿಲ್ಲವೆ—ಇಷ್ಟವಿಲ್ಲವೆ ?'

'ಸಾಧ್ಯವಿಲ್ಲವೆ? ಇಷ್ಟವಿಲ್ಲವೆ? ಸಾಧ್ಯವಿಲ್ಲವೆ? ಇಷ್ಟವಿಲ್ಲವೆ ?'

"ಸಾಧ್ಯವಿಲ್ಲ"

ತನಗರಿಯದಂತೆಯೇ ಸುನಂದೆ ಆ ಶಬ್ದವನ್ನು ಉಚ್ಚರಿಸಿದಾಗ, ಅಡಿಗೆಯ ಹುಡುಗ ಬಂದು "ಕರೆದಿರಾ ?" ಎಂದ. ಸುನಂದೆಗೆ ಒಮ್ಮೆಗೇ ನಾಚಿಕೆಯ ಅನುಭವ. "ಹೌದು" ಎನ್ನುವಂತೆ "ನೀರು ತಾ ಒಂದು ಗ್ಲಾಸ್" ಎಂದಳು.

ಸ್ನಾನ ತೀರಿಸಿದ ಸುನಂದೆ ಊಟದ ಮೇಜಿನ ಮುಂದೆ ಕುಳಿತಾಗ ರಾತ್ರಿಯ ಊಟ ಸೇರದಾಯಿತು, ತಟ್ಟೆಯನ್ನು ಹಾಗೆಯೇ ಬದಿಗೆ ಸರಿಸಿ ಬಂದು ಒಂದಿಷ್ಟು ಸಂಗೀತವಾದರೂ ಕೇಳೋಣವೆಂದು ತನ್ನ ನಚ್ಚಿನ ಶಾಸ್ತ್ರೀಯ ಪಾಶ್ಚಾತ್ಯ ಸಂಗೀತದ ಲಯಕ್ಕೆ ತನ್ನ ಮನಸ್ಸನ್ನು ಹೊಂದಿಸಿ ಆದರೆ ಇಂದಿನ ವಿಚಿತ್ರ ಮನಸ್ಥಿತಿಯಲ್ಲಿ ಆ ಸಂಗೀತದ ಲಯಕ್ಕೆ ತನ್ನ ಮನಸ್ಸನ್ನು ಹೊಂದಿಸಿ ಸಂತೋಷಪಡುವುದು ಸಾಧ್ಯವೇ ಇಲ್ಲ ಎಂದೆನಿಸಿತು. ನೆರೆಮನೆಗಾದರೂ ಹೋಗೋಣ ಎಂದು ಒಂದು ಕ್ಷಣ ತೋರಿತು. ಆದರೆ ಅಲ್ಲಿ ಮಾತು ಆರಂಭವಾಗುವುದು ಮಗು ದೀಲೀಪನ ಕುರಿತಾಗಿಯೇ ಎಂಬ ತಿಳಿವಳಿಕೆ ಬಂದು ಆಕೆ ಹೊರಡ

ಲಿಲ್ಲ-ಓದಲು ಕೂಡ ಸಾಧ್ಯವಾಗುವದಿಲ್ಲವೆಂದೆನಿಸಿದಾಗ ಸುನಂದೆ ಮಲಗಿಕೊಂಡಳು.

ಮಲಗಿದಾಗಲೂ ಸುನಂದೆಯ ಕಿವಿಯಲ್ಲಿ ಪ್ರತಿಧ್ವನಿಸುತ್ತಿದ್ದುದು ಎರಡೇ ಶಬ್ದಗಳು.

"ಸಾಧ್ಯವಿಲ್ಲವೆ ? ಇಷ್ಟವಿಲ್ಲವೆ ?"

"ಸಾಧ್ಯವಿಲ್ಲ . ."

ವಸಂತ ಚೀಟಿ ಬರೆದಿಟ್ಟು, ಟೆಲಿಫೋನ್ ಮೂಲಕ ಕೂಡ ತಿಳಿಸದೇನೇ ಮಗುವನ್ನು ನೋಡಲೆಂದು ಹೋಗಿದ್ದ. 'ನಮಗಿರುವುದು ಕೊನೆಯ ತನಕ ಒಂದೇ ಮಗು. ಎಷ್ಟು ಸಲ ಹೋದರೇನು ಕೇಡು? 'ಕೊನೆಯತನಕ ಒಂದೇ ಮಗು !'

ತನಗೆ ಇಷ್ಟವಿಲ್ಲದ್ದನ್ನು ಸಾಧ್ಯವೆನ್ನಿಸಲು ಬರೇ ಒಂದು ಶಸ್ತ್ರಕ್ರಿಯೆ ಸಾಧನವಾಗಿತ್ತು . . . ಆದರೆ ವಸಂತನಿಗೆ ಇಷ್ಟು ಕಾಲ ಕಳೆದಮೇಲೆ ತನ್ನನ್ನು ಅಣಕಿಸುವ ಧೈರ್ಯವೇಕೆ ಬಂತು ?

ಅಥವಾ ಆತ ಅಣಕಿಸಿದ್ದಾನೆಂಬುದು ಬರೇ ಭ್ರಮೆಯೆ !

ಯೋಚನೆ, ಕನಸು, ನಿದ್ರೆ, ಕನಸು, ಯೋಚನೆಗಳಲ್ಲಿ ಸುನಂದೆ ರಾತ್ರಿ ಕಳೆದಳು.

ಮರುದಿನ ಶನಿವಾರ. ಆಫೀಸಿನ ಕೆಲಸದ ಜತೆಗೆ ಹೊರಗೆ ನಾಲ್ಕಾರು ಕಡೆ ತಿರುಗಾಟವಿದ್ದುದರಿಂದ ಹರ್ಷದ್ ಸಿಕ್ಕಿದ್ದು ಮಧ್ಯಾಹ್ನ ಆಫೀಸು ಬಿಡುವ ಹೊತ್ತಿಗೇ. ನಾಳೆ ಬರುವಿಯಲ್ಲ ?" ಎಂದಷ್ಟೇ ಕೇಳಿದ್ದ . . " "ಹೌದು" ಎಂದಳು ಕೆಲಸದ ಅವಸರದಲ್ಲಿ.

ಭಾನುವಾರ ಬೆಳಿಗ್ಗೆ ಎಂಟು ಗಂಟೆಗೆ, ಸುನಂದೆ ಲೋನಾವಳಕ್ಕೆ ಹೊರಡಲು ಸಿದ್ಧಳಾಗಿ ನಿಂತಿದ್ದಳು . . . ಮನಸ್ಸಿನಲ್ಲಿ ಹರ್ಷದ್ ಜೊತೆಗೆ ಆತನ ಹೆಂಡತಿ ಮಕ್ಕಳನ್ನು ಕಾಣುವೆನೆಂಬ ಕುತೂಹಲ

ಹರ್ಷದ್ ಕಾರು ನಿಲ್ಲಿಸಿದಾಗ ಸುನಂದೆ ಗೇಟಿನ ಬಳಿಯೆ ಕಾದಿದ್ದಳು. ಆದರೆ ಆತ ಕಾರಿನ ಬಾಗಿಲು ತೆರೆದು ತನ್ನ ಪಕ್ಕದ ಜಾಗವನ್ನೆ ತೋರಿಸಿದಾಗ ಸುನಂದೆಗೆ ಆಶ್ಚರ್ಯವಾಯಿತು. ಹಿಂದಿನ ಸೀಟಿನಲ್ಲಿ ಮೂರು ಮಕ್ಕಳಿದ್ದರು.

ಆಶ್ಚರ್ಯದಿಂದಲೇ ಸುನಂದೆ "ನಿನ್ನ ಹೆಂಡತಿಯಲ್ಲಿ ಹರ್ಷದ್ ?" ಎಂದು ಕೇಳಿದಳು.

"ಅವಳು ಕೊನೆಯ ಗಳಿಗೆಯಲ್ಲಿ ಬರುವುದಿಲ್ಲವೆಂದಳು. ಸುನಂದಾ...ನೀನು ಹೊರಡು" ಎಂದ ಹರ್ಷದ್.

ಇಂಥ ಸನ್ನಿವೇಶವನ್ನೇ ಸುನಂದೆ ಕಲ್ಪಿಸಿಕೊಂಡಿರಲಿಲ್ಲ. ಎಂತಲೇ ಒಂದು ಕ್ಷಣ ಹೊರಡಬೇಕೋ ಬೇಡವೋ ಎಂಬ ಅನುಮಾನ ಬಂತು. ಆದರೆ ಹಿಂದಿನ ಸೀಟಿನಲ್ಲಿ ಮಾತಿಲ್ಲದೆ ಕುಳಿತಿದ್ದ ಮಕ್ಕಳನ್ನು ನೋಡಿದೊಡನೆಯೇ ಅವಳು ಬೇರೆ ಮಾತನಾಡದೆ ಹರ್ಷದ್‌ನ ಬಳಿಯೆ ಕುಳಿತಳು.

ಕಾರಿನೊಳಗೆ ಬಂದೊಡನೆಯೇ ಸುನಂದೆ ತಿರುಗಿ ಹಿಂದಿನ ಸೀಟಿನಲ್ಲಿದ್ದ ಮಕ್ಕಳನ್ನು ಮಾತನಾಡಿಸಲು ಪ್ರಯತ್ನಿಸಿದಳು . . 'ಮಂಗಲಾ. . ಪ್ರಶಾಂತ್ . . ರಾಜೇಶ್' ಎಂದು ಹರ್ಷದ್ ಹೆಸರಿನ ಪರಿಚಯ ಮಾಡಿಸಿಕೊಟ್ಟ . . ಹಿರಿಯಾಕೆಗೆ ಹತ್ತು ವರ್ಷ . . ಉಳಿದಿಬ್ಬರು ಗಂಡುಮಕ್ಕಳು. . .ವಯಸ್ಸು ಆರು ಮತ್ತು ನಾಲ್ಕು' ವರ್ಷ . . .

"ಬಾ, ರಾಜೇಶ್. . . ನೀನಿಲ್ಲಿ ಬಾ" ಎಂದು ಸುನಂದೆ ಇಂಗ್ಲೀಷಿನಲ್ಲಿ ಕರೆದಳು. ಆತ ಕುಳಿತಲ್ಲಿಂದ ಕದಲಲಿಲ್ಲ. ಹಿರಿಯಕ್ಕನನ್ನೆ ತಬ್ಬಿಕೊಂಡ.

"ನೀನು ಮಕ್ಕಳ ವಿಚಾರ ಯೋಚಿಸಬೇಡ ಸುನಂದಾ. . .ಮಂಗಲಾ ಇಬ್ಬರು ತಮ್ಮಂದಿರನ್ನೂ ಚೆನ್ನಾಗಿ ನೋಡಿಕೊಳ್ಳುತ್ತಾಳೆ. . ." ಎಂದು ಹರ್ಷದ್ ಹೇಳಿದ.

ಆದರೂ ಸುನಂದೆ ಮಂಗಲಾಳೊಡನೆ "ಪುಟ್ಟ ರಾಜೇಶನನ್ನು ಇಲ್ಲಿ ತಾ ಮಂಗಲಾ" ಎಂದಳು. ಆದರೆ ತಮ್ಮನನ್ನು ತಬ್ಬಿಕೊಂಡಿದ್ದ ಮಂಗಲೆಯ ಹಿಡಿತ ಬಿಗಿಯಾಯಿತು, ಆಕೆ ಮಾತನಾಡಲಿಲ್ಲ.

ಇಂಗ್ಲೀಷು, ಹಿಂದೀ ಎರಡು ಭಾಷೆಗಳಲ್ಲೂ ಮಾತನಾಡಿ ಉತ್ತರ ಬಾರದಿದ್ದುದರಿಂದ, ಸುನಂದೆ ಒಮ್ಮೆಯೂ ತಿರುಗಿನೋಡದೆ ಕಾರು ನಡೆಸುತ್ತಿದ್ದ ಹರ್ಷದ್‌ನೊಡನೆ ಹೇಳಿದಳು: "ನೀನೇ ಹೇಳು ಹರ್ಷದ್. . .ಇಷ್ಟು ದೊಡ್ಡ ಹುಡುಗಿ, ಇಷ್ಟು ಮುದ್ದಾದ ಹುಡುಗಿ ಏಕೆ ಮಾತನಾಡುವುದಿಲ್ಲ? ನಾನು ಅಪರಿಚಿತೆಯೆಂಬ ಸಂಕೋಚವೆ?"

ಹರ್ಷದ್ ನಿಧಾನವಾಗಿ ಉತ್ತರಿಸಿದ "ಇರಲಿ ಬಿಡು ಸುನಂದಾ. . .ಮಾತನಾಡದೆಯೇ ಮಕ್ಕಳನ್ನು ಆಡಿಸಲು ಅವಳಿಗೆ ತಿಳಿದಿದೆ. . ಅವಳನ್ನು ಮಕ್ಕಳೊಡನೆ ಆಡಗೊಡು."

ಕಾರು ಓಡುತ್ತಿತ್ತು. ದಾರಿ ಸಾಗುತ್ತಿತ್ತು. ರಾಜೇಶ್ ಮತ್ತು ಪ್ರಶಾಂತ್ ಇಬ್ಬರೂ ಹಿಂದಿನ ಸೀಟಿನಲ್ಲಿ ಗುಲ್ಲೆಬ್ಬಿಸಿದ್ದರು. . ಆಗೊಮ್ಮೆ ಈಗೊಮ್ಮೆ ತಂದೆಗೊಂದು ಪ್ರಶ್ನೆ. . .ಆದರೆ ಮಂಗಲಾ ಮಾತನಾಡುತ್ತಿರಲಿಲ್ಲ. . ಆಕೆ ನೆಟ್ಟ ನೋಟದಿಂದ ನೋಡುತ್ತಿದ್ದುದು ಸುನಂದೆಯನ್ನೇ. . ತಂದೆಯೊಡನೆ ಮಾತನಾಡುತ್ತಿದ್ದ ಅಪರಿಚಿತೆಯನ್ನೇ.

ದಾರಿಯಲ್ಲಿ ಚಹ ಕುಡಿಯಲೆಂದು ಕಾರು ನಿಲ್ಲಿಸಿದಾಗಲಾದರೂ ಆ ಮಕ್ಕಳೊಡನೆ ಆಡುವುದು ಸಾಧ್ಯವೇ ಎಂದು ಸುನಂದೆ ಪ್ರಯತ್ನಿಸಿದಳು. ಆದರೆ ರಾಜೇಶ ಅಕ್ಕನ ಹಿಡಿತದಿಂದ ತಪ್ಪಿಸಿಕೊಳ್ಳುವಂತೆಯೇ ಇರಲಿಲ್ಲ; ತಪ್ಪಿಸಿಕೊಳ್ಳುವ ಆಸಕ್ತಿಯೂ ಆತನಲ್ಲಿರಲಿಲ್ಲ.

ಮಧ್ಯಾಹ್ನ ಲೋನಾವಳ ತಲುಪಿದಾಗ ಹರ್ಷದ್ ನೇರವಾಗಿ ಹೋದುದು ತನ್ನ ಮುಂಬಯಿಯ ಪರಿಚಿತ ಮಿತ್ರರೊಬ್ಬರ ಬಂಗಲೆಗೆ. ಆತ ಲೋನಾವಳಕ್ಕೆ ಬಂದಾಗಲೆಲ್ಲ ನಿಲ್ಲುತ್ತಿದ್ದುದು ಅಲ್ಲೇ. ಕಾವಲುಗಾರನಿಂದ ಬೀಗದ ಕೈ ಪಡೆದು ವಿಶಾಲವಾದ ಆ ಮನೆಯೊಳಗೆ ಎಲ್ಲರೂ ಪ್ರವೇಶಿಸಿದರು. ಆದರೆ ಇಲ್ಲಾದರೂ ಮಂಗಲಾ ಮಾತನಾಡುವ ಸಲಿಗೆಯನ್ನು ತಂದುಕೊಳ್ಳಬಹುದು ಎಂದು ಆಶಿಸಿದ್ದ ಸುನಂದೆಗೆ ಕಾದಿದ್ದುದು ನಿರಾಸೆಯೆ. ಮೈ ಮುಟ್ಟಿದರೂ ಜಡೆಯೆಳೆದರೂ ಕೆನ್ನೆಯನ್ನು ಚಿವುಟಿದರೂ ಆಕೆಯ ಬಾಯಲ್ಲಿ ಮಾತಿಲ್ಲ. . ಆದರೆ ತಮ್ಮಂದಿರನ್ನು ಆಡಿಸುವ ವಿಧಾನ ಮಾತ್ರ ಆಕೆಗೆ ಗೊತ್ತು.

ಒಳಗಿನಿಂದ ಮೂರು ಕುರ್ಚಿಗಳನ್ನು ಹೊರಗೆ ತಂದಿರಿಸಿ ಹರ್ಷದ್ ತಾನು ಕುಳಿತು ಸುನಂದೆಯೊಡನೆ ಹೇಳಿದ:

"ಇನ್ನೇನು ಮಾಡೋಣ ಹೇಳು. . ತಿರುಗಾಟ ಸಂಜೆಗೆ. . . ಸಂಜೆಯತನಕ ಸಮಯ ಕಳೆಯಬೇಕಲ್ಲ. ನಿನ್ನೊಡನೆ ಬಂದ ತಪ್ಪಿಗೆ ಇಲ್ಲಿಯ ಬೇರೆ ಮಿತ್ರರನ್ನೂ ಕಾಣುವಂತಿಲ್ಲ. ಬಿಸಿಯಾದ ಪಾನೀಯ, ಹಿತವಾದ ಮಾತುಕತೆ. . ."

ಹರ್ಷದ್ ನಗುತ್ತಿದ್ದ. ಆದರೆ ಸುನಂದೆ ಈ ನಗು ಅರ್ಥವಾಗುತ್ತಿಲ್ಲವೆಂಬಂತೆ ಆತನನ್ನು ನೋಡಿದಳು.

"ನಾನೇ ಬರುವೆನೆಂದು ಹೇಳಿಲ್ಲ ಹರ್ಷದ್. ನಿನ್ನ ಹೆಂಡತಿಯೂ ಜತೆಗಿರಬಹುದೆಂದು, ನೀನು ಕೇಳಿದಾಗ ಒಪ್ಪಿದ್ದೆ. . . ನೀನು ನಿನ್ನ ಯಾವ ಮಿತ್ರರನ್ನೂ ಕಾಣಲು ನನ್ನ ಆಕ್ಷೇಪವೇನಿಲ್ಲ."

ಮಾತು ಒರಟಾಗುತ್ತಿದೆಯೆಂದು ಬಗೆದ ಹರ್ಷದ್.

"ಸಿಟ್ಟಾಗಬೇಡ ಸುನಂದಾ. . .ಒಂದು ದಿನ ಮುಂಬಯಿಯಿಂದ ದೂರವಿದ್ದು ಆರಾಮವಾಗಿ ಕಳೆಯಬೇಕೆಂದು ಇಲ್ಲಿಗೆ ಬಂದೆ. . . ನಿನ್ನ ಸಹವಾಸದಲ್ಲಿ ಈ ವಿಶ್ರಾಂತಿಯ ಸುಖ ಹೆಚ್ಚಾಗಬಹುದೆಂದು ಬಗೆದು ನಿನ್ನನ್ನು ಕರೆದ. ಈ ದಿನದ ಮಟ್ಟಿಗೆ ಬೇರೆ ಯಾರನ್ನೂ ಕಾಣುವ ಅಪೇಕ್ಷೆ ನನಗಿಲ್ಲ. . ."

ಈಗ. . . ಒಮ್ಮಿಂದೊಮ್ಮೆಗೇ, ಸುನಂದೆಗೆ ಹರ್ಷದ್‌ನ ಮಾತು ಅರ್ಥವಾಗತೊಡಗಿತ್ತು. ಕಾರಿನಲ್ಲಿ ಬರುತ್ತಿದ್ದಾಗ, ಆ ಸುಂದರ ಮಕ್ಕಳನ್ನೂ ತಂದೆಯನ್ನೂ ನೋಡಿದಾಗ, ತನ್ನ ಮೇಲಧಿಕಾರಿಯ ಹೆಂಡತಿಯನ್ನು ಕಾಣದಾದಾಗ ತನ್ನ ಅಪರಿಚಿತತೆ ಭೀಮಾಕಾರವನ್ನು ತಳೆಯುತ್ತಿದೆ—ಯೆಂದು ತನಗೆ ಭಾಸವಾಗಿತ್ತು. ಆದರೆ ಈಗ ಹರ್ಷದ್ ಅದನ್ನೆ ಕುಗ್ಗಿಸಿ, ಕುಗ್ಗಿಸಿ, ವೃತ್ತದ ರೇಖೆಯನ್ನು ಹೊಂದಿಸಲು ಪ್ರಯತ್ನಿಸುತ್ತಿದ್ದ.

'ನಿನ್ನ ಸಹವಾಸದಲ್ಲಿ ಈ ವಿಶ್ರಾಂತಿಯ ಸುಖ ಹೆಚ್ಚಾಗಬಹುದೆಂದು ಕರೆದೆ...

'ಹೆಚ್ಚಾಗಬಹುದೆಂದು ಕರೆದೆ'

ಬೆಳಕು ಚೆಲ್ಲಿತ್ತು ... ಹಿತವಾದ ಹವೆ... ... ಮನಸ್ಸನ್ನು ಅರಳಿಸುವ ನಿಸರ್ಗ. ಅವರಿದ್ದುದು ಪೂನಾ ರಸ್ತೆಗೆ ಹೊಂದಿಕೊಂಡೆ ಇದ್ದ ಎತ್ತರವಾದ ದಿನ್ನೆಯೊಂದರ ಮೇಲಿದ್ದ ವಿಶಾಲವಾದ ಮನೆಯಲ್ಲಿ ......ದೊಡ್ಡ ಪ್ರಾಕಾರದ ಆವರಣ......ತರೂರು ಹೂ ಗಿಡಗಳು... ಸುತ್ತ ನಗುವ ಪ್ರಕೃತಿ..

ಮಾತಾಡುತ್ತಿದ್ದುದು ಹರ್ಷದ್— ಮೇಲಧಿಕಾರಿ

"ಮೊದಲು ಊಟ ಹರ್ಷದ್...ಹಸಿವಾಗುತ್ತಿದೆ... ಆಮೇಲೆ ತುಸು ವಿಶ್ರಾಂತಿ. ಸಂಜೆ ಮಕ್ಕಳ ಜತೆಗೆ ಸುತ್ತಾಡಿಕೊಂಡು ಬರೋಣ...ಆ ಮೇಲೆ ಮರುಪ್ರಯಾಣ..."

ನಗುವಿನ ಮುಖವಾಡ ಧರಿಸಿ ಸುನಂದೆ ಮಾತನಾಡಿದಳು.

"ಊಟಕ್ಕೆ ಹೇಳಿ ಕಳುಹಿಸಿದ್ದೇನೆ...ಮಕ್ಕಳೂ ಒಳಗೆ ಆಡುತ್ತಿವೆ...ಇಲ್ಲೇ ಸುತ್ತಾಡಿಕೊಂಡು ಬರೋಣ, ಬಾ ಎಂದ ಹರ್ಷದ್.

ಮನೆಯಿಂದ ತಂದ ತಿಂಡಿ ತಿನ್ನುತ್ತ ಮಕ್ಕಳು ಒಳಗೆ ಆಡುತ್ತಿದ್ದುದು ನಿಜ. ಆದರೆ ಸುನಂದೆಗೆ ಆಗ ಹೊರಗೆ ಹೊರಡುವ ಇಚ್ಛೆಯಿರಲಿಲ್ಲ. "ಈಗ ಬೇಡ ಹರ್ಷದ್...ಈ ಹಿತವಾದ ಹವೆಗೆ ಹಾಯಾಗಿ ಕುಳಿತಿರುವುದೇ ಒಳ್ಳೆಯದೆಂದು ತೋರುತ್ತಿದೆ... ಊಟ ತೀರಿಸಿ ತುಸು ಹೊತ್ತಾದ ಮೇಲೆ...

"ನಿನ್ನಿಷ್ಟ" ಎಂದ ಹರ್ಷದ್ ತುಸು ಬೇಸರದಿಂದೆಂಬಂತೆ. ಊಟ ಬರುವ ತನಕ ಮಕ್ಕಳೊಡನೆ ಆಡಲೆಂದು ಒಳಗೆ ಹೋದ. ಸುನಂದೆ ಅವನನ್ನನುಸರಿದಳು...

ಕಾವಲಿನಾಳು ಊಟ ತಂದ ಮೇಲೆ, ಎಲ್ಲ ಊಟ ತೀರಿಸಿಯಾದ ಮೇಲೆ, ಮಕ್ಕಳನ್ನು ಒತ್ತಾಯದಿಂದ ಮಲಗಿಸಿಯಾದ ಮೇಲೆ, ಸುನಂದೆ ಪೋರ್ಟಿಕೋದಲ್ಲಿದ್ದ ಒಂದು ಆರಾಮ ಕುರ್ಚಿಯಲ್ಲಿ ಒರಗಿಕೊಂಡಳು.. "ಒಂದು ಸಣ್ಣ ನಿದ್ದೆ ಹರ್ಷದ್, ಆಮೇಲೆ ಹರಟೆ, ತಿರುಗಾಟ... ಎಂದಳು. "ಸರಿ, ಹಾಗಾದರೆ ಈ ಕಂಪೌಂಡಿನೊಳಗೆ ಪ್ರದಕ್ಷಿಣೆ ತೆಗೆಯುವುದಷ್ಟೆ ನನ್ನ ಕೆಲಸ—ನನ್ನ ಪ್ರೀತಿಯ ಹೂಗಳೆಲ್ಲ ಇಲ್ಲಿ ಅರಳಿವೆ" ಎಂದು ಹರ್ಷದ್ ಅಲ್ಲಿಂದೆದ್ದು ಹೋದ.

ಹಿತವಾದ ಹವೆ; ಶಾಂತ ವಾತಾವರಣ ಒರಗಿದ್ದ ಸುನಂದೆಗೆ ಜೊಂಪು ಹಿಡಿದಿತ್ತು. ಆಮೇಲೆ ಒಮ್ಮೆಗೇ ಎಚ್ಚರವಾದಂತಾಯಿತು. ಆಕೆ ಮೆಲ್ಲ ಮೆಲ್ಲ ಕಣ್ಣರಳಿಸಿದಾಗ, ಹರ್ಷದ್ ಇದಿರಿಗೇ ನಿಂತು ಆಕೆಯನ್ನೆ ದಿಟ್ಟಿಸಿ ನೋಡುತ್ತಿದ್ದ, ಕೈಯಲ್ಲಿ ಸಿಗರೇಟು...ಮೇಲೆ ಸುರುಳಿ ಸುರುಳಿಯಾಗಿ ಹರಡುತ್ತಿದ್ದುದು ಅದರ ಮಾದಕ ಹೊಗೆ.

"ಏಕೆ ಹಾಗೆ ದಿಟ್ಟಿಸಿ ನೋಡುತ್ತಿದ್ದೀಯ ಹರ್ಷದ್?" ಎಂದಳು ಸುನಂದೆ ಏಳುತ್ತಲೇ ಏಕೆಂದು ಗೊತ್ತಿದ್ದರೂ ಆ ಪ್ರಶ್ನೆ ಕೇಳಲೇಬೇಕಿತ್ತು.

ಎಚ್ಚರವಾಗುವ ಸಂಭವವಿದೆಯೆ ಎಂದು ದಿಟ್ಟಿಸಿ ನೋಡುತ್ತಿದ್ದೆ. ಬೇಸರವಾಯಿತೆ? ಹೊರಗೆ ಬರುವ ಇಚ್ಛೆಯಿದೆಯೆ? ಅಥವಾ ಮಲಗಿರುವುದರಲ್ಲಿ ನನ್ನ ಸಹವಾಸಕ್ಕಿಂತ ಹೆಚ್ಚಿನ ಸುಖವಿದೆಯೆ?"

ಪ್ರಶ್ನೆ ನೇರವಾಗಿತ್ತು. ..ದ್ದೂ ಅಪರಿಚಿತವಾಗಿತ್ತು...ಸುನಂದೆ ಎದ್ದಳು. "ಬಾ ಹೋಗೋಣ" ಎಂದು ಹರ್ಷದ್‌ನ್ನನುಸರಿಸಿದಳು.

ದಿನ್ನೆಯ ಮೇಲೆ ಬಂಗಲೆಯ ಸುತ್ತ ವಿಸ್ತಾರವಾದ ತೋಟ. ಅದರ ಅಂಚಿನಲ್ಲಿ ನಿಂತಾಗ ದೃಷ್ಟಿ ಹಾಯುವ ತನಕ ಕಾಣುವುದೆಲ್ಲ ಎತ್ತರದ ದಿನ್ನೆಗಳು—ಅವುಗಳ ತಪ್ಪಲಿನ ಇಳುಕಲು ಪ್ರದೇಶ... ನಡುನಡುವೆ ಸುಂದರವಾದ ಸಣ್ಣಸಣ್ಣ ಮನೆಗಳು, ಇಂಥ ಮನೆಗಳನ್ನು ಸೇರಲು ನಿರ್ಮಿಸಿದ್ದ. ಹಾವಿನ ಗತಿಯಂಥ ಬಳಸು ದಾರಿಗಳು.

ನಡೆದು ಇಬ್ಬರೂ ದಿನ್ನೆಯ ಅಂಚಿಗೆ ಬಂದಿದ್ದರು. ... ದಾರಿಯಲ್ಲಿದ್ದ ಅಂದದ ಕೆಂಪು ಗುಲಾಬಿಗಳೆಲ್ಲ ಸುನಂದೆಯ ಕೈ ಸೇರಿದ್ದವು. ಅವುಗಳನ್ನು ಮೂಸುತ್ತಲೇ ಮುಂದುವರಿಯುತ್ತಿದ್ದ ಆಕೆ ದೊಡ್ಡದೊಂದು ಮಾವಿನ ಮರದ ಕೆಳಗೆ ಬಂದಾಗ, ಬಳಿಯಲ್ಲಿದ್ದ ಹರ್ಷದ್ ಹೇಳಿದ "ಇಲ್ಲಿ ನಿಂತು ನೋಡು ಸುನಂದಾ... ಮುಂಬೈ ದೂರದ ದಿಗಂತ



ದಲ್ಲಿ ಕರಗಿ ಹೋಗಿದೆ. ಇಲ್ಲಿ ಕಾಣುವುದು ಸುತ್ತ ನಗುವ ನಿಸರ್ಗ... ಯಾವ ಸಂಕೋಚವೂ ಇರದೆ ನಗುವ ನಿಸರ್ಗ ... ಇಲ್ಲಿ ನಿನ್ನ ಆನಂದಕ್ಕೆ ನೀನೇ ಸಾಕ್ಷಿ. ನೀನು ಮತ್ತು ನಿಸರ್ಗ ಇವುಗಳ ಹೊರತಾದ ಮೂರನೆಯ ಭಾವನೆಗೇ ಇಲ್ಲಿ ಎಡೆಯಿಲ್ಲ."

ಸುನಂದೆ ಹರ್ಷದ್‌ನ ಬಳಿಯಲ್ಲಿ ನಡೆದುಬರುತ್ತಿದ್ದಳು. ತನ್ನ ಮೇಲಧಿಕಾರಿ ಕವಿಯಲ್ಲವೆಂಬುದು ಆಕೆಗೆ ಗೊತ್ತು. ತಾನು ತುಸು ದೂರವಿರದಿದ್ದರೆ ಇನ್ನೊಂದು ಕ್ಷಣದಲ್ಲಿ ಆತನ ಕೈ ತನ್ನನ್ನು ಬಳಸುವುದೆಂದೂ ಆಕೆಗೆ ಗೊತ್ತು. ಇಷ್ಟರ ತನಕ ಪ್ರತಿಭಟನೆಯ ವಿಚಾರವೇ ಆಕೆ ಯೋಚಿಸಿರಲಿಲ್ಲ—ನೋಡೋಣ, ಎಂದು. ಈಗ ಯೋಚಿಸಬೇಕಿತ್ತು.

"ಆದರೆ ಅಲ್ಲಲ್ಲಿ ಮನೆಗಳಿವೆ ಹರ್ಷದ್" ಎಂದಳು ಸುನಂದೆ ನಿಧಾನವಾಗಿಯೇ.

ಅಷ್ಟು ಹೇಳುವುದರೊಳಗೇ ಹರ್ಷದ್ ಸುನಂದೆಯ ಕೈ ಹಿಡಿದಿದ್ದ. ಒಂದೇ ಕ್ಷಣ. "ಮಂಗಲಾ" ಎಂದು ಸುನಂದೆ ಕರೆದಳು—ಇದೊಂದೇ ಶಬ್ದ ಯೋಗ್ಯ ಪ್ರತಿಭಟನೆಯೆಂಬಂತೆ.

ಹರ್ಷದ್ ಕೈ ಬಿಟ್ಟ. ಆದರೆ ಹತ್ತು ಹೆಜ್ಜೆ ಹಿಂದೆ ಮಂಗಲಾ ನಿಂತು ದುರುಗುಟ್ಟುವ ಕಣ್ಣುಗಳಿಂದ ತಂದೆಯನ್ನೆ ನೋಡುತ್ತಿದ್ದಳು.

"ಯಾಕೆ ಬಂದೆ?" ಎಂದು ಹರ್ಷದ್ ಮಗಳೊಡನೆ ಕೇಳಿದ. ಉತ್ತರವಿಲ್ಲ. "ಯಾಕೆ ಬಂದೆ ಮಂಗಲಾ...ಪ್ರಶಾಂತ ರಾಜೇಶ್ ಎಲ್ಲಿ?" ಎಂದು ಹರ್ಷದ್ ಪುನಃ ಕೇಳಿದ. ಈಗ ದನಿ ಬದಲಿಸಿತ್ತು.

ಮಂಗಲಾ ಮಾತನಾಡದೆ ಹಿಂದಿರುಗಿಹೋದಳು. ತನ್ನ ದನಿ ತನ್ನ ಮನಸ್ಸಿನ ಯಾವ ಭಾವನೆಯನ್ನೂ ಪ್ರಕಟಿಸಬಾರದು ಎಂಬಷ್ಟು ಎಚ್ಚರ ವಹಿಸಿ ಸುನಂದೆ ಹೇಳಿದಳು. "ಹೋಗೋಣ ಹರ್ಷದ್...ಮಕ್ಕಳು ಹೆದರಿಕೊಂಡಿರಬಹುದು. ಅವರೊಡನೆ ಅಕ್ಕಪಕ್ಕದ ಪ್ರದೇಶಗಳನ್ನೆಲ್ಲ ಸುತ್ತಾಡಿಕೊಂಡು ಬರೋಣ. ಆಮೇಲೆ ಮರುಪ್ರಯಾಣ ಇದ್ದೇ ಇದೆಯಲ್ಲ."

ಈಗ ಹರ್ಷದ್ ಸುನಂದೆಯನ್ನನುಸರಿಸಿದ. ಮಕ್ಕಳೆಲ್ಲ ಪೋರ್ಟಿಕೋದಲ್ಲಿದ್ದರು. ಹರ್ಷದ್ ಚೇತರಿಸಿಕೊಂಡಿದ್ದ...ಮಕ್ಕಳೊಡನೆ ಮಾತನಾಡಲಾರಂಭಿಸಿದ. ಎಲ್ಲ ಕಾರಿನಲ್ಲಿ ಸುತ್ತಾಡಲೆಂದು ಹೊರಟು ಅಕ್ಕಪಕ್ಕದ ದಿನ್ನೆ, ಜಲಾಶಯಗಳನ್ನು ನೋಡಿ, ನಿಲ್ಮನೆಯಲ್ಲಿ, ಚಹ ಉಪಹಾರ ತೀರಿಸಿ, ಸಾಕಷ್ಟು ಚಿಕ್ಕು, ನೇರಳೆಯ ಹಣ್ಣುಗಳನ್ನು ಕೊಂಡು ಮರಳುವ ವರೆಗೂ ಹರ್ಷದ್ ಉಲ್ಲಾಸದಿಂದಲೇ ಇದ್ದ... ತಮ್ಮ ನಡುವೆ ದೊಡ್ಡದೊಂದು ಗೋಡೆ ಬೆಳೆಯುತ್ತಿದೆಯೆಂದು ಸುನಂದೆಗೆ ಗೊತ್ತು. ಆದರದನ್ನು ಕೆಡವಲು ಪ್ರಯತ್ನಿಸುತ್ತೇನೆ ಎಂಬ ನಿಶ್ಚಯದಿಂದಲೇ ಆಕೆ ನಗುತ್ತಿದ್ದಳು.

ಮರಳಿ ಮುಂಬಯಿಗೆ ಹೊರಡುವ ಹೊತ್ತು ಸಮೀಪಿಸಿದಾಗ ಮಾತ್ರ, ಮಂಗಲಾ ಎಲ್ಲರಿಗಿಂತ ಮೊದಲೇ ಕಾರಿನತ್ತ ಧಾವಿಸಿದಳು. ಕಾರಿನ ಬಾಗಿಲು ತೆರೆದು ತನ್ನೆರಡು ಮಕ್ಕಳೊಡನೆ ಮುಂದಿನ ಸೀಟಿನಲ್ಲೇ ಕುಳಿತುಕೊಂಡಳು. ಹಿಂದಿನಿಂದ ಬರುತ್ತಿದ್ದ ಸುನಂದೆಗೆ ಇದರಿಂದ ತುಸು ಆಶ್ಚರ್ಯವಾದರೂ ಆಕೆ ತೋರಗೊಡಲಿಲ್ಲ. ಹರ್ಷದ್ ಕಾರಿನಲ್ಲಿ ಕುಳಿತವನು "ನೀನು ಹಿಂದೆ ಹೋಗು ಮಂಗಲಾ" ಎಂದ. ಮಂಗಲಾ ಕದಲಲಿಲ್ಲ. ಆಗ ಹತ್ತಿರಬಂದ ಸುನಂದೆ "ಇರಲಿ ಹರ್ಷದ್... ಅದರಲ್ಲೇನೀಗ... ನಾನೇ ಹಿಂದಿರುತ್ತೇನೆ" ಎಂದಳು. ಹರ್ಷದ್ ತುಸು ಸಿಟ್ಟಾಗಿಯೇ ಮಗಳೊಡನೆ "ಹೋಗು ಹಿಂದೆ" ಎಂದ. ಗುಜರಾತಿಯಲ್ಲೇ. ಮಂಗಲಾ ಕದಲಲಿಲ್ಲ, ಎರಡು ಮಕ್ಕಳೂ ಅವಳ ಪಕ್ಕದಲ್ಲಿ ಕುಳಿತಿದ್ದವು.

ಈಗ ಮಾತ್ರ ಹರ್ಷದ್ ಸಿಟ್ಟು ತಡೆಯಲಾರದೆ ಮಂಗಲಾಳ ಕೆನ್ನೆಗೆ ಒಂದೇಟು ಕೊಟ್ಟ. ಮಂಗಲಾ ಅಳಲಾರಂಭಿಸಿದಳು. ಆದರೆ ಅಲ್ಲಿಂದ ಕದಲಲಿಲ್ಲ.

"ಬೇಡ ಹರ್ಷದ್, ಬೇಡ... ನಿನಗೇನು ಹುಚ್ಚು ಹಿಡಿದಿದೆಯೇ?" ಎಂದು ಸುನಂದೆ ಹಿಂದಿನ ಸೀಟು ಸೇರಿಯಾಗಿತ್ತು. ಆದರೆ ಮಂಗಲಾ ಕೂಗುತ್ತಿದ್ದಾಗ ಆ ಮುದ್ದಾದ ಹುಡುಗಿಯ ಕಂಠದಿಂದ ಹೊರಟ ಕರ್ಕಶ ದನಿ ಕೇಳಿದಾಗ ಮಾತ್ರ ಸುನಂದೆಯ ಮನಸ್ಸಿನಲ್ಲಿ ಸಂಶಯವೊಂದು ಭೂತಾಕಾರವಾಗಿ ನಿಂತಿತು.

"ಏನಿದು ಹರ್ಷದ್... ಏಕೆ ಹಾಗೆ ಹೊಡೆದೆ? ಅವಳೇಕೆ ಹಾಗೆ ಕೂಗುತ್ತಿದ್ದಾಳೆ. ಅವಳೇಕೆ ಮಾತೇ ಆಡುವುದಿಲ್ಲ. ಅವಳೇಕೆ ಮಾತೇ ಆಡುವುದಿಲ್ಲ?"

ಕಾರು ಹೊರಡಿಸಿದ ಹರ್ಷದ್ ಎರಡು ನಿಮಿಷ ಮಾತನಾಡಲಿಲ್ಲ. ಆಮೇಲೆ,

"ಸುನಂದಾ... ಅವಳೇಕೆ ಮಾತನಾಡುವುದಿಲ್ಲ ಗೊತ್ತೇ? ಅವಳಿಗೆ ಮಾತನಾಡಲು ಸಾಧ್ಯವಾಗುವುದಿಲ್ಲವೆಂದು ಮಾತನಾಡುವುದಿಲ್ಲ. ಅವಳು ಈತನಕ ಮಾತನಾಡಿಯೇ ಇಲ್ಲ. ಅವಳು ಮೂಕಿ" ಎಂದು ಹೇಳಿ ಎಕ್ಸಲರೇಟರ್ ಒತ್ತಿದ.

"ಏನು?" ಎಂದ ಸುನಂದೆಯ ತಲೆ ತಿರುಗಲಾರಂಭಿಸಿತು.

ಕಾರು ಓಡುತ್ತಿತ್ತು.

ಮತ್ತೆ ಮಾತಿಲ್ಲ.

ಮೂವತ್ತು ನಲವತ್ತು ಮೈಲುಗಳ ವೇಗದಲ್ಲಿ ಘಟ್ಟದ ಸೆರಗಿನಲ್ಲಿ ಕಾರು ಓಡುತ್ತಿತ್ತು. "ಜೋಕೆ ಹರ್ಷದ್ ಜೋಕೆ. ಸ್ವಲ್ಪ ವೇಗ ಕಡಿಮೆ ಮಾಡು" ಎಂದು ಹೇಳಬೇಕೆಂದು ಹಲವು ಸಲ ಸುನಂದೆ ಯೋಚಿಸಿದುದಿದೆ. ಆದರೆ ಆ ಭೀತಿಯಲ್ಲಿ ತನ್ನ ಸಾವಿನ ಕುರಿತಾದ ಕಲ್ಪನೆಯೇ ಸುಳಿದಿರಲಿಲ್ಲ ಆಕೆ ಯೋಚಿಸುತ್ತಿದ್ದುದು ಮುಂದಿನ ಸೀಟಿನಲ್ಲಿದ್ದ ಮೂರು ಮಕ್ಕಳ ಕುರಿತಾಗಿಯೆ.

ಕಾರಿನ ವೇಗ ಗುರುತಿಸಿ ರಾಜೇಶ್ ಸಂತೋಷದಿಂದ ಕೂಗಿಕೊಳ್ಳುತ್ತಿದ್ದ.

ಕಲ್ಯಾಣ ತಲುಪುವತನಕವೂ ಪ್ರಯಾಣ ಹೆಚ್ಚಾಗಿ ಮೌನದ್ದೇ. ಆಮೇಲೆ ಮುಂಬಯಿಯ ಸಾಮೀಪ್ಯದ ಪರಿಚಯವಾಗತೊಡಗಿದಾಗ, ನಿಯೋನ್ ದೀಪಗಳು, ಎತ್ತರದ ಕಟ್ಟಡಗಳು, ರೇಲ್ವೆ ಹಾದಿಯಲ್ಲಿ ಸಾಗುತ್ತಿದ್ದ ಲೋಕಲ್ ಗಾಡಿಗಳು, ಇವುಗಳು ಕಾಣತೊಡಗಿದಾಗ ಹರ್ಷದ್ ಗಾಡಿಯ ವೇಗ ಕಡಿಮೆ ಮಾಡತೊಡಗಿದ.

ತನ್ನ ಪರಿಚಿತ ಜಗತ್ತು ಸಮೀಪಿಸಿದೆಯೆಂಬ ತಿಳಿವಳಿಕೆ ಮೂಡಿತ್ತು. ಸುನಂದೆಯೊಡನೆ ಮಾತನಾಡತೊಡಗಿದ.

"ಹೆದರಿಯೇನು ಸುನಂದಾ...ಸ್ಟಿಯರಿಂಗ್ ವೀಲ್‌ನ ಮೇಲಿನ ಕೈಚಳಕ ನೋಡಿದಿಯೇನು? ಏಕೆ ಮಾತಿಲ್ಲದೆಯೆ ಕುಳಿತುಬಿಟ್ಟೆ? ಲೋನಾವಳ ಬೇಸರ ತರಿಸಿತೇನು?"

"ಇಲ್ಲ...ಥ್ಯಾಂಕ್ಸ್" ಎಂದಳು ಸುನಂದೆ.

ಗೋಡೆ ತುಂಬ ಎತ್ತರಕ್ಕೆ ಬೆಳೆದಿತ್ತು...ಆದರದು ಪಾರದರ್ಶಕವೂ ಆಗಿತ್ತು.

ಕೆಡಲ್‌ರೋಡ್‌ನಲ್ಲಿ ಕಾರು ನಿಂತಾಗ ಸುನಂದೆ ಕಾರಿನಿಂದಿಳಿದಳು...ಮುಂದೆ ಹೋಗಿ ಬಗ್ಗಿ ರಾಜೇಶನನ್ನು ಮುತ್ತಿಟ್ಟಳು. ಪ್ರಶಾಂತನ ಕೆನ್ನೆಯನ್ನು ಚಿವುಟಿದಳು. ಮಂಗಲೆಯೊಡನೆ ಮಾತ್ರ ಮಾತನಾಡಲಿಲ್ಲ...ಬರೀ ನಕ್ಕಳಷ್ಟೇ.

"ಥ್ಯಾಂಕ್ಸ್. ಹರ್ಷದ್...ತುಂಬ ತೊಂದರೆ ಕೊಟ್ಟೆ." ಎಂದಳು.

ಹರ್ಷದ್ ಮಾತನಾಡಲಿಲ್ಲ. ಬರೇ ಕೈಯಾಡಿಸಿ ಕಾರು ಹೊರಡಿಸಿದ...

ಮನೆಗೆ ಮರಳಿ ಹಾಸಿಗೆಯ ಮೇಲೆ ಬಿದ್ದ ಸುನಂದೆ ಊಟಕ್ಕೆ ಕೂಡ ಏಳಲಿಲ್ಲ. ಯೋಚನೆ, ನಿದ್ರೆ, ಕನಸು ನಿದ್ರೆ, ಯೋಚನೆಗಳಲ್ಲೆ ಬೆಳಗಾಯಿತು.

ಬೆಳಿಗ್ಗೆ ಎದ್ದ ಸುನಂದೆ ಒಂದು ಸೂಟ್‌ಕೇಸ್ ತುಂಬ ಬಟ್ಟೆ ತುಂಬಿಸಿಕೊಂಡು ಪೂನಾದ ಗಾಡಿ ಹಿಡಿಯಲು ಟ್ಯಾಕ್ಸಿ ತರುವಂತೆ ಕೆಲಸದಾಳನ್ನು ಕಳುಹಿಸಿದ ಮೇಲೆ ವಸಂತನಿಗೆಂದು ಡ್ರೆಸ್ಸಿಂಗ್ ಮೇಜಿನ ಮೇಲಿರಿಸಿದ ಚೀಟಿಯಲ್ಲಿ ಬರೆದುದಿಷ್ಟೆ—

"ಬೇಬಿಯನ್ನು ನೋಡಲು ಹೋಗಿದ್ದೇನೆ. ಸಾಧ್ಯವಾದರೆ ನಾನು ಹಿಂದಿರುಗುವಾಗಲೇ ಅವನನ್ನು ಕರೆದು ತರುತ್ತೇನೆ. ನಮಗಿರುವುದು ಕೊನೆಯ ತನಕ ಒಂದೇ ಮಗು"



# ಮುಚ್ಚು ಬಾಗಿಲವನು

ಅದೇ ಆ ಲಲಾಟ, ಮುಂಗುರುಳು
ರಕ್ತರಂಜಿತ ತುಟಿಗಳು
ಕಲ್ಪನೆಯ ಸವಿಗನಸಿನಲಿ
ಕಾಲ ಕಳೆದ ಆ ದಿನಗಳು !

*

ಆ ಪ್ರೇಮ ಪ್ರೀತಿಯಲಿ
ನಸುಕನಸು ನೆನಸಿನಲಿ;
ಪಡೆದುದೇನೋ ನಾವು
ಪಡೆಯದಿಹುದೇನೋ!

*

ಬೀಡ ಸೆಳೆದಿಹ ನೆಲದಿ ಕೇಳು ಕೆಳದಿ
ಸಿರಿ ಬಸಂತನು ಮೆಲ್ಲನಡಿಯಿಟ್ಟ ಹಾಗೆ
ಆ ರಾತ್ರಿಯುದ್ದಕೂ ನಿನ್ನದೇ ನೆನಪು!
ಕನವರಿಕೆ ನಿನ್ನದೆಽ
ಎಳೆಗಾಳಿ ಸುಳಿದಿರುಗಿ ಬಳಿಸುಳಿದ ಹಾಗೆ!

*

ನಿನ್ನ ಕಂಗಳ ನೋಟ
ಮನದಿ ಮಾತನಾಡಿದೊಲು
ಜೇನಮಳೆ ಕರೆದಿಹವು
ಅಮೃತ ಕಳೆ ಸುರಿದಿಹವು !

*

ನಿನ್ನ ಶಿಷ್ಯೆಯಾಳಗಳಲಿ
ಸುರಿಯೆ ಅಮೃತವರುಷ!
ನಿನ್ನೆದೆಯ ಸಾಗರದಿ
ನೂರು ತೆರೆಗಳ ನೊರೆತ!

*

ಹಾಲ್ಜೇನು ಸವಿಸುಖವು
ನಿನ್ನ ಹೂದುಟಿಯ ಮಂದಹಾಸ
ನಿನ್ನಧರ ವರ್ಣದಲಿ
ಉಷೆಯ ಸುಖರಾಸ!

*

ಅತ್ತಿತ್ತ ಸುಳಿಯುತಿಹ
ಮುಂಗುರುಳುಗಳಲಿ
ನೂರು ನಾಗರ ಹೆಡೆಯ
ನಲಿದಾಟವು!

*

ಹೀಗೆ, ಶಿಷ್ಯೆಯ ಮುಚ್ಚಿ ಕಣ್ಣ ತೆರೆದೊಡನೆ
ಮೋಡಗಳ ಮರೆಯಿಂದ
ಹೊರಬಂದ ಚಂದಿರನ ಕಾಂತಿ!
ಸುತಲೂ ಹಬ್ಬಿ ಮಂದಾರಲೋಕ
ಸೃಜಿಸುವೊಲು
ನಿನ್ನ ಬೊಗಸೆಗಂಗಳ ದೀಪ್ತಿ!

*

.....................................
.................................

ಓ! ಸಾಕಿನ್ನು,
ತೆರೆಯದಿರು ಆ ಕವಾಟುಗಳ
ಮುಚ್ಚುಬಾಗಿಲವನು!

೨

ಓ! ಬಂದೆಯಾ ಮತ್ತೆ?
ಯಾಕಾರೆ ಬಂದೆ ನೀ ಹೇಳು ಮತ್ತೆ?
ಹೋಗಿಯೇ ಇರುವಾಗ ಹೋಗಿ ಬಿಡು
ಮತ್ತೊಮ್ಮೆ ಮಿಡಿಯದಿರು
ಈ ಬಗೆಯ ಮಿಡಿಯದಿರು!

*

ಸುತ್ತಿಸದಿರು;
ಹೀಗೆ ಹೊತ್ತಿಸದಿರು
ಮತ್ತೆ;
ಬೆಂಕಿಯಿಲ್ಲದ ಕಿಡಿ ಉಂಡೆಗಳನು!
ಕುದಿಯುತ್ತಲಿದೆ ಜೀವ
ಕುಡಿದು ನೋವ!

*

ಕಾಮಿಸಿ, ಕಲ್ಪಿಸಿ ಭಾವಿಸಿದೊಡೇನು
ಭಾವಿಸುವ ಭಾವನೆಗೂ
ಸಾವುದೇ ಲೇಸು!

*

.....................................
.................................

ಓ! ಸಾಕಿನ್ನು;
ತೆರೆಯದಿರು ಆ ಕವಾಟುಗಳ
ಮುಚ್ಚು ಬಾಗಿಲವನು!

೩

ನಸುಗನಸು ನಸುನೆನಸು
ನೀನೊಮ್ಮೆ ರೆಪ್ಪೆಗಳ
ಮುಚ್ಚಿ ತೆರೆದೊಡನೆ!
ಓ! ಮತ್ತೊಮ್ಮೆ
ತೆರೆಯದಿರು ಆ ಕವಾಟುಗಳ
ಮುಚ್ಚು ಬಾಗಿಲವನು!

*

೪

ಕತ್ತಲೆಯು ಸತ್ತು
ಚುಕ್ಕೆಗಳು ಕರಗಿ
ಬೆಳಗು ಬೀದಿವರಿಯಿತ್ತು!

—ಪಂಚಾಕ್ಷರಿ ಹಿರೇಮಠ

# ಶಾಂತಿ ನಿಲಯ



(ಏಕಾಂಕ ದೃಶ್ಯ)

ಶ್ರೀ ದಾಶರಥಿ ದೀಕ್ಷಿತ್
ಬೆಂಗಳೂರು

ಹೆಂಡತಿಯ ತವರುಮನೆಯ ಬಳಗದ ಕಾಟ ತಪ್ಪಿಸಿ-ಕೊಳ್ಳಲು ಅವನೇನೊ ಸತ್ಯಾಗ್ರಹ ಹೂಡಿ ವಿಜಯಿಯಾದ; ಕನಿಷ್ಟ ವಿಜಯದ ಭಾವನೆ ಮಾಡಿಕೊಂಡ. ಆದರೆ ಆ ಅತ್ತೆ-ಮಾವ ಇವನಿಗಿಂತ ಘಾಟಿ. ಅವರು ಉಪಯೋಗಿಸಿದ ಅಸ್ತ್ರವೇ ಬೇರೆ. ಪಾಪ, ಅಳಿಯನ 'ಶಾಂತಿನಿಲಯ' ಕನಸಾಗಿಯೇ ಉಳಿಯಿತು.

— ಪಾತ್ರಗಳು —

| | | |
|---|---|---|
| ೧. ಸುಂದರರಾಯ | ... | ಅಳಿಯ |
| ೨. ಮೋಹಿನಿ | .. | ಸುಂದರರಾಯನ ಹೆಂಡ್ತಿ |
| ೩. ಸದಾಶಿವ | .. | ಮನೆ ಆಳು |
| ೪. ನಾರಾಣಪ್ಪ | .. | ಸುಂದರರಾಯನ ಮಾವ |
| ೫. ಲಕ್ಷ್ಮೀದೇವಿ | .. | ಸುಂದರರಾಯನ ಅತ್ತೆ |
| ೬. ಕೋದಂಡರಾಮು | .. | ಸುಂದರರಾಯನ ಭಾವ ಮೈದುನ |

ಸೂಚನೆ— ಈ ನಾಟಕ ಅಭಿನಯಿಸಲು ಲೇಖಕರ ಅನುಮತಿ ಅಗತ್ಯ. ಅನುಮತಿ ದೊರಕುವುದು ಸುಲಭ. ರಾಯಲ್ಟಿ ಬಾಬತ್ತು ಕೇವಲ ೧೫ ರೂ. ಗಳನ್ನು ಸೌ. ದಮಯಂತಿ ದೀಕ್ಷಿತ್ ನಂ.49 (T) ಜಯನಗರ 4 ನೆ ಬ್ಲಾಕ್ ಬೆಂಗಳೂರು ೧೧ ಈ ವಿಳಾಸಕ್ಕೆ ಕಳಿಸಿದರೆ ಅನುಮತಿ ದೊರೆಯುತ್ತದೆ.

[ತೆರೆ ಎದ್ದಾಗ ಸುಂದರರಾಯನ ಮನೆಯ ಮುಂದಿನ ಹಾಲು ಕಾಣುತ್ತಿರುತ್ತದೆ. ಅಂಥಾ ಭಾರಿ ಶ್ರೀಮಂತಿಕೆಯ ಮನೆ ಅಲ್ಲದಿದ್ದರೂ ಒಟ್ಟಾರೆ ಹಳೆಯವೇ ಆದ ಸೋಫಾ—ಮೇಜು ಹಳೇ ರೆಡಿಯೋ, ಹೊಲಸಾದ ಬಾಗಿಲ ಪರದೆ– ಗೋಡೆಗೆ ಸೊಟ್ಟಾದ ಒಂದು ಫೋಟೋ–ಒಂದು ಬದಿಗೆ ಒಂದು ಬಟ್ಟೆ ಸ್ಟ್ಯಾಂಡು–ಹಿಂದೊಮ್ಮೆ ಎಲ್ಲ ಸೌಭಾಗ್ಯವೂ ಇದ್ದು ಯಾವ ಉತ್ಸಾಹವೂ ಇಲ್ಲದೆ ಹಳೇ ಸಾಮಾನುಗಳನ್ನು ಒರೆಸಿ ಇದ್ದಿದ್ದರಲ್ಲಿ ಚೊಕ್ಕಟವಾಗಿ ನೀಟಾಗಿ ಇರಿಸುವ ಉತ್ಸಾಹವೂ ಆ ಮನೆಯವರಿಗಿದ್ದಂತೆ ಇಲ್ಲ—ಎನ್ನುವ ವಾತಾವರಣ. ಸದಾಶಿವನು ಮೇಜಿನ ಹತ್ತಿರ ಕೈ ಕಟ್ಟಿಕೊಂಡು ನಿಂತಿದ್ದಾನೆ. ಅವನೂ ಸೋಮಾರಿಯೆ. ನೋಡಿದಾಗ ಪಕ್ಕನ ಈತ ನಿಂತೇ ನಿದ್ರಿಸುತ್ತಿರಬಹುದೆ ಎಂಬ ಭ್ರಮೆ ಹುಟ್ಟಿಸುವವನಂತೆ ಅಲುಗಾಡದೆ ನಿಂತಿದ್ದಾನೆ. ಸಾಧಾರಣ ಧೋತ್ರ, ಅರ್ಧತೋಳಿನ ಅಂಗಿ—ಚೌಕಳಿ ಹಾಕಿದ ರೇಷ್ಮೆ ಕೆಂಪುಪೇಟ. ತೆರೆ ಎದ್ದು ನಿಧಾನವಾಗಿ ಆ ಕೊಠಡಿಯ ಮೇಲೆಲ್ಲ ಬೆಳಕು ಚೆಲ್ಲಿದಾಗ ಒಂದು ನಿಮಿಷ ನಿಶ್ಶಬ್ದ—ಆ ಮೇಲೆ ಎದುರಿಗಿನ ಬಾಗಿಲ ಪರದೆ ಸರಿಸಿಕೊಂಡು ಸುಂದರರಾಯನ ಪ್ರವೇಶ. ಪಟ್ಟೆ ಪಟ್ಟೆ ಪೈಜಾಮುಶರಟು—ಕೆದರಿದ ಕ್ರಾಪಿನ ತಲೆ. ಆಕಳಿಸುತ್ತಾ ಕೈ ಉಜ್ಜುತ್ತಾ ಬರುವನು]

ಸುಂದರರಾಯ— (ರಂಗದ ನಡುವೆ ನಿಂತಾಗ ಆತನ ಮೇಲೇ ಹೆಚ್ಚು ಪ್ರಕಾಶವಾದ ದೀಪ ಒಂದು ಕೇಂದ್ರಿತವಾಗುವುದು. ಕೈ ಉಜ್ಜಿ ಆಕಳಿಸಿ ಚಿಟಿಕೆ ಹೊಡೆದು) ಲೇ—ಲೇ— ಇನ್ನೂ ಎದ್ದಿಲ್ಲವೊ?— ಅಥವಾ ಆಗಲೆ ಅವಳು ರಾಯರ ಗುಡಿಗೇ ಹೋಗಿ ಬಿಟ್ಲೊ— (ಸುತ್ತಲೂ ನೋಡಿ ಗೊಂಬೆಯಂತೆ ನಿಂತ ಸದಾಶಿವನ ಹತ್ತಿರ ಹೋಗಿ) ಏಯ್ ಸದಾಶಿವಾ—

ಸದಾಶಿವಾ—ಎಲಾ ಇವನ! ಇವನಿಗೇನು ಬಂತು ಬ್ಯಾನಿ— ನಿಂತ್ಕೊಂಡೇ ನಿದ್ದೆ ಮಾಡ್ತಿದ್ದಾನೋ ಏನೊ? (ಆಪಾದಮಸ್ತಕ ಬಾಗಿ ನೋಡಿ) ಹೌದು—ಅವಳು ಮನೇಲಿಲ್ಲ, ಇವನು ನಿಂತೇ ನಿದ್ರೆ ಮಾಡ್ತಿದ್ದಾನೆ (ಸಂತೋಷದ ಕಣ್ಣು ಅರಳಿಸಿ ಆನಂದದ ನಗೆಯನ್ನು ನಕ್ಕು) ಇದು ಇದು ನನಗೆ ಬೇಕಾದ್ದು ಈ ಶಾಂತತೆ- ಈ ನಿಶ್ಶಬ್ದ ಗೊಂದಲವಿಲ್ಲದ ಪ್ರಶಾಂತವಾದ ಮನೆಯಲ್ಲಿರಬೇಕೂಂತ ಆಶೆ ಪಟ್ಟಿದ್ದು ಇವತ್ತು ನೆರವೇರಿದೆ (ಆಕಳಿಸಿ ಒಮ್ಮೆಲೇ ಮೈಯಲ್ಲಿ ಲವಲವಿಕೆ ಮೂಡಿದಂತಾಗಿ) ಆಹಹ— ವೆರಿಗುಡ್ ವೆರಿಗುಡ್—(ಮೇಜಿನ ಮೇಲಿದ್ದ ಒಂದು ಬಾಚಣಿಗೆ ತೆಗೆದು ಕೆದರಿದ ಕ್ರಾಪನ್ನು ಬಾಚಿಕೊಳ್ಳುತ್ತಾ) ವರ್ಷಾನುವರ್ಷದಿಂದ ಪ್ರಯತ್ನಿಸಿದ್ದಕ್ಕೆ ಇವತ್ತು ಈ ನೆಮ್ಮದಿ ಸಿಕ್ಕಿದೆ— ಬುದ್ಧ ಬೋಧಿವೃಕ್ಷದ ಕೆಳಗೆ ಕೂತ್ಕೊಂಡು—ತಪಸ್ಸುಮಾಡಿದಾಗ ಸಿಕ್ತಲ್ಲ ಸಿದ್ಧಿ—ಆಗ ಆತನಿಗೆ ಇಂತಹ ನಿರ್ಮಲವಾದ ಹಗುರಾದ ಆನಂದವೇ ಆಗಿರಬೇಕು.—ನಿಜ ತಪಸ್ಸಿನ ಫಲ ದೊರಕಿದಾಗ ಬೇರೆ ಇನ್ನೆಂತಹ ಆನಂದ ಆಗಲಿಕ್ಕೆ ಸಾಧ್ಯ!!!...... ನನ್ನ ಪಾಡಿಗೆ ನಾನೇ ಗಟ್ಟಿಯಾಗಿ ಮಾತಾಡಿಕೊಳ್ತಾ ಇರೋದೇ ನನಗೆ ಸಿಕ್ಕಿರೋ ಸ್ವಾತಂತ್ರ್ಯದ ಚಿಹ್ನೆ— ನನ್ನ ಮನಸ್ಸಿನ ಪಾರಿವಾಳ ಸ್ವತಂತ್ರವಾಗಿ ಆಕಾಶದಲ್ಲಿ ಹಾರಾಡ್ತಿರೋದರ ಗುರ್ತು ... ಆಹಹ.... ಇದೇ ಮಹಾಸುದಿನಾ.... ಇದೇ ಮಹಾಸುದಿನ, ಸದಾಶಿವಾ ಏಯ್ ಸದಾಶಿವ (ಶಿಲಾಮೂರ್ತಿಯಂತೆ ಅಲುಗದೆ ನಿಂತ ಸದಾಶಿವನನ್ನು ಅಲಗಾಡಿಸುವನು) ಸದಾಶಿವಾ ನೀನೂ ಅದೇ ಧ್ಯಾನದಲ್ಲೇ ಇದ್ದೀ ಏನೊ?.... ಮಾತಾಡೋ ಮಹರಾಯ..ನೀನೂ ಈ ಸ್ವತಂತ್ರ ಯಜಮಾನನ ಆಳು ಆಗಿದ್ದೀ..ಅದೇ ಧ್ಯಾನದಲ್ಲೇ ಇದ್ದೀಯ ಹೌದಲ್ಲೊ?—ಅದಕ್ಕೆ ನಗಬೇಕೊ— ಹೀಗೆ ಕಲ್ಲಿನ ಹಾಗೆ ಗಾಬರಿಯಾಗಿ ನಿಲ್ಲಬಾರದು—ಏಳು—ಮನೆ ನನ್ನ ಮನಸ್ಸಿನಂತೆ ಶೃಂಗಾರವಾಗಲಿ—ಹಾಳು ಹಳೇ ಪರದೆಗಳನ್ನು ಕಿತ್ತಿ ಎಸೆದು....ಹೊಸ ಜೀವನ ಹೊಸ ಬೆಳಕು—ಹೊಸ ಬಾಳ್ವೆ ಪ್ರಾರಂಭಿಸಲಿಕ್ಕೆ ನಾಂದಿಯಾಗಿ




ಒಳ್ಳೇ ಚಹ-ಬಿಸ್ಕೀಟು ತಯಾರುಮಾಡಿ ರೆಡಿ ಮಾಡಿಬಿಡು.... ಅಂಥಂಗೇ ಅಮ್ಮಾ ಅವರು ಎಲ್ಲಿ ಹೋದ್ರು? ರಾಯರ ಗುಡಿಗೆ ಹೋಗ್ತಿನಿಂತ ಅಂತಿದ್ಲು ಅಲ್ಲಿಗೇ ಹೋದ್ಲೋ ಹೆಂಗೆ?....ಎಲಾ ಇವನ ನನ್ನ ಮಾತೇ ಕೇಳಲಿಲ್ಲೇನೊ ನನಗೇ.... ಏಯ್ ಸದಾಶಿವ.... ಏಯ್ ಸದಾಶಿವ ಯಾವ ಧ್ಯಾನದಲ್ಲಿದ್ದೀಯೋ....

( ಒಂದು ಕ್ಷಣ ಆತನಿಂದ ಯಾವ ಉತ್ತರವಾಗಲಿ ಚಲಿಸುವ ಸೂಚನೆಯಾಗಲಿ ಇಲ್ಲದಾದಾಗ )

....ಮೋಹಿನಿ ಮನೆಗೆ ಬರೋದರೊಳಗೆ ನಾನು ಡ್ರೆಸ್ ಮಾಡ್ಕೊಂಡು ತಯಾರಾಗ್ತೀನಿ... ದೀಪಾವಳಿ ಬಟ್ಟೆ ಕೊಂಡ್ಕೊಳ್ಳೊ ಪ್ರೊಗ್ರಾಂ ಇದೆಯಲ್ಲ.... ನಾನು ರೆಡಿ ಆಗೊದೊರಳಗೆ ನೀನು ಚಹಾ ರೆಡಿ ಮಾಡಬೇಕು ತಿಳೀತೋ....

( ಸೀಟಿ ಹೊಡೆಯುತ್ತಾ ಹಾಡುತ್ತಾ ಆನಂದದಿಂದ ಒಳಗೆ ಹೋಗುವನು. )

[ ಹೊರಗಡೆಯಿಂದ ಮೋಹಿನಿ ಪ್ರವೇಶ— ಧರ್ಮಾವರದ ಸೀರೆ—ಕೈಯಲ್ಲಿ ಪೂಜಾ ಸಾಮಗ್ರಿಗಳು—ಹೂವು ಪ್ರಸಾದಗಳನ್ನೊಳಗೊಂಡ ತಟ್ಟೆ ಕೈಲಿ ಹಿಡಿದು ಬರುವಳು. ಅಚ್ಚುಕಟ್ಟಾಗಿ ಹಾಕಿದ ತುರುಬಿನಲ್ಲಿ ದಂಡೆ ಹೂವು ಮುಂಡಿಸಿದೆ. ಆಧುನಿಕ ಅತಿ ಫ್ಯಾಷನ್ನಿನ ಹುಡುಗಿ ಮದುವೆಯಾದ ನಂತರ ಮಾಮೂಲಿ ಗೃಹಿಣಿಯಾಗಿ ಮಾರ್ಪಡುವ ಹಂತದಲ್ಲಿರುವಾಕೆ ಮೋಹಿನಿ. ]

**ಮೋಹಿನಿ**— ಸದಾಶಿವಾ—ಇವರಿನ್ನೂ ಎದ್ದಿಲ್ಲೇನೂ? (ಗಟ್ಟಿಯಾಗೇ ಹೇಳುವಳು).

**ಸದಾಶಿವ**— (ಶ್—ಎಂದು ಗಲಾಟೆ ಮಾಡಕೂಡದೆಂಬ ಸಂಜ್ಞೆ ಮಾಡುತ್ತಾ ಪಿಸುದನಿ ಗಟ್ಟಿಯಾಗೇ ಕೇಳುವಂತೆ) ಶಾಂತಿ-ಸಮಾಧಾನ-ಇವೆರಡೇ ಈ ಶಾಂತಿನಿಲಯ ಮನೇಲಿರಬೇಕಂತ್ರಮ್ಮಾ—ರಾಯರು ಸಿದ್ಧಿ ಸಿಕ್ಕ ಬುದ್ಧರಂತೆ ಈಗ....ಈಗಿನಿಂದ ಅವರು ಏಕ್‌ದಂ ಸ್ವತಂತ್ರರಾಗಿ ಬಿಟ್ಟಾರಂತೆ.. ಏನೇನೋ ಹೇಳಿ ಹೀಗೆ ಹೇಳುತ್ತಾ ಇದೇ ಈಗ ಒಳಗೆ ಹೋದರು—

**ಮೋಹಿನಿ**— ಅಂದ್ರೆ ಇಲ್ಲೀ ತನಕ ಅವರು ಪರತಂತ್ರರಾಗಿದ್ದರಂತೇನು.... ಬುದ್ಧರಾಗಲಿಕ್ಕೆ ಹೊರಟಾರಂತೇನು—ಅಂದ್ರೇ ಹೆಂಡ್ತಿ.. ಮನಿ ಎಲ್ಲಾ ಬಿಟ್ಟು ದೇಶ ಉದ್ಧಾರಕ್ಕನೆ ಹೊರಡ್ತಾರೊ ಹೆಂಗೆ!

**ಸದಾಶಿವ**—ಅದೆಲ್ಲಾ ಏನೂ ಹೇಳಲಿಲ್ಲರಮ್ಮ.... ನಿಮ್ಮ ಆಜ್ಞಾಪ್ರಕಾರ ನಾನು ಮಾತಾಡದೆ ಬಾಯಿಮುಚ್ಚಿ ಕಣ್ಣು ಬಿಟ್ಟು ಇದೇ ಮೇಜಿನ ಹತ್ರಾ ಕಲ್ಲು ನಿಂತ ಹಾಗೆ ನಿಂತಿದ್ದೆ—ಚಹ ರೆಡಿ ಮಾಡ್ಲಿಕ್ಕೆ ಹೇಳಿದ್ದರು. ಆದ್ರೂ ತಾವು ನಿನ್ನೆ ಅಪ್ಪಣೆ ಕೊಡಿಸಿದ್ರಲ್ಲ. ಹಂಗೇ ನಾನು ಅವರ ಕೂಡ ಏನೂ ಮಾತಾಡ್ಲಿಲ್ಲ—ಈಗ ನೀವು ಬಂದ ಮೇಲೇ ನಾನು ಮಾತಾಡಿದ್ದು.

**ಮೋಹಿನಿ**— (ಮೇಜಿನ ಮೇಲೆ ತಟ್ಟೆ ಇಡುತ್ತಾ ಹಿಂದೆ ಹಾರಾಡುತ್ತಿದ್ದ ಸೆರಗನ್ನು ಎಳೆದು ಸೊಂಟಕ್ಕೆ ಸುತ್ತಿಕೊಂಡು) ಚಹಾಮಾಡಿ ಫ್ಲಾಸ್ಕಿನಲ್ಲಿ ಹಾಕಿಟ್ಟಿದ್ದೆನಲ್ಲಾ

**ಸದಾಶಿವ**— ಅದು ನನಗೇನು ಗೊತ್ತಮ್ಮ

**ಮೋಹಿನಿ**— ನಿನ್ನ ತಲೆ ನಿನಗೆ ಗೊತ್ತಿರೊದೇನು.... ಪಾಪ ಚಹಾ ಅಂತ ಚಡಪಡಸ್ತಾ ಇದ್ರೇನೋ.. (ಎಂದು ಒಳಕ್ಕೆ ಲಗುಬಗೆಯಿಂದ ಹೋದಾಗ ಬಾಗಿಲಲ್ಲೇ ಸುಂದರರಾಯ ಪ್ಯಾಂಟು ಬೂಟು ಹಾಕಿಕೊಂಡು ಟೈ ಸರಿಮಾಡಿ ಕೊಳ್ಳುತ್ತಾ ಬರುವನು.)

**ಸುಂದರರಾಯ**— ಅಲ್ಲೆ ಮೋಹಿನಿ— ಹೋಗೊ ಮುಂದೆ ನನಗೆ ಹೇಳದೇನೇ ಹೋಗೋದೇನು? ಎಲ್ಲಿಗೆ ಹೋಗಿದ್ದಿ?

**ಮೋಹಿನಿ**— ( ಅವನೊಡನೆ ಮತ್ತೆ ರಂಗದ ನಡುವೆ ಬರುತ್ತಾ ) ಆರಾಂ ಮಲಗಿದ್ರಿ; ಇನ್ನು ಯಾಕೆ ನಿಮ್ಮ ಶಾಂತವಾದ ನಿದ್ರೆ ಕೆಡಿಸಬೇಕೂಂತ ಹಂಗೇ ಹೋದೆ.

**ಸುಂದರರಾಯ**— ಆಯ್ತು.... ಮತ್ತೆ ನೀನು ಹೋಗಿದ್ದಾದರೂ ಎಲ್ಲಿಗೆ ಅದನ್ನ ಹೇಳಲೇ ಇಲ್ಲಲ್ಲ!

**ಮೋಹಿನಿ**— ನೀವೇ ಹೇಳಿದ್ರಲ್ಲ— 'ಹರಿಕೆ ಮುಟ್ಟಿಸಿಬಿಡಬೇಕು ಹೋಗಿ ಬಾ' ಅಂತ

**ಸುಂದರರಾಯ**— ಹೌದಲ್ಲೆ...ನಾನು ಎದ್ದು ಬಂದವನೆ ಹಂಗೇ ಅಂದ್ಕೊಂಡೇ ಬಂದೆ—ಅಂಥಂಗೇ ಆ ಸದಾಶಿವನಿಗೇನು ಹೇಳಿದ್ದಿ ನೀನು?—ಅವ ನನ ಮಾತು ಕೇಳೋದೇ ಇಲ್ಲ...ಚಹಾ ಮಾಡಿಕೊಡೊ ಅಂತ ಹೇಳಿ ಎಷ್ಟು ಹೊತ್ತಾತು ನೋಡು, ಸಟೆದ ಗೊಂಬಿ ಹಂಗೆ ಹಂಗೇ ನಿಂತಾನೆ ಆಗಿನಿಂದ...

**ಮೋಹಿನಿ**— ಸದಾಶಿವಾ—ಒಳಗೆ ಚಹಾ ಫ್ಲಾಸ್ಕನೊಳಗಿದೆ ತಂದುಕೊಡು

(ಸದಾಶಿವನು ಸರಸರನೆ ಒಳಗೆ ಹೋಗುವನು.)

**ಸುಂದರರಾಯ**— ಅಲ್ಲೇ ಮೋಹಿನಿ—ನಾನು ಹೇಳಿದ್ದೆನಲ್ಲಾಂತ 'ಹರಿಕೆ' ಮುಟ್ಟಿಸಲಿಕ್ಕೆ ರಾಯರ ಗುಡಿಗೆ ಹೋಗಿದ್ದಿ ಅಂತ ಅಂದ್ರೆ, ನಾನು ಹೇಳಿದ್ದರ ಸಲುವಾಗೇ ಹೋದಿ—ನೀನೇ ಆಗಿದ್ದರೆ ಹೊಗ್ತೀರಲಿಲ್ಲ ಅಂತ ಅರ್ಥ ಮಾಡಿಕೊಳ್ಳಲೇನು?

**ಮೋಹಿನಿ**— ಆತು—ನಿಮಗೆ ಹೆಂಗ ಬೇಕೊ ಹಂಗೆ ಅರ್ಥ ಮಾಡಿಕೊಳ್ಳಿ ನಂದೇನು ನಡಿಬೇಕಾಗೇದೆ ಈ ಮನ್ಯಾಗೆ.

**ಸುಂದರರಾಯ**— ಸರಿ—ನೀನು ಮತ್ತೆ ಹಳೇ ರಾಗನೆ ತೆಗೆದು—ಮತ್ತೆ ಮೊದಲಿನ ಹಂಗೇ ಮನೀನ ಕುರುಕ್ಷೇತ್ರ ಮಾಡೋ ಅಂಥ ಮಾತಾಡಿದರೆ ನನಗೆ ಸರಿಹೋಗೋದಿಲ್ಲ ನೋಡು (ಸಿಟ್ಟಿನಿಂದಲೇ ಹೇಳುವನು.)

**ಮೋಹಿನಿ**— ನಾನು ಅಂದದ್ದಾರ ಏನೀಗ? ಒಮ್ಮೆಗೆ ಸಿಟ್ಟಿಗೆದ್ದೇ ನನ್ನ ಸಂಸಾರ ಹಿಂಗೆ ಮಾಡಿದಿರಿ.

**ಸುಂದರರಾಯ**— ಹಿಂಗೆ ಅಂದ್ರೆ—ಸದ್ಯಕ್ಕೆ ಈಗ ಹಾಲಿ ಈಗಿನ ಹಂಗೆ ಶಾಂತವಾಗಿರೋ ಸಂಸಾರ ಬ್ಯಾಡ—ಮೊದಲಿತ್ತಲ್ಲ ನಿನ್ನ ಕಾಗಿ ಬಳಗದ ಸಂತೆ ಅಂಥ ಸಂಸಾರ ಹಂಗೇ ಆಗಬೇಕೂಂತ ಹೇಳ್ತಿದ್ದೀ ಏನು?

**ಮೋಹಿನಿ**— ಮತ್ತೆ ಹಳೇಸುದ್ದಿ ತೆಗಿಬ್ಯಾಡಿ— ಸಿಟ್ಟಾಗಿ ಮಾತಾಡೊ ವಿಷಯಕ್ಕೆ ನಾನು ಅಂದದ್ದು.

**ಸುಂದರರಾಯ**— ಸಿಟ್ಟು ಬರೋ ಅಂಥ ಮಾತಾಡಿ—ನನಗೇ ಸಿಟ್ಟಾಗಿ ಮಾತಾಡಬ್ಯಾಡಾಂತ ಹೇಳು. ಭೇಷ್—ಇದೂ ಒಂದು ನಮೂನಿ ಮೋಹಿನಿ ಅಸ್ತ್ರನೆ.

[ ಸದಾಶಿವ ಎರಡು ಕಪ್ಪುಬಸಿ ಒಳಗೆ ಚಹಾ ತರುವನು ]

**ಸದಾಶಿವ**— ಇಕ್ಕೊ ಚಹಾ ರೆಡಿ ಅಮ್ಮಾ ಅವರೆ.

**ಮೋಹಿನಿ**— ಕೊಡು ಅವರಿಗೊಂದು ಕಪ್ಪು—ಇಲ್ಲಿ ಒಂದು ಕಪ್ಪು ತಾ—

( ಅವನು ಹಾಗೇ ಮಾಡುವನು )



ಸುಂದರರಾಯ— (ಸೀರೆ ಒಂದು ಚೆಹಾ ಹೀರುತ್ತಾ) ಮೋಹಿನೀ ಮತ್ತೆ ನೀನೂ ರೆಡಿ ಆಗು. ಬೇಗ ಪೇಟೆ ಕಡಿ ಹೋಗಿ ದೀಪಾವಳಿ ಬಟ್ಟೆ ಬರೆ ತಂದು ಬಿಡೋಣಂತೆ.

ಮೋಹಿನಿ— (ಚಹ ಕುಡಿದು ಮೇಜಿನ ಮೇಲೆ ಕಪ್ಪು ಬಸಿ ಇಡುತ್ತಾ) ನೀವೇ ಹೋಗಿ ತಂದುಬಿಡ್ರಿ ಮತ್ತೆ ನಾನ್ಯಾಕೆ?

ಸುಂದರರಾಯ— ಏ! ಇದೇನು ಹಿಂಗಂತಿಯಲ್ಲ... ದೀಪಾವಳಿ ಹಬ್ಬದ ಉತ್ಸಾಹ ನಿನಗಿಂತ ನನಗೇ ಹೆಚ್ಚು ಇರೋ ಹಂಗೆ ಮಾತಾಡ್ತಿಯಲ್ಲ...ಸಹಜ ನಾವು ಗಂಡಸರು ದುಡ್ಡು ಕರ್ಚು ಆಗ್ತದಲ್ಲಾ ಅನ್ನೊ ಸಂಕಟದಿಂದ 'ಇವತ್ತು ಪ್ಯಾಟಿಗೆ ಹೋಗೋದು ಬ್ಯಾಡ' 'ನಾಳೆ ಹೋಗೋಣಂತೆ' ಅಂತ ಅಂತಿರಬೇಕೂ...ಅದು ಬಿಟ್ಟು ನೀನೇ 'ಬ್ಯಾಡಾ—ನಾಳೆ—ನೀವೇ ಹೋಗ್ರಿ, ಅಂತ ರಾಗ ಎಳೆದರೆ ಹಂಗೇ.

ಮೋಹಿನಿ— ನನಗೆ ಉತ್ಸಾಹಾನೆ ಇಲ್ಲ ಕಣ್ರಿ..

ಸದಾಶಿವ— (ಇದ್ದಕ್ಕಿದ್ದಂತೆ ಗಟ್ಟಿಯಾಗಿ ನಗುವನು.)

ಸುಂದರರಾಯ— ಸದಾಶಿವಾ ಷಟಪ್—ಹಿಂಗೆ ನೀನು ಹುಚ್ಚಾಟದ ನಗೆ ನಕ್ಕದ್ದಾದರೆ ನೀನೂ ಮನಿ ಬಿಟ್ಟು ಹೊರಟುಹೋಗಬೇಕಾಗ್ತದೆ.

(ಸದಾಶಿವ ಅಲೆಅಲೆಯಾದ ನಗುವನ್ನು ಗಕ್ಕನೆ ನಿಲ್ಲಿಸುವನು.)

ಮೋಹಿನಿ— ಸದಾಶಿವ ನಗೊ—ನಗೋ—ನಮ್ಮನ್ನ ನೋಡಿ ನಗ್ತೀ ಏನು? ನಗು.

ಸದಾಶಿವ— ಬಾಯೇರೇ ನಿಮ್ಮ ತಂದೆಯವರು ನಿನ್ನೆ ಮುಂಜಾನೆ ಈ ಮನೆ ಬಿಟ್ಟು ಹೊರಡುವಾಗ "ಅರಮನೆಯಿಂದ ಅರಣ್ಯವಾಸಕ್ಕೆ ಹೊರಟ ನಳ ಮಹಾರಾಜನ ಗತಿ ಆತು ನನಗೆ"—ಅಂತ ಪಂಚೆ ತುದಿಯಿಂದ ಕಣ್ಣೀರು ಒರಸಿ ಜಟಕ ಹತ್ತಿದರಲ್ಲ ಆ ದೃಶ್ಯ ನೆನಪಿಗೆ ಬಂತು—ನಗು ಬಂತು ಅಷ್ಟೆರಿ.

ಸುಂದರರಾಯ— (ಸದಾಶಿವನು ನಕ್ಕಂತೆ ಗಟ್ಟಿಯಾಗಿ ನಗುವನು)

ಮೋಹಿನಿ— ನಗರೀ—ನನ್ನ ತೌರುಮನಿ ಅವರನ್ನ ಮನಿಬಿಟ್ಟು ಹೊರಗ ಹಾಕಿದ ಸಂತೋಷಕ್ಕೆ ಕೇ ಕೇ ಹಾಕಿ ನಗ್ರಿ

ಸದಾಶಿವ— ಒಮ್ಮೆ ಹಿಂಗೆ ನಗಿ ಬಂದ್ರೆ— ಮತ್ತೊಮ್ಮೆ ಯಜಮಾನಪ್ಪನವರನ್ನ ನೆನಿಸಿಕೊಂಡ್ರೆ ಬಲು ಬೇಜಾರಾಗ್ತದ ತಾಯಿ—ಅದೇನು ಇಷ್ಟೀಟು ಚಟ ತೆಗೆದವ್ವ—ಸ್ವಾಮೇರು ಹಟ ಹಿಡಿದು ಹಿಂಗೆ ಮಾಡದೆ ಇದ್ದಿದ್ರೆ ರಾಜ್ಯಾನೆ ಸೋತ ನಳಮಹಾರಾಯನ ಹಂಗೇ ಈ ಬಾಡಿಗಿ ಮನಿನೇ ಆಡಿ ಸೋತುಬಿಡ್ತಿದ್ರು.

ಮೋಹಿನಿ— ಸದಾಶಿವ—ನಿನ್ನದು ಹಟ ಭಾಳ ಆತು. ನಾಲಿಗಿ ಬಿಗಿಹಿಡಿ—ನನ್ನ ತೌರುಮನಿ ಕಡಿ ಆಳೇ ಆಗಿ ನೀನು ಉಂಡಮನೀಗೆ ಎರಡು ಬಗೆಯೋ ಹಂಗೆ ಮಾತಾಡಿದರೆ—ಈಗಿಂದೀಗೆ ನಿನ್ನ ನೌಕರಿಯಿಂದ ಡಿಸ್‌ಮಿಸ್ ಮಾಡಬೇಕಾದೀತು.

ಸುಂದರರಾಯ— ಸದಾಶಿವನ್ನ ಯಾರೂ ಡಿಸ್‌ಮಿಸ್ ಮಾಡೋಹಂಗಿಲ್ಲ. ಅಷ್ಟು ಪಳಗಿ ಹೋಗ್ಯಾನ ಈ ಮನ್ಯಾಗ. ಮೋಹಿನೀ ನೀನು ಬರೋ ಆಕಿ ಹೌದೋ ಅಲ್ಲೊ ?

ಮೋಹಿನಿ— ಅಲ್ರೀ ವರ್ಷಾನುಗಟ್ಲೆ ತುಂಬಿದ ಮನಿ ಹಂಗ ಅಪ್ಪ—ಅವ್ವ—ತಮ್ಮ—ತಮ್ಮನ ಹೆಂಡ್ತಿ—ಎಂಥಾ ಗಜಬಿಜಿ ಅಂತ ಇತ್ತು—ಒಮ್ಮೆಲೆ ಭಾಳ ಭಣ ಭಣ ಮಾಡಿಬಿಟ್ರಿ....

ಸುಂದರರಾಯ— ಮೋಹಿನೀ ನೀನು ನನ್ನ ಪ್ರಶ್ನೆಗೆ ಉತ್ತರ ಕೊಡದೆ ಮತ್ತೆ ನಿನ್ನ ತೌರುಮನಿ ಸಲುವಾಗಿ ಒಳಗದ ಸುತ್ತ ಕವ ಕವ ಹೊಡಕೊಂಡ್ರೆ ನಾನು ಮತ್ತೆ ಸತ್ಯಾಗ್ರಹಾನೇ ಹೂಡೋವ. ಅಲ್ಲೇ—ನಮ್ಮ ಮದುವಿ ಆದ ಲಾಗಾಯ್ತು, ಬೇತಾಳದ ಹಂಗೆ ಮನಿ ಸೇರಿದ ಮಾವ, ಅತ್ತೆ— ನಮ್ಮ ಪಾಡಿಗೆ ನಾವು ಹೆಂಗೆ ಬೇಕಂದ್ರೆ ಹಂಗೆ ಹಾಯಾಗಿ ಇರ್ಲಿಕ್ಕೆ ಬಿಡ್ತಿರಲಿಲ್ಲ.. ಈಗ ನಿನಗೇನು ಕಡಿಮಿ ಆಗೇದೆ?

ಸದಾಶಿವ— (ಮತ್ತೊಮ್ಮೆ ಮುಗಿಲು ಮುಟ್ಟುವಂತೆ ಗಹಗಹಿಸಿ ಉಕ್ಕಿ ಬಂದ ನಗುವನ್ನು ತಡೆತಡೆದು ನಗುವನು)

ಮೋಹಿನಿ— ಇವನಿಗೆ ತಲೀನೆ ಕೆಟ್ಟುಹೋಗೇದ—ಇದು ಖಂಡಿತ.

ಸುಂದರರಾಯ— ನಿಮ್ಮ ತೌರುಮನಿಕಡಿ ಆಳು ಅಂದಮ್ಯಾಲೆ ತಲಿ ಕೆಟ್ಟೆ ಹೋಗೇದೇಂತ ಪ್ರತ್ಯೇಕ ಹೇಳಲೇಬೇಕಾಗಿಲ್ಲ. ಸದಾಶಿವಾ ಈಗ ಯಾಕಪ್ಪ ಮತ್ತೆ ನಿನ್ನ ಈ ಹಾಳು ನಗೂ... ಅಂ...

ಸದಾಶಿವ— ಅಲ್ಲಾ...ಸ್ವಾಮೇರೂ.. ಅದೇ ನಮ್ಮ ಮೋಹಿನಿ ಅಮ್ಮ ಅವರ ಅಪ್ಪಂದ್ರು ಒಂದು ಮಾತು ಅಂತಿದ್ರೂ. ಅದು ನೆನಪಿಗೆ ಬಂತೂ ನಕ್ಕೆ ಅಷ್ಟೆ.

ಸುಂದರರಾಯ— ಅದೆಂಥಾ ಮಾತಪ್ಪಾ—

ಸದಾಶಿವ— ಮನಿವಳಗ (ನಗುವನು) ಮತ್ತೆ..ವಸ್ತ್ರ ಪಡವಿ..ಮತ್ತೆ.. (ನಗುವನು)

[ಮಾತು ಸಾಗದೆ ಮಧ್ಯೆಮಧ್ಯೆ ನಗುವೇ ಪ್ರಾಧಾನ್ಯವಾಗಿ ಅವನು ಹೇಳುತ್ತಿರುವುದೇನೆಂಬುದೇ ತಿಳಿಯದಾಗುವುದು]

ಸುಂದರರಾಯ— ಸಾಕು-ಸಾಕೋ.. ಸಾಕು. ನೀನು ನಕ್ಕು ಮಾತಾಡು- ಇಲ್ಲದಿದ್ರೆ ಮಾತಾಡಿ ನಗು.. ಎರಡೂ ಒಟ್ಟಿಗೇ ಆದ್ರೆ ಆಡಿದ ಮಾತು ಏನೂ ಅಂಬೋದು ತಿಳಿಬೇಕೋ ಬ್ಯಾಡೋ.

ಮೋಹಿನಿ—ನಾನು ಏನು ಹೇಳಿದ್ದೆ ಸದಾಶಿವಾ..ರಾಯರ ಗುಡಿಗೆ ಹೋಗಿ ಬರೋತನಕ ಮಾತಾಡಬ್ಯಾಡಾಂತ ನಾನು ಹೇಳಿದ್ದು..ಮುಂದೆ ನೀನು ಮಾತೇ ಆಡಬ್ಯಾಡ ಅಂತ ಹೇಳಬೇಕಾದೀತು..ಈ ಮನಿವಳಗೆ ನಿನಗೆ ಬಹಳ ಸ್ವಾತಂತ್ರ್ಯ ಕೊಟ್ಟದ್ದು ನಿನ್ನ ಹಿಂಗೆ ಕೊಬ್ಬಿಸಿದೆ.

ಸುಂದರರಾಯ— ಯಾಕೆ ಅವನ ಬಾಯಿ ಬಡಿತೀಯೇ..ಏನೋ ಸ್ವಾರಸ್ಯ ವಿಷಯ ಹೇಳ್ಲಿಕ್ಕೆ ಹೊರಟಾನೆ... ಯಾಕೆ ಅವನ ಬಾಯಿ ಬಡೀತೀ.... ಹೇಳೋ ಸದಾಶಿವ.. ಆದ್ರೆ ನೀನು ನಗತಾ ಮಾತಾಡಬ್ಯಾಡ ಮಹಾರಾಯಾ.. ಹಂಗೆ ಹೇಳು.

ಸದಾಶಿವ— [ಅಪರಾಧಿಯಂತೆ ಬಾಯಿ ಬಿಡದೇ ಬೆದರುತ್ತಾ ಮಾತಾಡುವುದೋ ಬೇಡೋ ಎಂದು ಬಿರಿ ಬಿರಿ ಕಣ್ಣುಬಿಡುತ್ತಾ ಒಮ್ಮೆ ಮೋಹಿನಿಯನ್ನೂ ಮತ್ತೊಮ್ಮೆ ಸುಂದರರಾಯನನ್ನೂ ನೋಡುತ್ತಾ ನಿಲ್ಲುವನು]

ಮೋಹಿನಿ— ಯೋಗ್ಯ ಆಳು ಅಂದ್ರೆ ಇವನೇ ನೋಡಿ.. ಆದ್ರೆ ಒಮ್ಮೊಮ್ಮೆ ಮಾಮೂಲಿ ತಲೆ ಹರಟೆ ತೆಗೆದು ಬಿಡ್ತಾನೆ. ಎಂಥಾ ಚೆಂದಾಗಿ ಬಾಯಿ ಮುಚ್ಚಿ ನಿಂತಾನೆ ನೋಡ್ರಿ..!

ಸುಂದರರಾಯ— ಈಗ...... ಮೋಹಿನೀ ಅವನು ಯಾಕೆ ನಿಮ್ಮ ಅಪ್ಪ ಆಡಿದ ಮಾತು ನೆನಸಿಕೊಂಡು ನಕ್ಕ ? ಆ ಮಾತು ಯಾವುದು? ಅಂಥಾ ನಗಿ ಬರೋ ಅಂಥ ಮಾತನ್ನ ನಿನ್ನ ತೌರುಮನಿಯವರು ಆಡಲಿಕ್ಕೆ ಕಲಿತಿದ್ದಾರೆಯೆ? ಅದಷ್ಟು ಸದಾಶಿವನಿಗೆ ನೀನು ಹೇಳು ಅಂತ ಆಜ್ಞಾ ಮಾಡಿ ಹೇಳಿಸಿದೀ. ನಾನು ಈ ಮನಿಯೊಳಗೆ ಇರೋವ— ಇಲ್ಲಾಂದ್ರೆ ಹಿಂದೆ ಹುಚ್ಚರ ಸಂತಿ ಹಂಗೆ ಇದ್ದ ಈ ಮನೀನ ಪೂರ್ಣ 'ಶಾಂತಿನಿಲಯ' ಈಗ ಆಗೇದಲ್ಲ.. ಹಂಗೆ ಆಗೋಹಂಗೆ ಸಂಪು ಹೂಡಿ ಹೋಟ್ಲೊಳಗೇ ಎಂಟು ದಿನ ಇದ್ದೆನಲ್ಲಾ.. ಹಂಗೇ ಮಾಡಬೇಕಾಗ್ತದೆ..



ಮೋಹಿನಿ— ಅಬ್ಬಬ್ಬ.. ಪುಟ್ಟ ಭಾಷಣಾನೇ ಮಾಡಿಬಟ್ರಲ್ಲ. ಆತು.. ಮನಿ ಯಜಮಾನ್ರ ಸಲುವಾಗಿ ನನ್ನ ವಿಶಿಷ್ಟ ಬಳಗಾನೂ ಮನಿಯಿಂದ ಕಳಿಸಿ ಆತು— ಇನ್ನೂ ಈ ಸದಾಶಿವೂ ಯಾಕೋ ನಕ್ಕ ಮಾತಿಗೆ ಅರ್ಥ ಹೇಳಲಿಕ್ಕೆ ಯಾಕೆ ಬ್ಯಾಡಾಂತ ಅಂದು ನಿಮ್ಮನ್ನ ಖಾನಾವಳಿಗೆ ಕಳಿಸಲಿ?.. ಸದಾಶಿವಾ ಹೇಳಿಬಿಡಪ್ಪಾ.. ವರದಿ ಮಾಡಿ ಬಿಡು. ನಿನ್ನ ಧಣಿ ಮುಂದೆ ಹೇಳಿಬಿಡು ನೀನ್ಯಾಕೆ ಕೊಕ್ ಅಂತ ನಕ್ಕಿ ಅಂತ ಹೇಳಿಬಿಡು, ನಾನು ಈಗ ಬಂದೆ, (ಒಳಕ್ಕೆ ಹೋಗುವಳು)

ಸದಾಶಿವ— ಅವರು ಹೇಳು ಸದಾಶಿವ ಅಂತಂದ್ರ, ಸಾಕು ಅವರ ಪರವಾನಿಗಿ ಇಲ್ದೆ ವ್ಯವಹಾರವಾಡಿದೇಂದ್ರ, ಉಪವಾಸ ಸಾಯಬೇಕಾದೀತು.. ರಾಯರೆ ಅವತ್ತು (ಗಟ್ಟಿಯಾಗಿ ನಗಹತ್ತುವನು)

ಸುಂದರರಾಯ— (ಬೇಸರದಿಂದ ಗಲ್ಲಕ್ಕೆ ಕೈ ಹಚ್ಚಿ,) ಬ್ಯಾಡ—ನಿಲ್ಲಿಸು ನೀನು ಆ ವಿಚಾರ ಹೇಳಲೇಬೇಡ. ಎಲಾ ಇವನ ಮನಿ ಜ್ವಾಳಾಗಾ— ಹೇಳಲಿಕ್ಕೆ ವಲ್ಲೇಂತಾನೆ ಬರೇ ನಗೋದೇ ಆಗೇದಲ್ಲ.. ಮೋಹಿನೀಗೆ 'ಲೇ ಏಳಿ ಬ್ಯಾಗ ಹೋಗೋಣ ದೀಪಾವಳಿಗೆ ಒಳ್ಳೇ ಸೀರೀನೆ ಕೊಡಿಸಿ ಬಿಡ್ತೀನಿ' ಅಂತ ಅಂದಾಗ 'ನನಗ ಉತ್ಸಾಹನೆ ಇಲ್ಲ ಕಣ್ರೀ' ಅಂತ ರಾಗ ಎಳದಳಲ್ಲ— ಹಂಗೆ ನಾನು ಅಂದಾಗ

ಸದಾಶಿವ— ಬಾಯೇರು ಹಂಗೆ ಅಂದಾಗೇ ನನಗೆ ನಗಿ ತಡಿಲಿಕ್ಕಾಗದೆ ಒಂದೇ ಸಮ ಚಳಿ ಬಂದಹಂಗೆ ನಗಿ ಬಂದು ಕಾಡಾಕೆ ಹತ್ತಿಬಿಡ್ತು.

ಸುಂದರರಾಯ— ಆ ನಾಕರ ಚಳಿ ಅಂಥಾ ನಗಿಗೆ ಏನು ಕಾರಣ ಬೊಗಳು..

ಸದಾಶಿವ— ನಾರಾಣಪ್ಪನೋರೂ— ಅದೇ ನಿಮ್ಮ ಮಾವಾ ಅವರೂ— ಅದೇ ಅವ್ವಾ ಅವರ ತಂದೆಯವರು.. ಮತ್ತೆ ಜಾಗೀರ್‌ದಾರ್ ಸೂರಣ್ಣನೋರು, ಕಂಟ್ರಾಕ್ಟರು ಕಬನೀಪತಯ್ಯನೋರೂ.. ಮತ್ತೆ ಇನ್ನೂ ಎಲ್ಲಾ ಭಾರಿ ಶ್ರೀಮಂತರೇ ತಮ್ಮ ಸ್ನೇಹಿತರೂಂತ ಸೇರ್‍ಸಿ ಚಹ— ಚೂಡ—ಬುರಬುರಿ ಮಾಡ್ಸಿ ಇದೇ ಈ ಶಾಂತಿನಿಲಯದಾಗೆ ಗೊಂದ್ಲ ಹಾಕಿದಹಂಗೆ ಒಬ್ಬೊಬ್ರು ಅವರವರ ದೊಡ್ಡಸ್ತಿಕಿ— ಅವರವರ ಶ್ರೀಮಂತಿಕಿ ಸೊಗಸು ಹೇಳ್ತಿದ್ರು.

ಸುಂದರರಾಯ— ನಾನೆಲ್ಲಿ ಹೋಗಿದ್ದೆ ಆಗ?

ಸದಾಶಿವ— ನೀವು ಹಿಂದುಗಡಿ ಕಡೀ ರೂಮಿನಾಗೆ ಯಾರ್‍ದೂ ತಂಟಿ ಬ್ಯಾಡಾಂತ ಇರ್‍ತಿದ್ರಲ್ಲಾ ಆಗಿನ ಸುದ್ದಿ ಇದು. ಕಬನೀಪತಯ್ಯನವರಿಂದ್ರೂ.. 'ನಾವು ನೋಡ್ರಿ ಮನೀವಳಗೆ ಯಾವ ಬೆಳ್ಳಿಬಂಗಾರ ಇಡೋದುಲ್ಲ. ನಾವೆಲ್ಲ ಬ್ಯಾಂಕಿನೊಳಗೆ ಲಾಕರ್ ತೆಗೆದುಕೊಂಡು ಇಟ್ಟಿರ್‍ತೀವಿ' ಅಂತಂದ್ರು. ಜಾಗೀ-ರ್‌ದಾರ್ ಸೂರಪ್ಪನೋರು.. 'ನಾವು ತಿಜೋರೀವಳಗಿಟ್ಟು ನೆಲಮಾಳಿಗಿಯೊಳಗೆ ಇಟ್ಟುಬಿಡ್ತೀವಿ....' ಅಂತ ಹೇಳಿದರು. ಆಮ್ಯಾಲೆ ನಿಮ್ಮ ಮಾವ ನಾರಾಯಣಪ್ಪನೋರು.... ಮತ್ತೆ ( ನಗುವನು )

ಸುಂದರರಾಯ— ನಾರಾಯಣಪ್ಪನೋರು ಏನಂದ್ರು?

ಸದಾಶಿವ— ನಾರಾಯಣಪ್ಪನೋರು.... ಒಳ್ಳೆ ಜಬರದಸ್ತಿಯಿಂದ ಹೇಳೋರಹಂಗೆ 'ನಾವು ಅಷ್ಟೆ ನೋಡಿ. ನನ್ನಹೆಂಡ್ತಿ ನಾಗರಮುರಿ-ತೋಡ್ಯಾ ಡಾಬು-ಚಳತುಂಬು-ವಂಕಿ-ಸರಿಗಿ— ಎಲ್ಲಾ ಸೇರಿಸೀನೂ.... ಅಪ್ಪಟ ಚಿನ್ನದ ಮನ್ತಿನ ಸಮ್ಮಿದಃನೂ.... ನಾವು ಅವನ್ನೆಲ್ಲಾ ....' ಅಂತ ಏನೋ ಹೇಳ್ತಿದ್ರು ಆಗ ಅವರ ಮಗ ಕೋದಂಡರಾಮು ಮಧ್ಯ ಬಾಯಿ ಹಾಕಿದ.

ಸುಂದರರಾಯ— ಇಷ್ಟೊಂದು ಆಸ್ತಿ ಇತ್ರಂತೇ ಈ ಅಳಿಯನ ಮನಿ ತೊಳಿಯೋ ಅಂಥಾ ಮಾವನವರ ಹತ್ರ.... ಹುಂ.... ಆ ಭಾವ ಮೈದ್ನ ಕೋದಂಡ ಏನಂದ ಆ ಮಾತಿಗ?

ಸದಾಶಿವ— ಅದೇ ಹೇಳ್ತಿನಿ ಕೇಳ್ರಿ.. ಕೋದಂಡರಾಮು ಗಟ್ಟಿಯಾಗಿ ಹೇಳಿದ 'ಹೌದು.... ನಮ್ಮನಿ ವಡವಿ ವಸ್ತ್ರಾ ಭಾಳ ಇರೋದರಿಂದ ಬ್ಯಾಂಕು ತ್ರಿಜೋರಿಯೊಳಗೆ ಆ ಪಾಟಿ ಆಸ್ತಿ ಹಿಡಿಯೋದುಲ್ಲಾಂತ.... ಎಲ್ಲಾನೂ ಮಾರ್‍ವಾಡಿ ಅಂಗಡಿಯೊಳಗೇ ಇಟ್ಟೇವಿ'– ಅಂತ ಅಂದುಬಿಡೋದೇ..

ಸುಂದರರಾಯ— ಹ ಹ್ಹ ಹ ಹ್ಹ....ಬರೋಬ್ಬರ್ ಅಂದ ನೋಡು....

( ಹಿಂದೆ ಸದಾಶಿವ ನಕ್ಕಂತೆಯೇ ಅಲೆ ಅಲೆಯಾಗಿ )

ಸದಾಶಿವ— ಸಹಜ— ಮನಿ ಅವರಿಗಿಂತ ಹೆಚ್ಚು ಸಲಿಗಿ ತೊಗೊಂಡು ಮಾತಾಡಿದ್ದಕ್ಕೆ ನೀವೇನೂ ಮನಸ್ಸಿಗೆ ತಿಳ್ಕೊಬ್ಯಾಡಿ ರಾಯರೆ....

ಸುಂದರರಾಯ— ಛಿ ಹುಚ್ಚಪ್ಪ.... ಮೋಹಿನಿ ತೌರುಮನಿ ಕಡಿಪೈಕಿ ಎರಡೇ ಎರಡು ನಾನು ಮೆಚ್ಚಿಗೋದು ಸದಾಶಿವಾ.... ಒಂದೂ

ಸದಾಶಿವ— 'ನಾನು' ಹೌದಲ್ಲೊ?

ಸುಂದರರಾಯ— ಕರೆಕ್ಟ್.... ಮತ್ತೆ ಎರಡನೇದು.... ಹೇಳ ನೋಡೋಣ

ಸದಾಶಿವ— 'ಅವ್ವಾ ಅವರು' ಹೌದಲ್ಲೊ!

[ ಈ ಸಮಯಕ್ಕೆ ಹೊರಕ್ಕೆ ಹೊರಡಲು ತಯಾರಾಗಿ ಮೋಹಿನಿ ನೈಲಾನ್ ಸೀರೆ– ಅದಕ್ಕೊಪ್ಪುವ ರವಿಕೆ– ತುರುಬಿಗೆ ಮಲ್ಲಿಗೆ ದಂಡೆ— ಮುಖಕ್ಕೆ ನವಿರಾದ ಪೌಡರು— ತುಟಿಗೆ ರಂಗು— ಕೈಯ್ಯಲ್ಲಿ ವ್ಯಾನಿಟಿ ಬ್ಯಾಗು— ವಿಶೇಷ ಆಕರ್ಷಕ ಅಲಂಕಾರದೊಡನೆ ಪ್ರವೇಶಿಸುವಳು ]

ಸುಂದರರಾಯ— ವಹವ್ವಾ....ನೋಡಿದೇನಪ್ಪಾ ಸದಾಶಿವ ಸಹಧರ್ಮಿಣಿ ಅಂದ್ರೆ ಹಿಂಗಿರಬೇಕು.... ಇದೇ ಈಗ ನಿನ್ನ ಬಗ್ಗೆ ಹೇಳ್ತಿದ್ದೆ ಮೋಹಿನಿ.... ಅದೇ ಸಮಯಕ್ಕೆ ಸಾಕ್ಷಾತ್ ಮೋಹಿನಿ ಹಂಗೇ ಬಂದಿ ನೋಡು– ಥಟ್ಟನೆ ನೋಡಿದ್ರೆ.... ಮೊದಲು ಹೆಣ್ಣು ನೋಡ್ಲಿಕ್ಕೆ ಬಂದಾಗ ಹಿಂಗೇ ಕಂಡಿ ನೋಡು ನೀನು.

ಮೋಹಿನಿ— ಸಾಕು ಸಾಕು ನಿಮ್ಮ ಮೆಚ್ಚಿಗೆ ವರ್ಣನೆ— ನಡೀರಿ ಪೇಟಿಕಡಿ ಹೋಗಿ ಬಂದು ಬಿಡೋಣ

ಸದಾಶಿವ— ( ಮತ್ತೆ ಗಟ್ಟಿಯಾಗಿ ಅಲೆ ಅಲೆಯಾಗಿ ಕೆಕ್ಕರಿಸಿ ಮುಗಿಲು ಮುಟ್ಟುವಂತೆ ಪಕ್ಕೆಲುಬುಗಳನ್ನು ಮುಚ್ಚಿಕೊಂಡು ನಗತೊಡಗುವನು ). ಹ ಹ್ಹ ಹ್ಹ ಹ.... ಅಬ್ಬಬಬ.... ರಾಯರೆ ಇವತ್ಯಾಕೋ ಒಂದರ ಮ್ಯಾಲೊಂದು ಲಕ್ವ ಹೊಡೆದ ಹಂಗೆ ಈ ನಗಿ ಬಂದು ಬಂದು ಸತಾಯಿಸಲಿಕ್ಕೆ ಹತ್ತೇದಲ್ಲಾ.... ( ಮತ್ತೆ ನಗು )

ಸುಂದರರಾಯ— ಸರಿ—ಈಗ ಯಾವ ವಿಚಾರಕ್ಕೆ ಮತ್ತೆ ಈ ನಗೋ ಬಾಯಿಲೇ ಮರುಕಳಿಸಿತಪ್ಪಾ....

ಸದಾಶಿವ— ಹೇಳೆಲಾ ಬಾಯೆರೆ....

ಮೋಹಿನಿ— ಆಗಲಿ ನಿಮ್ಮ ನಗು— ಮಾತು— ಹರಟೆ— ಎಲ್ಲಾ ಆಗಿಬಿಡ್ಲಿ ಅಲ್ಲಿತನಕ 'ಈ ಅಶಾಂತಿನಿಲಯ'ದಾಗೇ ಇರತೀನಿ ( ಮತ್ತೆ ಒಳಗೆ ಹೋಗಿಬಿಡುವಳು )

ಸದಾಶಿವ— ರಾಯರೇ!.... ನೀವು ಮೋಹಿನಿ ಬಾಯೇರ್‍ನ ನೋಡ್ಲಿಕ್ಕೆ ದಾವಣಗೆರಿಗೆ ಬಂದಿದ್ರಿ ನೋಡ್ರಿ.....ಆ ಹೆಣ್ಣು ನೋಡೋ ಸಮಯಕ್ಕೆ— ಜಹಂಗೀರೂ—ಜಿಲೇಬಿ—ಮೈಸೂರು ಪಾಕು— ರಸಗುಲ್ಲ— ಬೊಂಬಾಯಿ ಹಲ್ವ.... ಇತ್ಯಾದಿ ಎಲ್ಲಾ ಅಚ್ಚುಕಟ್ಟಾಗಿ ಜೋಡಿಸಿ ತಿಂಡಿ ತಯಾರಿ ನಡೆದಿದ್ದು ನೆನಪಿಲ್ಲಾ?

ಸುಂದರರಾಯ— ಅದೇನೇನು ಪಂಚಭಕ್ಷ್ಯಮಾಡಿ ಇಟ್ಟಿದ್ರೋ ನನಗೆ ಗನು

ನಾನೇ ಇಲ್ಲ....ರಸಗುಲ್ಲಾದಂಥ ಮೋಹಿನೀನ ನೋಡೋ ದ್ರಲ್ಲಿ ಅದೆಲ್ಲಾ ಎಲ್ಲಿ ನೋಡ್ತೋದೂ !

**ಸದಾಶಿವ**— ನಿಮ್ಮ ತಂದೆ ತಾಯಿ ಅವರ ಮುಂದೆ— ನಮ್ಮ ಮೋಹಿನಿ ಬಾಯೋರ ತಂದಿ ತಾಯಿ ಯಥಾಪ್ರಕಾರ ತಮ್ಮ ದೊಡ್ಡಸ್ತಿಕೆ ಜಬರದಸ್ತಿ ಧೌಲತ್ತಿನ ಮಾತು ಶುರು ಹಚ್ಚಿದ್ದರು.

**ಸುಂದರರಾಯ**—ಹೌದಾ....ಏನೇನು ಜಂಭ ಕೊಚ್ಚಿದರು?

**ಸದಾಶಿವ**— ಆಮ್ಯಾಲೆ..... ಅವರು ಹೇಳಿದ್ರೂ..... 'ನೋಡಿ ನಮ್ಮದು ರಾಜವಂಶ—ಪಾಳ್ಳೇಗಾರ್ರ ಮನೆತನ—ದಿನಂಪ್ರತಿ ತಿಂಡೀಗೆ—ಮಂಡಿಗೆ ಗುಳ್ಳೂರಿಗೆ—ಜಹಂಗೀರು—ಜಲೇಬಿ—ಇಲ್ಲದಿದ್ದರೆ ಆಗೋದೇ ಇಲ್ಲಾ— ನೀವು ಬರ್ತೀರಿ ಅಂತಾ ವಿಶೇಷವಾಗಿ ಈ ರಸಗುಲ್ಲ—ಜಲೇಬಿ ಮಾಡ್ಸಿಲ್ಲ..ಇವೆಲ್ಲಾ ದಿನಾ ನಮಗೆ ಆಗಲೇಬೇಕು', ಅಂತ ಅಂದ್ರು.... ನಿಮ್ಮ ತಂದಿ ಅವರು 'ಇದಿಷ್ಟೂ ಮನೇಲೇ ಮಾಡ್ಸಿದ್ದೇ ?...... ಅಂತ ಕೇಳಿದರು. ನಾರಾಣಪ್ಪನವರು ಸಹಜ ಯಾವಾಗ್ಲೂ ಹೇಳೋ ಸುಳ್ಳಿನ ಹಂಗೇನೇ 'ಹೌದು ಅಪ್ಪಟ—ಆಕಳ ತುಪ್ಪದಲ್ಲಿ ತಯಾರಾದದ್ದು' ಅಂತ ಅಂದ್ರು.. ಆಗ; ನಿಮ್ಮ ಭಾವಮೈದ ಕೋದಂಡರಾಮ ಏನೆಂದ ನಿಮಗೆ ನೆನಪಿಲ್ಲೇನು ?

**ಸುಂದರರಾಯ**— ನನ್ನ ಕಣ್ಣೆಲ್ಲಾ ಮೋಹಿನಿ ಮ್ಯಾಲೆ ಇತ್ತು. ಇವರುಗಳು ಆಡಿದ ಮಾತು ನನಗೇನು ಗೊತ್ತು? ಏನೆಂದ ಈ ಕೋದಂಡ

**ಸದಾಶಿವ**— ಗುಂಡು ಹೊಡೆದ ಹಂಗೆ ' ಅಹಹ.... ಮನ್ಯಾಗೆ ಮಾಡ್ತಾರಂತೆ.... ಎಲ್ಲಾ ಸುಳ್ಳು.... ಹೋಟ್ಲಿಂದ ಈಗ ತರಸೀ.... ಸುಳ್ಳೇ ಹೇಳ್ತೀರೇನಪ್ಪಾ.... ಅಂತ ಅಂದುಬಿಡೋದೇ !....

( ಇಬ್ಬರೂ ನಗುತ್ತಿದ್ದಂತೆ ಮೋಹಿನಿ ಪ್ರವೇಶ )

**ಮೋಹಿನಿ**— ಆತಿಲ್ಲೊ ನಿಮ್ಮ ನಗು— ಮಾತು ಎಲ್ಲಾ.... ನಡೀರಿ ಪ್ಯಾಟಿ ಕಡಿಗೆ ಹೋಗಿಬರೋಣ....

**ಸುಂದರರಾಯ**— ನಡಿ ನಡಿ... ಸದಾಶಿವಾ ಮನಿಕಡಿ ಹುಷಾರು— ಈಗ ಬಂದುಬಿಡ್ತೀವಿ— ಯಾರೂ ಬರದ ಹಾಗೆ ನೋಡಿಕೊ— ಮಹರಾಯಾ ಇದು ಮೋಹಿನೀನೇ ಹೇಳಿದ ಮಾತು ತಿಳೀತೆನು..

[ಸದಾಶಿವ ತಿಳೀತು ಎಂದು ತಲೆ ಆಡಿಸುತ್ತಿದ್ದಂತೆ ಸುಂದರರಾಯ ಪ್ಲಾಸ್ಟಿಕ್ ಚೀಲಗಳನ್ನು ಮೋಹಿನಿಗೆ ಕೊಡುವ. ಆಕೆ ಅದರಲ್ಲಿ ಒಂದನ್ನು ಮತ್ತೆ ಗಂಡನಿಗೇ ಕೊಡುವಳು— ಇಬ್ಬರೂ ನಗುತ್ತಾ ಲಗುಬಗೆಯಿಂದ ಹೊರಗಡೆ ಬಾಗಿಲ ಕಡೆ ಹೋಗುವರು. ಹೊರಬಾಗಿಲು ತೆಗೆದು ಹೋಗುತ್ತಿದ್ದಂತೆಯೇ 'ಷಾಕ್' ಹೊಡೆದಂತೆ ಹಂಗೇ ಹಿಂದೆ ಹಿಂದಕ್ಕೆ ಸುಂದರರಾಯ ಹಿಮ್ಮೆಟ್ಟಿದವನಂತೆ ಬರುವನು. ಗಾಬರಿಯಿಂದ ಮೋಹಿನಿಯೂ ಮುಂಬಾಗಿಲತ್ತ ನೋಡುತ್ತಲೇ ಹಿಂದಕ್ಕೆ ಹೆಜ್ಜೆ ಇಕ್ಕುವಳು.. ಭಾವಮೈದ ಕೊದಂಡ ಹಸಿದ ತೋಳನಂತೆ ಬರುತ್ತಿರುವನು]

**ಸುಂದರರಾಯ**— ಸದಾಶಿವಾ— ಸದಾಶಿವಾ— ಯಾರೋ ಬಂದಾರೆ ನೋಡೋ—

**ಸದಾಶಿವ**— (ಕೋದಂಡರಾಮುವನ್ನು ನೋಡಿ—ಯಾರೋ ಪರಿಚಿತದವನಲ್ಲವೆಂದು ನಟಿಸುತ್ತಾ) ಏಯ್—ಹಂಗ್ಯಾಕೆ ಹಂದಿ ನುಗ್ಗಿದಹಂಗೆ ನುಗ್ಗಿ...ಮುಂದಕ್ಕೆ ಹೋಗಿ ಬಾ ರಾಯರು ಸಿಟ್ಟಿಗೆದ್ದಾರೆ.. ಏನೂ ಇಲ್ಲ ಹಾಕಲಿಕ್ಕೆ ಸುಮ್ಮನೆ ಮುಂದಕ್ಕೆ ಹೋಗಿ ಬಾ...

**ಕೋದಂಡರಾಮು**— ಭಿಕ್ಷಾದವನಲ್ಲ...ನೀನು ಸುಮ್ಮನಿರಯ್ಯ—ಭಾವಾ ನನ್ನ ಗುರ್ತು ಮರ್ತೇ ಹೋಯ್ತೆ ? ನಾನು ಕೋದಂಡ—ಕೋದಂಡರಾಮು—ನಮ್ಮ ಅಕ್ಕ ಮೋಹಿನಿ ತಮ್ಮ—ನಿಮ್ಮ ಭಾವಮೈದ—ನಿಮ್ಮ ಮಾವನ ಮಗ—ಇಷ್ಟು ಬ್ಯಾಗ ನನ್ನ ಬೇವರ್ಸಿನ್ನ ನೋಡಿದಹಂಗ ಆಡ್ತೀರಲ್ಲ...ಭಾವಾ—ಅಕ್ಕ...ಸೊಕ್ಕೆ ಸದಾಶಿವಾ...ಎಲ್ರೂ ಮರೆತುಬಿಟ್ರಾ !!

**ಸುಂದರರಾಯ**— ಸದಾಶಿವ—ಇವನ್ನ ಪೋಲೀಸಿಗೆ ಒಪ್ಪಿಸು...ಇಲ್ಲಾ ಹುಚ್ಚರ ಆಸ್ಪತ್ರೆಗೆ ಕರ್ಕೊಂಡು ಹೋಗಿಬಿಡು—ಯಾರೋ ಪಾಪ ದಾರಿ ತಪ್ಪಿರಬೇಕು—ಪರದೇಶಿ.



**ಕೋದಂಡರಾಮು**— ಅಯ್ಯಯ್ಯೋ....ಅಪ್ಪಾ—ಅಮ್ಮಾ—ನೀವು ಇರಲಿಕ್ಕೆ ನನ್ನ ಪರದೇಶಿ ಅಂತ ಅಂದುಬಿಟ್ರಲ್ಲ ಈ ಭಾವಯ್ಯ—ನಾವು ನಮ್ಮ ಅಕ್ಕನ್ನ ಕೊಟ್ಟೇವೀಂತ ನಿಮ್ಮದೂ ಒಂದು ಮನೀಂತ ಆಗೇದ—, ಇಲ್ಲಿದ್ರೆ ನೀವೂ ಪರದೇಶಿ ಹಂಗೇ ಇರ್ತಿದ್ರಿ. (ಅಳುತ್ತಾ ಕೂಗುತ್ತಾ ರಂಪವನ್ನ ಮಾಡುವನು. ಸದಾಶಿವ ಬಂದು ಬಾಯಿ ಮುಚ್ಚುವನು. ಮೋಹಿನಿ ಏನೂ ತೋಚದೆ ಸೋಫಾದಲ್ಲಿ ಕೂತುಬಿಡುವಳು.)

**ಸುಂದರರಾಯ**— 'ಶಾಂತಿನಿಲಯ' ಅಶಾಂತಿ ಆಗಲಿಕ್ಕೆ ಎಂದೂ ಬಿಡೋನಲ್ಲ—ಸದಾಶಿವಾ—ಹೊರಗೆ ಅಟ್ಟು ಈ ಭ್ರಹ್ಮೋತಿ ಭಡವನ್ನ.

**ಸದಾಶಿವ**— (ಕೋದಂಡನ ಕತ್ತಿಗೆ ಕೈಕೊಟ್ಟು ಅರ್ಧಚಂದ್ರಪ್ರಯೋಗಕ್ಕೆ ತೊಡಗುತ್ತಾ) ಆಗಳೇನೆ ಹೇಳಿವೆ ಹೊರಡಪ್ಪಾಂತ ನೀನು ಕೇಳ್ತಿಯಾ...

**ಕೋದಂಡ**— ಅನ್ಯಾಯ—ಅಕ್ಕಾ—ಭಾವಾ— ಹಸಿವು—ಊಟಾನಾರ ಹಾಕಿ ಹೊರಗೆ ದಬ್ಬಿರೋ...ಅಮ್ಮಾ—ಅಪ್ಪಾ—ಅಯ್ಯಯ್ಯೋ...(ಎಂದು ಕೂಗುತ್ತಿದ್ದಂತೆ ಹೊರಬಾಗಿಲಿಗೆ ಇವನನ್ನು ದಬ್ಬುತ್ತಿದ್ದ ಹಾಗೇ ಹೊರಬಾಗಿಲಿಂದ ಇವನ ತಂದೆ ನಾರಾಣಪ್ಪ ಪ್ರವೇಶಿಸುವರು.)

**ನಾರಾಣಪ್ಪ**— ಹೆದರಿ ಹೋಗಿಬಿಟ್ಟಿದಾನೆ ಹುಡುಗಾ...ಏಯ್ ಸದಾಶಿವ ಇದೇನೊ ನಿನ್ನ ಕೆಲಸ...ಅವನು ಮಾಡಿದ ತಪ್ಪಾದರೂ ಏನು ? ಹಿಂಗ್ಯಾಕೆ ಅವನ್ನ ದನ ಅಟ್ಟಿದಹಂಗೆ ದಬ್ಬುತ್ತೀದ್ದೀರಿ ?

**ಸದಾಶಿವ**— ಓ ! ಅಯ್ಯನೋರೂ...ಅಂ...ಉಂ...ಮತ್ತೆ ನಮ್ಮ ಮಾಲೀಕರು ಹೇಳಿದರು ಅದಕ್ಕೆ ಹಿಂಗೆ ಮಾಡಬೇಕಾಯ್ತು.

**ನಾರಾಣಪ್ಪ**— ನಾನು ನಿಮ್ಮ ಮಾಲೀಕರ ಮಾವ—ಮಾವ ತಿಳೀತೇನು ! ('ಮಾವ ತಿಳೀತೇನು' ಅಂತಿರ್ಲಿಕ್ಕೆ ಹೊರಗಿನಿಂದ ಅತ್ತೆಯು ರಂಗಕ್ಕೆ ಪ್ರವೇಶಿಸುವಳು.)

**ಲಕ್ಷ್ಮಿದೇವಿ**— ಹೌದು ನೀವು ಮಾವಂದಿರಾದರೆ ನಾನು ಅತ್ತೆ...ಈಗೆ ಆದದ್ದಾರ ಏನು ಈಗ ? ಯಾಕೆ ಕೋದಂಡ ಅಳ್ತಾನೆ ?

**ನಾರಾಣಪ್ಪ**— ಏನೂ ಇಲ್ಲೇ. ದೀಪಾವಳಿ ಹಬ್ಬ ಮಾಡಿಕೊಂಡು ಈ ಅಳಿಯಂದಿರ ಮನಿ ಬಿಡಬೇಕೂಂತ ನಾವು ನಿನ್ನೆ ದಿನ ಮನಿ ಬಿಟ್ಟು ಛತ್ರ ಸೇರಿದಾಗ ನಿರ್ಧಾರ ಮಾಡಿಕೊಳ್ಳಲಿಲ್ಲವೆ ?

**ಲಕ್ಷ್ಮಿದೇವಿ**— ಹೌದು—ಅದಕ್ಕೆ ! ಈಗ ಪುನಃ ಬಂದದ್ದು ಮೋಹಿನಿ— ಅಳಿಯಂದ್ರು ನಮ್ಮನ್ನ ಬಿಟ್ಟು ಹೆಂಗೆ ದೀಪಾವಳಿ ಮಾಡ್ತಾರು ? (ಅಡಸೆರಗು ಬಿಗಿಯುತ್ತಾ)...ಮನಿವಳಗೆ ಏನು ಅದೋ, ಏನು ಇಲ್ಲೋ ಹುಡುಗರು ಹೆಂಗೆ ಸಂಸಾರ ಮಾಡ್ತಾರೋ....ಸದಾಶಿವಾ ಹಬ್ಬದ ಸಾಮಾನೆಲ್ಲ ತಂದು ಇಟ್ಟಿದ್ದೀ ಏನಪ್ಪಾ...ದೀಪಾವಳಿಗೆ ಚಕ್ಲಿ—ಕೋಡುಬಳಿ—ಲಡ್ಡಿಗಿ—ಉಂಡಿ—ಎಲ್ಲಾ ಮಾಡಬೇಕಲ್ಲಾ...ಹುಡುಗರೂ...ನಾವು ಹಿರೇರು ಅನುಸರಿಸಿಕೊಂಡು ಹೋಗಬೇಕು—ಅವರು ನಾವಿಲ್ಲದೆ ಹೆಂಗೆ ಹಬ್ಬ ಮಾಡ್ತಾರೇ...ಕೋದಂಡಾ...ನೀನು ಹಬ್ಬಕ್ಕೆ ಬೇರೆ ಹೊಸ ಬಟ್ಟೆ ಅಂತ ಅಳಬ್ಯಾಡ.. ನಿಮ್ಮ ಭಾವಂದೇ ಸೂಟು ಹಾಕ್ಕೊಂತಿ.. ನನಗೆ ಮೋಹಿನಿ ಪೀತಾಂಬರ...ಮದುವೀದೂ ಇದ್ದೇ ಅದೆ...ಮತ್ತೆ ನೀವೇನು ಮಾಡ್ತೀರಿ!!

ನಾರಾಣಪ್ಪ— ನಾನೇನು ಮಾಡ್ಲಿ... ಅಳಿಯಂದ್ರ, ಜರ್ತಾರಿ ಪಂಚೆನೆ ಉಟ್ರೆ ತೀರ್ತು..ಯಾಕಂದ್ರೆ ಹಬ್ಬ ಹತ್ತಿರನೇ ಅದೆ. ನಮ್ಮೂರಿಗೆ ಹೋಗಿ ಕಬ್ಬಿಣದ ತಿಜೋರಿಯಿಂದ ತೆಗದು ಎಲ್ಲಾ ತರೋದು ತಡ ಆಗ್ತದೆ...ಹಾದಲ್ಲ್ವೊ... ಜರೂರು ಅಂದ್ರೆ—ಹೆಂಗೂ ಸಾಸ್ನ್ಕೊಂಡು ಹೋದರಾತು ಲಕ್ಷ್ಮೀ...

ಲಕ್ಷ್ಮೀದೇವಿ— ಹೌದು— ಖರೆ— ಹಬ್ಬಾಂದ್ರೆ ಏನು ಮಾಡೂದು.... ಮೋಹಿನೀ.. ನನ್ನ ಮಾತು ಕೇಳು.

[ಮೋಹಿನಿ ಗೊಂಬೆಯಂತೆ ನಿಬ್ಬೆರಗಾಗಿ ನಿಂತಿರುವಳು— ಅವಳ ಪಕ್ಕದಲ್ಲಿ ಕಣ್ಣರಳಿಸಿ ಆದ ಅಪಘಾತ ಚೇತರಿಸಿಕೊಳ್ಳದವನಂತೆ ಅಲುಗಾಡದೆ ಸುಂದರರಾಯ ನಿಂತಿರುವ— ತೆರೆ ಎದ್ದಾಗ ನಿಂತಿದ್ದಂತೆ ಸ್ತಬ್ಧನಾಗಿ ಸದಾಶಿವ ನಿಂತಿರುವನು— ಮೂವರೂ ಮಾತೇ ಆಡದೆ ಕೈಕಾಲು ಅಲುಗದೆ ಪ್ರತಿಮೆಗಳಂತೆ ನಿಂತಿರುವರು]

ನಾರಣಪ್ಪ— ನಾನು ಹೇಳುದಾರ ಕೇಳಬಾರದೇ...ಹಬ್ಬಕ್ಕೆ ಭಾಳ ತಿಂಡಿ ಮಾಡಬೇಡ.

ಲಕ್ಷ್ಮೀದೇವಿ— ನೀವೂ ಹೇಳ್ಬ್ಯಾಡಿ— ನಾನು ಕೇಳೋದೇ ಇಲ್ಲ— ಕೊದಂಡಾ ಆಚೆ ಕಡಿ ಹೊರಗಿರೂ ಟ್ರಂಕು ಹಾಸಿಗಿ ತಂದು ಒಳಗಿಡೊ ಮೋಹಿನೀ ಎಲ್ಲಾ ಸಾಮಾನು ಮತ್ತೆ ತರ್ಸಿರಬೇಕು..

ಕೊದಂಡ— ಏನ್ ಸದಾಶಿವ ಅಪ್ಪ ಹೇಳಿದ್ದು ಕೆಳ್ಳಿಲ್ಲೇನು— ಅವ್ವ ನಂಗ ಭಾಳ ಹಸಿವಿ— ಏನೇನೂ ಮಾಡ್ಲಾರಿ.

[ನಾರಾಣಪ್ಪ ಸೋಫಾದಲ್ಲಿ ಗಾಳಿ ಹಾಕಿಕೊಳ್ಳುತ್ತಾ ಕೂಡುವನು]

ಲಕ್ಷ್ಮೀದೇವಿ— ಏನೂ ಮಾಡ್ಲಾರ್ರಿ— ಅಂದ್ರೆ ಹೆಂಗೇ... ಹಬ್ಬ ಹೆಂಗೆ... ಆಗಬೇಕು...ಮೋಹಿನೀ...ನನ್ನ ಮಾತು ತುಸ ಕೇಳವ್ವ...

ಸುಂದರರಾಯ— 'ಮೋಹಿನೀ 'ಶಾಂತಿನಿಲಯ' ನಾನು ಬಿಟ್ಟೆ...ಇಲ್ಲೆ ಹಬ್ಬ ಮಾಡಾವ ನಾನು...ಹೊಟಲಲ್ಲಿ (ಗಟ್ಟಿಯಾಗಿ ಅನ್ನುವ)...

[ಸೋತವನಂತೆ ಈ ಅಶಾಂತಿಪ್ರಿಯ ಅತ್ತಿ-ಮಾವ-ಭಾವ-ಮೈದರು ಮತ್ತೆ ಮನೆ ಸೇರಿದ್ದು ಸಹಿಸಲಾರದೆ...ಮೋಹಿನಿಯನ್ನು ನೋಡುತ್ತಾ ಹೊರಗೆ ಹೋಗುವನು...ನಿಧಾನವಾಗಿ ಮೋಹಿನಿ ಕಣ್ಣೀರು ಒರೆಸುತ್ತಾ ಗಂಡನನ್ನು ಹಿಂಬಾಲಿಸುವಳು...ಇವರಿಬ್ಬರನ್ನೂ ಹಿಂಬಾಲಿಸಿ ಸದಾಶಿವ ಹೊರಡುವನು..ಅಳಿಯಂದಿರು ಮಗಳು—ಆಳು ಹೋದದ್ದನ್ನ ಹಾಗೇ ಮುಂದೇನು? ಎಂಬಂತೆ ನೋಡುತ್ತಾ ನಾರಾಣಪ್ಪ—ಲಕ್ಷ್ಮೀದೇವಿ—ಕೋದಂಡ ನಿಲ್ಲುವರು—ಮೌನ—ನಿಧಾನವಾಗಿ ರಂಗಮಂದಿರದ ದೀಪ ಆರಿ ಕತ್ತಲಾವರಿಸುವುದು..ತೆರೆ ನಿಧಾನವಾಗಿ ಬೀಳುವುದು.]

(ಈ ನಾಟಕದ ಎಲ್ಲ ಹಕ್ಕುಗಳೂ ಲೇಖಕರವು)

— ಮಂಗಳ —





# ಬಾಲಪ್ರಪಂಚ




## ಅಹಂಕಾರಿ ಋಷಿ

ದೀಪಾವಳಿಯ ದಿನ ಆರತಿ ಅಕ್ಷತೆಗಳು ಮುಗಿದು ಅಭ್ಯಂಜನಾದಿಗಳಾದ ಮೇಲೆ ಅನೇಕ ತರದ ತಿಂಡಿತಿನಸುಗಳನ್ನು ಹೊಡೆದು ಬಡಿದಾಡುತ್ತಿರುವ ಮೊಮ್ಮಕ್ಕಳನ್ನು ಅಜ್ಜಿಯು ಕರೆದು, "ಯಾಕೆ ಬಡಿದಾಡುತ್ತಿರುವಿರಿ?" ಎಂದು ಕೇಳಿದಳು. ಅವರಲ್ಲಿ ಕಿರಿಯನಾದ ತುಂಟ ರಾಮನು ತನ್ನ ಅಕ್ಕನನ್ನು ಛೇಡಿಸುತ್ತ ತನ್ನ ಪ್ರತಿಷ್ಠೆಯನ್ನು ಹೇಳಿಕೊಳ್ಳುತ್ತಿದ್ದುದಕ್ಕೆ ಅವರಿಬ್ಬರಲ್ಲಿ ಬಡಿದಾಟ ಪ್ರಾರಂಭವಾಯಿತು.

ಆಗ ಅಜ್ಜಿಯು ಅವರಿಬ್ಬರನ್ನು ಕೂಡಿಸಿಕೊಂಡು "ಮಕ್ಕಳಿರಾ ಅಹಂಕಾರವು ತರವಲ್ಲ. ಒಣಪ್ರತಿಷ್ಠೆಗೆ ಒಳಗಾಗಬಾರದು. ಅದು ಮನುಷ್ಯನನ್ನು ಕೀಳುದರ್ಜೆಗೆ ಒಯ್ಯುತ್ತದೆ. ಅದಕ್ಕೊಂದು ಕತೆ ಹೇಳುತ್ತೇನೆ ಕೇಳಿರಿ." ಎಂದಳು.

"ಹಿಂದಕ್ಕೆ ಜಾಬಾಲಿ ಎಂಬ ಋಷಿಯು ತನ್ನ ಅಗಾಧ ತಪಸ್ಸಿನಿಂದ ಮಹಾಸಾಮರ್ಥ್ಯವನ್ನು ಪಡೆದನು. ಆಗ ಅವನು ನನ್ನ ಸಮಾ




ನರು ಜಗತ್ತಿನಲ್ಲಿಯೇ ಯಾರಿರುವರು ಎಂದು ಅಹಂಭಾವ ತಳೆದನು. ಅಲ್ಲಿಯೇ ತಿರುಗಾಡುತ್ತಿದ್ದ ಭೂತಗಳು ಅವನನ್ನು ನೋಡಿ ನಗಲಿಕ್ಕೆ ಹತ್ತಿದವು. ಜಾಬಾಲ ಋಷಿಯು ಆಶ್ಚರ್ಯಪಡುತ್ತ 'ಅದೇಕೆ ನಗುತ್ತೀರಿ? ನಾನನ್ನುವದು ಸುಳ್ಳೇ. ನನ್ನ ತಪಸ್ಸಿನ ಶಕ್ತಿ ಕಡಿಮೆಯೇ? ಬೇಕಾದರೆ ನನ್ನ ತಪಸ್ಸಾಮರ್ಥ್ಯದಿಂದ ನಿಮ್ಮನ್ನೆಲ್ಲ ಈಗಲೇ ಸುಟ್ಟು ಭಸ್ಮ ಮಾಡಬಲ್ಲೆ' ಎಂದು ಅಹಂಕಾರದಿಂದ ನುಡಿದನು. ಆಗಲೂ ಆ ಭೂತಗಳು ಮತ್ತಷ್ಟು ಗಹಗಹಿಸಿ ನಗುತ್ತ ''ಎಲೋ ಋಷಿಯೇ, ನಿನ್ನ ತಾಮಸ ತಪೋಶಕ್ತಿಯಿಂದ ಏನು ಉಪಯೋಗ? ನಿನಗಿಂತಲೂ ವಾರಣಾಸಿಯಲ್ಲಿರುವ ಉದಾರಿ ಸುಗುಣಾಕರ ವೈಶ್ಯನೇ ಮೇಲು" ಎಂದು ಹೇಳಿದವು. ಋಷಿಗೆ ಇದನ್ನು ಕೇಳಿ ಬಹಳ ಸಿಟ್ಟು ಬಂದು ಆ ವೈಶ್ಯನಕಿಂತಲೂ ಉದಾರಿ ಮತ್ತು ಸಹನಶೀಲ, ಪರೋಪಕಾರಿಯಾಗಿ ತೋರಿಸುವೆ ಎಂದು ನೆನೆದು ಒಂದು ಸರೋವರದ ದಂಡೆಯಲ್ಲಿ ಒಂಟಿಗಾಲಿನಿಂದ ತಪಸ್ಸು ಮಾಡಹತ್ತಿದನು. ಕೆಲವುಧಿನಗಳಲ್ಲಿ ಒಂದು ಚಮತ್ಕಾರ ನಡೆಯಿತು. ಒಂದು ಗುಬ್ಬಚ್ಚಿದಂಪತಿ ಇವನ ಜಡೆಯಲ್ಲಿ ವಾಸ ಮಾಡಿತು. ಋಷಿಗೆ ಆನಂದವಾಯಿತು. ತಾನು ಈ ಗುಬ್ಬಚ್ಚಿ ಜೊತೆಗೆ ಆಶ್ರಯದಾತನೆಂದು ಆತ್ಮತೃಪ್ತಿಯಾಯಿತು. ಮುಂದೆ ಬರಬರುತ್ತ ಅವು ಅವನ ಜಡೆಯಲ್ಲಿಯೇ ಗೂಡುಕಟ್ಟಿ ಸಂಸಾರ ಮಾಡಿದವು. ಆಗಲೂ ಅವಕ್ಕೆ ತೊಂದರೆಯಾಗಬಾರದೆಂದು ಅಷ್ಟು ಜಾಗರೂಕತೆ ವಹಿಸಿ ಅವುಗಳ ಪಾಲನೆ ಮಾಡಿದನು. ಅಳ್ಳಾಡಿದರೆ ಅವಕ್ಕೆಲ್ಲಿ ಧಕ್ಕೆಯಾಗುವದೋ ಎಂಬ ಚಿಂತೆ ಋಷಿಗೆ ಹತ್ತಿತು. ಬರಬರುತ್ತ ಗುಬ್ಬಚ್ಚಿಗಳು ಮೊಟ್ಟೆಗಳನ್ನಿಟ್ಟು ಮರಿ ಮಾಡಿದವು. ಆಗಲೂ ಅವನ್ನು ಸಂತೈಸಿದನು. ಹೀಗಾಗಿ ಋಷಿಗೆ ತನ್ನ ನಿತ್ಯಕರ್ಮಾನುಷ್ಠಾನ ಲೋಪಾಗಿ ಅವುಗಳ ಚಿಂತೆಯೇ ಬೆಳೆಯಿತು. ಬರಬರುತ್ತ ಮರಿಗಳು ಪುಚ್ಚ ಬಲಿತು ಅಲ್ಲಿಂದ ಹಾರಿಹೋಗುವವರೆಗೂ ಆಹಾರಸಂಕಲನಕ್ಕಾಗಿ ಹಿರಿಯ ಗುಬ್ಬಚ್ಚಿ ದಂಪತಿ ಹೊರಗೆ ಹೋದಾಗ ಮರಿಗಳ ಪಾಲನ ಪೋಷಣೆಯನ್ನು ಆಸ್ಥೆವಹಿಸಿ ತನಗೆ ಎಷ್ಟೇ ತೊಂದರೆಯಾದರೂ ಜಡೆಯನ್ನು ಅಲುಗಾಡಿಸದೆ ಕಾಪಾಡಿದನು. ಅಂತೂ ಒಮ್ಮೆ ಮರಿಗಳು ದೊಡ್ಡವಾಗಿ ಹಾರಿ ಆಹಾರಕ್ಕಾಗಿ ಹೋದವು. ಋಷಿಗೆ ಒಂದು ದೊಡ್ಡ ಸಾಧನೆ ಮಾಡಿದ ಆತ್ಮತೃಪ್ತಿಯಾಯಿತು. ಆ ಆನಂದದ ಭರದಲ್ಲಿ ತನ್ನಷ್ಟಕ್ಕೆ ತಾನೇ ''ಈಗ ನನ್ನ ಸಮಾನರಾರು? ನಾನೇ ಧನ್ಯನು" ಎಂಬ ಅಹಂಕಾರದಿಂದ ಗಟ್ಟಿಯಾಗಿ ನುಡಿದನು. ಆಗಲೂ ಭೂತಗಳು ಗಹಗಹಿಸಿ ನಕ್ಕು "ಎಲೋ, ಮಂದಮತಿ, ಯಾಕಿಷ್ಟು ಅಹಂಕಾರ ಪಡುವೆ. ನಿನ್ನ ತಪ್ಪು ನಿನಗೆ ತಿಳಿಯದು. ನೀನು ಮಾಡಿದ ಮಹಾಕಾರ್ಯವೇನು? ನಿನ್ನಂಥ ಬುದ್ಧಿವಂತ ವಿಚಾರಶೀಲನು ಇಷ್ಟು ಅರ್ಥ ಮಾಡಿಕೊಳ್ಳದೇ ಹೋದೆ. ನೀ ಮಾಡಿದ ಕಾರ್ಯವನ್ನು ಬುದ್ಧಿಜ್ಞಾನವಿಲ್ಲದ ಗಿಡಮರಗಳು ಮಾಡುತ್ತವೆ. ಅವು ನಿತ್ಯ ಎಷ್ಟೋ ಪಶುಪಕ್ಷಿಗಳಿಗೆ ಆಶ್ರಯವಿತ್ತೇ ರಕ್ಷಿಸಿವೆ. ಅಂದ

ಮೇಲೆ ಮಾನವನಾದ ನೀನು ವ್ಯರ್ಥ ಏಕೆ ಜೀವನವನ್ನು ಹಾಳುಮಾಡಿಕೊಂಡೆ? ಅದಕ್ಕಾಗಿ ನೀನು ಏನೂ ಸಾಧಿಸಿದಂತಾಗಲಿಲ್ಲ, ನಿನಕಿಂತಲೂ ಆ ವೈಶ್ಯನೆ ಮೇಲು" ಎಂದವು.

ಆಗ ಋಷಿಗೆ ಮುಖ ಕೆಳಗೆ ಮಾಡಿಕೊಂಡು ತನ್ನ ಮೂರ್ಖತನಕ್ಕೆ ತಾನೇ ನಾಚಿಕೊಂಡನು. ಈಗಲಾದರೂ ಆ ವೈಶ್ಯನ ಬಳಿಗೆ ಹೋಗಿ ಅವನ ಸಾಧನೆ ಏನು? ನೋಡಿ ಬರಬೇಕೆಂದು ಹೊರಟು ವಾರಣಾಸಿಗೆ ಬಂದು ಆ ವೈಶ್ಯನಲ್ಲಿ ಹೋದನು.

ಇವನನ್ನು ನೋಡಿದ ಕೂಡಲೇ ಇವನ ವೃತ್ತಾಂತವನ್ನೆಲ್ಲವನ್ನೂ ಋಷಿಗೆ ಹೇಳಿ ಈಗಲಾದರೂ ಜ್ಞಾನೋದಯವಾಯಿತೆ? ಅಹಂಕಾರ ಅಳಿಯಿತೆ? ಎಂದು ಕೇಳಿದನು. ವೈಶ್ಯನ ಈ ಅಪರೋಕ್ಷಜ್ಞಾನಕ್ಕೆ ಆಶ್ಚರ್ಯ ಪಟ್ಟು "ಮಹಾಶಯನೇ ನೀನು ಇದನ್ನು ಹೇಗೆ ಗಳಿಸಿದೆ?" ಎಂದು ಕೇಳಿದನು. ಅದಕ್ಕೆ ವೈಶ್ಯನು- "ಋಷಿಯೇ ಇದರಲ್ಲೇನು ಮಹಾ! ಮನಸ್ಸುಮಾಡಿದರೆ ನೀನೂ ಸಾಧಿಸಬಲ್ಲೆ. ಜೀವನವನ್ನು ತಿಳಿದು ನಡೆಯುವುದೇ ಜ್ಞಾನ. ಸತ್ಯ, ಅಹಿಂಸೆ, ದಯೆ, ದಾಕ್ಷಿಣ್ಯಾದಿಗಳು ಅದರ ತಳಹದಿ. ನಿತ್ಯ ಕರ್ಮಾನುಷ್ಠಾನ ನಿಯಮಿತತನ ಇವು ಸಾಧನ ಮಾರ್ಗಗಳು. ಇವೆಲ್ಲವುಗಳನ್ನು ಅಳವಡಿಸಿಕೊಂಡು ನಮ್ಮಿಂದ ಎರಡನೇಯವರಿಗೆ ತೊಂದರೆಯಾಗದಂತೆ ಆದಷ್ಟು ನಮ್ಮಿಂದ ಎರಡನೇಯವರಿಗೆ ಸಹಾಯ ನೀಡುತ್ತ ಇದೇ ಪರಮಾತ್ಮನ ಸೇವೆ ಎಂದು ಗ್ರಹಿಸಿ ನಿಶ್ಚಲ ಬುದ್ಧಿಯಿಂದ ಪರಮಾತ್ಮನ ಅಸ್ತಿತ್ವವನ್ನು ತಿಳಿದು ಅವನ ಸೇವೆಯೇ ಇದೆಲ್ಲವೆಂದು ನಡೆಯಬೇಕು. ಗುರುಹಿರಿಯರಲ್ಲಿ ಭಕ್ತಿ ಶ್ರದ್ಧೆಗಳಿಂದ ಅವರ ಅನುಗ್ರಹ ಪಡೆದು ನಮ್ಮ ಪರಿವಾರವೇ ಪರಮಾತ್ಮನ ಪರಿವಾರವೆಂದು ನಂಬಿ ಅವರ ಪಾಲನಪೋಷಣೆಯಲ್ಲಿ ಇನ್ನೊಬ್ಬರ ಸೊತ್ತನ್ನು ಅಪಹರಿಸದೆ, ಇನ್ನೊಬ್ಬರಿಗೆ ನೋವಾಗದಂತೆ ನಡೆದರೆ ಅದೇ ಸಾಧನ, ಆಗ ನಮ್ಮ ಸಿದ್ಧಿ ಎಂದರೆ ಈ ಅಪರೋಕ್ಷ ಜ್ಞಾನ'' ಎಂದು ಹೇಳಿದ್ದನ್ನು ಕೇಳಿ ಋಷಿಯು ಅಹಂಕಾರ ತ್ಯಜಿಸಿ ಮತ್ತೆ ತಪಸ್ಸನ್ನು ಮಾಡಿ ಸಿದ್ಧಿಪಡೆದನು. ನೀವೆಲ್ಲರೂ ಈ ಋಷಿಯ ಜೀವನದ ಪಾಠ ಕಲಿಯಬೇಕು." ಎಂದು ಹೇಳುತ್ತಿದ್ದಂತೆ ಊಟಕ್ಕೆ ಕರೆಬಂದುದಕ್ಕೆ ಎಲ್ಲರೂ ಓಡಿದರು.



— ಚಕ್ರಧಾರಿ

# ಕಿಟ್ಟು 'ಕರ್ಮವೀರ'ದಲ್ಲಿ



# ದೀಪಾವಳಿ ಆಚರಿಸಿದಾಗ!



ನಿಮ್ಮಲ್ಲಿ ಕೀಟಲೆ ಕಿಟ್ಟುವನ್ನ ಯಾರಾದರೂ ನೋಡಿದ್ದೀರಾ? ಅವನು ಬಹಳ ತುಂಟ. ಅವನಿಗೆ ಇನ್ನೂ ಹತ್ತು ವರ್ಷ. ಅವನೂ ನಿಮ್ಮ ಹಾಗೆ ಸ್ಕೂಲಿಗೆ ಹೋಗ್ತಾ ಇದ್ದ. ಆಟ ಆಡ್ತಾ ಇದ್ದ. ಆದರೆ ಆ ಜೂಟಿಯಾದ ಕಿಟ್ಟುವಿನ ತುಂಟತನ ಬಹಳ ಜಾಸ್ತಿಯಾಗಿತ್ತು. ಏನು? ಮೇಲುಗಡೆ ನೋಡಿದರೆ ಕಿಟ್ಟು ಕರ್ಮವೀರದಲ್ಲಿ ದೀಪಾವಳಿ ಆಚರಿಸಿದಾಗ ಅಂತ ಇದೆ. ನಾವೆಲ್ಲಾ ಮನೆಯಲ್ಲಿ ದೀಪಾವಳಿ ಆಚರಿಸ್ತೀವಿ. ಇವನು ಕರ್ಮವೀರದಲ್ಲಿ ಅದೂ ವಾರಪತ್ರಿಕೆಯಲ್ಲಿ ಹೇಗೆ ದೀಪಾವಳಿ ಆಚರಿಸುತ್ತಾನೆ ಅಂತ ನೀವು ಕೇಳಬಹುದು. ಅದೇ ಹೇಳ್ತೀನಿ ಕೇಳಿ.

ದೀಪಾವಳಿಗೋಸ್ಕರ ಕಿಟ್ಟೂಗೆ ೪ ದಿನ ರಜೆ ಬಂದಿತ್ತು. ಆದ್ದರಿಂದ ಅವನಿಗೆ ಹೇಳಲಾರದ ಸಂತೋಷ. ಮೊದಲನೇ ದಿನ ಅಂದರೆ, ನೀರು ತುಂಬುವ ಹಬ್ಬ.

ಅವತ್ತು ಕಿಟ್ಟು ೧೦ ಗಂಟೆಗೇ ಮಲಗಿ ಬೆಳಗಿನ ಜಾವ ೪ ಘಂಟೆಗೆ ಎದ್ದು ಅಭ್ಯಂಜನ ಸ್ನಾನಮಾಡಿ ಅವರ ಅಕ್ಕ ಭಾವ ತಂದ ಹೊಸ ಅಂಗಿ ಷರ್ಟು, ಒಂದು ಚಿಕ್ಕಟ್ಟಿ,



ಪೂ ಹಾಕಿಕೊಂಡು ಬೀದಿ ಹತ್ತಿರ ಹೊರಟ. ನಮ್ಮ ಕೀಟಲೆ ಕಿಟ್ಟುನ ಹಾಗೆ ಬಹಳ ಜನ ಪಟಾಕಿ ಹಚ್ಚಿಸುತ್ತಾ ಇದ್ದರು.

ಅಕ್ಕ "ಕಿಟ್ಟೂ ಬಾರೋ ನಿನಗೂ ರಾಮುಗೂ ಆರತಿ ಎತ್ತುತೀನಿ. ಆ ಮೇಲೆ ಪಟಾಕಿ ಹಚ್ಚಿಸುವಿರಂತೆ" ಅಂತ ಕರೆದರು. ಕಿಟ್ಟು ಬಂದು ಚಡಪಡಿಸಿದ. ಬೇಗ ಆರತಿ ಎತ್ತಿ ಅಂದ. ಆ ಮೇಲೆ ಪಟಾಕಿ ಹೊಡೆದ.



ಮಧ್ಯಾಹ್ನ ಆಗ್ತಾ ಬಂತು. ಎಲ್ಲರ ಊಟ ಆಯಿತು. ಕಿಟ್ಟುವಿನ ಕಾಯುತ್ತಿದ್ದರು. ಆದರೆ ಅವನ ಸುಳಿವೇ ಕಾಣಲಿಲ್ಲ. ಕಿಟ್ಟು ತಾಯಿ ಬಂದು ಬಾಗಿಲಲ್ಲಿ ನೋಡಿದರು. ಅಕ್ಕಪಕ್ಕ ನೋಡಿ 'ಕಿಟ್ಟೂ,ಕಿಟ್ಟೂ' ಎಂದು ಕೂಗಿದರು.

ಅವನು ಎಲ್ಲೂ ಇರಲಿಲ್ಲ. ಆಗ ಮನೆಯಲ್ಲಿ ಎಲ್ಲರಿಗೂ ಗಾಬರಿಯಾಯಿತು. ತಕ್ಷಣ ಪೋಲೀಸ್ ಸ್ಟೇಶನ್‌ಗೆ ಕಂಪ್ಲೆಂಟ ಕೊಟ್ಟರು, ಕಿಟ್ಟೂವಿನ ತಂದೆ. ಪೋಲೀಸ್‌ನವರು ಬಂದು ನೋಡುತ್ತಾರೆ. ನಮ್ಮ ಕೀಟಲೆ ಕಿಟ್ಟು ರೂಮುನಲ್ಲಿ ಕೂತಿದ್ದ. ಏನು ಮಾಡ್ತಾ ಇದಾನೆ ಗೊತ್ತೆ? ಅಪ್ಪ ತಂದ "ಕರ್ಮವೀರ" ಸಂಚಿಕೆಯಲ್ಲಿ ದೀಪಾವಳಿಯ ವಿಷಯವನ್ನು ಓದಿಕೊಂಡು ತಲೆ ಆಡಿಸುತ್ತಾ ಕೂತಿದ್ದ. ಆ ಪುಸ್ತಕ ತುಂಬಾ ಭಾರವಾಗಿತ್ತು. ಆದರೂ ಕಿಟ್ಟು ಆ ಪುಸ್ತಕವನ್ನು ಉತ್ಸಾಹದಿಂದ ನೋಡತೊಡಗಿದ್ದ. ಅದರಲ್ಲಿ ಚಿತ್ರಗಳನ್ನು ಬಾಲಪ್ರಪಂಚವನ್ನೂ ನೋಡ್ತಾ ಇದ್ದ. ಇದನ್ನು ನೋಡಿ ತಂದೆ, ತಾಯಿಗಳಿಗೆ ಬಹಳ ಸಂತೋಷವಾಯಿತು. ತುಂಟ ಕಿಟ್ಟು ಹೀಗೆ ಯಾವ ಪುಸ್ತಕ—ಶಾಲೆಯ ಪುಸ್ತಕ ಕೂಡ—ಹಿಡಿದುಕೊಂಡು ಕೂತಿರಲಿಲ್ಲ. ಪುಸ್ತಕವೆಂದರೇ ಅವನಿಗೆ ಆಗುತ್ತಿರಲಿಲ್ಲ. ಅಂಥವನು ಈಗ ಊಟದ ಪರಿವೆ ಇಲ್ಲದೇ ಓದುತ್ತಿದ್ದಾನೆ. ಹಬ್ಬದ ದಿನ ನಲಿವಿನಿಂದ ಓಡಾಡಬೇಕೆಂದು ಯೋಚನೆ ಕೂಡ ಇಲ್ಲದೇ ಕೂತಿದ್ದಾನೆ. ಪಟಾಕಿ ಹಾರಿಸಬೇಕೆಂಬ ವಿಚಾರ ಕೂಡ ಅವನಿಗೆ ಇದ್ದಂತೆ ಇಲ್ಲ. ಸದ್ದುಗದ್ದಲವಿಲ್ಲದೇ ಹೀಗೆ ಎಂದೂ ಕೂಡದವ ಇಷ್ಟು ಸುಮ್ಮನೆ ಕೂತಿದ್ದಾನಲ್ಲ. ಆ ಪತ್ರಿಕೆ ಇವನನ್ನು ಎಷ್ಟು ಮರುಳು ಮಾಡಿದೆ ಎಂದೆಲ್ಲ ತಂದೆ ತಾಯಿಗಳು ವಿಚಾರಿಸಿಗೊಂಡರು. ತಾವೆಲ್ಲ ಸಂಭ್ರಮದಿಂದ ಊಟ ಉಡಿಗೆ ಹೊಸಬಟ್ಟೆಗಳಿಂದ ದೀಪಾವಳಿ ಆಚರಿಸುತ್ತಿರುವಾಗ, ಇತರ ಹುಡುಗರು ಮದ್ದು ಹಾರಿಸಿ ಅತ್ತಿತ್ತ ಓಡಾಡಿಕೊಂಡಿರುವಾಗ ಕಿಟ್ಟು ಮಾತ್ರ 'ಕರ್ಮವೀರ'ದಿಂದ ದೀಪಾವಳಿ ಆಚರಿಸಿದ್ದು ಅವರಿಗೆಲ್ಲ ಹೊಸದೇ ಅನಿಸಿತು. ಹೀಗೆಯೇ ಪ್ರತಿವರುಷ ತಮ್ಮ ಹುಡುಗನನ್ನು ನಲಿಯುವಂತೆ ಮಾಡಲು 'ಕರ್ಮವೀರ' ಇಷ್ಟೇ



ಚೆನ್ನಾಗಿ ಬರಲಿ ಎಂದು ಅವರು ಅಂದುಕೊಂಡರು. ಇದೇ ಸರಿಯಾದ ದೀಪಾವಳಿ ಆಚರಣೆ ಅಲ್ಲವೆ?

**ಎಸ್. ಚಂದ್ರಶೇಖರ**
ಸ. ಸಂ. ೧೫೫೧ ಬೆಂಗಳೂರು



# 'ಶೀಲ ಕೊಟ್ಟು ಕಳ



ದೇವ ಮಂದಾಕಿನಿಯ ಕಲ್ಲುಬಂಡೆಯ ಮೇಲೆ ದೇವಗುರು ಬೃಹಸ್ಪತಿಗಳು ಸಾಯಂ ಸಂಧ್ಯೆ ಮಾಡುತ್ತ ಕುಳಿತಿದ್ದರು. ಅವರಿನ್ನೂ ಅದರಲ್ಲಿ ನಿರತರಾಗಿರುವಾಗಲೇ ಮಹೇಂದ್ರ ಅಲ್ಲಿಗೆ ಧಾವಿಸಿಬಂದ. ಉದಾಸ ಭಾವದ ದೇವೇಂದ್ರನನ್ನು ಕಂಡು ಬೃಹಸ್ಪತಿಗಳು ಬೇಗ ಬೇಗ ಸಂಧ್ಯಾವಂದನೆ ಮುಗಿಸಿದರು. ನಂತರ ದೇವೇಂದ್ರನ ಯೋಗಕ್ಷೇಮ ವಿಚಾರಿಸಿದರು.

" ಎಲ್ಲಿಯ ಕುಶಲ ಗುರುಗಳೇ. ನನ್ನದೆನ್ನುವದಾದರೂ ಏನಿದೆ ? " ಎಂದು ಕಂಬನಿ ಗರೆದನು.

" ಏನು ಮೂಲೋಕಗಳ ಒಡೆಯನು ದುಃಖಿಸುವದೆ ? ಏನು ಅಂಥ ಆಪತ್ತು ನಿನಗೆ? ''

" ಈಗ ನೀವು ಹೇಳಿದ ಬಿರುದು ನನ್ನದಾಗಿ ಉಳಿದಿಲ್ಲ. ದೈತ್ಯರಾಜ ಪ್ರಹ್ಲಾದ ಈಗ ಅದನ್ನು ಪಡೆದಿದ್ದಾನೆ. ಅಮರಾವತಿ ಈಗ ಹಾಳು ಸುರಿಯುತಿದೆ. ನನ್ನದು ಹೆಸರಿಗೆ ಮಾತ್ರ ಅಧಿಕಾರವಾಗಿದೆ. ''

" ದೈತ್ಯೇಂದ್ರ ಪ್ರಹ್ಲಾದ ಪರಮ ಹರಿಭಕ್ತನಲ್ಲವೆ? ಆತನ ಗುಣಶೀಲಗಳಿಂದಾಗಿ ಸಂಪತ್ತು ಅಧಿಕಾರ ಅವನನ್ನು ಸೇರಿವೆ. ಆತನಿಂದ ಇವನ್ನು ಮರಳಿ ಪಡೆಯುವದು ತುಂಬ ಕಠಿಣ. ನೀನು ವಿಲಾಸವೈಭವದಲ್ಲಿ ಮಗ್ನನಾಗಿ ಧರ್ಮವನ್ನೇ ಮರೆತುಬಿಟ್ಟಿರುವಿ: ಧರ್ಮ ಬಿಟ್ಟವರನ್ನು ಐಶ್ವರ್ಯಾಧಿಕಾರಗಳು ಹೇಗೆ ಹೊಂದಿಕೊಂಡಿರಬಲ್ಲವು? ''

" ನನ್ನಿಂದ ಮಹಾಪರಾಧವಾಗಿದೆ ಗುರುಗಳೇ. ಈಗ ಈ ಶಿಷ್ಯನನ್ನು ನೀವಲ್ಲದೇ ಇನ್ನಾರು ಉದ್ಧರಿಸುವರು? "

ಇಂದ್ರನ ಕಂಬನಿ ಮಹರ್ಷಿಗಳ ಕಾಲುಗಳನ್ನು ತೊಳೆದಾಗ "ಇರಲಿ. ನಿರಾಶನಾಗಬೇಡ. ಕಳೆದು ಹೋದುದನ್ನು ಮರಳಿಪಡೆಯಬಹುದು " ಎಂದರು.

" ಅದೆಂತು ಸಾಧ್ಯ ಗುರುಗಳೇ ? "

" ನೀನು ಪ್ರಹ್ಲಾದನಂತೆ ಗುಣ ಶೀಲ ಪಡೆಯಲು ತಪಸ್ಸು ಮಾಡಬೇಕು. ಕಷ್ಟ ಪಡಬೇಕು. ''

" ಎಷ್ಟು ಕಾಲ ತಪಸ್ಸು ಮಾಡಬೇಕು. ಯಾರನ್ನು ಕುರಿತು ಮಾಡಬೇಕು? "

" ಇನ್ನೂ ಒಂದು ಉಪಾಯ ನನಗೆ ತೋರುತ್ತದೆ. ''

"ಅದೇನು ಗುರುಗಳೇ ? "

" ನೀನು ಪ್ರಹ್ಲಾದನಲ್ಲಿ ಹೋಗಿ ಶೀಲ ಸಂಪಾದಿಸು. ''

" ಅದು ಹೇಗೆ ಗುರುಗಳೇ ? "

" ನೀನು ಶಿಷ್ಯನಾಗಿ ಅವನ ಸೇವೆ ಮಾಡು. ಅವನು ಪ್ರಸನ್ನನಾದಾಗ ಅವನ ಶೀಲವನ್ನೇ ದಾನವಾಗಿ ಕೇಳು. ಆಗ ನಿನ್ನ ಮೊದಲಿನ ಐಶ್ವರ್ಯಗಳೆಲ್ಲ ತಿರುಗಿ ಬರುವವು. "

" ನಿಮ್ಮ ಆಶೀರ್ವಾದವಿದ್ದರೆ ಸಾಕು. "

× × ×

ದೇವೇಂದ್ರನು ಬ್ರಾಹ್ಮಣ ಬಾಲಕನರೂಪದಲ್ಲಿ ದೈತ್ಯೇಂದ್ರ ಪ್ರಹ್ಲಾದನ ಸೇವೆಯಲ್ಲಿ ತೊಡಗಿದನು. ಪ್ರಹ್ಲಾದನಿಂದ ಅನೇಕ ವಿಷಯಗಳನ್ನು ಅರಿತುಕೊಂಡನು. ಆತನಜೀವನದ ಯಶಸ್ಸಿನ ಗುಟ್ಟನ್ನು ತಿಳಿದುಕೊಂಡ. "ನೋಡು ವಿಪ್ರೋತ್ತಮ. ಗೋ-ಬ್ರಾಹ್ಮಣ ಸ್ತ್ರೀಯರನ್ನು ರಾಜರಾದವರು ಮನ್ನಿಸಬೇಕು. ಅವರ ಅಪಮಾನವನ್ನೆಂದಿಗೂ ಮಾಡಬಾರದು. ದಯೆ, ಧರ್ಮ, ನ್ಯಾಯಗಳಿಂದ ಪ್ರಜಾಕೋಟಿಯನ್ನು ಪಾಲಿಸಬೇಕು. ಸ್ವಾರ್ಥ ಕಾಮಗಳಿಗೆ ಬಲಿಬಿದ್ದು ನಾವು ಕೆಳಗಿಳಿಯಬಾರದು. ಇವೆಲ್ಲವನ್ನು ಮನಸ್ಸಿನಲ್ಲಿಟ್ಟುಕೊಂಡು ಪರಮಾತ್ಮನ ಮೇಲೆ ಭಾರಹಾಕಿ ನಡೆದರೆ ಯಾವುದೂ ದುಸ್ಸಾಧ್ಯವಿಲ್ಲ ಇದೆಲ್ಲ ಸಾಧಿಸಬೇಕಾದರೆ ಶೀಲವಂತನಾಗಿರಬೇಕು."



ಇಂದ್ರನ ಏಕಮನಸ್ಸಿನ ಸೇವೆಯಿಂದ ಪ್ರಹ್ಲಾದನು ತುಂಬ ಪ್ರೀತನಾಗಿದ್ದನು. ಇಂದ್ರನು ಅವನ ಮೇಲೆ ಪ್ರಭಾವ ಬೀರಿ- ದ್ದನು. ಪ್ರಹ್ಲಾದನು ಒಂದು ದಿನ ಒಳ್ಳೇ ಸಂತೋಷಚಿತ್ತನಾಗಿ ಹರಿನಾಮ ಸಂಕೀರ್ತನ ದಲ್ಲಿದ್ದಾಗ ತನಗೆ ಹೋಗಲು ಅಪ್ಪಣೆಕೊಡ ಬೇಕೆಂದು ಇಂದ್ರನು ಕೇಳಿಕೊಂಡನು.

# ಸಕಲವನು ಕೊಂಡ'

ಇಂದ್ರನಿಗೆ ಏನೋ ಬೇಕಾಗಿರುವದಾಗಿ ಅವನ ಮಾತಿನಿಂದ ಅರಿತ ಪ್ರಹ್ಲಾದ "ನಿನ್ನ ಕೋರಿಕೆ ಏನಿದ್ದರೂ ಈಡೇರಿಸುವೆ" ಎಂದನು "ಹಾಗಾದರೆ ನಿಮ್ಮ ಶೀಲವನ್ನು ನನಗೆ ದಾನ ಕೊಡಿರಿ." ಎಂದು ಇಂದ್ರನು ಕೇಳಿ- ಕೊಂಡನು.

ಪ್ರಹ್ಲಾದನ ಮುಖ ಒಮ್ಮೆಲೇ ಮ್ಲಾನ ವಾಯಿತು. ಶೀಲವನ್ನು ದಾನವಾಗಿ ಕೊಡುವ ದೆಂದರೇನು ? ಆದರೆ ಇದರಿಂದ ಪ್ರಹ್ಲಾದ ಹಿಂದೆಗೆಯುವನೆಂದು ಭಾವಿಸಿ ಇಂದ್ರ "ನಿಮಗೆ ಈಡೇರಿಸಲಾಗದಿದ್ದರೆ ನಾನು ಹೊರಟೆ'' ಎಂದ. ಪ್ರಹ್ಲಾದ "ಬೇಡಬೇಡ ನಿಲ್ಲು. ಇಗೋ ಶೀಲವನ್ನು ದಾನವಾಗಿ ಕೊಟ್ಟೆ" ಎಂದು ಆತನನ್ನು ನಿಲ್ಲಿಸಿಕೊಂಡು ವಿಧಿಪೂರ್ವಕವಾಗಿ ದಾನವಿತ್ತ.

ದಾನ ತೆಗೆದುಕೊಂಡ ಬ್ರಾಹ್ಮಣ ಹೊರಟು ಹೋದ. ಪ್ರಹ್ಲಾದ ಕಳೆಗುಂದಿ ಚಿಂತಿಸುತ್ತ ತನ್ನ ಸಿಂಹಾಸನದಲ್ಲಿ ಕುಳಿತುಕೊಂಡನು. ಸ್ವಲ್ಪೇ ಹೊತ್ತಿನಲ್ಲಿ ಆತನ ದೇಹದಿಂದ ಒಂದು ತೇಜಸ್ಸು ಹೊರಹೊಮ್ಮಿ ದೂರ ಸಾಗಿತು. ಪ್ರಹ್ಲಾದ ಅದನ್ನು ಕೂಗಿ "ನೀನು ಯಾರು ಎಲ್ಲಿಗೆ ಹೋಗುತ್ತಿ?" ಎಂದು ಕೇಳಿದ.

''ನಾನು ನಿನ್ನ ಶೀಲ, ನೀನು ದಾನವಾಗಿ ತ್ತವನಲ್ಲಿಗೆ ಹೋಗುವೆ'' ಎಂದು ಹೇಳಿತು. ಇದೇ ನೋ ಘಟಿಸಲಿದೆ ಎನ್ನು ವಷ್ಟರಲ್ಲಿ ಇನ್ನೊಂದು ತೇಜಸ್ಸು ಹೊರಹೊಮ್ಮಿ ದೂರ ಹೊರಟಿತು. ಮತ್ತೆ ಪ್ರಹ್ಲಾದ ಗಾಬರಿಯಿಂದ "ನೀನಾರುಎಲ್ಲಿಗೆಹೊರಟೆ?" ಎಂದು ಕೇಳಿದ. "ನಾನು ಸತ್ಯ, ಶೀಲವಿರುವಲ್ಲಿಗೆ ಹೋಗುವೆ" ಎಂದು ಹೇಳಿ ಮಾಯವಾಯಿತು. ಅದರ ಹಿಂದೆಯೇ ಇನ್ನೊಂದು ತೇಜಸ್ಸುಪ್ರಹ್ಲಾದನ ದೇಹ ದಿಂದ ಹೊರಕ್ಕೆ ಬಂತು. "ನೀನು ಯಾರು?" ಎಂದು ಅದನ್ನು ಕೇಳಿದ "ನಾನು ಧರ್ಮ, ಶೀಲಸತ್ಯಗಳಿರು ವಲ್ಲಿಗೆ ಹೋ ಗು ವೆ" ಎಂದಿತು.







ಧರ್ಮ ಹೋದ ಕೆಲವೇ ಕ್ಷಣಗಳಲ್ಲಿ ಬಲ, ಸತ್ಯ, ವ್ರತ ಒಂದೊಂದಾಗಿ ಹೋದವು. ಪ್ರಹ್ಲಾದ ಅವನ್ನೆಲ್ಲ ಕೇಳಿದ. ಅವುಗಳ ಉತ್ತರವೆಲ್ಲ ಒಂದೇ ಆಗಿತ್ತು. ಕೊನೆಗೆ ಒಬ್ಬ ತೇಜಸ್ವಿ ಮಹಿಳೆ ಆತನ ದೇಹದಿಂದ ಹೊರಗೆ ಬಂದಳು. ಭಯಭಕ್ತಿಯಿಂದ ಪ್ರಹ್ಲಾದ "ನೀನು ಯಾರು? ಎಲ್ಲಿಗೆ ಹೊರಟೆ'' ಎಂದು ಕೇಳಿದ "ನಾನು ಲಕ್ಷ್ಮೀ, ಶೀಲ ಧರ್ಮಗಳಿ ರುವಲ್ಲಿಗೆ ಹೋಗುವೆ" ಎಂದಳು. "ನೀನು ಯಾರಲ್ಲಿಗೆ ಹೋಗುವೆ? ಆತನಾರು" ಎಂದು ಪ್ರಹ್ಲಾದ ಮರುಪ್ರಶ್ನೆ ಮಾಡಿದ.

"ಆತನೇ ಇಂದ್ರ. ಇನ್ನುಮೇಲೆ ತ್ರೈಲೋ ಕ್ಯಾಧಿಪತಿ. ಶೀಲವಿರುವಲ್ಲಿ ಧರ್ಮ ಸತ್ಯ, ಲಕ್ಷ್ಮೀ, ಕೀರ್ತಿ ತ್ರೈಲೋಕ್ಯಾಧಿಕಾರ ನೆಲೆ ಸುತ್ತವೆ. ನೀನು ಶೀಲವನ್ನು ದಾನವಾಗಿ ಗಿತ್ತು ನಮ್ಮನ್ನು ಅವನಿಗೆ ಕೊಟ್ಟೆ.'' ಎಂದು ಹೇಳಿ ಮಾಯವಾದಳು.

ಪ್ರಹ್ಲಾದನ ಶೀಲದೊಂದಿಗೆ ಅವನ ವೈಭವ ಸಂಪತ್ತು ರಾಜ್ಯಾಧಿಕಾರಗಳೆಲ್ಲ ಇಂದ್ರನ ವಶ ವಾದವು. ಶೀಲ ಹೋದರೂ ಯೋಗ್ಯ ವ್ಯಕ್ತಿಗೆ ನಾನದನ್ನು ದಾನವಾಗಿತ್ತೆನೆಂಬ ಅಲ್ಪಸಂತೋಷ ಆತನ ದುಃಖವನ್ನು ಶಮನ ಮಾಡಲು ಸಮರ್ಥವಾಗಲಿಲ್ಲ. ನನ್ನ ಪುಣ್ಯ ತೀರಿತೆಂದು ಹತಾಶನಾಗಿ ಕೈಯೆತ್ತಿ ಶ್ರೀಹರೀ ಎಂದು ಕೂಗಿದ.

— ಪ್ರ. ರಂ. ಪಂಥರಿ

# ದಿಲ್ಲಿಯಲ್ಲಿ ಕನ್ನಡಿಗರು

ಭಾರತದ ವಿವಿಧ ರಾಜ್ಯಗಳಲ್ಲಿ ನೂರಾರು ಸಾವಿರಾರು ಕನ್ನಡಿಗರು ಹೋಗಿ ನೆಲೆಸಿದ್ದಾರೆ. ವಿಶೇಷತಃ ಗುಜರಾತ ಮಹಾರಾಷ್ಟ್ರ, ತಮಿಳುನಾಡು, ಆಂಧ್ರ ಹಾಗೂ ದಿಲ್ಲಿ ಪ್ರದೇಶಗಳಲ್ಲಿ ಇವರ ಸಂಖ್ಯೆ ವಿಶೇಷ. ಅವರು ಅನುಭವಿಸುವ ಸಂಕಷ್ಟಗಳು ಅನೇಕ. ಅದಕ್ಕಾಗಿ ಅವರು ಸಂಘಟಿತರಾಗಿ ಕೆಲಸ ಮಾಡಬೇಕು. ಅವರ ಜೀವನದ ಒಳಹೊರಗುಗಳನ್ನು ನಾವು ನೋಡಬೇಕು. ದಿಲ್ಲಿ, ಗುಜರಾತ, ಮಹಾರಾಷ್ಟ್ರ, ತಮಿಳುನಾಡುಗಳಲ್ಲಿಯ ಕನ್ನಡಿಗರ ಬಗೆಗೆ ಇಲ್ಲಿ ನಾಲ್ಕು ಲೇಖಗಳಲ್ಲಿ ವಿವರಿಸಲಾಗಿರುವದು.

ಲಕ್ಷ್ಮಣ ಜೋಶಿ ದಿಲ್ಲಿ

"ಸಾಕು" ಎಂಬುದೇ ಸಾವು, 'ಬೇಕು' ಎಂಬುದೇ ಬದುಕು' ಎಂದು ಶ್ರೀ ಶಂ. ಬಾ ಜೋಶಿಯವರು ಹೇಳಿದ್ದಾರೆ. ಆದರೆ ಇನ್ನೂ ಬೇಕು ಇನ್ನಷ್ಟುಬೇಕು ಮತ್ತಷ್ಟುಬೇಕೆಂಬ ದುರಾಶೆಯಲ್ಲ. ಉತ್ತಮವಾದುದು, ಶ್ರೇಷ್ಠವಾದುದು ಉರ್ಜಿತಾವಸ್ಥೆಗೆ ಸೋಪಾನವಾಗತಕ್ಕಂತಹದು, ಹೆಮ್ಮೆ ತಳೆಯುವಂತಹದು, ಏನಿದ್ದರೂ ಬೇಕು. ದಿಲ್ಲಿಯ ಕನ್ನಡಿಗರಿಗಂತೂ ಈ"ಬೇಕು ಬೇಕೆಂಬಾಸೆ" ಬಲಿತು ಹೆಮ್ಮರವಾಗಬೇಕು. ಆ ಮರಕ್ಕೆ ಸುಮಧುರ ಪುಷ್ಪ ಫಲಗಳನ್ನು ನೀಡುವಂತಹ ಶಕ್ತಿ ಅದಕ್ಕೆಬೇಕು ಸಂಘಶಕ್ತಿಯ ಅವಶ್ಯಕತೆ ದಿಲ್ಲಿಯ ಕನ್ನಡಿಗರಿಗೆ ಹೆಚ್ಚಾಗಿದೆ. ಹೀಗೆ ಹೇಳಿದ ಮಾತ್ರಕ್ಕೆ ದಿಲ್ಲಿಯಲ್ಲಿ ಕನ್ನಡ ಸಂಘಗಳಿಲ್ಲವೆಂದು ಯಾರೂ ಭಾವಿಸಬಾರದು. ಬೇಕಾದಷ್ಟು ಸಂಘಸಂಸ್ಥೆಗಳಿವೆ, ಕನ್ನಡ ಶಾಲೆಯೊಂದೂ ಇದೆ. ಸಂಘಸಂಸ್ಥೆಗಳಲ್ಲಿ ಮನಮುಟ್ಟಿ ದುಡಿಯುವವರಿದ್ದಾರೆ. ಉನ್ನತ ಅಧಿಕಾರಿಗಳು, ರಾಜಕಾರಣಿಗಳು ಯಥಾಶಕ್ತಿ ತನುಮನಗಳಿಂದ ಸಹಾಯ ಸಲ್ಲಿಸುತ್ತಿದ್ದಾರೆ. ಧನದಿಂದ ಅವರೆಲ್ಲ ಸಲ್ಲಿಸುವ ಸಹಾಯಕ್ಕೆ, ಎಲ್ಲರೂ ಚಿರಋಣಿಗಳು. ಆದರೆ ಈ ಧನಸಹಾಯ ಸಾಕಷ್ಟಿಲ್ಲವೆಂಬುದು ಅಸಮಾಧಾನದ ಸಂಗತಿ.

ದಿಲ್ಲಿ ಒಂದು ವಿಶಾಲನಗರ. ದಿನದಿನಕ್ಕೆ ಇದು ಬೃಹದಾಕಾರವಾಗಿ ಬೆಳೆಯುತ್ತಿದೆ. ಇಂತಹ ನಗರದಲ್ಲಿ ಒಂದು ಸಂಸ್ಥೆಯಿಂದ ನುಡಿಯ ಸೇವೆ ಸಾಲದು. ಹತ್ತಾರು ಸಂಘಸಂಸ್ಥೆಗಳ ಅವಶ್ಯಕತೆ ಇದೆ. ಒಂದೇ ಮರದ ಹಲವಾರು ಟೊಂಗೆಗಳಂತೆ ಇವು ಜನ್ಮ ತಾಳಬೇಕು. ಅಗತ್ಯ ಬಿದ್ದಾಗ, ಇವುಗಳೆಲ್ಲಾ ಒಂದಾಗಿ ಕೀರ್ತಿಕಾಮನೆ ಇಲ್ಲದೇ ಎಲ್ಲವನ್ನೂ ಕೃಷ್ಣಾರ್ಪಣಮಸ್ತು ಎಂದು ದುಡಿಯುವ ಸೇವಾಭಾವನೆ ವಿಶಾಲವೂ ಅನಂತವೂ ಆಗಿರಬೇಕು. "ಆಲಮಟ್ಟಿ ಜಂಗಮರು" ಮನೆಕಟ್ಟಿದಂತೆ ಹೂತನಾಡಿ ಕೈ ಬಿಡುವದಾಗಲಿ, ಉಬ್ಬಿನಲ್ಲಿ ಸಂಘ ಒಂದನ್ನು ರೂಪಿಸಿ, ಆರಂಭಶೂರರಾಗಿ ಮಂಜಿನ ಗುಳ್ಳಿಯಂತೆ ಕರಗುವದಾಗಲಿ ಯಾರಿಗೂ ಸಲ್ಲದ ಮಾತು. ಅಂತೆಯೆ ದಿಲ್ಲಿಯ ಕನ್ನಡಿಗರಿಗೂ ಸಲ್ಲದೆಂದೇ ದಿಲ್ಲಿಯ ಕನ್ನಡಿಗರು ಪೂರ್ತಿ ಮನಗಂಡಿದ್ದಾರೆಂಬುದೇ ತೃಪ್ತಿಯ ಸಂಗತಿ. ಅದಕ್ಕೆ ಸಾಕ್ಷಿಯಾಗಿ ಕೆಲವು ಸಂಘಸಂಸ್ಥೆಗಳು ಉತ್ತಮ ಕೆಲಸಗಳನ್ನು ಮಾಡುತ್ತಿವೆ. ೧೯೪೮ ರಲ್ಲಿ ಸ್ಥಾಪಿತವಾದ ಕರ್ನಾಟಕ ಸಂಘ ದಿಲ್ಲಿಯಲ್ಲಿಯೆ ಮೊದಲನೆಯದು. ಇದನ್ನು ಪ್ರಾರಂಭಿಸಿದ ಡಾ. ವಿ. ಕೆ. ಆರ್, ವಿ. ರಾವ, ಶ್ರೀ ಎಸ್.ಆರ್, ಎಸ್. ರಾಘವನ್ ಮತ್ತು ಮೊದಲ ಅಧ್ಯಕ್ಷರಾದ ಶ್ರೀ ಏ. ವಿ. ಪೈ ಐ. ಸಿ ಎಸ್ ಇವರು ಅಭಿನಂದನೀಯರು. ದಿಲ್ಲಿಯ ಕನ್ನಡಿಗರಲ್ಲಿ ಚೈತನ್ಯ ತುಂಬಿದ ಈ ಸಂಸ್ಥೆ, ಪ್ರಶಂಸನೀಯ ಕೆಲಸ ಮಾಡುತ್ತಿದೆ. ಕನ್ನಡ ಶಾಲೆಯನ್ನು ಆರಂಭಿಸಿದ ಶ್ರೇಯಸ್ಸು ಈ ಸಂಘಕ್ಕೆ ಸೇರಿದೆ. ೧೯೫೦ ರಲ್ಲಿ ಹೊರನಾಡ ಕನ್ನಡಿಗರ ಸಮ್ಮೇಳನವು ಕರ್ನಾಟಕ ಸಂಘದ ಆಶ್ರಯದಲ್ಲಿ ನಡೆಯಿತು. ಗ್ವಾಲೇರ, ಜಬಲಪೂರ, ಮುಂಬೈ, ನಾಸಿಕ, ಹರಿದ್ವಾರ, ಬನಾರಸ ಮುಂತಾದ ನಗರಗಳಿಂದ ಈ ಸಮ್ಮೇಳನಕ್ಕೆ ಜನರು ಬಂದಿದ್ದರು. ಆಗ ಸಮಾಚಾರ ಹಾಗು ಪ್ರಸಾರಖಾತೆಯ ಮಂತ್ರಿಯಾಗಿದ್ದ ಶ್ರೀ ಆರ್, ಆರ್. ದಿವಾಕರ ಅವರು ಈ ಸಮ್ಮೇಳನದ ಉದ್ಘಾಟನೆಯನ್ನು ನಡೆಸಿದರು. ಅಧ್ಯಕ್ಷತೆ ವಹಿಸಿದ್ದ ಶ್ರೀ ಎಂ, ಆರ್. ಗೋಪಾಲನ್ ಅವರು ಕನ್ನಡಿಗರೇತರರ ಹಿತದೃಷ್ಟಿಯಿಂದ, ಸಂಸ್ಕೃತ ಮತ್ತು ಇಂಗ್ಲೀಷ ಭಾಷೆಯಲ್ಲಿ ಮಾತನಾಡಿದರು. ಇದರಿಂದ ಅನ್ಯಭಾಷಾ ಜನರಿಗೂ ಕನ್ನಡನಾಡು ಕನ್ನಡ ಭಾಷೆಯ ಅಸ್ತಿತ್ವದ ಬಗ್ಗೆ ಸ್ವಲ್ಪ ಕಲ್ಪನೆ ಬಂದಿತೆನ್ನಬಹುದು. ಆದರೂ ಇತ್ತೀಚೆಗೆ ಪತ್ರಿಕೋದ್ಯಮಿಗಳೊಬ್ಬರು, ಉತ್ತರ ಭಾರತದ ಪ್ರವಾಸ ಕೈಗೊಂಡಾಗ ಅವರುಂಡ ಅನುಭವವನ್ನು ನೆನೆದಾಗ, ಕನ್ನಡ ನಾಡು ನುಡಿಯ ಬಗ್ಗೆ ಜಾಗ್ರತೆ ಸಾಲದು ಎಂಬ ಭಾವನೆ ಮೂಡುತ್ತದೆ,

ಉತ್ತರ ಭಾರತದವರು ದಕ್ಷಿಣ ಭಾರತ ಬಗ್ಗೆ, ಅರಿತಿಲ್ಲವೆಂದೂ ಭಾವಿಸಬೇಕೆಂದರೆ ಅದಕ್ಕೊ ವ್ಯತ್ಯಯ ಬಂತು ಒಂದು ಸಲ. ಮದ್ರಾಸ ದಕ್ಷಿಣ ಭಾರತದಲ್ಲಿ ಇದೆಯಷ್ಟೆ. ಅಲ್ಲಿಯವರಿಗೂ ಕನ್ನಡದ ಬಗ್ಗೆ ಸರಿಯಾಗಿ ಗೊತ್ತಿಲ್ಲವೆಂಬುದು ಆಶ್ಚರ್ಯದ ಸಂಗತಿ.

" When are you starting a Kanarese School ? " ಎಂದು ಮದ್ರಾಸಿನವರೊಬ್ಬರು ಕೇಳಿದರು. "ದಿಲ್ಲಿಯಲ್ಲಿ ಕನ್ನಡಿಗರು ಕನ್ನಡಭಾಷೆಯನ್ನು ಆಡುತ್ತಾರೆ Kanarese ಅಲ್ಲ" ಎಂದು ಹೇಳಬೇಕಾಗಿ ಬಂತು ಕನ್ನಡಿಗರೊಬ್ಬರಿಗೆ. ಅವರ ಪ್ರಶ್ನೆಯಿಂದ ಕನ್ನಡದ ಬಗ್ಗೆ ಅವರಿಗಿದ್ದ ಅಜ್ಞಾನದ ಪರಿಚಯವಾದರೂ ದಿಲ್ಲಿಯಲ್ಲಿ ಕನ್ನಡ ಶಾಲೆಯ ಅವಶ್ಯಕತೆಯ ಬಗ್ಗೆ ಅರಿವೂ ಉಂಟಾಯಿತು. ಯಾಕೆಂದರೆ ಉಳಿದೆಲ್ಲ ಭಾಷೆಗಳಿಗೂ ಶಾಲೆಗಳಿದ್ದವು ಈ ಕೊರತೆಯನ್ನು ಪೂರೈಸಲೆಂದೇ ಕರ್ನಾಟಕ ಸಂಘವು ಕನ್ನಡ ಶಾಲೆಯನ್ನು ಆರಂಭಿಸಿತು, ಕನ್ನಡದ ನಾಡನುಡಿಗಳ ಜ್ಞಾನ ಹೊರನಾಡಲ್ಲಿ ಪ್ರಸಾರವಾಗಲೆಂದೇ, ೧೯೫೧ ರಲ್ಲಿ ಕೆಂಪುಕೋಟೆಯಲ್ಲಿ ನಡೆದ, ಅಖಿಲ ಭಾರತ ಸಾಂಸ್ಕೃತಿಕ ಉತ್ಸವದಲ್ಲಿ, "ಕನ್ನಡ"ದ ಮಳಿಗೆಯೊಂದನ್ನು ಇಡಲಾಗಿತ್ತು. ಕೈಬರಹದ ಪ್ರತಿಗಳು, ನಿಯತಕಾಲಿಕ ಹಲವಾರು ಪತ್ರಿಕೆಗಳನ್ನೂ ಛಾಯಾಚಿತ್ರಗಳನ್ನೂ ಇದರಲ್ಲಿ ಪ್ರದರ್ಶಿಸಲಾಗಿತ್ತು. ಫಿರೋಜಶಹಾ ರಸ್ತೆಯಲ್ಲಿ ಶ್ರೀ ಶಂಕರಯ್ಯನವರ ಮನೆಯಲ್ಲಿ, ಕುಶಲ ಕೈಗಾರಿಕಾ ಪ್ರದರ್ಶನ ಒಂದನ್ನು ಕರ್ನಾಟಕಸಂಘವು ಏರ್ಪಡಿಸಿದ್ದು ಪ್ರಶಂಸನೀಯ ಸಂಗತಿ

೧೯೫೪ ರಲ್ಲಿ ಕನ್ನಡ ಉತ್ಸವವನ್ನು ಮೂರುದಿನಗಳ ವರೆಗೆ ಆಚರಿಸಲಾಯಿತು. ಆಗಿನ ರಾಷ್ಟ್ರಪತಿದಿ ಡಾ. ರಾಜೇಂದ್ರಪ್ರಸಾದ ಅವರು ಈ ಉತ್ಸವದ ಉದ್ಘಾಟನೆಯನ್ನು ನೆರವೇರಿಸಿದರು. ಶ್ರೀ ನೆಹರೂ ಅವರು ಈ ಸಮಾರಂಭಕ್ಕೆ ಆಗಮಿಸಿದ್ದರು. ರನ್ನನ "ಗದಾಯುದ್ಧ","ಸಂಸಾ" ಅವರ "ವಿಗಡ ವಿಕ್ರಮರಾಯ" ನಾಟಕಗಳನ್ನು ಈ ಸಂದರ್ಭದಲ್ಲಿ ಆಡಲಾಯಿತು. ೧೯೬೦ ರಲ್ಲಿ ಪುರಂದರದಾಸರ ಕೀರ್ತನೆಗಳ ಹಿಂದಿ ಅನುವಾದವನ್ನು ಪ್ರಕಟಿಸಿದ್ದು ಮತ್ತು ೧೯೬೧ ರಲ್ಲಿ ಹಿಂದಿಯಲ್ಲಿಯೇ ವಚನ ಸಾಹಿತ್ಯ ಪರಿಚಯವನ್ನು ಪ್ರಕಟಿಸಿದ್ದೂ ಉಲ್ಲೇಖನೀಯವಾಗಿವೆ. ೧೯೫೪, ೫೫ ಮತ್ತು ೫೬ ರಲ್ಲಿ ವಿಶ್ವವಿದ್ಯಾನಿಲಯಗಳ ಯುವಜನ ಮಹೋತ್ಸವಕ್ಕೆ ಆಗಮಿಸಿದ, ಕರ್ನಾಟಕ ಮತ್ತು ಮೈಸೂರ ವಿಶ್ವವಿದ್ಯಾನಿಲಯಗಳಿಂದ ಬಂದ ವಿದ್ಯಾರ್ಥಿ ವಿದ್ಯಾರ್ಥಿನಿಯರಿಂದ ಕಾರ್ಯಕ್ರಮಗಳನ್ನು ಏರ್ಪಡಿಸುವದು ಕರ್ನಾಟಕ ಸಂಘದ ರೂಢಿಯಾಗಿತ್ತು.

ದಿಲ್ಲಿಯ ಕನ್ನಡಿಗರು ಕನ್ನಡದ ಸಾಹಿತಿಗಳನ್ನು ಆಗಾಗ ಉಚಿತ ಸನ್ನಿವೇಶಗಳಲ್ಲಿ ಸತ್ಕರಿಸುತ್ತಲೇ ಇರುವದು ಹೆಮ್ಮೆಯ ಸಂಗತಿ, ಬೇಂದ್ರೆ ಸತ್ಕಾರ ಸಮಿತಿ ಕವಿವರ್ಯ ಬೇಂದ್ರೆಯವರಿಗೆ ಹಮ್ಮಿಣಿಯನ್ನು ಸಲ್ಲಿಸಿತು. ಆರ್, ಎಸ್. ಮುಗಳಿ, ಶ್ರೀ ಕಾರಂತ, ಶ್ರೀ ಆರ್. ಕೆ. ನಾರಾಯಣ, ಶ್ರೀ ಆದ್ಯ ರಂಗಾಚಾರ್ಯ ಮತ್ತು ದೇವೇಂದ್ರಪ್ಪ ಮುಂತಾದ ಮಹಾನ್‌ವ್ಯಕ್ತಿಗಳಿಗೆ ಸತ್ಕಾರ ಮಾಡಿ ಕೃತಕೃತ್ಯವಾಗಿದ್ದಾರೆ. ೧೯೫೯ ರಲ್ಲಿ ರನ್ನ ಸಹಸ್ರವಾರ್ಷಿಕೋತ್ಸವವನ್ನು ಶ್ರೀ ಟಿ. ಎನ್. ಶ್ರೀಕಂಠಯ್ಯ ಅವರ ಅಧ್ಯಕ್ಷತೆಯಲ್ಲಿ ನಡೆಸಿ, ರನ್ನನ ಗದಾಯುದ್ಧದ ಕೆಲಭಾಗಗಳನ್ನು ರಂಗದ ಮೇಲೆ ತಂದರು.

ಕರ್ನಾಟಕ ಸಂಗೀತಪ್ರವರ್ತಕರೂ, ಶ್ರೇಷ್ಠ ಹರಿದಾಸರೂ ಆದ ಪುರಂದರದಾಸರ, ಚತುಃಶ್ಶತ-ಮಾನೋತ್ಸವವನ್ನು ೧೯೬೪ ರ ಮಾರ್ಚ್ ತಿಂಗಳಲ್ಲಿ ಬಹು ವಿಜೃಂಭಣೆಯಿಂದ ಆಚರಿಸಲಾಯಿತು. ಈ ಉತ್ಸವವನ್ನು, ಆಗ ತಾತ್ಪೂರ್ತಿಕವಾಗಿ ರಾಷ್ಟ್ರಪತಿ ಸ್ಥಾನದಲ್ಲಿದ್ದ ಡಾ. ಝಾಕೀರ ಹುಸೇನ ಅವರು ಉದ್ಘಾಟಿಸಿದರು. ಅದೇ ಸಂದರ್ಭದಲ್ಲಿ ಸೋವನೀರ ಒಂದನ್ನು ಪ್ರಕಟಿಸಲಾಯಿತು. ದಿಲ್ಲಿ ಕನ್ನಡ ಶಿಕ್ಷಕರ ಸಂಘ ಮತ್ತು ಕರ್ನಾಟಕ ಸಂಘದವರು ಕೂಡಿ ಸಾದರ ಪಡಿಸಿದ್ದ "ಮಹನೀಯ ಪುರಂದರದಾಸರು" ಎಂಬ ನಾಟಕದ ಪ್ರದರ್ಶನ ಆಕರ್ಷಣೀಯವಾಗಿತ್ತು.

"ದಕ್ಷಿಣ ಭಾರತಿ ನಟ ನಟಿ ಸಮಾಖ್ಯ" ಎಂಬುದೊಂದು ವಿವಿಧ ಭಾಷಾ ಸಂಸ್ಥೆ, ಇದರಲ್ಲಿ ಕನ್ನಡಿಗರ ವಿಭಾಗ ಒಂದು ತನ್ನ ಚಟುವಟಿಕೆಗಳನ್ನು ನಡೆಸುತ್ತಿತ್ತು, ಭಾರತೀಯ ನಾಟಕಸ್ಪರ್ಧೆಯಲ್ಲಿ ಭಾಗವಹಿಸುತಿದ್ದಿತು. ಈ ವಿಭಾಗದ "ವೀರಯೋಧ" ನಾಟಕ ಎಲ್ಲರಿಗೂ ಮೆಚ್ಚುಗೆಯದಾಗಿತ್ತು; ಇದೇ ಕನ್ನಡಿಗರ ವಿಭಾಗವು ಕಾರಣಾಂತರದಿಂದ, ಕನ್ನಡಭಾರತಿ' ಎಂಬ ಕನ್ನಡಿಗರ ಸಂಸ್ಥೆಯಾಗಿ ರೂಪಗೊಂಡಿತು. ಜನ್ಮತಳೆದ ಒಂದು ವರುಷದಲ್ಲಿ, ಮೂರು ಚಿಕ್ಕ ಕಾರ್ಯಕ್ರಮುಗಳನ್ನೂ ಕೈಲಾಸಂ ದಿನಾಚರಣೆಯನ್ನು ಕನ್ನಡ ಭಾರತಿ ಆಚರಿಸಿತು. ೧೯೬೪ ರಲ್ಲಿ ಈ ಸಂಸ್ಥೆ ನಡೆಸಿದ ಕಾರ್ಯಕ್ರಮ ಅದರ ಉತ್ಸಾಹಕ್ಕೆ ಸಾಕ್ಷಿ. ಈ ಸಂದರ್ಭದಲ್ಲಿ ಶ್ರೀ ಶಾ. ಬಾಲುರಾವ ಅವರ "ಕೈಗೆ ಬಂದ ತುತ್ತು" ಎಂಬ ನಾಟಕ ಪ್ರದರ್ಶನ, ಪ್ರಕಾಶನಗಳೆರಡನ್ನೂ ನಡೆಸಲಾಯಿತು. ಆಗ ಅವರಿಗೆ ದೊರೆತ ಬೆಂಬಲ, ಸಾರ್ವಜನಿಕ ಉತ್ತೇಜನಗಳಿಂದ ಕನ್ನಡ ಭಾರತಿಯ-ಶಕ್ತಿ ಉತ್ಸಾಹಗಳು ಇಮ್ಮಡಿಯಾದವು. ೧೯೬೪ ಅಕ್ಟೋಬರದಲ್ಲಿ ದೊಡ್ಡ ಸಾಹಸಕ್ಕೆ ಕೈ ಹಾಕಿ ಅತ್ಯಂತ ಯಶಸ್ವಿಯಾಯಿತು. ಶ್ರೀ. ಡಿ ವಿ. ಗುಂಡಪ್ಪನವರು ಹಳಗನ್ನಡದಲ್ಲಿ ಅನುವಾದಿಸಿದ, ಶೇಕ್ಸ್ಪಿಯರನ 'ಮ್ಯಾಕ್‌ಬೆಥ್' ನಾಟಕವನ್ನು ಅತ್ಯಂತ ನವೀನ ರೀತಿಯಲ್ಲಿ ಅಭಿನಯಿಸಿದರು. ಭಾಷೆಯ ಅಂದಕ್ಕೆ, ಕಥೆಯ ಓಟಕ್ಕೆ ಕುಂದು ಬರದಂತೆ ಇದನ್ನು ಅಭಿನಯಿಸಿರುವದು ಸಾಹಸದ ಕೆಲಸ. ರಂಗಸಜ್ಜಿಕೆ, ವೇಷಭೂಷಣಗಳು, ಭಾವನೆಗೆ ತಕ್ಕಂತೆ ನೈಜವಾಗಿ ಕಾಣುವ ಹಾಗೆ ವ್ಯವಸ್ಥಿತಗೊಳಿಸಿದ "ರಂಗಛಾಯೆ" (Lighting) ಎಲ್ಲರ ಮನವನ್ನು ಆಕರ್ಷಿಸಿದವು ನಟನಟಿಯರಿಗಿಂತ ಹಿನ್ನೆಲೆಯ ಕೆಲಸಗಾರರೇ ನಾಟಕದಯಶಸ್ಸಿಗೆ ಕಾರಣರೆಂದರೆ ಅತಿಶಯೋಕ್ತಿಯಾಗಲಾರದು. ಅದೇ ಕಾಲಕ್ಕೆ ಇಂಗ್ಲೀಷಿನಲ್ಲಿ ಪ್ರಕಟಿಸಿದ ಸೋವಿನಿರ್ ಆಕರ್ಷಕವಾಗಿದೆ. ಇಷ್ಟೆ ಅಲ್ಲ, ಅದರಲ್ಲಿಯ ಲೇಖನಗಳು ವಿದ್ವತ್ಪೂರ್ಣವಾಗಿವೆ. ಶೇಕ್ಸ್ಪಿಯರನ ನಾಲ್ಕನೇ ಶತಮಾನೋ-ತ್ಸವದ ಸಂದರ್ಭದಲ್ಲಿ ಕನ್ನಡ ಭಾರತಿ ಈ ಕಾರ್ಯಕ್ರಮಗಳನ್ನು ನಡೆಸಿತು. ಉತ್ಸಾಹಿ ತರುಣರು, ಹೊಸ ವಿಚಾರಸರಣಿಯವರು, ಸ್ವಲ್ಪಧಾಡಸೀ ವೃತ್ತಿಯವರು ಕನ್ನಡ ಭಾರತಿಯಲ್ಲಿದ್ದುದೆ ಅದಕ್ಕೆ ಸಬಲ ಶಕ್ತಿಯಾಗಿದೆ

"ದಕ್ಷಿಣ ದಿಲ್ಲಿ ಕನ್ನಡ ಕೂಟ" "ಕರೋಲಬಾಗ ಕನ್ನಡ ಬಳಗ" "ಮೋತಿಬಾಗ ಕನ್ನಡ ಬಳಗ" ದಿಲ್ಲಿ ವಿಶ್ವವಿದ್ಯಾನಿಲಯ ಕರ್ನಾಟಕ ಸಂಘ, ಭಾರತೀಯ ವಿಮಾನ ದಲದ ಕನ್ನಡ ವಿಭಾಗ ಮುಂತಾದವು ಇನ್ನುಳಿದ ಕನ್ನಡ ಸಂಸ್ಥೆಗಳು. ದಿಲ್ಲಿ ವಿಶ್ವವಿದ್ಯಾನಿಲಯ ಕರ್ನಾಟಕ ಸಂಘವು "ಪರಮಾಣು ಶಕ್ತಿ" ಎಂಬ ಹೊತ್ತಿಗೆಯನ್ನು ಪ್ರಕಟಿಸಿದೆ. ವಿಮಾನ ಬಲದ ಕನ್ನಡ ವಿಭಾಗವು ಸರ್ವಭಾಷಾ ನಾಟಕ ಸ್ಪರ್ಧೆಯನ್ನು ಏರ್ಪಡಿಸುತ್ತಿದೆ. ತನ್ನದೇ ಆದ ವಾಚನಾಲಯವನ್ನು ಹೊಂದಿದೆ. ಹೊರನಾಡ ಕನ್ನಡಿಗರ ಸಮ್ಮೇಳನವು ೧೯೪೯ ರಿಂದ ೫೬ ವರೆಗೆ, "ಕನ್ನಡನುಡಿ" ಎಂಬ ತ್ರೈಮಾಸಿಕ ಪತ್ರಿಕೆಯನ್ನು ಹೊರಡಿಸುತ್ತಿತ್ತು.

ದಿಲ್ಲಿಯ ಕನ್ನಡಿಗರಲ್ಲಿ, ಕಲೆಗೆ ಉತ್ಸಾಹಕ್ಕೆ ನಾಡನುಡಿಯ ಸೇವಾಭಾವನೆಗೆ, ಕಲ್ಪನಾಶಕ್ತಿಗೆ, ತ್ಯಾಗಬುದ್ಧಿಗೆ, ಯಾವ ಕೊರತೆಯೂ ಇಲ್ಲ. ಧನ, ಒಕ್ಕಟ್ಟು ಕಡಿಮೆ ಎಂದು ಹೇಳಬೇಕು. ಅನುಭವಿಕರು ಹಿರಿಯರು ಸೇರಿ, ಇವೆರಡೂ ಕನ್ನಡಿಗರಲ್ಲಿ ವೃದ್ಧಿಯಾಗಲು ಸಹಾಯ ಮಾಡಬೇಕು.

"ಕನ್ನಡ ಭಾರತಿ" ಸಾದರಪಡಿಸಿದ "ಮ್ಯಾಕ್‌ಬೆತ್" ನಾಟಕದ ಪಾತ್ರಧಾರಿಗಳು





# ಗುಜರಾತದಲ್ಲಿ ಕನ್ನಡಿಗ

ಸೌರಾಷ್ಟ್ರದ ಆದಯ್ಯನು ಸೋಮನಾಥನನ್ನು ನಡೆಸಿಕೊಂಡು ಪುಲಿಗೆರೆಗೆ ಬಂದಂದಿನಿಂದ ಗುಜರಾತ ಹಾಗು ಕರ್ನಾಟಕಗಳ ನಡುವೆ ಒಂದಿಲ್ಲೊಂದು ಬಗೆಯ ಬಾಂಧವ್ಯ ಬೆಸೆದುಕೊಂಡೇ ಬಂದಿದೆ. ಕರ್ನಾಟಕದ ರಾಜಮನೆತನಗಳು ಗುಜರಾತಕ್ಕೂ ಗುಜರಾತದ ಕ್ಷತ್ರಿಯ ವಂಶಗಳು ಕರ್ನಾಟಕಕ್ಕೂ ಬಂದು ಆಶ್ರಯವನ್ನು ಪಡೆಯುತ್ತಲೇ ಇದ್ದವು. ಎಲ್ಲ ಗುಜರಾತವನ್ನೂ ಗೆದ್ದು ದೇಶದಲ್ಲಿ ಸಾಂಸ್ಕೃತಿಕ ಚೈತನ್ಯವನ್ನು ಚಿಗುರಿಸಿದ್ದ ಸಿದ್ಧರಾಜ ಜಯಸಿಂಹನ ತಾಯಿ ಮೀನಲ (ಮೈನಲ)ದೇವಿ ಕರ್ನಾಟಕದವಳಂತೆ. ಉತ್ತರ ಕರ್ನಾಟಕದಲ್ಲಿ ಇಂದಿಗೂ ನೆಲೆಸಿರುವ ಭಾವಸಾರ ಕ್ಷತ್ರಿಯರು ನೂರಾರು ವರ್ಷಗಳ ಹಿಂದೆ ಗುಜರಾತದಿಂದಲೇ ಇಲ್ಲಿಗೆ ಬಂದವರು. ಇತಿಹಾಸದ ಮಾತಂತೂ ಹಾಗಿರಲಿ, ಈಗಲೂ ನಮ್ಮ ನಾಡಿನಲ್ಲಿ ವ್ಯಾಪಾರಕ್ಕಾಗಿ ಬಂದು ನೆಲೆಸಿರುವ ಗುಜರಾತಿಗಳಿಗೇನು ಕಡಿಮೆ? ಇಷ್ಟಾದರೂ ಈ ಎರಡೂ ನಾಡುಗಳ ನಡುವೆ ಸಂಬಂಧವಿಲ್ಲವೆಂಬಂತೆಯೇ ನಾವು ಜೀವಿಸುತ್ತಿದ್ದೇವೆ. ಇಂಗ್ಲೀಷದಿಂದ ಹೊಸ ಕವಿತೆಗಳನ್ನು ಭಾಷಾಂತರಿಸಿ ಗುಜರಾತೀ ಭಾಷೆಯಲ್ಲಿ ಹೊಸ ಕಾವ್ಯರಚನೆಯನ್ನು ಪ್ರಾರಂಭಿಸಿದ, ಸುಪ್ರಸಿದ್ಧ ಭಾಷಾಶಾಸ್ತ್ರಜ್ಞರಾದ ನರಸೀರಾವ್ ದೀವೇಟಿಯಾ ಅವರು ಧಾರವಾಡದಲ್ಲಿ ಕಲೆಕ್ಟರರಾಗಿ ಕೆಲಸ ಮಾಡುತ್ತಿದ್ದರೆಂಬ ಮಾತು ಎಷ್ಟೋ ಜನ ಕನ್ನಡಿಗರಿಗೇ ಗೊತ್ತಿರಲಿಕ್ಕಿಲ್ಲ.

ಈ ಬಗೆಯ ಉದಾಸೀನತೆಗೆ ಕಾರಣವಿಲ್ಲದೆ ಇಲ್ಲ. ಗುಜರಾತ ಹಾಗು ಕರ್ನಾಟಕಗಳ ನಡುವೆ ಸಾಂಸ್ಕೃತಿಕ ಸಂಬಂಧವಾಗಲಿ, ಮಾನವೀಯ ಸಂಬಂಧವಾಗಲಿ ಬಹಳಷ್ಟು ಬೆಳೆದುಬರಲಿಲ್ಲ. ಮಹಾರಾಷ್ಟ್ರ ಹಾಗು ಕರ್ನಾಟಕಗಳ ನಡುವೆ ಈಗ ಎಂಥದೇ ಸಂಬಂಧವಿರಲಿ ಒಂದು ಕಾಲಕ್ಕೆ ಎರಡೂ ನಾಡುಗಳು ಸಾಂಸ್ಕೃತಿಕವಾಗಿ ಒಂದೇ ಆಗಿದ್ದವೆಂಬ ಮಾತು ನಿರ್ವಿವಾದವಾಗಿದೆ. ಕನ್ನಡಿಗರೂ ಮರಾಠಿಗರೂ ಒಂದಾಗಿ ನಾಡನ್ನು ಕಟ್ಟಿದವರು; ಐತಿಹಾಸಿಕ ದುರ್ದೈವಗಳಲ್ಲಿ ಸರಿಯಾಗಿ ಪಾಲುಗೊಂಡವರು; ಕೊನೆಗೆ ಬೆಂಕಿ—ನೀರುಗಳಷ್ಟು ಮೂಲಭೂತವಾಗಿರುವ ನೆಲ ಹಾಗು ಭಾಷೆಗಳಿಗಾಗಿ ಬಡಿದಾಡಿದವರು. ಆದ್ದರಿಂದ ಬಿಡಿಸಲು ಬಾರದಂಥ ಹೊಕ್ಕು ಬಳಕೆ ಈ ನಾಡಿನ ಜನರಲ್ಲಿದೆ. ಗುಜರಾತದ ಸಂಬಂಧ ಮರೆತುಹೋಗುವ ವ್ಯಾಪಾರದ ಸಂಬಂಧ; ಜೀವಮಾನವನ್ನೆಲ್ಲ ಕರ್ನಾಟಕದಲ್ಲಿಯೇ ಕಳೆದರೂ ಗುಜರಾತಿಗಳಿಗೆ ಕನ್ನಡ ಸಾಹಿತ್ಯ ಕಲೆಗಳ ಜೀವಂತ ಪರಿಚಯವಿಲ್ಲ. ಕನ್ನಡದ ವಿದ್ಯಾವಂತರಿಗೆ 'ಗುಜರಾತ' ಸರಿಯೋ 'ಗುಜರಾಥ' ಸರಿಯೋ ಇನ್ನೂ ಗೊತ್ತಾಗಿಲ್ಲ. ಉತ್ತರ ಕರ್ನಾಟಕದ ಕನ್ನಡಿಗ ನಾಲ್ಕು ದಿನ ಪುಣೆಯ ಹವೆಯನ್ನು ಉಸಿರಾಡಿಸಿದನೆಂದರೆ ತೀರಿತು, ಅವನ ನಾಲಗೆಯಲ್ಲಿ ಮರಾಠಿಯ ನರವೊಂದು ಹೊಸದಾಗಿ ಬೆಳೆಯುತ್ತದೆ. ಅವನು 'ಅಸ್ಸಲ' ಮರಾಠಿಯನ್ನು ಮಾತಾಡತೊಡಗುತ್ತಾನೆ. ಆದರೆ ಅದೇ ಗುಜರಾತೀ ಭಾಷೆ ಏನು ಮಾಡಿದರೂ ಅವನ ನಾಲಗೆಗೆ ಹಾಯುವದಿಲ್ಲ. 'ಏಕನಾಥೀ ಭಾಗವತ'ದೊಡನೆ 'ಕೇಸರೀ' ಪತ್ರಿಕೆಯನ್ನೂ ಮಂದಿರಗಳಲ್ಲಿ ರಾಮಾನುಜ ಪಂಥದ ಕನ್ನಡಿಗರು ಪಾಠಪ್ರವಚನಗಳನ್ನು ನಡೆಸುತ್ತಾರೆ. ಅಹಮದಾಬಾದದ ಕೋಟ್ಯಾಧೀಶರ ಕಚೇರಿಗಳಲ್ಲಿ ಕರಣಿಕರು, ಕಾರ್ಯದರ್ಶಿಗಳು ಮಲೆಯಾಳಿಗಳೋ, ಕನ್ನಡಿಗರೋ ಆಗಿದ್ದರೆ ಆಶ್ಚರ್ಯಪಡಬೇಕಾಗಿಲ್ಲ. ಇಷ್ಟೇ ಗುಜರಾತಿಗಳ ದೃಷ್ಟಿಯಲ್ಲಿ ನಾವೆಲ್ಲ 'ಮದ್ರಾಸಿ'ಗಳು. ಪುಣೆಯ ಆಚೆಗಿರುವ ದಕ್ಷಿಣದ ಭೂಭಾಗವೆಲ್ಲ 'ಮದ್ರಾಸ' ಎಂದೇ ಅವರ ತಿಳಿವಳಿಕೆಯಾಗಿಬಿಟ್ಟಿದೆ. ಭೌಗೋಲಿಕ ಅಥವಾ ಸಾಂಸ್ಕೃತಿಕ ಜ್ಞಾನವನ್ನು ವಿವರವಾಗಿ ತಿಳಿದುಕೊಳ್ಳಲು ಸಾಕಷ್ಟು ತಾಳ್ಮೆಯಾಗಲಿ, ಬಿಡುವಾಗಲಿ ದೇವರು ಅವರಿಗೆ ದಯಪಾಲಿಸಿಲ್ಲ.

ಇನ್ನು ಗುಜರಾತದಲ್ಲಿರುವ ಕನ್ನಡಿಗರೋ! ಅವರು ಗುಜರಾತಕ್ಕೆ ಬಂದದ್ದು ಹೊಟ್ಟೆ ತುಂಬಿಕೊಳ್ಳಲಿಕ್ಕೇ ಹೊರತು ಸಂಸ್ಕೃತಿಯ ವಿನಿಮಯಕ್ಕಾಗಿಯಲ್ಲ. ಈ ನಾಡಿನಲ್ಲಿ ಕೈತುಂಬ ರೊಕ್ಕ ದೊರೆಯುತ್ತದೆ; ವಸತಿ, ಆಹಾರ ಮೊದಲಾದ ಸೌಕರ್ಯಗಳಿವೆ; ಅಲ್ಲದೆ ಗುಜರಾಥಿಗಳು ಇನ್ನೊಬ್ಬರ ಗೊಡವೆಗೆ ಹೋಗುವ ಅಧಿಕ-ಪ್ರಸಂಗಿಗಳಲ್ಲ, ಇಂಥವೇ ಸಮಾಧಾನ ಹಚ್ಚಿಕೊಂಡು ಇಲ್ಲಿಯ ಕನ್ನಡಿಗರು ಬದುಕು ಮಾಡುತ್ತಾರೆ. ಹೆಚ್ಚಾದರೆ 'ಕೇಮಛೋ' ಎಂದು ಪ್ರಾರಂಭಿಸಿ ಗುಜರಾತಿಯನ್ನು ಮಾತಾಡಲು ಕಲಿಯುತ್ತಾರೆ. ನವರಾತ್ರಿಯ ಹಬ್ಬದಲ್ಲಿ ಸ್ಥೂಲಕಾಯದ ಗುಜರಾತೀ ಸ್ತ್ರೀಯರು ಬೇಸರಿಲ್ಲದೇ 'ಗರ್ಭಾ' ಕುಣಿಯುವದನ್ನು ನೋಡಲು ಹೋಗುತ್ತಾರೆ. ಗುಜರಾತದ ಸಂಸ್ಕೃತಿ ಪರಿಚಯ ಇದಕ್ಕಿಂತ ಮುಂದೆ ಹೋಗಲಾರದು ಎಂದೇ ಅವರು ತಿಳಿದಿರಬೇಕು.

ಗುಜರಾತಿಗಳ ಸ್ವಭಾವ ವೈಶಿಷ್ಟ್ಯವೂ ಇದಕ್ಕೆ ಕಾರಣವಾಗಿರಬೇಕು. ಅವರು ಪ್ರದರ್ಶನ ಪ್ರಿಯರಲ್ಲ; ಈ ಒಂದು ವಿಷಯದಲ್ಲಿ ಕನ್ನಡಿಗರೂ ಅವರೂ ಸಮಾನರಾಗಿದ್ದಾರೆ. 'ಗುಜರಾತದ ಅಸ್ಮಿತೆ' 'ಗುಜರಾತ ತನ್ನನ್ನು ತಾನು ಅರಿಯಬೇಕು' ಎಂಬ ಪ್ರಚಾರಾತ್ಮಕ ಲೇಖಗಳು ಹಿಂದೆ ಪತ್ರಿಕೆಗಳಲ್ಲಿ ಮೂಡಿ ಮಾಯವಾಗಿವೆ. ಇಂಥ ಪ್ರಚಾರದ ಅವಶ್ಯಕತೆ ಮಹಾರಾಷ್ಟ್ರ, ತಮಿಳುನಾಡು, ಬಂಗಾಲ ಮೊದಲಾದ ಪ್ರಾಂತಗಳಿಗಿಲ್ಲ. ಪುಣೆಯಲ್ಲಿಯ ರಾಜಮಾರ್ಗಗಳು, ಅಂಗಡಿಯಲ್ಲಿಯ ತೂಗು-ಹಲಿಗೆಗಳು ಮಹಾರಾಷ್ಟ್ರ ಸಂಸ್ಕೃತಿ ಪ್ರಚಾರದ ಪುಟ್ಟ ಸಂಸ್ಥೆಗಳಾಗಿರುತ್ತವೆ. ಮಹಾರಾಷ್ಟ್ರದ ಇತಿಹಾಸ ಕರ್ನಾಟಕದಷ್ಟು ಪುರಾತನವಲ್ಲವಾದರೂ ಅದು ಹೆಚ್ಚು ಜೀವಂತವಾಗಿದೆ. ಶಿವಾಜಿ-ಜೀಜಾಬಾಯಿಯ ಸಂಭಾಷಣೆಗಳು, ಬಾಜೀರಾವ್-ಮಸ್ತಾನಿಯರ ಪ್ರಣಯ ಪ್ರಸಂಗ, ನಾನಾ ಫಡಣೀಸ—ಮಹದಾಜಿ ಸಿಂಧೆಯ ರಾಜಕಾರಣ, ರಾಮಶಾಸ್ತ್ರಿಯ ನ್ಯಾಯನಿಷ್ಠುರತೆ, ಸವಾಯಿ ಮಾಧವರಾಯನ ಮದುವೆ ಈ ದಿನನಿತ್ಯ ಪಾರಾಯಣ ಮಾಡುವ ವತನದಾರ ರಸಿಕರು ಇನ್ನೂ ಉತ್ತರ ಕರ್ನಾಟಕದ ಹಳ್ಳಿಗಳಲ್ಲಿ ದೊರೆಯುತ್ತಾರೆ. ತುಕಾರಾಮ, ರಾಮದಾಸ ಜ್ಞಾನೇಶ್ವರ, ಮೋರೋಪಂತ ಇವರ ಹೆಸರುಗಳು ಪರಿಚಿತವಿರುವಂತೆ ಗುಜರಾತದ ಪ್ರೇಮಾನಂದ, ದಯಾರಾಮ, ಅಖೋ ಮೊದಲಾದ ಕವಿಗಳ ಹೆಸರು ಪರಿಚಯವಾಗಿಲ್ಲ.

ಗುಜರಾತವೆಂದೊಡನೆ ನಮ್ಮ ಕಣ್ಣೆದುರು ಮೂಡುವ ಚಿತ್ರ ಬೇರೆ ಬಗೆಯದು ನಾವಾದರೂ ಏನು ಮಾಡೋಣ? ನಮ್ಮ ಗುಜರಾತೀ ಬಂಧುಗಳು ವ್ಯಾಪಾರಕ್ಕಾಗಿ ಬಂದು ಲಕ್ಷಾಂತರ ರೂಪಾಯಿಗಳನ್ನು ಸುಲಿದು ಈ ಚಿತ್ರವನ್ನು ನಮ್ಮ ಮನಃಪಟಲದಲ್ಲಿ ಸ್ಥಿರೀಕರಿಸಿಬಿಟ್ಟಿದ್ದಾರೆ. ಆಪಾದಮಸ್ತಕವಾಗಿ ಶುಭ್ರವಾದ ಇಸ್ತ್ರೀ ಮಾಡಿರುವ ವೇಷವನ್ನು ಧರಿಸಿ, ಶೇರಬಜಾರದಲ್ಲಿ ಸಟ್ಟಾವ್ಯಾಪಾರದಲ್ಲಿ ರೇಸಕೋರ್ಸಿನಲ್ಲಿ ಲಕ್ಷ್ಯಗಟ್ಟಲೇ ಹಣವನ್ನು ಗಳಿಸುತ್ತಿರುವ ಶ್ರೀಮಂತರ ಚಿತ್ರವಿದು. ಗುಜರಾತದ ಪುಣ್ಯ ಭೂಮಿ ಇಂಥ ಸಾವಿರಾರು ಮಕ್ಕಳನ್ನು ಹುಟ್ಟಿಸಿದ್ದರಿಂದ ಇವರ ನಡುವೆ ಸಂಸ್ಕೃತಿ ನಿರ್ಮಾಪಕರನ್ನು ನಾವು ಹುಡುಕಿ ತೆಗೆಯಬೇಕಾಗುತ್ತದೆ. ನಾಲ್ಕೈದು ಟೆಲಿಫೋನುಗಳ ಸಂಗಡ ಹಗಲು ರಾತ್ರಿ ಮಾತಾಡುವ ಶೇಠಜಿಗಳು, ಗಿಡಗಳ ತುಂಬ ಇಲೆಕ್ಟ್ರಿಕ್ ದೀಪಗಳನ್ನು ಹೊತ್ತಿಸಿ ಮದುವೆ ಮಾಡುವ

ಕೀರ್ತಿನಾಥ ಕುರ್ತಕೋಟಿ.
ವಲ್ಲಭವಿದ್ಯಾನಗರ



ಶ್ರೀಮಂತರು, ದೊಡ್ಡ ಬಟ್ಟಲ ತುಂಬ ಸಕ್ಕರೆಯನ್ನು ತುಂಬಿಕೊಂಡು ಮುಂಬಯಿಯ ಟಾರು ಬೀದಿಗಳಲ್ಲಿ ಇರುವೆಗಳನ್ನು ಹುಡುಕುತ್ತ ನಡೆದ ಸೇಠಾಣಿಗಳು,ಸಂಸ್ಕೃತಿ ನಿರ್ಮಾಣದ ಕೆಲಸವನ್ನು ಕೆಲವು ಸಾಕ್ಷರರ (ಗುಜರಾತಿಯಲ್ಲಿ ವಿದ್ವಾಂಸನಿಗೆ 'ಸಾಕ್ಷರ' ಎಂದೇ ಹೆಸರು) ಪಾಲಿಗೆ ಬಿಟ್ಟುಕೊಟ್ಟಿದ್ದಾರೆ. ವ್ಯಾಪಾರ ಗುಜರಾತಿಗಳಿಗೆ ಜನ್ಮಜಾತವಾದ ವಿದ್ಯೆ, ಅದನ್ನು ಅವರು ಯಾರಿಂದಲೂ ಕಲಿಯಬೇಕಾಗಿಲ್ಲ. ಈ ಕ್ಷೇತ್ರದಲ್ಲಿ ಮಾರವಾಡಿಗಳು ಹಾಗು ಸಿಂಧೀಗಳನ್ನು ಬಿಟ್ಟರೆ ಅವರು ಬೇರೆ ಯಾರಿಗೂ ಹೆದರುವದಿಲ್ಲ.

ಆದ್ದರಿಂದ ವ್ಯಾಪಾರದ ಭರಭರಾಟೆಯಲ್ಲಿರುವ ಗುಜರಾತವನ್ನು ಹೊಕ್ಕೊಡನೆ ಕನ್ನಡಿಗನಿಗೆ ದಿಗ್ಭ್ರಮೆಯಾಗುವದು ಸಹಜ. ಗುಜರಾತದಲ್ಲಿ ಉಳಿದ ಪ್ರಾಂತಗಳಲ್ಲಿಯಂತೆ ಸಾಕಷ್ಟು ಕನ್ನಡಿಗರಿದ್ದಾರೆ. ಅಹಮದಾಬಾದ, ರಾಜಕೋಟ, ಜಾಮನಗರ, ಭಾವನಗರ, ಸುರತ, ಬಡೋದೆ, ಬುಲಸಾರ ಮೊದಲಾದ ಪಟ್ಟಣಗಳಲ್ಲಿ ಇವರನ್ನು ಕಾಣಬಹುದು. ಇವರೆಲ್ಲ ನೌಕರಿಗಾಗಿ ಇಲ್ಲಿಗೆ ಬಂದವರು. ಗುಜರಾತದ ಪ್ರತಿಯೊಂದು ಕಾಲೇಜಿನ ಇಂಗ್ಲಿಷ್ ವಿಭಾಗದಲ್ಲಿ ಕನ್ನಡಿಗರಿದ್ದೇ ಇರುತ್ತಾರೆಂಬ ಮಾತು ಅತಿಶಯೋಕ್ತಿಯಲ್ಲ; ಗುಜರಾತದ ಎಂಜಿನಿಯರರಲ್ಲಿ ಮುಕ್ಕಾಲು ಪಾಲು ಹಳೆಯ ಮೈಸೂರಿನ 'ಮೂರ್ತಿ' ಗಳಿರುತ್ತಾರೆ. ಅಲ್ಲದೆ ಟೆಲಿಫೋನ್ ಆಪರೇಟರರಾಗಿ, ರೇಲ್ವೆಯ ಗಾರ್ಡ್ ಅಥವಾ ಟಿಕಿಟ್ ಕಲೆಕ್ಟರರಾಗಿ, ಗುಜರಾತದ ಹೊಸ ಔದ್ಯಮಿಕ ಸಂಸ್ಥೆಗಳಲ್ಲಿ ಕೆಲಸಗಾರರಿಗಾಗಿ ಕನ್ನಡದ ಹೊಸನೀರು ಗುಜರಾತಕ್ಕೆ ಹರಿದು ಬರುತ್ತಲೇ ಇದೆ.

ಸಂಸ್ಕೃತಿಯ ಜಾಜ್ವಲ್ಯಮಾನವಾದ ಅರಿವು ಗುಜರಾತಕ್ಕಿಲ್ಲ. ಹೊರಗಿನಿಂದ ಬಂದ ಕನ್ನಡಿಗನ ಕಣ್ಣು ಕುಕ್ಕುವಂಥ ಯಾವ ಪ್ರದರ್ಶನವೂ ಇಲ್ಲಿಲ್ಲ- ಗುಜರಾತದ ಗುಡಿಗುಂಡಾರಗಳಲ್ಲಿ, ಜೈನಬಸದಿಗಳಲ್ಲಿ ಶಿಲ್ಪಕಲೆಯ ವೈಭವಕ್ಕಿಂತ ಸಂಪತ್ತಿನ ವೈಭವ ಹೆಚ್ಚು. ಪ್ರಸಿದ್ಧ ವೈಷ್ಣವ ಮಂದಿರಗಳಲ್ಲಿ (ಉದಾ: ಡಾಕೋರದ ರಣಛೋಡರಾಯನ ದೇವಾಲಯ) ದೇವರು ಮರ್ಕ್ಯೂರಿ ದೀಪದ ಬೆಳಕಿನಲ್ಲಿ ವಿರಾಜಿಸುತ್ತಾನೆ; ಅವನ ಎಡಬಲಕ್ಕೆ ಎರಡು ಫ್ಯಾನುಗಳು ನಿರಂತರವಾಗಿ ಗಾಳಿ ಬೀಸುತ್ತಿರುತ್ತವೆ. ನೀವು ಹಣ ಕೊಟ್ಟು; ರಸೀತಿಯನ್ನು ಪಡೆದು, ಅದನ್ನು ಇನ್ನೊಂದು ಅಫೀಸಿಗೆ ಒಯ್ದು ತೋರಿಸಿದರೆ ನಿಮಗೆ ಪ್ರಸಾದದೊರಕುತ್ತದೆ. ಇದೆಲ್ಲ ಆಧುನಿಕ ವಾತಾವರಣದ ಫಲವೆಂದೆನ್ನಬಹುದು. ಹೌದು, ಆದರೆ ಗುಜರಾತದಲ್ಲಿ ಆಧುನಿಕತೆ ಯಂತ್ರಯುಗದ ಎಲ್ಲ ಸೌಕರ್ಯಗಳಲ್ಲಿ ಪ್ರತ್ಯಕ್ಷವಾಗುತ್ತದೆ. ಹಳ್ಳಿಗಳಲ್ಲಿ ಕೂಡ ರೆಫ್ರಿಜರೇಟರ್, ಟ್ರಾನ್ಸಿಸ್ಟರ್‌ಗಳಿದ್ದ ಮನೆಗಳಿವೆ. ಪೂರ್ವ ಮತ್ತು ದಕ್ಷಿಣ ಆಫ್ರಿಕಾಗಳೊಡನೆ ಗುಜರಾತಿಗಳಿಟ್ಟುಕೊಂಡ ವ್ಯಾಪಾರದ ಸಂಬಂಧದ ಫಲ ಇದು. ಗುಜರಾತಿಗಳು ಉತ್ಸವ ಪ್ರಿಯರೂ ಅಲ್ಲ. ಹಬ್ಬ ಹುಣ್ಣಿಮೆಗಳನ್ನು ಅವರು ವಿಶೇಷವಾದ ಆಡಂಬರವಿಲ್ಲದೆ ಆಚರಿಸುತ್ತಾರೆ. ಅವರ ನಿಜವಾದ ಹಬ್ಬವೆಂದರೆ ದೀಪಾವಳಿಯೊಂದೇ. ಎಂಟು ಹತ್ತು ದಿನಗಳವರೆಗೆ ದೀಪಗಳನ್ನು ಬೆಳಗಿಸಿ, ಬಾಣ ಬಿರುಸುಗಳನ್ನು ಸುಟ್ಟರೆಂದರೆ ಮುಗಿಯಿತು. ಮರುವರ್ಷದವರೆಗೆ ಅವರು ಯಾವ ಉತ್ಸವಕ್ಕೂ ಹೋಗುವವರಲ್ಲ. ಇದರಿಂದಾಗಿ ಅವರ ವೇಷಭೂಷಣಗಳಲ್ಲಷ್ಟೇ ಅವರ ಬದುಕಿನಲ್ಲಿಯೂ ಒಂದು ಬಗೆಯ ವರ್ಣಹೀನತೆ ಕಂಡುಬರುತ್ತದೆ

ಆದರೆ ಬರಿಗಣ್ಣಿಗೆ ಕಾಣುವ ಈ ವಿವರಗಳನ್ನೆಲ್ಲ ಕಂಡು ಗುಜರಾತಕ್ಕೆ ಸಂಸ್ಕೃತಿ ಇಲ್ಲವೆಂದು ಭಾವಿಸುವದು ತಪ್ಪಾದೀತು. ಸಂಸ್ಕೃತಿ ಇದೆ, ಆದರೆ ಅದರ ಅಭಿವ್ಯಕ್ತಿಯಲ್ಲಿ ಘೋಷವಿಲ್ಲ. ಸೌರಾಷ್ಟ್ರದ ಜಾನಪದ ನೃತ್ಯ ಸಂಗೀತಗಳು ತಮ್ಮ ಮೂಲ ವೈಶಿಷ್ಟ್ಯಗಳನ್ನು ಅಚ್ಚಳಿಯದಂತೆ ಕಾಪಾಡಿಕೊಂಡಿವೆ. ಗುಜರಾತದ ಜಾನಪದ ಗೀತಗಳಲ್ಲಿಯ ಬಂಧ ಹಾಗೂ ಲಯಗಾರಿಕೆ, ನಾದಮಯತೆ ಮತ್ತು ಚಿತ್ರಕ ಶಕ್ತಿ ಬಹುಶಃ ಉಳಿದ ಪ್ರಾಂತಗಳಲ್ಲಿಯ ಜಾನಪದ ಕಾವ್ಯದಲ್ಲಿ ಅಪರೂಪವೆಂದೇ ಹೇಳಬೇಕು. ಈ ಒಂದು ವಿಷಯದಲ್ಲಿ ರಾಜಸ್ಥಾನವೊಂದೇ ಗುಜರಾತದೊಡನೆ ಸ್ಪರ್ಧೆಗೆ ನಿಂತರೆ ನಿಲ್ಲಬಹುದು. 'ಭವಾಯಿ' ಎಂಬ ಹೆಸರಿನ ಜಾನಪದ ನಾಟಕ ಸಂಸ್ಕೃತದ 'ಭಾಣ' ರೂಪಕವನ್ನು ಹೋಲುತ್ತಿದ್ದು ಗ್ರಾಮ್ಯ ವಾಸ್ತವಿಕತೆ ಹಾಗೂ ಅವಿಕೃತ ವಿನೋದಕ್ಕೆ ಹೆಸರಾಗಿದೆ ಮಧ್ಯ ಕಾಲೀನ ಕವಿಗಳಾದ ಪ್ರೇಮಾನಂದ ಮೊದಲಾದವರು ಘಟವಾದ್ಯದ ಲಯದೊಂದಿಗೆ ಪೌರಾಣಿಕ ಕಥಾವಸ್ತುಗಳನ್ನು ನೆರೆದ ಜನರೆದುರಿಗೆ ಹಾಡುತ್ತ 'ಆಖ್ಯಾನ' ವೆಂಬ ಹೊಸ ಕಾವ್ಯ ಪ್ರಕಾರವನ್ನು ಸೃಷ್ಟಿಸಿದರು. ನರಸೀ ಮೆಹತಾ, ದಯಾರಾಮ ಮೊದಲಾದ ವೈಷ್ಣವ ಕವಿಗಳು ಗುಜರಾತೀ ಮತ್ತು ವ್ರಜಭಾಷೆ (ಅದು ಕೃಷ್ಣನ ಭಾಷೆಯೆಂದು ವೈಷ್ಣವರ ತಿಳುವಳಿಕೆಯಾಗಿತ್ತು) ಯಲ್ಲಿ ಜಯದೇವ ಚಂಡೀದಾಸರ ಗೀತಗಳಿಗೆ ಸರಿದೂಗುವಂಥ ಗೀತಗಳನ್ನು ರಚಿಸಿದರು. ಆಧುನಿಕ ಗುಜರಾತೀ ಕಾವ್ಯದ ಅನಿವಾರ್ಯವಾದ ಗೇಯತೆಗೆ ಕಾರಣವೆಂದರೆ ಪ್ರಾಚೀನ ಕವಿಗಳು ಭಾಷೆಗೆ ಕಲ್ಪಿಸಿರುವ ಲಯಗಾರಿಕೆಯೇ ಆಗಿದೆ.

ಗುಜರಾತದ ಆಧುನಿಕ ಸಾಹಿತ್ಯ ಉಳಿದ ಪ್ರಾಂತಗಳ ಹೊಸ ಸಾಹಿತ್ಯದಷ್ಟೇ ಸಮೃದ್ಧವಾಗಿರುವದರಿಂದ ಅದರ ವೈವಿಧ್ಯದ ಬಗ್ಗೆ ಹೆಚ್ಚು ಹೇಳುವ ಕಾರಣವಿಲ್ಲ. ಆದರೆ ೧೯ ನೆಯ ಶತಮಾನದ ಮಧ್ಯಭಾಗದಲ್ಲಿಯೇ ಗುಜರಾತದಲ್ಲಿ ಸಂಸ್ಕೃತಿಯ ಪುನರುಜ್ಜೀವನದ ಕಾರ್ಯ ನಡೆದದ್ದರಿಂದ ಕೆಲವೊಂದು ವೈಶಿಷ್ಟ್ಯಗಳು ಆ ಸಾಹಿತ್ಯಕ್ಕಿವೆ. ಭಾರತದ ರಾಜಕೀಯ ಆಂದೋಲನ ಹಾಗೂ ಸಾಮಾಜಿಕ ಸುಧಾರಣೆಯ ಆಂದೋಲನಗಳೆರಡೂ ಸಮ ಸಮವಾಗಿ ಈ ಪ್ರಾಂತದಲ್ಲಿ ನಡೆದವು. ಇವುಗಳ ಜೊತೆಗೇ ಇನ್ನೊಂದು ಬಗೆಯ ಮೌನವಾದ ಆಂದೋಲನ ಕೇವಲ ಗುಜರಾತದಲ್ಲಿಯೇ ನಡೆಯಿತು. ಮೊಗಲ ಬಾದಶಹನಿಂದ ಸನದನ್ನು ಪಡೆದು ಈಸ್ಟ್ ಇಂಡಿಯಾ

ಕಂಪನಿ ಸುರತ ನಗರದಲ್ಲಿ ವ್ಯಾಪಾರವನ್ನು ಪ್ರಾರಂಭಿಸಿದಂದಿನಿಂದಲೇ ಗುಜರಾತದ ಮೇಲೆ ಬ್ರಿಟಿಶ್ ಪ್ರಭಾವ ಬೀಳತೊಡಗಿತು. ಸಂಜಾನ ಬಂದರದ ಮುಖಾಂತರವಾಗಿ ಅದಕ್ಕಿಂತ ಮೊದಲೇ ಪಾರ್ಸಿಗಳು ಇಲ್ಲಿ ಬಂದು ತಳ ಊರಿದ್ದರು. ಕಂಪನಿ ಸರಕಾರ ಸ್ಥಿರವಾಗಿ ನೆಲೆಸಿದ ಮೇಲೆ ಸರಕಾರದಲ್ಲಿ ಕೆಲಸ ಮಾಡಲು ಮೊದಲು ಮಹಾರಾಷ್ಟ್ರದ ಹಿಂದುಗಳಾಗಲಿ, ಮುಸಲ್ಮಾನರಾಗಲಿ ಆಗ ಒಪ್ಪುವಂತಿರಲಿಲ್ಲ. ವಿದೇಶೀಯರಾಗಿದ್ದ ಪಾರ್ಸಿಗಳೇ ಆ ಕೆಲಸಕ್ಕೆ ಮುಂದೆ ಬಂದರು. ಪಾಶ್ಚಾತ್ಯ ದೀಕ್ಷೆಯನ್ನು ಒಪ್ಪಿಕೊಂಡರು; ಇಂಗ್ಲೀಷು ಕಲಿತು ಸುಧಾರಿಸಿದವರಾದರು. ಉದ್ದಿಮೆಗಳನ್ನು ಸ್ಥಾಪಿಸಿ ಮುಂಬಯಿಯ ಶ್ರೀಮಂತರಲ್ಲಿ ಗಣ್ಯರಾದರು. ಎಲ್ಲಕ್ಕಿಂತ ಹೆಚ್ಚಾಗಿ ಶಾಲೆ—ಕಾಲೇಜುಗಳಿಗೆ ದೇಣಿಗೆಗಳನ್ನು ಕೊಟ್ಟು, ವೃತ್ತಪತ್ರಿಕೆಗಳನ್ನು ಹೊರಡಿಸಿ, ನಾಟಕ ಕಂಪನಿಗಳನ್ನು ಸ್ಥಾಪಿಸಿ ಹೊಸ ಸಂಸ್ಕೃತಿ ಪ್ರಕಟವಾಗಲು ಪರಿಸ್ಥಿತಿಯನ್ನು ನಿರ್ಮಾಣ ಮಾಡಿದರು.

ಇದೆಲ್ಲದರ ಪರಿಣಾಮ ಗುಜರಾತೀ ಸಾಹಿತ್ಯದ ಮೇಲಾಯಿತು. ಪ್ರೌಢ ವೈಚಾರಿಕತೆ ಮತ್ತು ಶೈಲಿಯ ಸರಳತೆ ಗದ್ಯಪದ್ಯಗಳ ಪ್ರಮುಖ ಲಕ್ಷಣಗಳಾದವು. ಈ ಶತಮಾನದ ಪ್ರಾರಂಭದಲ್ಲಿ ಅಥವಾ ಅದಕ್ಕೂ ಮುಂಚೆ ಗುಜರಾತೀ ಗದ್ಯ ಪದ್ಯಗಳ ಪ್ರವರ್ತಕರ ಹೆಸರುಗಳೇ ಈ ಮಾತಿನ ಸತ್ಯವನ್ನು ಉಸಿರುತ್ತವೆ. ಗದ್ಯ ಮಹಾತ್ಮಾ ಗಾಂಧಿಯವರ ವ್ಯಕ್ತಿತ್ವದಿಂದ ಪರಿಪ್ಲುತವಾಯಿತು; ಕಾವ್ಯದ ಚಿಂತನಶೀಲತೆಯನ್ನು ೮೬ ವರ್ಷಗಳ ವರೆಗೆ ಬಾಳಿದ ಬಲವಂತರಾಯ ಠಾಕೂರರು ರೂಪಿಸಿದರು. ಸಾಹಿತ್ಯದ ಈ ಹೊಸ ಮೌಲ್ಯಗಳ ಜೊತೆಗೆ ಸೌರಾಷ್ಟ್ರದ ಸಾಹಿತ್ಯದ ಮೂಲಭಾವವನ್ನು ಕುರಿತು ಹೇಳಿದಂತಾಗುತ್ತದೆ. ಮುಂದಿನ ಇತಿಹಾಸವೆಲ್ಲ-ಇಡೀ ಭಾರತದ ಹಣೆಬರೆಹದ ಪುನರುಕ್ತಿಯಲ್ಲದೆ ಬೇರೆಯಲ್ಲ.

ಆದರೆ ಆಧುನಿಕ ಕಾಲದ ಸಂಕಟಗಳಿಂದ ಗುಜರಾತ ಕೂಡ ಬಿಡುಗಡೆಯನ್ನು ಪಡೆದಿಲ್ಲ. ಸ್ವಾತಂತ್ರ್ಯ ಪೂರ್ವದಲ್ಲಿ ಪ್ರಾಂತಕ್ಕೆ ಪ್ರಾಂತವೇ ಆದರ್ಶ ಪ್ರಿಯತೆಯಿಂದ ಉರಿದೆದ್ದಿತ್ತು. ಈಗ ಅದೆಲ್ಲ ತಣ್ಣಗಾಗಿ ಸಂಸ್ಕೃತಿಯ ಪ್ರವಾಹ ತೀರ ಕಿರಿದಾಗಿ ಸಾಹಿತ್ಯ ಕಲೆಗಳ ಕ್ಷೇತ್ರದಲ್ಲಿ ಸದ್ದಿಲ್ಲದೆ ಸಾಗಿದೆ. ಎಲ್ಲ ಪ್ರಾಂತಗಳ ಹಣೆಬರೆಹವೂ ಅಷ್ಟೇ ಆಗಿದೆ. ಗಡಿಪ್ರಶ್ನೆ, ಭಾಷಾ ಪ್ರಶ್ನೆಗಳ ಬಡಿದಾಟ ಏನೇ ಇರಲಿ ಸಂಸ್ಕೃತಿಯ ಸ್ಪರ್ಧೆಯಲ್ಲಿ ಮಾತ್ರ ಭಾರತದ ಎಲ್ಲ ಪ್ರಾಂತಗಳೂ ಸೋತು ನಿರ್ವಿಣ್ಣವಾಗಿವೆ. ಗುಜರಾತ ಮೊದಲೇ ಸಂಪದ್ಭರಿತವಾದ ನಾಡು; ಬೇಸಾಯ ಮತ್ತು ವ್ಯಾಪಾರಗಳಲ್ಲಿ ಅದರ ಮಟ್ಟ ಉನ್ನತವಾಗಿಯೇ ಇದೆ. ಕ್ಯಾಂಬೆ, ಅಂಕಲೇಶ್ವರ, ಜಾಮನಗರಗಳಂಥ ಪಟ್ಟಣಗಳು ಈಗ ಹೊಸ ಉದ್ದಿಮೆಗಳ ಕ್ಷೇತ್ರಗಳಾಗತೊಡಗಿವೆ. ದೇಶದ ತುಂಬೆಲ್ಲ ವ್ಯಾಪಾರಕ್ಕಾಗಿ ಹೊರಗೆ ಹೋದ ಗುಜರಾತಿಗಳು ಸಂಪತ್ತನ್ನು ಹೆಚ್ಚಿಸಿದ್ದಲ್ಲದೆ, ಗುಜರಾತಕ್ಕೆ ಜನಸಂಖ್ಯೆಯ ಭಾರ ಹೆಚ್ಚಾಗದಂತೆ ನೋಡಿಕೊಂಡಿದ್ದಾರೆ. ಹಳ್ಳಿಹಳ್ಳಿಗೂ ಕಾಲೇಜುಗಳಾಗಿವೆ. ಇನ್ನೂ ಎರಡು ವಿಶ್ವವಿದ್ಯಾಲಯಗಳ ಯೋಜನೆಯಾಗಿ ಅದಕ್ಕೆ ಹಣದ ಸಂಗ್ರಹವೂ ಆಗಿಬಿಟ್ಟಿದೆ. ಹಣಕೊಟ್ಟು ಏನೇನನ್ನು ಪಡೆಯಬಹುದೋ ಅದೆಲ್ಲ ಗುಜರಾತ ಪಡೆದುಬಿಟ್ಟಿದೆ. ಉಳಿದ ಪ್ರಾಂತಗಳಲ್ಲಿಯಂತೆ ಜಾತೀಯ ವಿಷಮತೆಯ ಸಮಸ್ಯೆಯೂ ಇಲ್ಲಿ ಅಷ್ಟೊಂದಾಗಿಲ್ಲ. ಸಂಸ್ಕೃತಿ ನಿರ್ಮಾಣಕ್ಕೆ ಇರಬಹುದಾದ ಅಡ್ಡಿ ಆತಂಕಗಳಾವವೂ ಈ ನಾಡಿನವಲ್ಲ. ಆದರೂ ಬದುಕು ಉತ್ಸಾಹಹೀನವಾಗಿ, ನಿಸ್ಸಾರವಾಗಿ, ಹಗುರವಾಗಿದೆ.

ಕೊನೆಯದಾಗಿ ಹೇಳಬಹುದಾದ ಮಾತು ಇಷ್ಟೇ. ಸ್ವಾತಂತ್ರ್ಯೋತ್ತರ ಕಾಲದಲ್ಲಿ,ಭಾರತದಲ್ಲಿ ರಾಜ್ಯ ರಾಜ್ಯಗಳ ನಡುವಿನ ಸಂಬಂಧ ಹೆಚ್ಚು ಹೆಚ್ಚು ಭೌತಿಕವಾಗತೊಡಗಿದೆ. ಸ್ವಾತಂತ್ರ್ಯ ಪೂರ್ವ ಕಾಲದಲ್ಲಿ ಗುಜರಾತಕ್ಕೆ ಬರುತ್ತಿದ್ದ ಕನ್ನಡಿಗ ಮಹಾತ್ಮಾ ಗಾಂಧಿ ಹಾಗೂ ಸರದಾರ ಪಟೇಲರಂಥ ನಾಯಕರ ಪಡೆಯಲ್ಲಿ ಕೆಲಸ ಮಾಡಲು ಬರುತ್ತಿದ್ದ. ಈಗ ನೌಕರಿಗಾಗಿ ಬರುತ್ತಿದ್ದಾನೆ. ಮಳೆಗಾಲದಲ್ಲಷ್ಟೇ ನೀರು ತುಂಬಿಕೊಂಡು ಉಳಿದ ದಿನಗಳಲ್ಲಿ ಮಳಲ ಹಾಸಿಗೆಯಾಗಿರುವ ಸಾಬರಮತೀ ನದಿಯ ತೀರದ ಆಶ್ರಮ ಈಗ ಒಂದು ಮ್ಯೂಜಿಯಂ ಮಾತ್ರವಾಗಿ, ಅದರ ಸುತ್ತ ಮುತ್ತ ಯಂತ್ರಯುಗದ ನಾಗರಿಕತೆ ಹಬ್ಬಿ ಕೊಂಡಿದೆ. ಗುಜರಾತದ ಯುವಕರೆಲ್ಲ ಟೆಕ್ನಾಲಜಿಯಲ್ಲಿ ಹೆಚ್ಚಿನ ಶಿಕ್ಷಣಪಡೆಯಲು ಪರದೇಶಗಳಿಗೆ ಸಾವಿರದ ಸಂಖ್ಯೆಯಲ್ಲಿ ಹೋಗುತ್ತಾರೆ. ಅಷ್ಟೂ ಬುದ್ಧಿವಂತರಲ್ಲದವರು ಆಫ್ರಿಕಾಕ್ಕೆ ಹೋಗಿ ತಮ್ಮ ದೈವವನ್ನು ಪರೀಕ್ಷಿಸುತ್ತಾರೆ. ಈ ವೈಭವವನ್ನೆಲ್ಲ ನೋಡುತ್ತ ನಿಂತ ತರುಣ ಕನ್ನಡಿಗ ತಾನೂ ಒಂದು ಟೆರಿಲಿನ್ ಬುಶ್‌ಶರ್ಟನ್ನು ಧರಿಸಿಕೊಂಡು, ಗುಜರಾತದ ಕೊನೆಯರಿಯದ ಸೆಕೆಯಲ್ಲಿ ಆಯಿಸ್‌ಕ್ರೀಮನ್ನು ತಿಂದು ತಂಪನ್ನು ತಂದುಕೊಳ್ಳುತ್ತಾನೆ. ತನಗೆ, ತನ್ನಂಥ ಸಾವಿರಾರು ದುರ್ದೈವಿಗಳಿಗೆ ಇಂಥ ಒಂದೂ ಸದವಕಾಶವನ್ನು ಒದಗಿಸದ 'ಕನ್ನಡಮನೆನಿಪ್ಪಾನಾಡ'ನ್ನು ಅವನು ಮನಸ್ಸಿನಲ್ಲಿಯೇ ಹಳಿಯುತ್ತಾನೆ,



## ನಿನ್ನ ಕಣ್ಣಿನಲ್ಲಿ—

ಓ! ನಿನ್ನ ಕಣ್ಣಿನಲ್ಲಿ ಏನಿದೆಯೋ
ಕಾಣೆನೆ!
ನನ್ನ ಕುರಿತ ಕನಸೊ ಕಥೆಯೊ
ತೋಡಲಾರದಂಥ ವ್ಯಥೆಯೊ
ಏನಿರುವುದೊ ಕಾಣೆನೆ!
ನೋಡಿ ನೋಡಿ ಕಾಣದಾದೆ
ಮುಳುಗಿ ಮುಳುಗಿ ತಳಕಾಣದೆ
ಮತ್ತೆ ಮೇಲೆ ಬಂದು ದಡದ
ಹಸುರ ಮೇಲೆ ನಿಡುಸುಯ್ಯುವೆ
ಓ ನಿನ್ನ ಕಣ್ಣಿನಲ್ಲಿ ಏನಿರುವುದೊ ತಿಳಿಯದೆ

ಮಿರುಮಿರುಗುವ ನಿನ್ನ ಈ ಕಣ್ಣ ಕಡಲಿನೊಳಗಡೆ
ಏನಿರುವುದೊ ಕಾಣೆನೆ
ನೂರ ದೂರ ಸಾಗಿದಂತೆ
ಯಾವ ಕಾಡು ಯಾವ ಮೇಡು
ಯಾವ ಗುಡ್ಡ ಯಾವ ಬೆಟ್ಟ
ಯಾವ ಕನಸಿನೊಂದು ದ್ವೀಪ
ಯಾವ ಸುಪ್ತ ಜ್ವಾಲಾಮುಖಿ
ಯಾವ ಒಂದು ನಂದನ
ಅಥವ ಒಂದು ಬೃಂದಾವನ
ಏನಿರುವುದೊ ಕಾಣೆನೆ!

ತೆರೆಮಿರುಗುವ ನಿನ್ನ ಈ ಕಣ್ಣ ನೀಲಿಯೊಳಗಡೆ
ಏನಿದೆಯೋ ಕಾಣೆನೆ!
ನಿನ್ನ ಕಣ್ಣದೊಂದು ಕರೆ
ಸಾಹಸಕ್ಕೆ ಹಯಣಕೆ

ನಿನ್ನ ಕಣ್ಣದೊಂದು ಸೆರೆ
ಸುತ್ತ ಹರಿವ ಮನಸಿಗೆ
ಇದು ಬಂದರೊ ಏನೊ ಕಾಣೆ
ಕಂಬನಿಗಳ ದೋಣಿಗೆ
ಇದು ದಾರಿಯೊ ಏನೊ ಕಾಣೆ
ಹಳೆ ನೆನಪಿನ ಹಡಗಿಗೆ

ಏನಿದೆಯೋ ಏನಿದೆಯೋ
ಈ ಅಭೇದ್ಯ ಹೊಳಪಿನೆಲೆಗಳಾಚೆಗೆ
ಏನಿದೆಯೋ ತಿಳಿನೀಲಿಯ
ಇದರ ತಳಾತಳದಲಿ
ಅಯ್ಯೊ ನಿನ್ನ ಕಣ್ಣಿನಲ್ಲಿ
ಏನಿದೆಯೋ ಕಾಣೆನೆ!

ಒಲವೊ—ಹಗೆಯೊ—ಭಯ—ಶಂಕೆಯೊ
ಸೃಷ್ಟಿಪೂರ್ವ ಲಯ ಬೆಂಕಿಯೊ
ಏನಿರುವುದೊ ಕಾಣೆನೆ!
ಸೋತು ಸೋತು ಸುಮ್ಮನಾಗಿ
ರೆಪೆ ಹಸುರ ದಡದ ಮೇಲೆ
ಬಂದು ಮಲಗಿ ನೋಡುತಿರುವೆ
ಈ ಕಡಲಿನ ಕೇಂದ್ರದಲ್ಲಿ
ಮಿಂಚು ಪ್ರಭೆಯ ಬಳಸಿನಲ್ಲಿ
ಮಿರುಮಿರುಗುವ ದ್ವೀಪ
ಕೈಯ್ಯ ಚಾಚಿ ಸದಾ ಕರೆವ
ಈ ಅಭೇದ್ಯ ಚೋದ್ಯವ!

—ಜಿ. ಎಸ್. ಶಿವರುದ್ರಪ್ಪ




# "ಮುಂಬಯಿಯಲ್ಲಿ ಕನ್ನಡಿಗ"

ಪ್ರೊ. ಜಿ. ವಿ. ಕುಲಕರ್ಣಿ ಎಂ. ಎ. ಎಲ್‌ಎಲ್. ಬಿ.

'ಮುಂಬಯಿಯಲ್ಲಿ ಕನ್ನಡಿಗ' ಎಂಬ ವಿಷಯದ ಬಗ್ಗೆ ಒಂದು ಲೇಖನ ಬರೆಯಲು ನನಗೆ ಹೇಳಿದ್ದಾರೆ; ಒಪ್ಪಿದಾಗ ಇದ್ದ ಸಂತೋಷ ಬರೆಯುವಾಗ ಇಲ್ಲ. ಇಲ್ಲಿರುವ ಕನ್ನಡಿಗನ :ಚಿತ್ರವನ್ನು ಒಂದು ಚಿಕ್ಕ ಲೇಖನದಲ್ಲಿ ಹಿಡಿದಿಡುವದೆಂದರೆ 'ಆನೆಯನ್ನು ಕನ್ನಡಿಯಲ್ಲಿ ಪ್ರತಿಬಿಂಬಿಸಿದಂತೆ.'

ಈ ಬರವಣಿಗೆ ಕಠಿಣವಾಗಲು ಇನ್ನೂ ಒಂದು ಕಾರಣವಿದೆ. ಅದೆಂದರೆ ಮುಂಬೈ ಕನ್ನಡಿಗನ ವಿಷಯ ಕರ್ನಾಟಕದಲ್ಲಿ ವಾಸಿಸುವ ಕನ್ನಡಿಗರಿಗೆ ಕನ್ನಡವಾಚಕರಿಗೆ ಸಾಕಷ್ಟು ಪರಿಚಿತವಾಗಿಯೇ ಇದೆ. ಕರ್ಮವೀರ, ಸಂಯುಕ್ತ ಕರ್ನಾಟಕ, ಪ್ರಪಂಚ, ಪ್ರಜಾವಾಣಿ ಹಾಗೂ ನವಭಾರತ ಮುಂತಾದ ಅನೇಕ ಕನ್ನಡ ಪತ್ರಿಕೆಗಳಲ್ಲಿ ವಾರ್ತಾಪತ್ರದ ರೂಪದಿಂದಲೋ ಸುದ್ದಿಯ ರೂಪದಿಂದಲೋ ಕಾಲಕಾಲಕ್ಕೆ ಪ್ರಕಟವಾಗುತ್ತಿರುವ ವಿಷಯವನ್ನು ವಾಚಕರು ಬಲ್ಲರು. ಇತ್ತೀಚೆ ಮುಂಬಯಿ ಕರ್ನಾಟಕ ಸಂಘದವರು ಪ್ರಕಟಿಸಿದ 'ಡೈರೆಕ್ಟರಿಯು' ಈ ಪರಿಚಯದ ಕೆಲಸವನ್ನು ದೊಡ್ಡ ಪ್ರಮಾಣದಿಂದ ಮಾಡಿದೆ, ಅಲ್ಲದೇ ಸುಮಾರು ಐದು ಲಕ್ಷ ರೂಪಾಯಿ ವೆಚ್ಚದಿಂದ ಸಿದ್ಧವಾಗಲಿರುವ ಸರ್ ವಿಶ್ವೇಶ್ವರಯ್ಯ ಸ್ಮಾರಕ ಭವನವು ಕನ್ನಡಿಗರ ಮೂರ್ತಿಮಂತ ಚಟುವಟಿಕೆಯಾಗಿ ಇಷ್ಟರಲ್ಲಿ ನಿಲ್ಲಲಿದೆ. ಈ ವಿಷಯವನ್ನೆಲ್ಲ ಓದುಗರು ಮುಂಬೈ ಕನ್ನಡಿಗನ ಒಂದು ಕಾಲ್ಪನಿಕ ಚಿತ್ರವನ್ನು ತಮ್ಮ ಮನಃಪಟಲದಲ್ಲಿ ಬಿಂಬಿಸಿರುತ್ತಾರೆ, ಆದ್ದರಿಂದ ಆ ಚಿತ್ರದ ಮೇಲೆ ನಾನು ಮತ್ತೆ ಕೆಲ ಗೆರೆ ಎಳೆದರೆ ನನ್ನ ಕೆಲಸ ಸುಲಭ,ಬೇರೆ ಗೆರೆ ಎಳೆಯ ಹೊರಟರೆ ಅಷ್ಟೇ ಕಷ್ಟ.

ಐತಿಹಾಸಿಕ ದೃಷ್ಟಿಯಿಂದ ನೋಡಿದರೆ ಕನ್ನಡಿಗ ಬಹುಶಃ ಮುಂಬೈಯ ಈ ಸಪ್ತದ್ವೀಪದಲ್ಲಿ ಮೊದಲು ಬಂದು ನೆಲಸಿದವನಾಗಿರಬೇಕು. ಪ್ರೊ. ಚಿದಂಬರ ಕುಲಕರ್ಣಿಯವರು, ಒಂದು ಸಂಶೋಧನಪರ ಲೇಖನ ಬರೆದು ಇಲ್ಲಿಯ ಮೂಲನಿವಾಸಿಗಳಾದ ಕೋಳಿ ಜನರು ಕನ್ನಡಿಗರು ಎಂಬ ಮಾತನ್ನು ಸಕಾರಣವಾಗಿ ಸಮರ್ಥಿಸಿದ್ದಾರೆ. ಮುಂಬೈಯ ಆದಿವಾಸಿಗಳು 'ಕೋಳಿ' ಜನ ಎಂಬ ಬಗ್ಗೆ—ಯಾಗಲೀ, ಅವರು ದ್ರಾವಿಡ ಜನಾಂಗ ಎಂಬ ಬಗ್ಗೆ ಆಗಲಿ ಇತಿಹಾಸತಜ್ಞರಲ್ಲಿ ಒಮ್ಮತವಿದೆ. ಮುಂಬೈ ದ್ವೀಪವು ಹದಿನಾಲ್ಕನೆಯ ಶತಮಾನದ ವರೆಗೆ ಕನ್ನಡ ಆಳರಸರ ಕೈಕೆಳಗೆ ಇತ್ತು (ಸಾತವಾಹನ, ಚಾಲುಕ್ಯ, ಶಿಲಾಹಾರಮುಂ) ೧೬೬೯ರಲ್ಲಿ ಇಂಗ್ಲೀಷ ಭಾಷೆಯಲ್ಲಿ ಪಾಸಾದ ಕಾನೂನುಗಳನ್ನು ಪೋರ್ತುಗೀಜ ಹಾಗೂ ಕನ್ನಡ ಭಾಷೆಗಳಿಗೆ ಸರಕಾರದವರು ಅನುವಾದ ಮಾಡಿಸಿದ ಉಲ್ಲೇಖ, ಮುಂಬೈ ಗೆಝೆಟದಲ್ಲಿ ಇದೆ. ಇದರಿಂದ ಆಗ ಇಲ್ಲಿಯ ಜನ ಕನ್ನಡ ಭಾಷೆಯನ್ನಾಡುತ್ತಿದ್ದರೆಂಬ ಮಾತು ಸ್ಪಷ್ಟವಾಗುತ್ತದೆ. ೧೮೧೮ ರಲ್ಲಿ ಮೌಂಟ-ಸ್ಟುವರ್ಟ ಎಲ್‌ಫಿನ್‌ಸ್ಟನ್ನರು ಮುಂಬೈ ಗವ್ಹರ್ನರರೆಂದು ನೇಮಕಗೊಂಡಾಗ ಪುರಜನರು ಅವರಿಗೆ ಅರ್ಪಿಸಿದ ಮಾನಪತ್ರವು ಕನ್ನಡದಲ್ಲಿತ್ತು, ೧೮೫೮ರಲ್ಲಿ ಪ್ರಕಟವಾದ "ರಾಣಿ ಜಾಹೀರನಾಮೆ" ಯು (Queens proclamatian) ಮುಂಬೈಯ ಜನರಿಗಾಗಿ ಕನ್ನಡದಲ್ಲಿ ಅನುವಾದಿತವಾಗಿತ್ತು. ಈ ಎಲ್ಲ ವಿಷಯ ಓದಿದಾಗ ಮುಂಬೈಯಲ್ಲಿ ಆದಿವಾಸಿಗಳಿಂದ ಹಿಡಿದು ಇಂದಿನ ವರೆಗೆ ಕನ್ನಡಿಗ ಅಲ್ಲಿದ್ದಾನೆ, ಮತ್ತು ಗೌರವದ ಸ್ಥಾನವನ್ನು ಆಕ್ರಮಿಸಿದ್ದಾನೆ ಎಂಬ ಮಾತು ಸ್ಪಷ್ಟವಾಗುತ್ತದೆ, ಈ ಕಾರಣದಿಂದಲೋ ಏನೋ ಕನ್ನಡಿಗರಿಗೆ ಮುಂಬೈ ಇನ್ನೊಂದು ಮನೆಯಂತೆ ಆಗಿದೆ.

ಪ್ರತಿವರ್ಷ ಕನ್ನಡಿಗರು ಕರ್ನಾಟಕದ ಬೇರೆ ಬೇರೆ ಭಾಗಗಳಿಂದ ಮುಂಬೈಕಡೆ ಬರುತ್ತಾರೆ. ಇವರಲ್ಲಿ ಎಲ್ಲ ವಿಧದ ಜನರೂ ಇದ್ದಾರೆ. ವಿದ್ಯಾರ್ಜನೆಗೆಂದು ಕೆಲವರು ಬಂದರೆ ಇನ್ನೂ ಕೆಲವರು ನೌಕರಿಗೆಂದು, ಇನ್ನು ಕೆಲವರು ಉದ್ಯೋಗಕ್ಕೆಂದು ಬಂದಿರುತ್ತಾರೆ, ಭಾಷಾವಾರ ಪ್ರಾಂತರಚನೆ ಆಗುವದಕ್ಕೆ ಮೊದಲು ಧಾರವಾಡ, ಕಾರವಾರ, ಬೆಳಗಾಂವಿ ಹಾಗೂ ವಿಜಾಪೂರ ಜಿಲ್ಹೆಗಳು ಹಳೆಯ ಮುಂಬೈರಾಜ್ಯದಲ್ಲಿ ಇದ್ದುದರಿಂದ ಆಗ ಮುಂಬೈಗೆ ಬರುವವರ ಸಂಖ್ಯೆ ಬಹಳ ಇತ್ತು. ಮಂಗಳೂರಿನವರಿಗಂತೂ ಪಡುವಣ ಕಡಲ ಸಂಬಂಧವೂ ಇಲ್ಲಿಗೆ ಎಳೆದು ತಂದಿತ್ತು. ಆ ರಾಜ್ಯಗಳ ಪುನಾರಚನೆ ಆದ ಮೇಲೆ ಕೂಡ ಹೀಗೆ ಮುಂಬೈಗೆ ಬರುವವರ ಸಂಖ್ಯೆ ತಿಳಿದಷ್ಟು ಕಡಿಮೆಯಾಗಿಲ್ಲ. ವರ್ಷ-ವರ್ಷ ಬೆಳೆಯುತ್ತಿರುವ ರಾತ್ರಿ-ಹೈಸ್ಕೂಲು ಹಾಗೂ ದಿನದ ಹೈಸ್ಕೂಲುಗಳೇ ಇದಕ್ಕೆ ನಿದರ್ಶನವಾಗಿವೆ.

ಮುಂಬೈಯಲ್ಲಿ ಇರುವ ಕನ್ನಡಿಗರೆಲ್ಲ ಹೆಚ್ಚಾಗಿ ಬುದ್ಧಿಜೀವಿಗಳು ಇಲ್ಲವೇ ಶ್ರಮಜೀವಿಗಳು, ಮುಂಬೈಗೆ ಬರುವಾಗ ಬರಿಗೈಯಿಂದ ಅಥವಾ ಉಟ್ಟ ಅರಿವೆಯ ಮೇಲೆಯೇ ಬಂದು, ಇಲ್ಲಿ ತಮ್ಮ ಸ್ವಂತ ಪ್ರಯತ್ನದಿಂದ ಯಶಸ್ವಿ ಜೀವನ ನಡೆಯಿಸಿದವರೇ ಬಹಳ ಜನ. ನಮ್ಮ ಮಂಗಳೂರಿನ ಬಾಂಧವರಲ್ಲಿ ಒಂದು ಮಾತು ಗಾದೆಯಷ್ಟು ಪ್ರಚಲಿತವಾಗಿದೆ. "ಮುಂಬೈಯಲ್ಲಿ ಕೆಲಸದೊರೆಯದಿದ್ದರೆ ಜಗತ್ತಿನಲ್ಲಿ ಎಲ್ಲೂ ದೊರೆಯುವದಿಲ್ಲ" ಇಲ್ಲಿ ಜೀವಿಸುವಾಗ ತನಗೆ ದೊರೆಯುವ ಎಲ್ಲ ಯಶ ತನ್ನ ಕರ್ತೃತ್ವಶಕ್ತಿಯನ್ನೇ ಅವಲಂಬಿಸಿರುವದರಿಂದ ಇಲ್ಲಿಯ ಕನ್ನಡಿಗ ಪ್ರಾಮಾಣಿಕ, ನಿಷ್ಠಾವಂತ ಕೆಲಸಗಾರ ಹಾಗೂ ಒಳ್ಳೆಯ ಸಹೋದ್ಯೋಗಿಯಾಗಿ ಎಲ್ಲರ ಪ್ರೀತಿಗೆ ಪಾತ್ರನಾಗಿದ್ದಾನೆ. ಕರ್ನಾಟಕದ ಬಹುಶಃ ಎಲ್ಲ ಭಾಗಗಳಿಂದ ಬಂದ ಕನ್ನಡಿಗರು ಇಲ್ಲಿ ಒಂದಾಗಿದ್ದಾರೆ.

ಇಲ್ಲಿಯ ಕನ್ನಡಿಗನ ಕೆಲ ವಿಶಿಷ್ಟ ಗುಣಗಳೆಂದರೆ ಹೃದಯವೈಶಾಲ್ಯ ಹಾಗೂ ಕಲಾಭಿಜ್ಞತೆ. ಅವನ ಹೃದಯವೈಶಾಲ್ಯಕ್ಕೆ ಮುಂಬೈಯಂತಹ ವಿಶ್ವ ಪ್ರಜ್ಞೆಯ ಊರೇ ಸ್ಫೂರ್ತಿದಾಯಕ. ಇದಕ್ಕೆ ಒಂದು ಚಿಕ್ಕ ಉದಾಹರಣೆ ಕೊಟ್ಟರೆ ಅಸಮಂಜಸವಾಗಲಿಕ್ಕಿಲ್ಲವೆಂದು ಭಾವಿಸುವೆ. ಕೆನರಾ ವೆಲ್‌ಫೇರ ಟ್ರಸ್ಟಿನ ಅಧ್ಯಕ್ಷರಾದ ಶ್ರೀ ದಿನಕರ ದೇಸಾಯಿಯವರ ವಾಸ್ತವ್ಯ ಮುಂಬೈ. ತಮ್ಮ ಸಂಸ್ಥೆ ನಡೆಸುವ ಕಾರವಾರ ಜಿಲ್ಹೆಯ ಅನೇಕ ಹೈಸ್ಕೂಲು ಹಾಗೂ ಶಾಲೆಗಳಿಗೆ ಹೆಚ್ಚಾಗಿ ನಿಧಿಯನ್ನು ಅವರು ಶೇಖರಿಸಿದ್ದು ಮುಂಬಯಿಯಲ್ಲೇ. ಅನೇಕ ಕನ್ನಡೇತರರು ಹಣ ನೀಡಿದ್ದಾರೆ, ಶಾಲೆ ಶಿಕ್ಷಣದಕಾರ್ಯಕ್ಕೆಂದು. ಆದರೆ ಕರ್ನಾಟಕದಲ್ಲಿಯೇ ಇನ್ನೊಂದೂರಿನ ಶಾಲೆಯ ನಿಧಿಗೆ ನಮ್ಮ ಊರವರು ಕೊಡುವ ಧನಸಹಾಯ ಎಷ್ಟು ಎಂಬುದು ಅಲ್ಲಿಯವರಿಗೇ ಗೊತ್ತು. ಆದ್ದರಿಂದಲೇ ಮುಲ್ಕಿಯಲ್ಲಿ ಕಾಲೇಜ ಸ್ಥಾಪಿತವಾದರೆ ಮುಂಬೈಯಲ್ಲಿ ಸಲೀಸಾಗಿ ಫಂಡು ಕೊಡುತ್ತದೆ.

ಇಲ್ಲಿಯ ಕನ್ನಡಿಗನ ಕಲಾಭಿಜ್ಞತೆ ರಸಾಸ್ವಾದನೆ ಉಚ್ಚಮಟ್ಟದ್ದಾಗಿದೆ. ಬಿಡುವಿಲ್ಲದ ಇಡೀ ದಿನ ಕಳೆದ ಮೇಲೆ ರಾತ್ರಿ ಬೆನ್ನಿಗೆ ನೆಲದ ಆಶ್ರಯ—ವಿಶ್ರಾಂತಿ ಯಾವಾಗ ಸಿಕ್ಕೀತೆಂದು ಹಲುಬುತ್ತಿರುವವರ ಊರಾದ ಮುಂಬೈ—ಯಂತ್ರ ಪಟ್ಟಣದಲ್ಲಿ ಅನೇಕ ಕನ್ನಡ ಅಮೆಚುಅರ್ ನಾಟಕಸಂಸ್ಥೆಗಳು ರಾತ್ರಿ ಎಂಟರಿಂದ ಹನ್ನೆರಡರವರೆಗೆ ತಿಂಗಳುಗಳ ಕಾಲ ರಂಗತಾಲೀಮು ನಡೆಸುವದೆಂದರೆ ಇದನ್ನು ಕಲ್ಪಿಸುವದು ಕೂಡ ಇತರರಿಂದಾಗಲು ಸಾಧ್ಯವಿಲ್ಲ. ಗೋರೆಗಾವ್‌ದಲ್ಲಿ ಮನೆಯಿದ್ದು, ಠಾಣಾದ ಫ್ಯಾಕ್ಟರಿಯಲ್ಲಿ ಕೆಲಸ ಮಾಡುತ್ತಿರುವ ನನ್ನ ಧಾರವಾಡ ಮಿತ್ರರೊಬ್ಬರು ಮಾತುಂಗಾದಲ್ಲಿದ್ದ ನಾಟಕದ ರಂಗತಾಲೀಮಿಗೆ ಒಂದು ತಿಂಗಳ ತಪ್ಪದೇ ಬರುತ್ತಿದ್ದರು. ಇದನ್ನು ಇತರರಿಗೆ ತಿಳಿಯುವಂತೆ ಹೇಳುವದೂ ಕಷ್ಟ. ತಮ್ಮ ಕೆಲಸ ಬಿಟ್ಟ ಮೇಲೆ ಆಫೀಸಿನಿಂದ ನೇರವಾಗಿ ೮ ಗಂಟೆಗೆ ರಂಗತಾಲೀಮಿಗೆ ಬಂದು ಹನ್ನೊಂದರ

ವರೆಗೆ ಇದ್ದು, ಮನೆಗೆ ಹೋಗಿ ಹನ್ನೆರಡಕ್ಕೆ ಮುಟ್ಟಿ, ಅವರ ಪಾಲಿಗೆ ಮನೆಯವರಿಟ್ಟ ಅನ್ನ ಹೊಟ್ಟೆಗೆ ಹಾಕಿ, ನಾಲ್ಕುವರೆಗೆ ಮತ್ತೆ ಎದ್ದು ಐದಕ್ಕೆ ಮನೆಯಿಂದ ಹೊರಟು ಠಾಣಾಕ್ಕೆ ಏಳು ಗಂಟೆಯ ಕೆಲಸಕ್ಕೆ ಹಾಜರಾಗುತ್ತಿದ್ದರು. ಮತ್ತೆ ಸಂಜೆಯವರೆಗೆ ಯಂತ್ರಗಳೊಂದಿಗೆ ಬಾಳು. ರಾತ್ರಿ-ಕಲೋಪಾಸನೆ! ನಾನು ಕಟ್ಟುಕಥೆ ಬರೆಯುತ್ತಿಲ್ಲ. ಸತ್ಯಸಂಗತಿ ಬರೆಯುತ್ತಿದ್ದೇನೆ. ಧಾರವಾಡದಲ್ಲೋ ಮೈಸೂರಿನಲ್ಲೋ ನಾಟಕ ಆಡುವದಕ್ಕೂ ಮುಂಬೈಯಲ್ಲಿ ನೌಕರಿ ಮಾಡಿ ನಾಟಕ ಮಾಡುವದಕ್ಕೂ ಭೂಮ್ಯಾಕಾಶದಷ್ಟು ಅಂತರವಿದೆ; ಆದರೆ ಇಲ್ಲಿಯ ಕಲೆಯ-ಅಭಿನಯದ ಮಟ್ಟಕೂಡ ಸಾಕಷ್ಟು ಎತ್ತರದ್ದಾಗಿದೆ ಎಂಬುದನ್ನು ನಾವು ಹೇಳುವದಕ್ಕಿಂತ ಇಲ್ಲಿ ಬಂದು ನೋಡಿದರೇ ಗೊತ್ತಾಗುವದು. ಈ ಕಲಾಭಿಜ್ಞತೆ ಹಾಗೂ ಕಲೆಯ ಅವಿರತ ಆರಾಧನೆಯಿಂದಲೇ ಅಲ್ಲವೇ ಕನ್ನಡ ನಾಟಕಗಳು ಅಂತರ್ ಕಾಲೇಜು ನಾಟಕ ಸ್ಪರ್ಧೆಯಲ್ಲಿ ಅನೇಕಸಲ ಸರ್ವ ಭಾಷೆಗಳಲ್ಲಿ ಇದ್ದ ನಾಟಕಗಳಲ್ಲಿ ತಮ್ಮ ಶ್ರೇಷ್ಠತೆ ಹಾಗೂ ಮೇಲ್ಮೆಯನ್ನು ತೋರಿವೆ. ಇಲ್ಲಿರುವ ಹಿಂದಿ, ಮರಾಠಿ, ಗುಜರಾತಿ, ಹಾಗೂ ಬಂಗಾಲಿ ಕೃತಿಗಳು ಕನ್ನಡಿಗನಿಗೆ ಹೆಚ್ಚು ಸ್ಫೂರ್ತಿಯನ್ನು, ತನ್ನದನ್ನು ತೋರಿಸಲು ಹುಮ್ಮಸನ್ನೂ ನೀಡಿರುತ್ತವೆ. ಕಲೆಯಷ್ಟೇ ಅಭಿರುಚಿಯಲ್ಲಿ ಮೇಲ್ಮೆಯನ್ನು ಇಲ್ಲಿಯ ವಾತಾವರಣ ನೀಡಿದೆ.

ಇಲ್ಲಿರುವ ಅನುಕೂಲತೆ ಬೇರೆ ಕಡೆ ಇಲ್ಲವೆಂದೇ ತಮ್ಮ ದೈವರೇಷೆಯನ್ನು ಬದಲಿಸಿಕೊಳ್ಳುವ ಹಟತೊಟ್ಟ ಯುವಕರು ಸಹಸ್ರಾರು ಇರುವರು. ಮನೆಯಲ್ಲಿ ಬಡತನ ಇದ್ದಾಗ, ಪರಿಚಯದವರೊಡನೆ ಮುಂಬೈ ಸೇರಿದ ಬಾಲಕ ಹೋಟೇಲಿನಲ್ಲಿ ಮಾಣಿಯಾಗಿಯೋ ಆಫೀಸಿನಲ್ಲಿ ಜವಾನನಾಗಿಯೋ ಇದ್ದು, ರಾತ್ರಿ ಶಾಲೆ ಸೇರಿ, ಕಷ್ಟದಿಂದ ಕಲಿತು, ಇದರಲ್ಲಿಯೇ ಮನೆಯ ಕುಟುಂಬಕ್ಕೂ ಸಹಾಯ ಮಾಡುತ್ತಿದ್ದು, ತನಗೆ ಸ್ವಲ್ಪ ಅನುಕೂಲವಾದರೆ ತನ್ನ ತಮ್ಮನನ್ನೋ ಸಂಬಂಧಿಕನನ್ನೊ ಕರೆಸಿ ಅವನಿಗೂ ಸಹಾಯನೀಡಿ ಈ ಕಷ್ಟದಲ್ಲಿಯೇ ಜೀವನದ ಸಾಫಲ್ಯ ಪಡೆದವರು ಬೇಕಾದಷ್ಟಿದ್ದಾರೆ. ಇಲ್ಲಿಯ ಕನ್ನಡಿಗ ತನ್ನ ಪ್ರಾಮಾಣಿಕತೆ ಹಾಗೂ ಕಾಯಕದ ಮಹಿಮೆಯಿಂದ ಒಳ್ಳೆಯ ಸ್ನೇಹಿತ, ನಂಬಿಗೆಯ ಆತ್ಮಕಾರ್ಯದರ್ಶಿ ದಕ್ಷ ಟೈಪಿಸ್ಟ, ಸಹಾಯಕೆ ನೆರೆಹೊರೆಯವ ಹಾಗೂ ಕೆಳಗಿನವರ ಪ್ರೀತಿಗೆ ಪಾತ್ರನಾದ ಮೇಲಧಿಕಾರಿಯಾಗಿದ್ದಾನೆ. ಜವಾನನೆಂದು ಸೇರಿದ ಆಫೀಸಿನಲ್ಲಿಯೇ ಅತ್ಯುಚ್ಚ ಅಧಿಕಾರಿಯಾದ, ಟೈಪಿಸ್ಟ ಎಂದು ಸೇರಿ ಅದೇ ಕಂಪನಿಯ ಡೈರೆಕ್ಟರನಾದ, ಕೇವಲ ಒಂದು ನೌಟು ಹಿಡಿದು ಬಂದು ಅನೇಕ ಹೊಟೇಲುಗಳ ಮಾಲಿಕನಾದ, ಲೇಬಲ್ ಹಚ್ಚುವ ಕೆಲಸದಿಂದ ಪ್ರಾರಂಭಿಸಿ ದೊಡ್ಡ ಉದ್ಯಮವನ್ನು ಪ್ರಾರಂಭಿಸಿದ ಕನ್ನಡಿಗರ ಉದಾಹರಣೆ ಮುಂಬೈಯಲ್ಲಿ ಲೆಕ್ಕವಿಲ್ಲದಷ್ಟಿವೆ.

ಮುಂಬಯಿ ಜೀವನದೊಂದಿಗೆ ಕನ್ನಡಿಗ ಎಷ್ಟೇ ಒಂದಾದರೂ ತನ್ನ ತಾಯನೆಲವನ್ನು ಬಿಟ್ಟುಬಂದ ನೋವು, ಹೃದಯದ ಒಂದು ಮೂಲೆಯಲ್ಲಿ ಸದಾ ಜಾಗ್ರತವಾಗಿರುತ್ತದೆ; ಎಷ್ಟೇ ಮರೆಯಲು ಪ್ರಯತ್ನಿಸಿದರೂ ಅದು ಮರೆಯಲಾರದ ಕೊರಗು. ಬೇರೆ ಭಾಷೆಯ ಹೆಂಡತಿಯನ್ನು ಮದುವೆಯಾಗಿ ಸಂಪೂರ್ಣ ಕನ್ನಡ ಮರೆತೇ ಬಿಟ್ಟವರೂ ಅಲ್ಲಲ್ಲಿ ದೊರೆಯುತ್ತಾರೆ, ಆದರೆ ಅಂಥವರು ಕೂಡ ಕನ್ನಡ ನುಡಿಯನ್ನು ಕೇಳಿದಾಗ ಕರುನಾಡನ್ನು ನೆನೆಯುತ್ತಾರೆ. " ಆರಂಕುಶವಿಟ್ಟೊಡಂ ನೆನೆವುದೆನ್ನ ಮನಂ ಬನವಾಸಿದೇಶಮಂ " ಎಂಬ ಕವಿವಾಣಿಯಂತೆ, ಮನವು ಕನ್ನಡ ದೇಶವನ್ನು ನೆನೆಯುತ್ತದೆ, " ತನು ಕನ್ನಡ, ಮನ ಕನ್ನಡ " ವೆಂದು ಹಾಡುತ್ತದೆ. ಈ ಕೊರಗನ್ನು ತುಂಬಿಸಿಕೊಳ್ಳಲಿಕ್ಕೋ ಏನೋ ಇಲ್ಲಿಯ ಕನ್ನಡಿಗ ಕನ್ನಡ ಓದುವದು, ಕನ್ನಡ ನಾಟಕ ಆಡಿಸುವದು, ಯಕ್ಷಗಾನದ ಮೇಳ ತರಿಸಿ ಆಡಿಸುವದು, ಇಲ್ಲವೇ ತಾನೇ ಬಣ್ಣಬಳಿದುಕೊಂಡು ಕುಣಿಯುವದು—ಇವೆಲ್ಲವುಗಳಿಂದ ತನ್ನ ಆ " ಒಳಗಿನ ಒಳಗಿನ ಒಳದನಿಗೆ " ಸಮಾಧಾನ ಹೇಳುತ್ತಾನೆ. ಯಾರೇ ಕನ್ನಡನಾಡಿನ ಹಿರಿಯ ಲೇಖಕ ಕಲಾವಿದ ಬಂದರೂ ಅವರನ್ನು ಕಾಣುತ್ತಾನೆ, ಅವರ ಭಾಷಣ ಕೇಳುತ್ತಾನೆ. ಸರ್ವಶ್ರೀ ಬೇಂದ್ರೆ, ಕಾರಂತ, ಗೋಕಾಕ, ಮುಗಳಿ, ಶ್ರೀರಂಗ ಯಾರೆ ಈ ಕಡೆ ಬರಲಿ ಅವರನ್ನು ಇರುವೆಯಂತೆ ಇಲ್ಲಿಯ ಕನ್ನಡಿಗ ಸುತ್ತುತ್ತಾನೆ. ಶ್ರೀ ಬೇಂದ್ರೆಯವರ ಹೊಸ ಕವಿತೆಗಳನ್ನು ಮುಂಬಯಿಯವರಷ್ಟು ಧಾರವಾಡದವರೇ ಕೇಳಿರುವರೋ ಇಲ್ಲವೊ " ಎಂದು ನನ್ನ ಮಿತ್ರರೊಬ್ಬರು ಉದ್ಗಾರ ತೆಗೆದಿದ್ದರು, ಕೆಲಸಲ ಇದು ಸತ್ಯ ಎನ್ನಿಸುತ್ತದೆ.

ಯಾವುದೇ ಕನ್ನಡದ ಕಾರಣಕ್ಕಾಗಿ ಕನ್ನಡಿಗ ಇಲ್ಲಿ ಧಾರಾಳವಾಗಿ ಹಣ ಸುರಿಯುತ್ತಾನೆ. ಇದರರ್ಥ ಇಲ್ಲಿಯ ಕನ್ನಡಿಗನ ಹತ್ತಿರ ಹೆಚ್ಚು ಹಣ ಇದೆಯೆಂದಲ್ಲ. ಅವನ ಮನಸ್ಸು ಅಷ್ಟು ಕರಗುತ್ತದೆ, " ದಬಾ " ತೀರಿದಾಗ ಮುಂಬಯಿಯಲ್ಲಿ ಶೋಕಸಭೆಗಳಾದವು. ಕರ್ನಾಟಕದಲ್ಲಿ ಅವರ ಬಡಕುಟುಂಬಕ್ಕೆ ಸಹಾಯಸಲ್ಲಿಸುವ ಯೋಜನೆ ಕೇಳಬರುತ್ತಿದ್ದವು. ಆದರೆ ಅಲ್ಲಿಯವರೆಗೆ ತಡೆಯುವ ತಾಳ್ಮೆ ಅವನಿಗಿರಲಿಲ್ಲ. ಸಂಗ್ರಹ ಪ್ರಾರಂಭಿಸಿದ. ಈಗಾಗಲೇ ಎರಡು ಸಾವಿರ ರೂಪಾಯಿಗಳಷ್ಟು ಕಳಿಸಿದ್ದಾನೆ. " ಕುಟುಂಬ ಪರಿಹಾರ ನಿಧಿ " ಸಂಗ್ರಹಿಸುವಾಗ ಒಬ್ಬ ಸದ್ಗೃಹಸ್ಥರು ಎರಡುನೂರು ಮೇಲೆರಡು ರೂಪಾಯಿಕೊಟ್ಟರು. ಅವರು "ದಬಾ" ರವರ ಸಾಹಿತ್ಯ ವಿಶೇಷ ಓದಿದವರಲ್ಲ. ಆದರೂ ಮನಕರಗಿದ ಅವರ ಆತ್ಮೀಯತೆಹೆಚ್ಚಿನದು.

ಇಲ್ಲಿಯ ಕನ್ನಡಿಗರ ಅನೇಕ ಸಾಂಸ್ಕೃತಿಕ ಕಾರ್ಯಕ್ರಮಗಳಲ್ಲಿ ನಾಡಹಬ್ಬ ಪ್ರಮುಖವಾದುದು. ಕೆಲ ಸಲ ಮುಖ್ಯ ಅತಿಥಿಗಳು ದೊರೆಯದೇ ಒಬ್ಬರನ್ನೇ ಎರಡು ಮೂರು ಕಡೆಗೆ ಕರೆಯುವ ಪ್ರಸಂಗವೂ ಬರುವುದುಂಟು. ಊರು ಬಿಟ್ಟು ಬಂದಿರುವುದರಿಂದ ಕನ್ನಡಿಗನ ಅಂತಃಕರಣ ತುಡಿದು ಅಪ್ಪಟ ಚಿನ್ನವಾಗಿರುತ್ತದೆ. ಡಾ, ಶಿವರಾಮ ಕಾರಂತರ ಹಾಗೂ ಶ್ರೀ ಆದ್ಯ ರಂಗಾಚಾರ್ಯರ ಷಷ್ಠ್ಯಬ್ದಿಪೂರ್ತಿ ಸಮಾರಂಭವನ್ನು ಕರ್ನಾಟಕದಲ್ಲಿ ಜರುಗಿದ ಉತ್ಸವಗಳಿಗಿಂತ ಹೆಚ್ಚು ವಿಜೃಂಭಣೆಯಿಂದ ಮುಂಬಯಿ ಕನ್ನಡಿಗ ಆಚರಿಸಿ ತೋರಿಸಿದ ಈ ಮಾತನ್ನು ನಾನು ಅತಿಯಾಗಿ ಬರೆಯುತ್ತಿಲ್ಲ; ಇಲ್ಲಿ ಮುಖ್ಯವಾದ ಸಂಗತಿಯೆಂದರೆ ಇಲ್ಲಿಯ ಕನ್ನಡಿಗನಿಗೆ ನಾಡಿನ ಕೆಲಸದಲ್ಲಿರುವ ಪ್ರೀತಿ.

ಒಂದಿಲ್ಲ ಒಂದು ಫಂಡು ಇಲ್ಲಿ ಕನ್ನಡಿಗ ತೆರುತ್ತಲೇ ಇರುತ್ತಾನೆ. ಮಧ್ಯಮ ವರ್ಗದ ಕುಟುಂಬದವರಿಗೆ ಇದರಿಂದ ಕೆಲ ಸಲ ಬೇಸರ ಬರುವಷ್ಟು ತೊಂದರೆಯಾಗುತ್ತದೆ. ಮೇಲಿಂದ ಮೇಲೆ ಕನ್ನಡ ನಾಟಕದ ತಿಕೀಟುಕೊಳ್ಳುವದು, ಯಾವುದಾದರೂ ಸಂಸ್ಥೆಗೆ ಸಹಾಯಧನ ಸಲ್ಲಿಸುವುದು ಅದು ಮುಂಬಯಿಯದೇ ಇರಬಹುದು. ಅಥವಾ ಕರ್ನಾಟಕದ ಯಾವದೇ ಭಾಗದ್ದೇ ಇರಬಹುದು. ಒಂದೇತಿಂಗಳು ಇಂಥ ಐದಾರು ನಿಧಿಸಂಗ್ರಹ ನಡೆದಾಗಲಂತೂ ತಮ್ಮ ಸಂಬಳದ ನಾಲ್ಕನೆಯ ಭಾಗದಷ್ಟು ಕೆಲವರು ನೀಡುವಪ್ರಸಂಗವೂಬರುವದುಂಟು

ಇಲ್ಲಿಯ ಕನ್ನಡಿಗರಿಗೆ " ತಾವು ಕರ್ನಾಟಕದಲ್ಲೇಕೆ ಬಂದು ವಾಸಿಸುವದಿಲ್ಲ? " ಎಂದು ಪ್ರಶ್ನಿಸಿದರೆ ಮೂರು ರೀತಿಯ ಉತ್ತರ ದೊರೆಯಬಹುದು. ದೊಡ್ಡ ಎಡ್ವೊಕೇಟ್, ಡಾಕ್ಟರ್, ಇಂಜನಿಯರ್, ಪತ್ರಿಕಾಕರ್ತರು ಹಾಗೂ ಕೀರ್ತಿವೆತ್ತ ಕಲಾವಿದರು ಹೇಳುವ ಉತ್ತರವೆಂದರೆ " ನಮಗೆ ಯೋಗ್ಯವಾದ ಕೆಲಸವೇ ಅಲ್ಲಿ ದೊರೆಯುವದಿಲ್ಲ! " ಎಂದು, ಸಾಮಾನ್ಯ ಕೆಲಸಮಾಡುವ ಮಧ್ಯಮ ವರ್ಗದಲ್ಲಿ ಕೆಲವರು, "ನಮಗೆ ಇಲ್ಲಿ ದೊರೆತ ಕೆಲಸದಂಥ ಕೆಲಸ ಸ್ಥಾನಮಾನ ಅಲ್ಲಿ ದೊರೆತರೆ ನಾವು ಕರ್ನಾಟಕದಲ್ಲಿರಲು ಸಿದ್ಧರೆಂದು ಎನ್ನುವರು. ಇನ್ನು ಕೆಲವರು ಹೇಳುವ ಉತ್ತರವೆಂದರೆ, "ಮುಂಬಯಿ ಜೀವನ ನಮಗೆ ಒಗ್ಗಿ ಹೋಗಿದೆ, ಬೇರೆ ಎಲ್ಲಿಯೂ ನಮಗೆ ಒಗ್ಗುವದಿಲ್ಲ "



# “ತಮಿಳುನಾಡಿನಲ್ಲಿ ನಾನು”

**ಶ್ರೀನಿವಾಸ ಕುಲಕರ್ಣಿ,** ಎಂ. ಎ.
ತಿರುಚಿನಾಪಳ್ಳಿ




ನಾನು ತಿರುಚಿನಾಪಳ್ಳಿಯ ತಮಿಳ ಬಂಧುಗಳ ಮಧ್ಯ ಬಂದು ಒಂದು ದಿನ ಇಳಿಯುತ್ತೇನೆಂದು ಕನಸು ಮನಸಿನಲ್ಲಿಯೂ ಎಣಿಸಿರಲಿಲ್ಲ. ಒಂದು ದೃಷ್ಟಿಯಿಂದ ಹೀಗೆ ಆಕಸ್ಮಿಕವಾಗಿ ಒದಗಿಬಂದ ಸಂದರ್ಭ ಒಳ್ಳೆಯದೇ ಆಯಿತು ಎಂದುಕೊಂಡೆ. ಏಕೆಂದರೆ ಅವರ ಮಧ್ಯ ಬೆರೆತು ಅಲ್ಲಿಯ ಜನ ಜೀವನವನ್ನು ಅರಿತುಕೊಂಡಂತಾಗುತ್ತದೆ.

ಕಳೆದ ಅಕ್ಟೋಬರ್ ಮೂರರಂದು ನನ್ನ ಸವಾರಿ ತಮಿಳು ನಾಡಿನ ಕಡೆಗೆ ಹೊರಟಿತು. ಇಂಗ್ಲೆಂಡಿಗೊ, ಅಮೇರಿಕೆಗೊ ಹೊರಟವನಂತೆ ಮನೆಯವರಿಂದಲೂ ಬಂಧು-ಬಳಗ ಹಾಗೂ ಗೆಳೆಯರಿಂದ ಬೀಳ್ಕೊಡುಗೆಯಾಯಿತು.

ರೈಲು ನನ್ನನ್ನು ಹುಬ್ಬಳ್ಳಿಯಿಂದ ಬೆಂಗಳೂರಿಗೂ ನಂತರ ತಿರುಚಿಯ ಡಬ್ಬಿಗೂ ತಂದು ಮುಟ್ಟಿಸಿತು.ಅಲ್ಲಿಂದಲೇ ಸುರುವಾಯಿತೆನ್ನಿ ನನ್ನ ಭವಣಿ. ಬೆಂಗಳೂರಿನಿಂದ ಸಾಯಂಕಾಲ ೬-೩೦ ಗಂಟೆಗೆ ಜಾಲಾರಪೇಟೆಕಡೆಗೆ ಹೊರಡುವರೈಲಿಗೆ ತಿರುಚಿಯ ಡಬ್ಬಿಯನ್ನು ಅಂಟಿಸುತ್ತಾರೆ. ಐದು ಗಂಟೆಯಿಂದಲೇ ಪ್ಲಾಟಫಾರ್ಮದಮೇಲೆ ಅದರ ದಾರಿ ಕಾಯುತ್ತ ನಿಂತುಕೊಂಡೆ. ರಿಜರ್ವಂತೂ ನನಗೆ ದೊರೆತಿರಲಿಲ್ಲ. ನೂಕುನುಗ್ಗಲಾಟಕ್ಕೆ ಸಿದ್ಧನಾಗಿಯೇ ನಿಂತಿದ್ದೆ. ಅಷ್ಟರಲ್ಲಿ ಒಬ್ಬ ಕೂಲಿ ನನ್ನ ಬಳಿ ಬಂದು 'ಎಲ್ಲಿಗೆ ಹೋಗುತ್ತೀರಿ ಸಾರ್' ಎಂದ. 'ತಿರುಚಿ'ಗೆ ಎಂದೆ. ಎರಡು ರೂಪಾಯಿ ಕೊಡಿ ಬರ್ಥ ಹಿಡಿದುಕೊಡುತ್ತೇನೆ—ಎಂಬ ಅವನ ಮಾತು ಕೇಳಿದಾಗಲೇ ನನಗೆ 'ರೀಬರ್ಥ' ಆಯಿತು ಅನ್ನಿ. 'ಬೇಡಯ್ಯ ನಿನ್ನ ಶರ್ತುಬೇಡ ಬರ್ಥು ಬೇಡ' ಎಂದು ಹೇಳಿ ಕಳುಹಿದೆ.

ರೈಲು ಬಂತು. ಜನ ವ್ಯಕ್ತಿಯಮೇಲೆ ದಾಳಿಯಿತ್ತಂತೆ ಮುಗಿಬಿದ್ದರು. ಅವರಲ್ಲಿ ನಾನೂ ಒಬ್ಬನಾಗಿದ್ದೆ. ಅಂತೂ ಹಾಗೂ ಹೀಗೂ ಮಾಡಿ ಕೂಡಲಿಕ್ಕೆ ಸ್ಥಳ ದೊರಕಿಸಿಕೊಂಡೆ. ಯಾರ ಪುಣ್ಯದ ಫಲವೋ ಏನೊ ರೈಲು ಸರಿಯಾದ ಸಮಯಕ್ಕೆ ಬೆಂಗಳೂರನ್ನು ಬಿಟ್ಟಿತು. ನಾನು ಕಿಡಿಕೆಗೆ ಒರಗಿಕೊಂಡು ಪ್ರಕೃತಿಯ ರಾತ್ರಿಯ ರೂಪದ ವೈಖರಿಯನ್ನು ನೋಡತೊಡಗಿದೆ. ಆಗ ನನ್ನ ತಂದೆ-ತಾಯಿ ಬಂಧು ಬಳಗ ಎಲ್ಲರೂ ಸುಳಿದು ಹೋದರು.

ಬೆಳಗು ಹರಿದಾಗ ಕಣ್ಣು ತೆರೆಯಿತು. ಇನ್ನು ರೈಲು ಹೊರಟೇ ಇತ್ತು. ತಿರುಚಿ ಇನ್ನೂ ಬಂದಿರಲಿಲ್ಲ. ಎಷ್ಟು ಸ್ಟೇಷನ್ ಹೊರಟು ಹೋದವೋ ಎಷ್ಟು ಗಾಡಿಯನ್ನು ನಮ್ಮ ಡಬ್ಬಿ ಬದಲಿಸಿತೊ ಗೊತ್ತೇ ಆಗಲಿಲ್ಲ. ರೇಲ್ವೆ ಗೈಡನ್ನು ತೆರೆದು ಟೈಂ ಹಾಗು ಸ್ಟೇಷನ್ನ ಹೋಲಿಸಲು ನೋಡಿ ವಿಫಲನಾದೆ. ಆರು ಗಂಟೆಗೆ ಬರಬೇಕಾದ ಸ್ಟೇಷನ್ನ ಇನ್ನೂ ಮೂರು ಸ್ಟೇಷನ್ ಮುಂದೆ ಇತ್ತು. ನನ್ನ ಎದುರುಗಡೆಯಲ್ಲಿ ಲುಂಗಿಯನ್ನು ಸುತ್ತಿಕೊಂಡು ಕುಳಿತ ಪ್ರಯಾಣಿಕನನ್ನು 'ಏನು ನೀವು ತಿರುಚಿಗೆ ಹೊರಟಿದ್ದಿರಾ ?' ಎಂದು ಕೇಳಿದೆ. ತಕ್ಷಣವೇ ಅವನು ನುಂಗುವಂತೆ ನನ್ನ ಕಡೆಗೆ ಹೊರಳಿ— "ತಿರುಚಿಗಾದರೂ ಹೋಗ್ತೇನೆ—ನರಕಕ್ಕಾದರೂ ಹೋಗ್ತೇನೆ ನಿಮಗೇಕೆ ಬೇಕು ?" ಎಂದ. ನಾನು ಮುಖ ಸ್ವಲ್ಪ ಹಿಂದಕ್ಕೆ ಎಳೆದುಕೊಂಡು 'ನಿನ್ನ ಆತ್ಮಕ್ಕೆ ಶಾಂತಿ ಸಿಗಲಿ" ಎಂದು ಮೌನವಾಚರಿಸಿದೆ.

ಅಂತೂ ರೈಲು ತಿರುಚಿಯನ್ನು ತಲುಪಿತು. ಸೂಟ್-ಕೇಸು, ಬೆಡ್ಡಿಂಗ್, ಕೆಳಗಿಳಿಸಿಕೊಂಡು ನಿಂತೆ. ಅಪರಿಚಿತ ನಿಲ್ದಾಣದಲ್ಲಿ ಆಗ ' ಎಂಗೆ




ಪೋರಿಂಗೆ ? '— ಎಂದು ಒಬ್ಬ ಕೂಲಿ ಬಂದು ಕೇಳಿದ. ಅವನ ಹಾವ-ಭಾವ ಅರಿತು ಹತ್ತಿರದ ಯಾವದಾದರೊಂದು ಹೋಟಲಿಗೆ ನಡೆ ಎಂದು ಹಿಂದಿಯಲ್ಲಿ ನುಡಿದೆ. ಅನತಿದೂರದ ಸೆಲ್ವಂಲಾಡ್ಜಿಗೆ ಕರೆದುಕೊಂಡು ಹೋದ.

ಕೋಣೆ ಚಿಕ್ಕದಾಗಿದ್ದರೂ ಚೊಕ್ಕಟವಾಗಿತ್ತು. ಹಾಗೇ ಮಂಚದ ಮೇಲೆ ಒರಗಿಕೊಂಡಿದ್ದೆ. ಮಾಣಿ ಬಂದು "ಸಾರ್ ಎನ್ನವೇಣುಂ ?" ಎಂದು ಕೇಳಿದ. ಅವನು ಏನು ಅಂದನೋ ತಿಳಿಯಲೇ ಇಲ್ಲ— 'ಬೆಂಗಳೂರನಿಂದ ಬಂದಿದ್ದೇನೆ' ಎಂದು ಉತ್ತರಿಸಿ ಬಿಟ್ಟೆ. ಆಗ ಆ ಹುಡುಗ ನಗುತ್ತ ಕೈ ಹಾಗು ಬಾಯಿಸನ್ನೆಯಿಂದ ಏನು ತಿನ್ನಲಿಕ್ಕೆ ಬೇಕು ? ಎಂದು ಕೇಳಿದ. ನಾನು ಇಡ್ಲಿ-ಚಟ್ನಿ ತರಲು ಹೇಳಿದೆ. ಸ್ವಲ್ಪ ಹೊತ್ತಿನಮೇಲೆ ಪ್ಲೇಟಿನಲ್ಲಿ ಇಡ್ಲಿ ಚಟ್ನಿ ತಂದುಕೊಟ್ಟನು. 'ಎಪ್ಪೊ ಕೋಳಿಕಿರಿಂಗ್ಗ' ಎಂದು ಕೇಳಿದ. ನನಗೇನೂ ಅರ್ಥವಾಗದೆ 'ಕ್ಯಾ' ಎಂದು ಕೇಳಿದೆ. 'ಕುಳಿಕುಳಿ...' ಎಂದ. ನನಗೇನೊ ಅದು ಕೋಳಿ ಕೋಳಿ ಎಂದಹಾಗೆಯೇ ಕೇಳಿಸಿತು—ನಹಿನಹಿ-ಓ ನಹಿ ಚಾಹಿಯೆ-ಮತ್ ಲಾವ್ ಎಂದು, ಗಡಬಡಿಸಿ ನುಡಿದೆ. ಆಗ ಅವನು ಮತ್ತೆ- 'ಸಾರ್ ಕುಳಿ-ಕುಳಿ...' ಎಂದು ತಲೆಯ ಮೇಲೆ ನೀರು ಸುರಿದುಕೊಳ್ಳುವಂತೆ ಸಂಜ್ಞೆ ಮಾಡಿ ತೋರಿಸಿದ—ಓ ಹೀಗೋ ಎಂದೆ.

ಗೊತ್ತು ಗುರಿಯಿಲ್ಲದೆ ಅಪರಿಚಿತ ಬೀದಿಗಳಲ್ಲಿ ಅಲೆದಾಡುವದೇ ನನ್ನ ಕೆಲಸವಾಯಿತು ಕೆಲದಿನ. ಸ್ಥಳ ಹೊಸದು, ಜನ ಹೊಸಬರು; ಭಾಷೆ ಹೊಸದು. ಎತ್ತ ಹೊರಳಿದರೂ ಬರಿ ತಮಿಳು ಎಲ್ಲಿ ನೋಡಿದಲ್ಲಿ ತಮಿಳಿನ ಅಂಕುಡೊಂಕು ಅಕ್ಷರಗಳೇ ಕಣ್ಣಿಗೆ ಬೀಳುತ್ತಿದ್ದವು. ತಮಿಳಿನ ಹೊರತು ಯಾವ ಭಾಷೆಯನ್ನೂ ಆಡರು ಈ ಜನ. ತಮ್ಮ ಭಾಷೆಯ ಮೇಲೆ ಅಪಾರ ಪ್ರೀತಿ ಇವರಿಗೆ. ಇಂಗ್ಲೀಷ್ (ಹಿಂದಿ) ಬರುತ್ತಿದ್ದರೂ ಸಾಧ್ಯವಾದಷ್ಟು ತಮ್ಮ ಭಾಷೆಯಲ್ಲಿಯೇ ಉತ್ತರಿಸುವದು ಇವರ ಸ್ವಭಾವ. ಒಂದು ದೃಷ್ಟಿಯಿಂದ ಇವರ ಸ್ವಾಭಿಮಾನ ಮೆಚ್ಚಿಕೊಂಡೆ ಅನ್ನಿ. ಆದರೆ ಪರನಾಡುಗಳವರು 'ಪರದೇಶಿ'ಗಳೇ ಆಗುತ್ತಾರೆ.

ಆಗಲೇ ಹೊಟ್ಟೆಯಲ್ಲಿ ದೊಂಬರಾಟ ನಡೆದಿತ್ತು. ಅಲ್ಲಿ ಇಲ್ಲಿ ಕೇಳಿ ಒಂದು ಹೋಟಲನ್ನು ಪತ್ತೆ ಹಚ್ಚಿಕೊಂಡು ಹೊರಟೆ. ಅದೇ ಆ ಓಣಿಯಲ್ಲಿ ಒಳ್ಳೆಯ ಹೋಟಲಂತೆ. ಹೊರಗೆ ನೋಡಲಿಕ್ಕೆ ಗುಡಿಸಿಲದಂತೆ ಕಂಡರೂ ಒಳಗಡೆ ವಿಶಾಲವಾಗಿತ್ತು. ಗೋಡೆ ಜಂತೆ ಸ್ವಲ್ಪ ಕಪ್ಪಿಟ್ಟಿದ್ದವು. ಖುರ್ಚಿಗಳೂ ಸಹ ಇರಲಿಲ್ಲ. ಆ ಕಡೆಗೆ ಈ ಕಡೆಗೆ ಸಾಲು ಸಾಲಾಗಿ ಬೆಂಚ್ ಹಾಗು ಟೇಬಲ್‌ಗಳನ್ನು ಹಾಕಿದ್ದರು. ಉಳಿದ ಗ್ರಾಹಕರು ಕುಳಿತುಕೊಳ್ಳುವಂತೆ ನಾನೂ ಹೋಗಿ ಯಾರೂ ಇಲ್ಲದಲ್ಲಿ ಕುಳಿತುಕೊಂಡೆ. ನಾಲ್ಕೈದು ನಿಮಿಷವಾದರೂ ಯಾವ ಮಾಣಿಯೂ ಅತ್ತ ಸುಳಿಯಲೇ ಇಲ್ಲ.

ಇನ್ನು ಜೋರಿನಿಂದ ಕೂಗಿಕೊಳ್ಳಬೇಕೆನ್ನುವಷ್ಟರಲ್ಲಿ ಗಜರಾಜನಿಗೆ ವಿಷ್ಣು ಪ್ರತ್ಯಕ್ಷನಾದಂತೆ ಬಂದು ನಿಂತು ಬರಿ ಲುಂಗಿಯ ಭೂಪತಿ—ಕ್ಯಾ ಹೈ ಗರಮ್— ಎಂದು ಕೇಳಿದೆ. ನಾನೇನು ಹೇಳಿದೆನೊ ಅವನಿಗೆ ಅರ್ಥವಾಗಲಿಲ್ಲ. ಬರಿ ಪಿಳಿಪಿಳಿ ನನ್ನನ್ನು ಮೃಗಾಲಯದ ಪ್ರಾಣಿಯನ್ನು ನೋಡುವಂತೆ ಕಣ್ಣಿಡತೊಡಗಿದ— 'ಅರೆ ಮುರ್ಖೊ ಕ್ಯಾ ದೇಖ ರಹೆ ಹೋ ಗರಂ ಕ್ಯಾ ಹೈ..'ಎಂದು ಕೇಳಿದೆ. ಮತ್ತೆ ಆಗ ಅವನು "ಎನ್ನ ವೇಣುಂ ?" ಎಂದ— ನಾನೇ ಸಾವರಿಸಿಕೊಂಡು ಏಕ ಸ್ಪೆಷಲ್ ದೋಸಾ

ಲಾವ್ ಅಂದೆ. ನನ್ನ ಬಾಯಿಂದ ದೋಸೆ-ಬರುವದೊಂದೇ ತಡ, ಒರುಮಾವ್ರು— ಎಂದು ಕಿರಚಿಕೊಂಡ ಗಂಟಲು ಹರಿಯುವಂತೆ. ನಾನು ಪೆಚ್ಚುಬಿದ್ದೆ— 'ಏ ಮಾವು ಕ್ಯಾ— ಮುರ್ರು ದೋಸಾ ಹೋನಾ ? ಎಂದೆ.

ಕೆಲ ನಿಮಿಷಗಳ ಮೇಲೆ ಒಂದು ಚಿಕ್ಕದಾದ ಬಾಳೆಎಲೆ, ಅದಕ್ಕೂ ನಾಲ್ಕು ಪಟ್ಟು ದೊಡ್ಡದಾದ ದೋಸೆ ನನ್ನ ಮುಂದೆ ಬಂತು. ಅದರ ಆಕಾರವನ್ನು ನೋಡಿಯೇ ನಾನು ಗಾಬರಿಯಾದೆ. (ಒಂದು ತಿಂದರೆ ಸಾಕು ಹೊಟ್ಟೆ ತುಂಬಿಹೋಗುವಂತಿತ್ತು). ದೋಸೆಯನ್ನೆಲ್ಲ ಹೊರಳಿಸಿ ನೋಡಿದೆ ಪಲ್ಲೆಯ ಪತ್ತೆಯೇ ಇಲ್ಲ, 'ಬಾಯ್' ಎಂದು ಕೂಗಬೇಕೆನ್ನುವಷ್ಟರಲ್ಲಿ ಎರಡೂ ಕೈಗಳಲ್ಲಿ ಎರಡು ಚಿಕ್ಕ ಬಕೆಟ್ಟುಗಳನ್ನು ಹಿಡಿದುಕೊಂಡು ಚಿತ್ರ್ಯಸುವ ಮಾಣಿಯ



ಸವಾರಿ— ಅದೇನೆಂದು ಕಣ್ಣರಳಿಸಿ ನೋಡಿದೆ. ಅದರಲ್ಲಿ ಚಟ್ನಿ ಸಾಂಬಾರು ತುಂಬಿತುಳುಕುತ್ತಿತ್ತು. ಪಲ್ಲೆ ಇಲ್ಲವೆ ಎಂದು ಕೇಳಿದೆ. ಅವನು ನನ್ನ ಮಾತನ್ನೂ ಲಕ್ಷಿಸದೇ ಸೌಟನ್ನು ಸಾಂಬಾರಿನ ಬಕೆಟ್ಟಿನಲ್ಲಿ ಅದ್ದಿ ಎರಡು ಮೂರು ಸಲ ದೋಸೆಯ ತುಂಬ ಹೊಯ್ದುಬಿಟ್ಟ. ಆಗ ಸಾಂಬಾರು ಚಟ್ನಿ ಎಲೆಯಿಂದ ಜಾರಿ— ನನ್ನ ಪ್ಯಾಂಟಿನ ಬಳಿ ಬಂದು ಸಂಗಮವಾದವು. ಇನ್ನು ಕೂಗಾಡಿದರೆ ಎಲ್ಲಿ ಅದನ್ನೆ ಎತ್ತಿ ತಲೆಯ ಮೇಲೆ ಸುರುವಿಬಿಡುತ್ತಾನೊ ಎಂಬ ಭಯದಿಂದ ಸುಮ್ಮನೆ ದೋಸೆಯನ್ನು ಗಿಟ್ಟಿಸಿ ಕಾಫಿಯನ್ನು ಕುಡಿದು ಬಿಲ್ ತೆಗೆದುಕೊಂಡು ಹೊರಟೆ. ಇನ್ನೂ ಕೌಂಟರ ಬಳಿ ಬಂದಿದ್ದೆನೋ ಇಲ್ಲವೊ– "ಸಾರ್, ಸಾರ್—' ಎನ್ನುತ್ತ ಕೈಯಲ್ಲಿ ಟೇಬಲ್ ಒರೆಸುವ ಕರವಸ್ತ್ರವನ್ನು ಹಿಡಿದುಕೊಂಡು ಓಡಿಬಂದ ಮಾಣಿ 'ಏನಾದರೂ ಮರೆತು ಬಂದಿರಬಹುದೆ'— ಎಂದು ಟೇಬಲ್ ಬಳಿ ಹೋದೆ. ಅಲ್ಲಿ ಏನೂ ಇರಲಿಲ್ಲ. 'ಏನಪ್ಪ ಏಕೆ ಕರೆದೆ?' ಎಂದು ಕೇಳಿದೆ. ಎಲೆ ಕಡೆಗೆ ಕೈಸೊನ್ನೆ ಮಾಡುತ್ತ ಏನೋ ಹೇಳಿದ- ನನಗೆ ಅರ್ಥವಾಗಲಿಲ್ಲ. ಅಷ್ಟರಲ್ಲಿಯೇ ಅಲ್ಲಿ ಬಂದು ಕುಳಿತ ಒಬ್ಬ ವ್ಯಕ್ತಿ ನನ್ನ ಪೇಚಾಟವನ್ನು ನೋಡಿ—ನೀವು ಇಲ್ಲಿಯವರಲ್ಲವೆ ಎಂದು ಕೇಳಿದ. "ಇಲ್ಲ ನಾನು ಮೈಸೂರ ಸ್ಟೇಟದಿಂದ ಬಂದಿದ್ದೇನೆ" ಎಂದೆ— "ಹೀಗೋ ಇಲ್ಲಿಯ ಪದ್ಧತಿಯಂತೆ ನಾವು ಟಿಫಿನ್ ತಿಂದ ಎಲೆಯನ್ನು ನಾವೇ ಎಸೆಯಬೇಕು!" ಎಂದ. ನನಗೆ ಆಶ್ಚರ್ಯವೂ ಸಿಟ್ಟೂ ಬಂತು. "ಅಲ್ಲಯ್ಯ ನಾವು ಹಣಕೊಟ್ಟು ನಾವೇ ತೆಗೆದೊಗೆಯಬೇಕೆ! ಇವರೆಲ್ಲ ಏನು ಸರಿಯಾಗಿ ತಿನ್ನುತ್ತೇವೊ ಇಲ್ಲೊ ಎಂಬುದರ ಮೇಲ್ವಿಚಾರಣೆಗಿದ್ದಾರೆಯೆ?" ಎಂದು ಪ್ರಶ್ನಿಸಿದೆ. ಅವನು ಸುಮ್ಮನಾಗಿಬಿಟ್ಟ.

ನಾನು ಕೈಯಲ್ಲಿ ಎಲೆಯನ್ನು ತೆಗೆದುಕೊಂಡು ಎಲ್ಲಿ ಹಾಕಬೇಕು ಎಂದು ಕೇಳಿದೆ. ಮಾಣಿ ನನ್ನ ಕರೆದುಕೊಂಡು ಹೊರಟ. ಹಿಂಬಾಲಿಸಿದೆ. ವಾಶ್ ಬೇಸಿನ್‌ದ ಗೋಡೆಗೆ ಪೋಸ್ಟಬಾಕ್ಸಿನ ಹಾಗೆ ಕಿಂಡಿಯನ್ನು ಮಾಡಲಾಗಿತ್ತು. ಅದರಲ್ಲಿ ಎಸೆಯಲು ಹೇಳಿದ. ನಾನು ಪತ್ರವನ್ನು ಹಾಕುವಂತೆ ಒಗೆದು ಕೈ ತೊಳೆದುಕೊಂಡು—ಗುಣುಗುಡುತ್ತ ಹೊರಬಿದ್ದೆ.

ಮಧ್ಯಾಹ್ನದ ಊಟದ ಅವಸ್ಥೆಯೂ ಹಾಗೆಯೇ ಆಯಿತು. ಮಾತಿಲ್ಲ ಕಥೆಯಿಲ್ಲ. ಕೈಸನ್ನೆ ಬಾಯಿಸನ್ನೆಯಿಂದಲೇ ಅವನು ಹಾಕಿದ್ದನ್ನೇ ಉಂಡು ಮುಗಿಸಿದೆ. ನಂತರ ಎಲೆಯನ್ನು ಸುತ್ತಿಕೊಂಡು ಎಸೆಯಲು ಹೋದೆ. ಎಲ್ಲರೂ ನನ್ನನ್ನೇ ನೋಡತೊಡಗಿದರು. ಯಾಕೆ ಹಾಗೆ ನೋಡುತ್ತಾರೊ ನನಗೆ ಅರ್ಥವಾಗಲಿಲ್ಲ. ಆಗ ಮಾಣಿ ಬಂದು ಏನೊ ಹೇಳಿದ. ಅದೂ ನನಗೆ ತಿಳಿಯಲಿಲ್ಲ. ಮಧ್ಯ ಒಬ್ಬ ಬಾಯಿ ಹಾಕಿ ಊಟ ಮಾಡಿದ ಎಲೆ ಒಗೆಯುವ ಅವಶ್ಯಕತೆ ಇಲ್ಲ ಸ್ವಾಮಿ ಎಂದ. ಹೀಗೋ ಧನ್ಯವಾದಗಳು ಎಂದು ಅಲ್ಲಿಂದ ಹೊರಟೇಬಿಟ್ಟೆ.



ಒಂದೆರಡು ದಿನ ಹೀಗೆ ಉರುಳಿದವು. ಆಫೀಸಿನಲ್ಲಿ ನನ್ನ ಸಹೋದ್ಯೋಗಿಗಳು ಹಾಗೂ ಮೇಲಧಿಕಾರಿಗಳ ಪರಿಚಯ ಸಾಕಷ್ಟು ಆಯಿತು. ಎಲ್ಲರೂ ತುಂಬ ಒಳ್ಳೆಯವರು. ನನ್ನ ಏಕಾಕಿ ಜೀವನದ ಬೇಸರವನ್ನು ಕಳೆಯಲು ಮಾತುಕತೆ, ನಗೆಯಲ್ಲಿ ತೊಡಗುತ್ತಿದ್ದರು. ನಾನು ತಪ್ಪುತಪ್ಪು ತಮಿಳಿನಲ್ಲಿ ಮಾತಾಡಿದೆನೆಂದರೆ ಅವರಿಗೆಲ್ಲ ಸಂತೋಷ–ಮೋಜು. ಕುಳಿತಲ್ಲಿ ನಿಂತಲ್ಲಿ ಎಲ್ಲರೂ ನನಗೆ ತಮಿಳು ಪಾಠ ಹೇಳಿಕೊಡತೊಡಗಿದರು. ಎಲ್ಲರೂ ನನಗೆ ಗುರುತಾದರು. ಅಂತೂ ಹಾಗೂಹೀಗೂ ಮಾಡಿ ಅಕ್ಷರ ಕಲಿತುಕೊಂಡೆ. ತಮಿಳಿನಲ್ಲಿ ವರ್ಗದ ಮೊದಲನೆಯ ಹಾಗು ಕೊನೆಯ ಅಕ್ಷರಗಳನ್ನು ಬಿಟ್ಟರೆ ಉಳಿದವಿಲ್ಲ. ಇವುಗಳನ್ನೇ ಸಂದರ್ಭಕ್ಕೆ ತಕ್ಕಂತೆ ಉಪಯೋಗಿಸಿಕೊಳ್ಳಬೇಕು. ಉದಾ: ಕಾಂತಿಯೆಂದು ಬರೆದು ಗಾಂಧಿ ಎಂದು ಉಚ್ಚಾರ ಮಾಡುತ್ತಾರೆ. ಇದರಿಂದ ನಾನು ಒಮ್ಮೆ ಪೇಚಿನಲ್ಲಿಯೂ ಸಿಲುಕಿದೆ. 'ಪಾಪಿ' ಯೆಂದು ಚಿತ್ರದ ಹೆಸರನ್ನು ಓದಿ ಸಿನೇಮಾಕ್ಕೆ ಹೋದೆ ಹೊಸದಿರಬಹುದೆಂದು ಥಿಯೇಟರಿನಲ್ಲಿ ಹೋಗಿ ಕುಳಿತಾಗ ಅದು ಹಳೆಯ ಚಿತ್ರ ಭಾಭಿ ಎಂದು ತಿಳಿಯಿತು. ಆದರೆ ಆಫೀಸಿನಲ್ಲಿ ಇಂದಿಗೂ ನನ್ನ ಹೆಸರನ್ನು "ಕುಲಕರ್ಣಿ"ಯ ಬದಲಾಗಿ ಗುಲಗರ್ಣಿ ಎಂದೇ ಬರೆಯುತ್ತಾರೆ. ಇಲ್ಲಿ ಏಕೆ ವರ್ಗದ ಮೊದಲನೆಯ ಅಕ್ಷರ ಉಪಯೋಗಿಸುತ್ತಿಲ್ಲವೊ ?

ಒಂದು ದಿನ ಬೇಸರ ಕಳೆಯಲು ಸನಿಹದ ಥಿಯೆಟರ್ ಹೊಕ್ಕೆ. ಚಿತ್ರ ಯಾವದಿದೆ ಎನ್ನುವದೂ ನನಗೆ ಗೊತ್ತಿರಲಿಲ್ಲ. ಬಹಳ ಹೊತ್ತು ಥಿಯೆಟರ್‌ಡಲ್ಲಿ ಕೂಡಬಹುದೆಂಬುದಕ್ಕಾಗಿಯೇ ತಮಿಳು ಚಿತ್ರ ನೋಡಲಿಕ್ಕೆ ಹೋಗಿದ್ದೆ. ಇನ್ನೂ ಸಿನೇಮಾ ಸುರುವಾಗಲಿಕ್ಕೆ ಸಮಯವಿದ್ದುದರಿಂದ ಹೊರಗೆ ನಿಂತುಕೊಂಡಿದ್ದೆ. ಯಾವದೋ ಒಂದು ಅಪರಿಚಿತ ವ್ಯಕ್ತಿ ಪಿಳಿ ಪಿಳಿ ನೋಡುತ್ತ ಎರಡು ಮೂರು ಸಲ ನನ್ನ ಸುತ್ತು ಹಾಕಿತು. ಏನು



ಬೇತು ನಡಿ! ದ್ದಾನಿವನು ಎಂದುಕೊಳ್ಳುವಷ್ಟರಲ್ಲಿ ಆ ವ್ಯಕ್ತಿ ನನ್ನ ಬಳಿ ಬಂದು "ಸಾರ್- ನಿಮ್ಮ ಹೆಸರು ಆರೋಗ್ಯಸ್ವಾಮಿಯೆ ?" ಎಂದು ಕೇಳಿತು. ಅದನ್ನು ಕೇಳಿ ನನಗೆ ನಗೆ ಉಕ್ಕಿ ಬಂತು. 'ಇಲ್ಲ ಸಾರ್ ನಾನು ಅನಾರೋಗ್ಯ ಸ್ವಾಮಿ' ಎಂದೆ. ನನ್ನ ಚೇಷ್ಟೆ ಅವನಿಗೆ ಅರ್ಥವಾಗಲಿಲ್ಲ. 'ಅಂದರೇನು?' - ಎಂದು ಕೇಳಿದ. ನಾನು ನಗುತ್ತ ಎಲ್ಲವನ್ನು ವಿವರಿಸಿದೆ. ಅವನು ನನ್ನ ನಗೆಯಲ್ಲಿ ಸಹಭಾಗಿಯಾಗಿ- 'ಏನೆ ಅನ್ನಿ ನೀವು ತಮಿಳರ ಹಾಗೆಯೇ ಕಾಣಿಸುತ್ತೀರಿ.' ಎಂದು ಸರ್ಟಿಫಿಕೇಟ ಕೊಟ್ಟು ಬಿಟ್ಟ. ಒಳ್ಳೆಯದೇ ಆಯಿತು. ಬಂದ ಕೆಲವೇ ದಿನಗಳಲ್ಲಿ ನಿಮ್ಮ ಬಂಧುವಾಗಿ ಬಿಟ್ಟೆ ಎಂದೆ. ಆದರೆ ನನಗೆ ಇಂದಿಗೂ ಅರ್ಥವಾಗುತ್ತಿಲ್ಲ- ಹೇಗೆ ಅವನು ನನ್ನನ್ನು ತಮಿಳನೆಂದು ಭಾವಿಸಿದ. ನನ್ನ ಉಡಿಗೆಗೊ? ಬಾಚಿಕೊಂಡ ರೀತಿಗೋ- ಬಹುಶಃ ಬಣ್ಣ ಹಾಗು ಮುಖದ ಹೋಲಿಕೆಯಿಂದಿರಬೇಕೇನೊ ?

ಮದ್ವೆ ಮಾಡಿ ನೋಡು ಮನೆ ಕಟ್ಟಿ ನೋಡು- ಎನ್ನುವದಕ್ಕಿಂತ ಮನೆ ಹುಡುಕಿ ನೋಡು- ಎಂಬ ಗಾದೆ ಇಂದಿನ ಯುಗಕ್ಕೆ ಹೆಚ್ಚು ಅನ್ವಯಿಸುತ್ತದೆ. ಈ ಅನ್ವೇಷಣೆಯಲ್ಲಿ ನನಗೊಂದು ಸ್ಮಾರಸ್ಯವಾದ ಅನುಭವವೂ ಆಯಿತು. ಒಂದು ದಿನ ರೇಡಿಯೋ ಸ್ಟೇಷನ್ನ ಸಮೀಪದಲ್ಲಿ ಕೋಣೆ ಹುಡುಕಬೇಕೆಂದು ಹೊರಟೆ. ಆದರೆ ಎಲ್ಲಿಯೂ ಸಿಕ್ಕಲಿಲ್ಲ. ನಿರಾಶನಾಗಿ ಮರಳುತ್ತಿರುವಾಗ ಒಂದು ಬಂಗಲೆ ಬಳಿ To Let ಎಂದು ಬರೆದುದು ಕಾಣಿಸಿತು. 'ಸಾರ್ ಸಾರ್' ಎನ್ನುತ್ತ ಒಳಗೆ ನಡೆದೇಬಿಟ್ಟೆ. ಒಂದು ಕುಳ್ಳ ವ್ಯಕ್ತಿ 'ವಾಂಗ–ವಾಂಗ್'–

ಎಂದು ಸ್ವಾಗತಿಸುತ್ತ ಬಂದು. ಚೇರನ್ನು ತೋರಿಸಿ 'ಉರ್ಕ್ಕಾರಂಗ--' ಎಂದ. ನಾನು ಕುಳಿತುಕೊಳ್ಳುತ್ತ "ನಿಮ್ಮಲ್ಲಿ ಕೋಣೆಗಳು ಖಾಲಿ ಇವೆಯಂತೆ ಬಾಡಿಗೆ ಕೊಡುತ್ತೀರಾ ?" ಎಂದೆ. ಹೌದು ಎರಡು ಕೋಣೆ ಗಳಿವೆ ೪೦ ರೂ. ಬಾಡಿಗೆ ಎಂದ. ಎಷ್ಟೇ ವಾದಿಸಿ ದರೂ ಅವನು ತನ್ನ ಪಟ್ಟು ಬಿಡಲಿಲ್ಲ. ನಾನು ನಿರ್ವಾಹವಿಲ್ಲದೆ ಒಪ್ಪಿಕೊಂಡೇ ಬಿಟ್ಟೆ— "ನೀವು ಎಷ್ಟು ಜನ?"— "ನಾನೊಬ್ಬನೆ?" — ಎಂಬುದು ಇನ್ನೂ ನನ್ನ ಬಾಯಿಂದ ಹೊರಟಿತ್ತೊ ಇಲ್ಲೊ— ಏನು ನೀವು ಬ್ಯಾಚಲರ್ (ಬ್ರಹ್ಮಚಾರಿಗಳೇ) ಹಾಗಾದರೆ ನಮ್ಮಲ್ಲಿ ಕೋಣೆಗಳಿಲ್ಲ ಎನ್ನುತ್ತ ಗಡಬಡಿಸಿಕೊಂಡು ಎದ್ದೇಬಿಟ್ಟ. "ಯಾಕೆ ಸ್ವಾಮಿ ಏನಾಯಿತು" ಎಂದೆ. "ನೋಡಿ ಸಾರ್ ಇಲ್ಲಿ ಮನೆತನಸ್ಥ ಹೆಣ್ಣುಮಕ್ಕಳು ಇರೋದು— ಬ್ರಹ್ಮಚಾರಿಗಳಿಗೆ ಕೋಣೆ ಕೊಡೋದಿಲ್ಲ. ಎಲ್ಲಿಯಾದರೂ ಹೊಟೆಲ್ ಹಾಸ್ಟೆಲ್‌ಗಳಲ್ಲಿರಿ" ಎಂದ. ನನಗೆ ಕೋಪ ಬಂತು-- "ಏನು ಸ್ವಾಮಿ ನಾವೇನು ಮನೆತನಸ್ಥದವರಲ್ಲ ವೆಂದು ತಿಳಿದಿದ್ದೀರಾ ? ನಮಗೂ ಅಕ್ಕ ತಂಗಿಯ ರಿಲ್ಲವೊ ಹೀಗೇಕೆ ಭಾವಿಸುತ್ತೀರಿ" ಎಂದು ಒಂದು ಭಾಷಣವನ್ನೇ ಬಿಗಿದೆ.

ಅಷ್ಟರಲ್ಲಿ ನಾನು ಕುಳಿತ ಕೋಣೆಯ ನೆಲ ಥಗ್‌ಥಗ್ ಎಂದು ನಡುಗಿದ ಹಾಗಾಯಿತು. ನಂತರ ಬಗ್ಗನೆ ಗಮ ಗಮ ಮಲ್ಲಿಗೆ ವಾಸನೆ ಬಂತು ಮೂಗಿಗೆ. ಹೊರಳಿ ನೋಡಿದೆ ಬಗ್ಗನೆ ಪ್ರತ್ಯಕ್ಷಳಾದಳು ದುರ್ಗಾದೇವಿ. ದೊಡ್ಡ ದೊಡ್ಡ ಕಣ್ಣುಗಳು, ಜಡೆತುಂಬ ಮಲ್ಲಿಗೆಹೂವಿನ ಬಳ್ಳಿಯೇ ಹಬ್ಬಿಕೊಂಡತ್ತಿತ್ತು ಬಣ್ಣವೂ ನೀಲಮಂಕು ಚಿಕ್ಕ ಮಕ್ಕಳು ಹಗಲು ಹೊತ್ತಿನಲ್ಲಿ ಕಂಡರೇ ಚೀರಿ ಕೊಳ್ಳುವಂಥ ರೂಪ. ಭಾರ ತೂಗುವ ಯಂತ್ರದ ಮೇಲೆ ನಿಲ್ಲಿಸಿದರೆ ಸಾಕು ಅದರೊಳಗಿನ ಮುಳ್ಳು ಸರ್‍ರನೆ ಒಂದು ರೌಂಡು ಹೊಡೆದು ಮುರಿದು ಬೀಳದೆ ಇರಲಾರದು. ಅವಳು ಆ ವ್ಯಕ್ತಿಯ ಬಳಿ ಬಂದು 'ಅಪ್ಪಾ ಪೊಯಿಪ್ಪುವರೆ' ಎಂಬ ನುಡಿಗಳನ್ನು ಕೇಳಿದ ತತ್‌ಕ್ಷಣವೇ ಜಿಗಿದೆದ್ದು ನಿಂತೆ. ಹಾಗಾದರೆ ಇವಳು ಸುಪುತ್ರಿಯೆ? ಶಿವಶಿವಾ ಪಾರುಮಾಡಿದೆ—



ಪುಕ್ಕಟೆ ಮನೆ ಕೊಡುತ್ತೇನೆಂದರೂ ಇಲ್ಲಿಬೇಡಪ್ಪಾ ಇರುವದು ಎಂದುಕೊಂಡು ಅವನು ಇನ್ನೂ ಸಾರ್ ಸಾರ್ ಎನ್ನುತ್ತಿರುವಾಗಲೇ ರಸ್ತೆಗೆ ಬಂದಿದ್ದೆ...

ತಿಂಗಳು ಉರುಳಿರಬೇಕು. ಇನ್ನೂ ತಮಿಳು ತಲೆಗೆ ಹೊಕ್ಕಿರಲಿಲ್ಲ. ಆದರೆ ತಲೆಗೂದಲು ಮಾತ್ರ ಬೆಳೆದು ನಿಂತಿತ್ತು. ಹೇರ್‌ಕಟ್ ಆದರೂ ಮಾಡಿಸಿಕೊಳ್ಳುವಾ ಎಂದು ಸಲೂನ ಹೊಕ್ಕೆ, ವಾಂಗ ವಾಂಗ ಎಂದು ನನ್ನ ಸ್ವಾಗತಿಸಿ ಖಾಲಿ ಇದ್ದ ಖುರ್ಚಿಯ ಮೇಲೆ ಕೂಡಿಸುತ್ತ ಒಂದು ವ್ಯಕ್ತಿ ಕನ್ನಡಿಯಲ್ಲಿ ನನ್ನ ಪ್ರೀತಿಯ ಕೂದಲುಗ ಳನ್ನು ನೋಡತೊಡಗಿದ್ದ, ಅಷ್ಟರಲ್ಲಿ ಇನ್ನೊಬ್ಬ ಬಂದು ಕೊರಳಿನಿಂದ ಕಾಲಿನವರೆಗೂ ಟಾವೆಲ್ ಹೊದಿಸಿದ, ಅವನೇ ಕ್ಷೌರಿಕನೆಂದು ಭಾವಿಸಿ— ಬಹಳ ಸಣ್ಣ ಮಾಡಬೇಡ ಎಂದು ಹಿಂದಿಯಲ್ಲಿಯೇ ಹೇಳಿದೆ. ಅವನು ಏನು ತಿಳಿದುಕೊಂಡನೊ 'ಹೂಂ' ಅಂತೂ ಅಂದು ಬಿಟ್ಟ. ಕ್ಷಣಾರ್ಧದಲ್ಲಿ ಎಡಗಿವಿಯ ಮೇಲ್ಗಡೆ ಟ್ರ್ಯಾಕ್ಟರನಂತೆ ಮಷಿನ್ನು ಓಡಿ ಚಕ ಚಕ ಕೂದಲುವನ್ನು ಕತ್ತರಿಸಿ ಹಾಕಿಯೇಬಿಟ್ಟಿತು. ಅಯ್ಯೋ— ಇದೇನು ಮಾಡಿಬಿಟ್ಟೆ 'ರೇಜರ್' ಉಪಯೋಗಿಸುತ್ತಿ ಎಂದು ಭಾವಿಸಿದ್ದೆನಲ್ಲ. ಎಂದು



ಕಿರುಚಿಕೊಂಡು ಎದ್ದು ನಿಂತೆ." ಇಲ್ಲಸಾರ್ ಸರಿ ಮಾಡವೆ ಅಂಕಲೋ ಏನೊ ತಮಿಳಿನಲ್ಲಿ ಒಟ ಗುಡುತ್ತ ನನ್ನನ್ನು ಹಿಡಿದು ಕೂಡಿಸಿದ. ನನಗಾದ ಸಂಕಟ ಅಷ್ಟಿಷ್ಟಲ್ಲ ನನ್ನ ತಲೆಯನ್ನು ಕಟುಗನ ಕೈಯಲ್ಲಿ ಗಿಣಿಯನ್ನು ಕೊಟ್ಟ ಹಾಗಾಯಿತು. ನನ್ನ ತಲೆ ತೆಗೆದುಕೊಂಡು ಹಾಳಾಗಿ ಹೋಗು ಎಂದು ಸುಮ್ಮನೆ ಕಣ್ಣುಮುಚ್ಚಿ ಕುಳಿತುಬಿಟ್ಟೆ.

ಕಿವಿ ಚುರುಚುರು ಎಂದಾಗ ಕಣ್ಣು ತೆರೆದೆ. ಕಿವಿಯ ಹಿಂಭಾಗದಲ್ಲಿ ರಕ್ತ ಚಿಮ್ಮಿದ್ದನ್ನು ನೋಡಿ 'ಅಯ್ಯೋ ರಕ್ತ' —ಎಂದು ಪುಟಿದೆದ್ದೆ. "ಉರ್ಕ್ಕಾರಂಗ- ಉರ್ಕ್ಕಾರಂಗ" ಎಂದು ಹಿಡಿದು ಕೂಡಿಸಿ ಸ್ನೋ ಪೌಡರ ಮೆತ್ತಿದ. ರಕ್ತ ನಿಂತಿತು. ಕನ್ನಡಿಯಲ್ಲಿ ಮುಖ ನೋಡಿದೆ. ನನ್ನ ರೂಪವೇ ಬದಲಿಯಾಗಿಹೋಗಿತ್ತು. ಕುರು ಚಲ ಹುಲ್ಲಿನಂತೆಯೋ ಪಿನ್ನಿನಂತೆಯೋ ಸೆಟೆದು ನಿಂತಿದ್ದವು ಕೂದಲು. ಕೋಪ ಉಕ್ಕಿಬಂತು ಆದರೆ ಯಾರ ಮೇಲೆ ಸಿಟ್ಟು ಮಾಡಬೇಕು. ಬಂದ ಮುಹೂರ್ತವೇ ಚನ್ನಾ ಗಿರಲಿಕ್ಕಿಲ್ಲವೆಂದು ಕೋಣೆಗೆ ತೆರಳಿದೆ......

ದಿನಗಳುರುಳಿದಂತೆ ನಾನು ತಿರುಚಿಯ ಇಡ್ಲಿ ಸಾಂಬಾರಿಗೂ ಹದ್ದಿನಂತೆ ನೆತ್ತಿಯನ್ನು ಕುಕ್ಕುವ ಬಿಸಿಲಿಗೂ ಹೊಂದಿಕೊಂಡು ಬಿಟ್ಟೆ. ತಮಿಳರ ಸಾಮಾಜಿಕ ಹಾಗು ಧಾರ್ಮಿಕ ಜೀವನ ನನ್ನ ಮೇಲೆ ಪರಿಣಾಮ ಮಾಡಿತು. ಭಾಷೆಯ ಮೇಲಿದ್ದ ಸ್ವಾಭಿಮಾನ ಮೆಚ್ಚಿಕೊಳ್ಳುವಂತಹದು. ದಕ್ಷಿಣ ಹಿಂದುಸ್ತಾನವೇ ದೇವಾಲಯಗಳ ಆಲಯವೆನ್ನ ಬಹುದು. ಇಲ್ಲಿಯ ಶ್ರೀರಂಗ ದೇವಾಲಯ, ಜಂಬುಕೇಶ್ವರ ದೇವಾಲಯಗಳು ನನ್ನ ಮನ ವನ್ನು ಸೂರೆಗೊಂಡವು. ಅದ್ಭುತವಾದ ಕೆತ್ತನೆಯ ಕೆಲಸ--ಭವ್ಯವಾದ ಕಟ್ಟಡಗಳು, ನನ್ನನ್ನು ಬೆರಗು ಗೊಳಿಸಿದವು. ಆದರೆ ಜನ ಈ ಗುಡಿಗಳಲ್ಲಿಯೇ ಸಂಸಾರ ಹೂಡಿ, ಅಂಗಡಿಗಳನ್ನಿಟ್ಟು ಮಲಿನಗೊಳಿ ಸಿದ್ದನ್ನು ನೋಡಿ ಅಸಮಾಧಾನವಾಯಿತು.

ದೇವರ ಹೆಸರಿನಲ್ಲಿ ನಡೆಯುವ ಹಣದ ಸುಲಿ ಗೆಯೂ ನನ್ನ ಹೃದಯವನ್ನು ಹಿಂಡಿತು. ಹಣ ಕೊಟ್ಟವರಿಗೇ ದೇವರ ದರುಶನವಾಗಬೇಕೆಂಬುದ ಕ್ಕಾಗಿ ನಿರ್ಮಿಸಿದ ಗೋಡೆಯನ್ನು ನೋಡಿ ಕೇಡು ಕೆನಿಸಿತು. ಮತ್ತೊಂದು ಸ್ವಾರಸ್ಯದ ಸಂಗತಿ ಎಂದರೆ ಮನುಷ್ಯ ತಾನಷ್ಟೇ ಹಣ ಸುಲಿಯುವದ ಲ್ಲದೆ ಪ್ರಾಣಿಗಳಿಗೂ ಸುಲಿವುದನ್ನು ಕಲಿಸಿದ್ದಾನೆ. ಜಂಬುಕೇಶ್ವರ ದೇವಾಲಯದ ಬಳಿ ಒಂದು ಮುದಿ ಆನೆ ನಿಂತಿರುತ್ತದೆ. ಅದರ ಮುಂದೆ ಐದು ನಯೆ ಪೈಸೆ ಇಟ್ಟರೆ ದೂರದಿಂದ ಆಶೀರ್ವಾದ ಮಾಡುತ್ತದೆ. ಹತ್ತು ನಯೆ ಪೈಸೆ ಕೊಟ್ಟರೆ ಬಳಿ ಬಂದು ತಲೆಯ ಮೇಲೆ ಸೊಂಡೆಯಿರಿಸಿ ಹರಕೆ ಕೊಡುತ್ತದೆ. ಅದಕ್ಕೂ ಐದು ಹತ್ತು ಪೈಸೆಗಳ ವ್ಯತ್ಯಾಸ ಗೊತ್ತಾಗಿ ಹೋಗಿದೆಯಲ್ಲಾ ಎಂಬು ದಕ್ಕೆ ಆಶ್ಚರ್ಯವಾಯಿತು.

ಅಷ್ಟರಲ್ಲಿ ಅರ್ಚಕ ನನ್ನ ಬಳಿ ಬಂದು—ಬನ್ನಿ ಸಾರ್ ಆಶೀರ್ವಾದ ಮಾಡಿಸುತ್ತೇನೆ ಗಜರಾಜ ನಿಂದ ಎಂದ. ಬೇಡಪ್ಪ ಹಣ ತೆಗೆದುಕೊಂಡು ಪ್ರಾಣಿ ಏಕೆ ಆಶೀರ್ವಾದ ಮಾಡಬೇಕು. ಎಂದು ಹೊರಟೇಬಿಟ್ಟೆ. ಇಂಥ ನಾಸ್ತಿಕರು ಇನ್ನಷ್ಟು ಬೆಳೆದು ಹೋದರೆ ಕುಳಿತಲ್ಲಿಯೇ ಉಣ್ಣುವ ನಮ್ಮಂಥವರ ಹೊಟ್ಟೆಯ ಪಾಡೇನು ? ಎಂದು ಕೊಂಡಿರಬೇಕು — ಆ ಅರ್ಚಕ.



ರಾಮನಿಗೆ ಸೀತೆ ತನ್ನ ರೂಪಗುಣಗಳಿಂದಾಗಿ ಪ್ರಿಯಳಾದಳು.
ಸೀತೆಗೆ ರಾಮನು ಅವಳ ಪ್ರಾಣಕ್ಕಿಂತ ಮಿಗಿಲಾಗಿ ಪ್ರಿಯನಾದನು.
ಸೀತಾರಾಮರಲ್ಲಿ ಹೀಗೆ ಅನ್ಯೋನ್ಯ ವಿಶ್ವಾಸ ಅನುರಾಗಗಳಿದ್ದವು.
ಕವಿ ವಾಲ್ಮೀಕಿಯ ಸೀತಾರಾಮ ಪ್ರಣಯದ ನಿರೂಪಣೆ ಲೋಕೋತ್ತರವಾಗಿದೆ.

# ಸೀತಾರಾಮ ಪ್ರಣಯ

ಋಷಿಕವಿ ವಾಲ್ಮೀಕಿಯ ಮಹೋನ್ನತ ಕಾವ್ಯವಾದ ರಾಮಾಯಣವು ಮಾನವಜೀವನದ ಆದರ್ಶಗಳನ್ನು ಬಹುಸುಂದರವಾದ ಕಾವ್ಯರೂಪದಲ್ಲಿ ಪ್ರತಿಪಾದಿಸಿದೆ. ಅಪಾರಜಗದ್ದರ್ಪಣವಾದ ಆ ಕೃತಿಯು ಮಾನವಜೀವನದ ಹಾಗು ದೈವೀಪ್ರಕೃತಿಯ ವಿವಿಧ ಹಾವಭಾವ ವಿಲಾಸ ವಿಭ್ರಮಗಳನ್ನು ಖಚಿತವಾಗಿ ಚಿತ್ರಿಸಿರುವಲ್ಲಿಯೇ ಚಿರಂತನವಾದ ಸತ್ಯಸ್ವರೂಪವನ್ನು ನಿತಾಂತರಮಣೀಯವಾದ ಶೈಲಿಯಿಂದ ಸುವ್ಯಕ್ತಗೊಳಿಸಿದೆ. ಇಲ್ಲಿಯ ತಪೋನಿರತನಾದ ಋಷಿಯ ದರ್ಶನವೂ ಪಾಂಡಿತ್ಯವೂ ಜೀವನದ ವಿವಿಧವಾದ, ವಿಸ್ತಾರವಾದ, ಖಚಿತವಾದ ಅನುಭವದ ಬಣ್ಣನೆಯಿಂದ ತೇಜಃಸಂಪನ್ನವಾಗಿದೆ. ಶ್ರೀ ಎಸ್. ವಿ. ರಂಗಣ್ಣನವರು ತಮ್ಮ "ಹೊನ್ನಶೂಲ" ಗ್ರಂಥದಲ್ಲಿ ಪ್ರತಿಪಾದಿಸಿರುವಂತೆ ರಸಋಷಿವಾಲ್ಮೀಕಿಯೆ ಭಾರತದ"ಕವಿಕುಲಗುರು." ಇಲ್ಲಿ ಆ ಮಹಾಕವಿಯು ನಿರೂಪಿಸಿದ ಸೀತಾರಾಮರ ಪ್ರಣಯದ ಸುಂದರವರ್ಣನೆಯನ್ನು ಅವಲೋಕಿಸಲಾಗಿದೆ.

ವಾಲ್ಮೀಕಿಯು ಕಾವ್ಯರಚನೆಯನ್ನು ಮಾಡುವದಕ್ಕೆ ನಿಮಿತ್ತವಾದ ಸಂದರ್ಭವು ರಾಮಾಯಣದಲ್ಲಿಯೇ ನಿರೂಪಿತವಾಗಿ ಪ್ರಸಿದ್ಧಿಯನ್ನು ಪಡೆದಿದೆ. ವಾಲ್ಮೀಕಿಯಷಿಯು ತಮಸಾ ನದಿಯ ತೀರದಲ್ಲಿ ನಡೆದುಹೋಗುತ್ತಿರುವಾಗ ವ್ಯಾಧನೊಬ್ಬನು ಕ್ರೌಂಚಪಕ್ಷಿದಂಪತಿಗಳಲ್ಲಿ ಗಂಡುಹಕ್ಕಿಯನ್ನು ಬಾಣದಿಂದ ಹೊಡೆದುಕೊಂದನು. ಕವಿಗೆ ಅದನ್ನು ನೋಡಿ ಉಂಟಾದ ಮನಸ್ಸಿನ ಶೋಕವು ಶ್ಲೋಕರೂಪದಲ್ಲಿ ಅಪ್ರಯತ್ನವಾಗಿ ಸಹಜವಾಗಿ ಹೊರಹೊಮ್ಮಿತು.

ಮಾ ನಿಷಾದ ಪ್ರತಿಷ್ಠಾಂ ತ್ವಮಗಮಃ
ಶಾಶ್ವತೀಃ ಸಮಾಃ ।
ಯತ್ ಕ್ರೌಂಚಮಿಥುನಾದೇಕಂ ಅವಧೀಃ
ಕಾಮಮೋಹಿತಂ ॥

"ವ್ಯಾಧನೇ, ಪ್ರಣಯಮೋಹದಲ್ಲಿದ್ದ ಕ್ರೌಂಚಪಕ್ಷಿಗಳ ಜೋಡಿಯಲ್ಲಿ ಒಂದಾದ ಗಂಡು ಹಕ್ಕಿಯನ್ನು ನೀನು ಕೊಂದುದರಿಂದ ಶಾಶ್ವತವಾಗಿ ನಿನಗೆ ಉತ್ತಮಗತಿಯು ಬಾರದಿರಲಿ."

ಇಲ್ಲಿ ಕೆಲವು ವಿದ್ವಾಂಸರು ಅಭಿಪ್ರಾಯಪಡುವಂತೆ ಆ ಹಕ್ಕಿಯ ನೋವು ಪ್ರಪಂಚದ ಎಲ್ಲ ಯಾತನೆಯ ಪ್ರತಿನಿಧಿಯಾಗಿ ಕಂಡಿರಬಹುದು. ಆದರೆ ಇದಿಷ್ಟೇ ಅಲ್ಲ ಇದರಲ್ಲಿ ಸೂಚಿತವಾದುದು. ಪಕ್ಷಿಗಳ ಗಂಡುಹೆಣ್ಣಿನ ಪ್ರಣಯದಲ್ಲಿ ಇತರ ಪ್ರಾಣಿಪ್ರಪಂಚದಲ್ಲಿ ಕಾಣದ ದೀರ್ಘಕಾಲದ ಪ್ರಣಯವಿದೆ. ಆ ಪ್ರಣಯದಲ್ಲಿ ಶುದ್ಧಪ್ರೇಮವನ್ನು ಋಷಿಕವಿಯು ಗುರುತಿಸುವ, ಗೌರವಿಸುವ ಹಿರಿಮೆಯನ್ನು ಕಾಣಬಹುದಾಗಿದೆ. ಪಕ್ಷಿಗಳಲ್ಲಿನ ಆ ದೀರ್ಘವಾದ ಏಕನಿಷ್ಠಪ್ರಣಯಭಾವನೆಯೇ ಜೀವದಿಂದ ಉಳಿದ ಹೆಣ್ಣುಹಕ್ಕಿಯು ತನ್ನ ಜತೆಯ ಹಕ್ಕಿಯ ಕೊಲೆಯನ್ನು ತೀವ್ರದಾರುಣವಾದ ಯಾತನೆಯ ಶೋಕಮಯಭಾವನೆಯಿಂದ ಅನುಭವಿಸುವದಕ್ಕೆ ಕಾರಣವೆಂಬುದನ್ನು ಮಹಾಕವಿಯ ಸಹಾನುಭೂತಿಶೀಲವಾದ ಹೃದಯವು ತಿಳಿದುಕೊಂಡು ತೀವ್ರವಾದ ಶೋಕವನ್ನು ಪಡೆಯಿತು. ಕವಿಯ ಹೃದಯದ ತಂತಿಯು ಶೋಕಗೀತವನ್ನು ನುಡಿಯಿತು. ಶೋಕವು ಕೋಪಪೂರಿತವೂ ಆಗಿ ಪರಿಣಮಿಸಿ ನಿಷಾದನಿಗೆ ಶಾಪವಾಗಿಯೂ ಪರಿಣಮಿಸುವಂಥ ಶ್ಲೋಕವಾಯಿತು. ಒಂದಾನೊಂದುಕಾಲದಲ್ಲಿ ತಾನೂ ವ್ಯಾಧನಾಗಿದ್ದು ಸಂಸಾರವಂದಿಗನಾಗಿ ತನ್ನ ಮಡದಿಯನ್ನು ಪ್ರೀತಿಸಿದ್ದ ಋಷಿಕವಿಯು ಪ್ರಣಯಭಾವನೆಯನ್ನು ಚೆನ್ನಾಗಿ ಅನುಭವಿಸಿ ತಿಳಿದಿದ್ದನು. ಭೋಗ-ತ್ಯಾಗಗಳೆರಡರ ಅನುಭವವೂ ಇದ್ದ ಆತನ ದೃಷ್ಟಿಯು ಭೋಗದಲ್ಲಿನ ಪ್ರಣಯದ ಋಜುತೆಯನ್ನು ಮೆಚ್ಚಿದ್ದಿತು. ಬಹುಶಃ ಹೆಣ್ಣುಹಕ್ಕಿಯನ್ನೂ ವ್ಯಾಧನು ಕೊಂದಿದ್ದರೆ "ಓಪರೋಪರೊಳ್ ಒಡಸಾಯಲ್ ಪಡೆದುವು. ಇನ್ನವೇಂ ಸೈಪೊಳವೇ ?" "ಪ್ರೇಮಿಗಳಾದ ಈ ಪಕ್ಷಿಗಳು ಸಹಮರಣವನ್ನು ಪಡೆದವು ; ಇದಕ್ಕಿಂತ ಹೆಚ್ಚಿನ ಪುಣ್ಯವುಂಟೇ ?" ಎಂದು ನಮ್ಮ ಆದಿಪಂಪನ ಭಾವನೆಯಂತೆಯೇ ಇಲ್ಲಿ ವಾಲ್ಮೀಕಿಯೂ ಸಮಾಧಾನ ತಾಳುತ್ತಿದ್ದನೇನೋ !

ಈ ಶ್ಲೋಕಕ್ಕೆ ಬೇರೊಂದು ಬಗೆಯಲ್ಲಿಯೂ ರಾಮಾಯಣ ಕಥೆಗೆ ಸಂಬಂಧಪಟ್ಟ ಅರ್ಥವನ್ನು ಹಚ್ಚುವುದುಂಟು. ಕ್ರೌಂಚಮಿಥುನಗಳೆಂದರೆ ಮಂಡೋದರಿ-ರಾವಣರೆಂದು.

ಅವರಲ್ಲಿ ಕಾಮಮೋಹಿತನಾದ ರಾವಣನನ್ನು ಕೊಂದುದರಿಂದ ಶಾಶ್ವತವಾದ ಪ್ರತಿಷ್ಠೆಯನ್ನು ಗಳಿಸು ಎಂದು ವಾಲ್ಮೀಕಿಯು ರಾಮನನ್ನು ಹರಸಿದನು ಎಂದೂ ಹೇಳುವದುಂಟು.

ಅಂತೂ ಕವಿಯು ರಾಮ-ಸೀತೆಯರ ಏಕನಿಷ್ಠವಾದ, ಏಕಮುಖವಾದ ಉಜ್ವಲಪ್ರಣಯವನ್ನು ಚಿತ್ರಿಸುವಲ್ಲಿ ರಾವಣನ ಬಹುಮುಖವಾದ ಪ್ರಣಯಸ್ವಭಾವವನ್ನು ವೈಷಮ್ಯರೂಪದಲ್ಲಿ ಚಿತ್ರಿಸಿರುವದು ನಿಶ್ಚಿತ. "The course of true love never did run smooth" "ನಿಜವಾದಪ್ರೇಮದ ದಾರಿಯು ಮಿದುವಾದ ಹಾದಿಯಲ್ಲ ; ಗಡಚಾದ ಹಾದಿ" ಎಂದು "Midsummer Nights Dream" "ವಸಂತಯಾಮಿನೀ ಸ್ವಪ್ನ ಚಮತ್ಕಾರ" ಎಂಬ ನಾಟಕದಲ್ಲಿ ಶೇಕ್ಸ್‌ಪಿಯರನು ಹೇಳಿರುವನು. ರಾಮಾಯಣದ ಕಥೆಯೂ ಮೇಲಿನ ಆ ಮಾತನ್ನು ಜ್ಞಾಪಕಕ್ಕೆ ತರುತ್ತದೆ. ರಾಮನು ಪಿತೃವಾಕ್ಯಪರಿಪಾಲನೆಗಾಗಿ ದೀರ್ಘಕಾಲ ಅಡವಿಗೆ ಹೋಗಿರದಿದ್ದರೆ, ಅಲ್ಲಿನ ಬಹುಸಂಕಟಮಯವಾದ ಅಡವಿಯಲ್ಲಿ ರಾಜಕುಮಾರಿ ಸೀತೆಯು ಹೊಂದಿಕೊಂಡು ಹೋಗುವಂತೆ ನಿಶ್ಚಯಿಸಿ ರಾಮನನ್ನು ಅನುಸರಿಸಿ ಹೋಗದಿದ್ದರೆ, ಸೀತೆಯನ್ನು ರಾವಣನು ಅಪಹರಿಸದಿದ್ದರೆ, ಅಪಹೃತಳಾದ ಸೀತೆಯು ತನ್ನ ಪ್ರಾಣವನ್ನು ತೃಣಕ್ಕೆ ಸಮನಾಗಿ ಬಗೆದು ರಾಮನ

ಪ್ರೊ. ಎಲ್. ಆರ್. ಹೆಗಡೆ, ಎಂ. ಎ.
ಕುಮಟಾ

ಲ್ಲಿಯ ತನ್ನ ಮನಸ್ಸನ್ನು ದೃಢವಾಗಿ ನೆಲೆಗೊಳಿಸದಿದ್ದರೆ ಆ ಪ್ರಣಯದ ನಿಶ್ಚಲನಿಷ್ಠೆಯನ್ನೂ ಮಹಿಮೆಯನ್ನೂ ಚಿತ್ರಿಸಲು ಆಗುತ್ತಿರಲಿಲ್ಲ. ಸೀತಾರಾಮರ ಉದಾತ್ತ ಪ್ರಕೃತಿಯನ್ನು ಕಂಡುಕೊಂಡ ಋಷಿಚೇತನವು ಆ ಪ್ರಣಯದ ಮಧುರವಾದ ಬಾಂಧವ್ಯವನ್ನು ಚಿತ್ರಿಸುವ ಸಂತಸವನ್ನೂ ಮರೆಯಲಿಲ್ಲ. ಅದರ ಅಗಲಿಕೆಯ ಅಳಲನ್ನು ನಿರೂಪಿಸುವದಕ್ಕೂ ಹಿಂದೆಗೆಯಲಿಲ್ಲ. ಆ ಪ್ರಣಯದ ಸುಖ-ದುಃಖಗಳ ಚಿತ್ರಣವನ್ನು ಋಷಿಕವಿಯು ಎಂತು ನೆರವೇರಿಸಿರುವನೆಂಬುದನ್ನು ನೋಡಬೇಕಾಗಿದೆ.

## ಪರಸ್ಪರ ಪ್ರೇಮ

ಬಾಲಕಾಂಡದ ೭೭ ನೆಯ ಸರ್ಗದ ಮೂವತ್ತು ಮೂವತ್ತೊಂದನೆಯ ಶ್ಲೋಕಗಳಲ್ಲಿ ರಾಮ-ಸೀತೆಯರ ಪರಸ್ಪರ ಪ್ರೇಮವನ್ನು ಕುರಿತು ವಾಲ್ಮೀಕಿಯು ಹೀಗೆ ಹೇಳಿರುವನು.

ಬ್ರಾಹ್ಮೀ ವಿವಾಹಪದ್ಧತಿಯಿಂದ ತಂದೆಯು ವಿವಾಹ ಮಾಡಿರುವ ಕಾರಣದಿಂದ ಸೀತೆಯು ರಾಮನಿಗೆ ಪ್ರಿಯಳಾಗಿದ್ದಳು ಮಾತ್ರವಲ್ಲ; ಆಕೆಯ ರೂಪ-ಗುಣಗಳ ಮೂಲಕವಾಗಿಯೂ ಅವಳ ಮೇಲಿನ ಆತನ ಪ್ರೀತಿಯು ವರ್ಧಿತವಾಯಿತು. ಸೀತೆಗೂ ಪತಿಯ ಮೇಲೆ ಪ್ರೀತಿಯು ದ್ವಿಗುಣವಾಗಿ ಬೆಳೆಯಿತು. ಪ್ರೇಮಭಾವನೆಯು ಹೃದಯದೊಳಗೇ ಇರುವದಾದರೂ ಹೃದಯವು ಹೃದಯದೊಡನೆ ಅದನ್ನು ಅರಿಯುವಂತೆ ವ್ಯಕ್ತಮಾಡುತ್ತದೆ. ಇದೇ ಭಾವನೆಯನ್ನು ಭವಭೂತಿಯ 'ಉತ್ತರ ರಾಮಚರಿತ'ದ ಗರ್ಭಾಂಕನಾಟಕ (ನಾಟಕದೊಳಗಿನ ನಾಟಕ) ದಲ್ಲಿ ಕುಶನ ಬಾಯಿಂದ ಮತ್ತೂ ಸೊಗಸಾಗಿ ಹೇಳಿಸಿದ್ದಾನೆ.

ಪ್ರಕೃತ್ಯೈವ ಪ್ರಿಯಾ ಸೀತಾ
ರಾಮಸ್ಯಾಸೀತ್ ಮಹಾತ್ಮನಃ ।
ಪ್ರಿಯಭಾವಃ ಸ ತೂ ತಯಾ
ಸ್ವಗುಣೈರೇವ ವರ್ಧಿತಃ ॥
ತಥೈವ ರಾಮಃ ಸೀತಾಯು
ಪ್ರಾಣೇಭ್ಯೋಽಪಿ ಪ್ರಿಯೋಽಭವತ್ ।
ಹೃದಯಂ ತ್ವೇವ ಜಾನಾತಿ
ಪ್ರೀತಿಯೋಗಂ ಪರಸ್ಪರಂ ॥

"ಮಹಾತ್ಮನಾದ ರಾಮನಿಗೆ ಸ್ವಾಭಾವಿಕವಾಗಿಯೇ ಸೀತೆಯು ಪ್ರಿಯಳಾದವಳು. ಆ ಪ್ರೀತಿಯ ಭಾವವು ಅವಳ ಸ್ವಂತಗುಣಗಳಿಂದಲೇ ವರ್ಧಿತವಾಯಿತು. ಹಾಗೆಯೇ ರಾಮನು ಸೀತೆಗೆ ತನ್ನ ಪ್ರಾಣಕ್ಕಿಂತಲೂ ಪ್ರಿಯನಾದನು. ಪರಸ್ಪರ ಪ್ರೀತಿಯೋಗವನ್ನು (ಪರಸ್ಪರರ) ಹೃದಯಮಾತ್ರ ಅರಿಯಬಲ್ಲುದು.

ಕೈಕೇಯಿಯ ಇಚ್ಛೆಯಂತೆ ರಾಮನು ಹದಿನಾಲ್ಕು ವರ್ಷ ವನದಲ್ಲಿರಬೇಕೆಂದು ರಾಮನು ಹೊರಡಲು ಸಿದ್ಧನಾಗಿ ಸೀತೆಗೆ ಅರಮನೆಯಲ್ಲಿಯೇ ಇರು ಎಂದು ಹೇಳಿದಾಗ ಸೀತೆಯು ಪ್ರಣಯದ ಮೂಲಕವಾಗಿಯೇ ಕ್ರೋಧತಾಳಿ ಇಪ್ಪತ್ತೆರಡು ಶ್ಲೋಕಗಳಲ್ಲಿ ತಾನು ರಾಮನನ್ನು ಅನುಸರಿಸಿ ವನಕ್ಕೆ ಬರುವೆನೆಂದು ಹೇಳಿದ ಮಾತು ಅಯೋಧ್ಯಾಕಾಂಡದ ೨೭ ನೆಯ ಸರ್ಗದಲ್ಲಿದೆ.

"ನೀನು ವನಕ್ಕೆ ಹೋದರೆ ನಾನೂ ನಿನ್ನನ್ನು ಅನುಸರಿಸುವೆನು...... ಭರ್ತೃಭಾಗ್ಯ (ಪತಿಯ ಭಾಗ್ಯ) ವನ್ನು ಭಾರ್ಯೆಯೊಬ್ಬಳೇ ಪಡೆಯುತ್ತಾಳೆ. ಪತಿವ್ರತವನ್ನು ಚಿಂತಿಸುತ್ತ ತಂದೆಯ ಮನೆಯಲ್ಲಿ ಇರುವಷ್ಟೇ ಸಂತೋಷದಿಂದ ನಾನು ವನದಲ್ಲಿ ಕಾಲವನ್ನು ಕಳೆಯುವೆನು. ನಿಯಮದಿಂದ ಬ್ರಹ್ಮಚಾರಿಣಿಯಾಗಿದ್ದು ನಿನ್ನನ್ನು ಸೇವಿಸುತ್ತ ಮಧುಗಂಧಯುಕ್ತವಾದ ವನದಲ್ಲಿ ನಿನ್ನೊಡನೆ ಸಂತೋಷದಿಂದ ಇರುವೆನು, ಸಾವಿರಾರು ವರ್ಷಗಳಾದರೂ ನಿನ್ನೊಡನೆ ವನದಲ್ಲಿ ಕಳೆದೇನು. ನೀನಿಲ್ಲದೆ ಸ್ವರ್ಗವಾಸ ಸಹ ನನಗೆ ಸೇರದು". ಮುಂದೆ ರಾಮನು ವನವಾಸದ ಕಷ್ಟಗಳನ್ನು ಎಷ್ಟು ಬಣ್ಣಿಸಿದರೂ ಸೀತೆಯು ನಿನ್ನ ಪರಾಕ್ರಮದಿಂದಲೂ ಸ್ನೇಹಪುರಸ್ಕಾರದಿಂದಲೂ ಈ ಎಲ್ಲ ದೋಷಗಳು ಗುಣಗಳೇ ಆಗುವವೆಂದು ಉತ್ತರಿಸುತ್ತಾಳೆ. ವಿರಹದ ಯಾತನೆಯನ್ನು ತನ್ನಿಂದ ಸಹಿಸುವದು ಆಗುವದಿಲ್ಲ ಎಂದೆನ್ನುತ್ತಾಳೆ. ನಿನ್ನ ಭಕ್ತಳಾದ ಈ ದೀನಳನ್ನು, ಪತಿವ್ರತೆಯನ್ನು, ನಿನ್ನ ಸುಖದುಃಖಗಳಲ್ಲಿ ಸಮಭಾಗಿಯಾದವಳನ್ನು ವನಕ್ಕೆ ಕೊಂಡುಹೋಗುವದು ಯೋಗ್ಯವಾಗಿದೆ ಇಂತೆಲ್ಲ ನುಡಿಯುತ್ತಾಳೆ.

ಸೀತೆಯು ಕಪಟತಾಪಸಿಯಾದ ರಾವಣನ ಹತ್ತರ ತನ್ನ ವೃತ್ತಾಂತವನ್ನು ಹೇಳುವಾಗ ರಾಮನಿಗೆ ಪಟ್ಟಾಭಿಷೇಕವು ನಿಶ್ಚಿತವಾದಾಗ ರಾಮನಿಗೆ ಇಪ್ಪತ್ತೈದು ವರ್ಷ ವಯಸ್ಸೆಂದೂ ತನಗೆ ಹದಿನೆಂಟು ವರ್ಷ ಎಂದೂ ತಿಳಿಸುತ್ತಾಳೆ. ದಿವಿಜೇಶ್ವರನಾದ ವಿಷ್ಣುವು ಲಕ್ಷ್ಮಿಯೊಡನೆ ಸುಖದಲ್ಲಿದ್ದಂತೆ ರಾಮ-ಸೀತೆ ಬಹುವರ್ಷ (ಬಹೂನ್ಯತೂನ್) ಸುಖದಲ್ಲಿದ್ದರೆಂದು ವಾಲ್ಮೀಕಿ ಬಾಲಕಾಂಡದ ಕೊನೆಯಲ್ಲಿ ಹೇಳಿರುವನು. ಸೀತೆಯು ಹನ್ನೆರಡು ವರ್ಷ ಅಯೋಧ್ಯೆಯಲ್ಲಿ ರಾಮನೊಡನೆ ತಾನು ತನ್ನ ಮನೋಭೀಷ್ಟದಂತೆ ಸುಖದಲ್ಲಿದ್ದೆನೆಂದು ರಾವಣಸನ್ಯಾಸಿಯೊಡನೆ ಹೇಳಿದ್ದಾಳೆ. ಅದರಿಂದ ಮದುವೆಯಾಗುವಾಗ ಸೀತೆಗೆ ಆರು, ರಾಮನಿಗೆ ಹದಿಮೂರು ವರ್ಷ ವಯಸ್ಸು. ಹೀಗೆ ತನ್ನ ಹದಿನೆಂಟನೆಯ ವಯಸ್ಸಿನಲ್ಲಿ ಸೀತೆಯು ರಾಮನೊಡನೆ ವನವಾಸಕ್ಕೆ ಹೋದಳು.

## ವನಕ್ಕೆ ಹೋಗುವಾಗ

ವನವಾಸಕ್ಕೆ ಹೊರಡುವ ಮುನ್ನ ಕೈಕೇಯಿಯು ಕೊಟ್ಟ ನಾರುಬಟ್ಟೆ (ಚೀರ) ಗಳನ್ನು ರಾಮ ಲಕ್ಷ್ಮಣರು ಉಟ್ಟುಕೊಂಡರು. ರೇಷಿಮೆಯ ಬಟ್ಟೆಯನ್ನು ಉಟ್ಟುಕೊಂಡಿದ್ದ ಸೀತೆಯು, ತನಗೆ ಉಡಲು ಕೊಟ್ಟ ಚೀರವಸನವನ್ನು ನೋಡಿ ಬಲೆಯನ್ನು ನೋಡಿದ ಹೆಣ್ಣು ಚಿಗರೆಯಂತೆ ಭೀತಳಾದಳು. ಶುಭಲಕ್ಷಣೆಯಾದ ಜಾನಕಿಯು ಕೈಕೇಯಿಯು ಕೊಟ್ಟ ದರ್ಭೆಯ ಹುಲ್ಲಿನ ನಾರುಬಟ್ಟೆ (ಕುಶ ಚೀರ) ಯನ್ನು ಲಜ್ಜೆಯಿಂದಲೇ ಹಿಡಿದುಕೊಂಡು ಬಹಳ ದುಃಖಿತಳಾದಳು. ಅಯೋಧ್ಯಾಕಾಂಡದ ಮೂವತ್ತೇಳನೆಯ ಸರ್ಗದಲ್ಲಿ ಈ ಸನ್ನಿವೇಶ ಬಂದಿದೆ. ನಿರ್ಣಯಸಾಗರ ಆವೃತ್ತಿಯ ಟೀಕಾಕಾರರು ರಾಮನ ಈ ರೀತಿ ಅವಸ್ಥೆಯನ್ನು ನೋಡಿ ಸೀತೆಯು ದುಃಖಿತಳಾದಳು ಎಂದು ಬರೆದಿದ್ದಾರೆ. ಆದರೆ ಈ ಸಂದರ್ಭದಲ್ಲಿ ಒರಟು ನಾರುಬಟ್ಟೆಯನ್ನು ಉಡುವ ಪ್ರಸಂಗ ತನಗೆ ಬಂದುದಕ್ಕಾಗಿಯೇ ಸೀತೆ ದುಃಖಿಸಿದಳೆನ್ನುವದೇ ಸಹಜ. ಸೀತೆಯು ಸಾಮಾನ್ಯವಾಗಿ ಒಳ್ಳೆಯ ಬಟ್ಟೆಯನ್ನುಡಲು ಅಪೇಕ್ಷಿಸುವ, ಒಳ್ಳೆಯ ಆಭರಣಗಳನ್ನು ಧರಿಸುವ ಆಶೆಯುಳ್ಳವಳಾಗಿದ್ದಳು. ರಾಮನೊಡನೆ ಕಾಡಿನಲ್ಲಿ ಹೋಗುವಾಗಲೂ ಆಭರಣಗಳನ್ನು ಧರಿಸಿದವಳಾಗಿ ಕಾಲಂದುಗೆಯ ಶಬ್ದಮಾಡುತ್ತ ವಿಲಾಸದಿಂದ ನಡೆದು ಹೋದಳು ಎಂದು ವಾಲ್ಮೀಕಿಯು ವರ್ಣಿಸಿರುವನು.

ಕಣ್ಣಿನಲ್ಲಿ ನೀರು ತುಂಬಿದವಳಾಗಿ ಧರ್ಮಜ್ಞಳೂ ಧರ್ಮದರ್ಶಿನಿಯೂ ಆದ ಸೀತೆಯು ರೂಪಿನಲ್ಲಿ ಗಂಧರ್ವರಾಜನಂತಿದ್ದ ತನ್ನ ಪತಿಯೊಡನೆ ಈ ರೀತಿಯಾಗಿ ಕೇಳಿದಳು. "ವನವಾಸಿಗಳಾದ ಮುನಿಗಳು ಚೀರವನ್ನು ಹೇಗೆ ಕಟ್ಟಿಕೊಳ್ಳುತ್ತಾರೆ?" ಮುಗ್ಧಳಾದ ಸೀತೆಯು ಚೀರವನ್ನು ಎಲ್ಲಿ ಕಟ್ಟಿಕೊಳ್ಳಬೇಕೆಂಬುದೂ ತಿಳಿಯದೆ ಒಂದು ಚೀರವನ್ನು ಕುತ್ತಿಗೆಯ ಮೇಲೆಯೂ ಇನ್ನೊಂದನ್ನು ಕೈಯಲ್ಲಿಯೂ ಇಟ್ಟುಕೊಂಡು ಲಜ್ಜೆಯಿಂದ ಸುಮ್ಮನೆ ನಿಂತಳು. ಬೇಗನೆ ಸೀತೆಯ ಬಳಿಗೆ ಬಂದು ಧರ್ಮವನ್ನು ಧಾರಣ ಮಾಡಿದವರಲ್ಲಿ ಶ್ರೇಷ್ಠನಾದ ರಾಮನು ಸ್ವತಃ ಸೀತೆಯ ರೇಷಿಮೆಯ ವಸ್ತ್ರದ ಮೇಲೆ ಚೀರವನ್ನು ಕಟ್ಟಿದನು.

ಇದನ್ನು ನೋಡಿ ಅಂತಃಪುರಸ್ತ್ರೀಯರು ಕಣ್ಣು ಗಳಿಂದ ನೀರು ಸುರಿಸಿದರು.

ಒರಟಾದ ಬಟ್ಟೆಯನ್ನುಡುವ ಪ್ರಸಂಗ ಬಂದಾಗ ಸೀತೆಗೆ ಯಾವ ರೀತಿ ಸಂಕಟವಾಯಿತೆಂಬುದನ್ನು ಹೇಳುವಲ್ಲಿ ಮಹಾಕವಿಯು ಮಾನವಸ್ವಭಾವವನ್ನು ಕುರಿತಾದ ತನ್ನ ಪ್ರಜ್ಞಾತಿಶಯವನ್ನು ತೋರಿಸಿದ್ದಾನೆ. ಅಂತಃಪುರದ ಸ್ತ್ರೀಯರೆಲ್ಲ ಸುತ್ತಲೂ ಇದ್ದರೂ ಸೀತೆಯು ಚೀರವನ್ನು ಕಟ್ಟಿಕೊಳ್ಳುವದು ಹೇಗೆ ಎಂದು ಅವರನ್ನು ಯಾರನ್ನೂ ಕೇಳಲಿಲ್ಲ. ತನ್ನ ಪ್ರಾಣಪ್ರಿಯನಾದ ರಾಮನಿಗೇ ಶರಣಾದಳು, ಎಂದು ತೋರಿಸಿರುವಲ್ಲಿ ವಾಲ್ಮೀಕಿಯು ಸೀತಾರಾಮರ ಅನ್ಯೋನ್ಯ ವಿಶ್ವಾಸ ಅನುರಾಗಗಳನ್ನು ಬಹಳ ಸೊಗಸಾಗಿ ತೋರಿಸಿದ್ದಾನೆ. ಮುನಿಗೃಹದಲ್ಲಿ ಕಾಲವನ್ನು ಕಳೆದಿದ್ದ ರಾಮನು ಮುನಿಸ್ತ್ರೀಯರು ಚೀರವನ್ನು ಹೇಗೆ ಕಟ್ಟಿಕೊಳ್ಳುತ್ತಿದ್ದರೆಂಬುದನ್ನು ಬಲ್ಲವನಾಗಿದ್ದನು. ಅವನು ಅಷ್ಟೆಲ್ಲ ಸ್ತ್ರೀಯರು ನೋಡುತ್ತಿರುವಲ್ಲಿ ನಿಸ್ಸಂಕೋಚವಾಗಿ ತನ್ನ ಪ್ರಿಯಸತಿಯ ಸಹಾಯಕ್ಕೆ ಹೋಗಿ ಅವಳಿಗೆ ಚೀರವನ್ನು ಕಟ್ಟಿದನೆಂಬುದನ್ನು ವರ್ಣಿಸಿ ಕರುಣರಸ ಪೋಷಣೆಯನ್ನು ಶ್ಲಾಘ್ಯವಾಗಿ ಕೈಗೂಡಿಸಿದ್ದಾನೆ.

ರಾಮಲಕ್ಷ್ಮಣಸೀತೆಯರು ವನಪ್ರಯಾಣದಲ್ಲಿ ಗಂಗಾನದಿಯ ತೀರದಲ್ಲಿದ್ದ ಶೃಂಗವೇರಪುರದಲ್ಲಿ ಬೇಡರ ಒಡೆಯನಾದ ಗುಹನ ಆತಿಥ್ಯವನ್ನು ಕೈಕೊಂಡರು. ನಂತರ ಭಾರದ್ವಾಜ ಋಷಿಯ ಆಶ್ರಮಕ್ಕೆ ಹೋಗಿ ಅಲ್ಲಿ ಋಷಿಯಿಂದ ಸತ್ಕೃತರಾದರು. ಅವರು ಕಾಲಿಂದೀ ನದಿಯನ್ನು ಕುರಿತು ಪ್ರಯಾಣ ಮಾಡಿದರು. ಕಾಲಿಂದೀ ನದಿಯ ಪ್ರವಾಹವು ಬಹು ವೇಗವಾಗಿ ಹರಿಯುತ್ತಿತ್ತು. ಆ ನದಿಯನ್ನು ದಾಟುವದು ಹೇಗೆಂದು ಅವರಿಗೆ ಚಿಂತೆಯಾಯಿತು. ಕಾಷ್ಠಗಳಿಂದಲೂ ಒಣಗಿದ ಬಿದಿರುಗಳಿಂದಲೂ ತೆಪ್ಪವನ್ನು ಕಟ್ಟಿದರು. ಲಕ್ಷ್ಮಣನು ವೇತಸವೃಕ್ಷ ( ನೀರಂಜಿಯ ಮರ) ಹಾಗು ನೇರಿಲ ಮರದ ಕೊಂಬೆಗಳನ್ನು ಕಡಿದು ತೆಪ್ಪದ ಮೇಲೆ ಸೀತೆಗೆ ಸುಖಾಸನವನ್ನು ನಿರ್ಮಿಸಿದನು. ರಾಮನು ಸ್ವಲ್ಪ ಲಜ್ಜೆಯನ್ನು ತಳೆಯುತ್ತಿದ್ದ ಹಾಗೆಯೇ ಸೀತೆಯನ್ನು ಎತ್ತಿ ತೆಪ್ಪದ ಮೇಲೆ ಏರಿಸಿದನು. ತನ್ನ ಪ್ರಿಯೆಯನ್ನು ತೆಪ್ಪದ ಮೇಲೆ ಎತ್ತಿ ಇಡುತ್ತಿದ್ದ ರಾಮನ ಹಾಗು ಪ್ರಿಯನು ತನ್ನನ್ನು ಎತ್ತಿದ್ದರಿಂದಲೂ ಪಕ್ಕದಲ್ಲಿ ಲಕ್ಷ್ಮಣನಿದ್ದ ಮೂಲಕವಾಗಿಯೂ ಲಜ್ಜಿತಳಾದ ಸೀತೆಯ ಚಿತ್ರವನ್ನು ಕೊಟ್ಟು ವಾಲ್ಮೀಕಿಯು ರಸಿಕರ ಕೃತಜ್ಞತೆಗೆ ಪಾತ್ರನಾಗಿದ್ದಾನೆ

ವನದಲ್ಲಿ ಹೋಗುತ್ತಿರುವಾಗ ರಾಮಲಕ್ಷ್ಮಣರ ನಡುವೆ ಸೀತೆಯು ನಡೆಯುತ್ತಿದ್ದಳು. ರಾಮನು ಲಕ್ಷ್ಮಣನಿಗೆ ಹೇಳಿದನು. "ಸೀತೆಯು ಯಾವ ಯಾವ ಹಣ್ಣು ಹೂಗಳು ಬೇಕೆಂದು ಹೇಳುತ್ತಾಳೆಯೋ ಅವಳ ಮನಸ್ಸು ಯಾವುದರಿಂದ ಸಂತಸ ಹೊಂದುವದೋ ಅವನ್ನು ಅವಳಿಗೆ ತಂದುಕೊಡಬೇಕು."

ಚಿತ್ರಕೂಟಗಿರಿಯಲ್ಲಿರುವಾಗ ನಡೆದ ಒಂದು ಅಪೂರ್ವ ರಮಣೀಯವಾದ ಸನ್ನಿವೇಶವು ಅಯೋಧ್ಯಾಕಾಂಡದ ೯೫ನೆ ಸರ್ಗದ ನಂತರ 'ಪ್ರಕ್ಷಿಪ್ತ ಸರ್ಗ' ಎಂದು ಕರೆಯಲಾದ ಭಾಗದಲ್ಲಿ ಕಾಣಸಿಗುತ್ತದೆ

## ವನಶೋಭೆಯ ಮಧ್ಯದಲ್ಲಿ

ಹೂಗಳ ಭಾರದಿಂದ ಬಾಗಿದ ಮರಗಳಿಂದ ಸುಖಸ್ಪರ್ಶವನ್ನು ಉಂಟುಮಾಡುವ ವೃಕ್ಷಗಳಿಂದಲೂ ಶಿಲಾಧಾತುಗಳಿಂದಲೂ ಕೂಡಿದುದಾಗಿಯೂ ಇರುವ ರಮ್ಯವಾದ ಕಂದರವನ್ನು ರಾಮನು ನೋಡಿದನು. ರಾಮನು "ಜಾನಕಿ, ಪರಿಶ್ರಮವನ್ನು ಕಳೆದುಕೊಳ್ಳುವ ಸಲುವಾಗಿ ಇಲ್ಲಿ ಕುಳಿತುಕೋ. ಈ ಶಿಲೆಯು ನಿನಗಾಗಿಯೇ ಹಾಸಿದೆ" ಎಂದು ಪ್ರೇಮದಿಂದ ಕರೆದನು. ಸ್ವಾಭಾವಿಕವಾಗಿ ದಾಕ್ಷಿಣ್ಯಪರಳಾದ ಸೀತೆಗೆ ರಾಮನು ಹೀಗೆ ಹೇಳಿದ ಮೇಲೆ ಪ್ರಣಯಸ್ನಿಗ್ಧವಾದ ಈ ಮಾತನ್ನು ಸೀತೆಯು ಪ್ರಿಯನಿಗೆ ಹೇಳಿದಳು— "ರಘುನಂದನ, ನೀನು ಹೇಳಿದ ಮಾತನ್ನು ನಾನು ಅವಶ್ಯವಾಗಿ ನಡಸಬೇಕು" ಎಂದು ಶಿಲೆಯನ್ನು ಸಮೀಪಿಸಿದಳು. ಪತಿಯೊಡನೆ ರಮಿಸುವ ಆಸೆಯಿಂದ ಆ ಪರಿಪೂರ್ಣ ಸುಂದರಿಯು ಬಂದಳು. ರಾಮನು ಅವಳಿಗೆ ವನದ ಶೋಭೆಯನ್ನು ವರ್ಣಿಸಿದನು. ಮತ್ತು "ದೇವಿ, ಈ ಹೂಗಳಭಾರದಿಂದ ಬಾಗಿದ ಲತೆಯು ನೀನು ಶ್ರಮದಿಂದ ನನ್ನನ್ನು ಅವಲಂಬಿಸಿದಂತೆ ಆಶ್ರಯಿಸಿದೆ" ಎಂದು ಹೇಳಿದೊಡನೆ (ಆ ಮಾತಿನ ಇಂಗಿತವನ್ನು ಅರಿತು) ಅನಿಂದ್ಯರೂಪವುಳ್ಳ ಆ ಸುಂದರಿಯು ಪ್ರಿಯನ ತೊಡೆಯ ಮೇಲೆ ಕುಳಿತುಕೊಂಡು ಆತನ ಕಡೆ ಮೋರೆ ತಿರುಗಿಸಿದಳು. ದೇವಕನ್ನಿಕೆಯಂತೆ ಸುಸುಂದರಿಯಾದ ಸೀತೆಯು ಮನ್ಮಥನಲ್ಲಿ ಮನವನ್ನು ಅರ್ಪಿಸಿದ ರಾಮನಿಗೆ ಹರ್ಷವನ್ನುಂಟಮಾಡಿದಳು. ಆಗ ಆ ಮನಃಶಿಲೆಯನ್ನು ಅಂಗುಲಿಯಿಂದ ಉಜ್ಜಿ ಅದಕ್ಕೆ ತಗಲಿದ ಕೆಂಪುಬಣ್ಣದಿಂದ ಸೀತೆಯ ಲಲಾಟದಲ್ಲಿ ಸುಂದರವಾದ ತಿಲಕವನ್ನು ರಚಿಸಿದನು. ಆ ಗಿರಿಧಾತುವಿನ ಬಾಲಸೂರ್ಯನ ಬಣ್ಣಕ್ಕೆ ಸಮನಾದ ಕೆಂಪುಬಣ್ಣದಿಂದ ಸೀತಾದೇವಿಯು ( ರಾತ್ರಿಯು ಮುಕ್ತಾಯವಾಗುವಾಗ ) ನಿಶಾದೇವಿಯು ಸಂಧ್ಯಾರುಣ ಬಣ್ಣದಿಂದ ಹೊಳೆಯುವಂತೆ ಶೋಭಿಸಿದಳು. ರಾಮಚಂದ್ರನು ಕೇಸರ ವೃಕ್ಷದ ಹೂಗಳನ್ನು ಕೊಯ್ದು ಪ್ರೀತಿಮಾನಸನಾಗಿ ಅವನ್ನು ಸೀತೆಯ ಕುಂತಲಗಳ ಮೇಲೆ ಇಟ್ಟು ಅಲಂಕರಿಸಿದನು ಆ ಶಿಲೆಯ ಮೇಲೆ ಕೆಲಹೊತ್ತು ಆನಂದದಿಂದ ಕುಳಿತಿದ್ದ ನಂತರ ಸೀತೆಯೊಡನೆ ಬೇರೊಂದು ಸ್ಥಳಕ್ಕೆ ಹೋದನು ತಿರುಗಾಡುತ್ತ ಹೋಗುವಾಗ ಸೀತೆಯು ಒಂದು ಗಂಡುಮಂಗನನ್ನು ನೋಡಿದಳು. ಬಹಳ ಮೃಗಗಳಿಂದ ಕೂಡಿದ ಆ ವನದಲ್ಲಿ ಆ ಮಂಗನನ್ನು ನೋಡಿ ಹೆದರಿಕೆಯಾಗಿ ಆ ಭರದಲ್ಲಿಯೇ ಸೀತೆಯು ರಾಮನನ್ನು ತಬ್ಬಿಕೊಂಡಳು. ತನ್ನನ್ನು ಆಲಿಂಗಿಸಿದ ಪ್ರಿಯೆಯನ್ನು ತನ್ನ ವಿಶಾಲವಾದ ಬಾಹುಗಳಿಂದ ಆಲಿಂಗಿಸಿ ರಾಮನು ಅವಳನ್ನು ಸಾಂತ್ವನಗೊಳಿಸಿದನು. ಮಂಗನನ್ನು ಬೆದರಿಸಿದನು.

ಆಲಂಗಿಸಿದ್ದರಿಂದ ಸೀತೆಯ ಹಣೆಯ ಮೇಲಿನ ಮನಃಶಿಲೆಯ ತಿಲಕವು ರಾಮನ ವಿಶಾಲವಾದ ಎದೆಯ ಮೇಲೆ ಅಚ್ಚೊತ್ತಿದಂತೆ ಕಂಡಿತು ಮಂಗನು ಹೋದ ನಂತರ ಸೀತೆಯು ತನ್ನ ಕಣ್ಣಿನ ಬದಿಯಿಂದ ಉಜ್ಜಿ ರಾಮನ ಎದೆಯ ಮೇಲೆ ಮೂಡಿದ ತಿಲಕವನ್ನು ಕಂಡು ದೊಡ್ಡದಾಗಿ ನಕ್ಕುಬಿಟ್ಟಳು.

ಅನತಿ ದೂರದಲ್ಲಿ ಕಾನನವು ಅಶೋಕವೃಕ್ಷಗಳ ಹೂಗಳಿಂದ ದೀಪಗಳನ್ನು ಹಚ್ಚಿಟ್ಟ ವನದಂತೆ ಶೋಭಿಸುತ್ತಿತ್ತು. ಅಶೋಕಕುಸುಮಗಳನ್ನು ಮುಡಿಯುವ ಆಸೆಯಿಂದ ಜಾನಕಿಯು "ಆ ವನಕ್ಕೆ ಹೋಗೋಣ" ಎಂದು ರಾಮನಿಗೆ ಬಿನ್ನವಿಸಿದಳು. ಪ್ರಿಯೆಯಿಂದ ಸಹಿತನಾಗಿ ರಾಮನು ಆನಂದದಿಂದ ಆ ಅಶೋಕವನಕ್ಕೆ ಬಂದನು. ಚಿಗುರುಗಳಿಂದ



ಸಹಿತವಾದ ಅಶೋಕಪುಷ್ಪಗಳನ್ನು ಕೊಯ್ದು ರಾಮನು ಸೀತೆಯನ್ನು ಅಲಂಕರಿಸಿದನು. ಪ್ರತಿಯಾಗಿ ಜಾನಕಿಯು ಆ ವೃಕ್ಷದ ಹೂಗಳಿಂದ ರಾಮನಿಗೂ ಅಲಂಕಾರ ಮಾಡಿದಳು. ವನಮಾಲೆಗಳನ್ನು ಪೋಣಿಸಿಕೊಂಡು ಕರ್ಣಾಭರಣಗಳನ್ನಾಗಿ ಧರಿಸಿಕೊಂಡ ನಲ್ಲನಲ್ಲೆಯರು ಆ ಪರ್ವತಕ್ಕೇ ಅಲಂಕಾರ ಸ್ವರೂಪವಾಗಿ ಶೋಭಿಸಿದರು.

ಈ ಸರ್ಗವು ಪ್ರಕ್ಷಿಪ್ತವೆಂದು ಏತಕ್ಕೆ ನಿರ್ಣಯಿಸಿದರೋ ತಿಳಿಯದು. ಅದು ಪ್ರಕ್ಷಿಪ್ತವಾದರೂ ಅದರಲ್ಲಿನ ವಿಷಯವು ವಿಕ್ಷಿಪ್ತವೆಂದು ಕಾಣುವದಿಲ್ಲ. ಸ್ವಾಭಾವಿಕವಾದ ಸಹಜ ಶೃಂಗಾರದ ರಮ್ಯವಾದ ಚಿತ್ರವೆಂದು ಅದನ್ನು ನಾವು ಮೆಚ್ಚುತ್ತೇವೆ. ರಸಋಷಿ ವಾಲ್ಮೀಕಿಯೇ ಇದನ್ನು ರಚಿಸಿರಲಿ, ಮತ್ತಾವನಾದರೂ ಹೊಸದಾಗಿ ಸೇರಿಸಿದ್ದಾಗಿರಲಿ ಏನೇ ಇದ್ದರೂ ಆ ಮಹಾನುಭಾವನಿಗೆ ನಮ್ಮ ಹಾರ್ದಿಕ ಕೃತಜ್ಞತೆಗಳು.

## ರಾಮಶೋಕ

ಮುಂದೆ ಅರಣ್ಯಕಾಂಡದ ಪ್ರಾರಂಭದಲ್ಲಿ ಎರಡನೆಯ ಸರ್ಗದಲ್ಲಿ ಭೀಕರವಾದ ವಿರಾಧವೃತ್ತಾಂತವು ಪ್ರಾರಂಭವಾಗುತ್ತದೆ. ತಪಸ್ಸುಮಾಡಿ ಬ್ರಹ್ಮನಿಂದ ಶಸ್ತ್ರಗಳಿಂದ ಅವನನ್ನು ಕೊಲ್ಲಲಾಗದಂಥ ವರವನ್ನು ಪಡೆದುಕೊಂಡು ವಿರಾಧನು ಬಹು ಬಲಾಢ್ಯನಾದ ವೀರನಾಗಿದ್ದನು. ಅವನು ಸೀತೆಯು ತನ್ನ ಹೆಂಡತಿಯಾಗುತ್ತಾಳೆ, ನಿಮ್ಮಿಬ್ಬರ ರಕ್ತವನ್ನು ಕುಡಿಯುತ್ತೇನೆ ಎಂದು ಹೇಳಿ ಥರಥರ ನಡುಗುತ್ತಿದ್ದ ಸೀತೆಯನ್ನು ಹಿಡಿದನು. ರಾಮನು ವಿರಾಧನು ತೊಡೆಯಮೇಲೆ ಸೀತೆಯನ್ನಿಟ್ಟುಕೊಂಡುದನ್ನು ನೋಡಿ ಲಕ್ಷ್ಮಣನ ಹತ್ತರ ಕಣ್ಣೀರು ತುಂಬಿಕೊಂಡು ಹೀಗೆ ಹೇಳಿದನು. "ಲಕ್ಷ್ಮಣಾ, ತಂದೆಯ ಸಾವಿಗಿಂತಲೂ ನನ್ನ ರಾಜ್ಯವು ಕಳೆದುದಕ್ಕಿಂತಲೂ ಪರ ಪುರುಷನು ವೈದೇಹಿಯನ್ನೂ ಸ್ಪರ್ಶಿಸಿದುದರಿಂದ ವಿಶೇಷ ದುಃಖವಾಗಿದೆ; ಇದಕ್ಕಿಂತ ಹೆಚ್ಚಿನ ದುಃಖ ನನಗೆ ಬೇರೆ ಇಲ್ಲ."

ರಾಮಬಾಣಗಳು ನವಿಲುಗರಿಗಳ ಬಟ್ಟೆ ಧರಿಸಿದ ವಿರಾಧನ ಮೈಯನ್ನು ಚುಚ್ಚಿ ರಕ್ತಲೇಪಿತವಾಗಿ ಭೂಮಿಯ ಮೇಲೆ ಬಿದ್ದವು.

ರಾಮಲಕ್ಷ್ಮಣರಿಬ್ಬರೂ ವಿರಾಧನ ಮೇಲೆ ಮತ್ತೆ ಬಾಣಪ್ರಯೋಗ ಮಾಡಿದರು. ಆ ಮಹಾರೌದ್ರನಾದ ರಾಕ್ಷಸನು ನಗುತ್ತ ಸಿಂಹನಾದ ಮಾಡಿದನು. ವಿಜೃಂಭಿಸಿ ಮೈ ಕೊಡವಿದ ರಾಕ್ಷಸನ ದೇಹದಿಂದ ಬಾಣಗಳು ಪಟ ಪಟನೆ ಉದುರಿದವು, ರಾಕ್ಷಸನು ಶೂಲವನ್ನು ಹಿಡಿದುಕೊಂಡು ರಾಮಲಕ್ಷ್ಮಣರ ಕಡೆಗೆ ಓಡಿ ಬಂದನು. ಸೀತೆಯನ್ನಿಳಿಸಿ ರಾಮಲಕ್ಷ್ಮಣರಿಬ್ಬರನ್ನೂ ಹೆಗಲ ಮೇಲೆ ಎತ್ತಿಕೊಂಡು ಆ ರಾಕ್ಷಸನು ವನಾಭಿಮುಖನಾಗಿ ನಡೆದನು.

ಆಗ ಅವರನ್ನು ಕೊಂಡು ವಿರಾಧನು ಹೋಗುತ್ತಿದ್ದುದನ್ನು ನೋಡಿ ಸೀತೆಯು ದೊಡ್ಡದಾಗಿ ಆಕ್ರೋಶ ಮಾಡಿದಳು "ರೌದ್ರರೂಪಿಯಾದ ರಾಕ್ಷಸನು ಸತ್ಯವಂತನಾದ ಶುಚಿಯಾದ ರಾಮನನ್ನು ಹರಣ ಮಾಡುತ್ತಾನೆ. ನನ್ನ ಗತಿಯೇನು? ಅವರನ್ನು ಕೆಳಗಿಳಿಸು ರಾಕ್ಷಸಾ, ನನ್ನನ್ನು ತೆಗೆದುಕೊಂಡು ಹೋಗು'ಎಂದು ಭಯಾರ್ತಳಾಗಿ ಸೀತೆಯುಚೀರಿದಳು. ರಾಮನು ವಿರಾಧನ ಬಲತೋಳನ್ನು ಲಕ್ಷ್ಮಣನು ಎಡತೋಳನ್ನು ಕತ್ತರಿಸಲು ಪರ್ವತ ಉರುಳಿದಂತೆ ವಿರಾಧನು ಬಿದ್ದನು.

## ಸೀತೆಯ ಅಳಲು

"ಹಾ ಸೀತೇ, ಹಾ ಲಕ್ಷ್ಮಣಾ" ಎಂದು ರಾಮಬಾಣಕ್ಕೆ ಗುರಿಯಾಗಿ ಮಾರೀಚನು ಸಾಯುವಾಗ ಕೂಗಿದನು. ಸೀತೆಯು ರಾಮನಿಗೆ ಕಷ್ಟ ಬಂತೆಂದು ಅವನನ್ನು ರಕ್ಷಿಸಲು ಲಕ್ಷ್ಮಣನಿಗೆ ಹೋಗೆಂದಳು. ಲಕ್ಷ್ಮಣನು ರಾಮನು ಅವಧ್ಯನು ಎಂತಲೂ ರಾಮನ ಅಪ್ಪಣೆಯಂತೆ ತಾನು ಸೀತೆಯನ್ನು ಕಾದುಕೊಂಡಿರಬೇಕೆಂತಲೂ ಹೋಗಲಿಲ್ಲ. ಆಗ ಸೀತೆಯು ಲಕ್ಷ್ಮಣನ ಮೇಲೆ ಆರೋಪ ಹೊರಿಸಿ ಆಡುವ ಕಟುವಾದ ಮಾತುಗಳು ಹೆಚ್ಚೆನಿಸಿದರೂ ರಾಮನ ಪ್ರಾಣಭೀತಿಯಿಂದ ಕಂಗಾಲಾಗಿ ಅದರಿಂದಾದ ಮತಿವಿಭ್ರಮದಿಂದ ಹೇಳಿದುದೆಂದು ತಿಳಿಯಬಹುದು. ಲಕ್ಷ್ಮಣನು ಎಷ್ಟು ಧೈರ್ಯ ಹೇಳಿದರೂ ಕೇಳದೆ ತಾನು ಗೋದಾವರಿಯಲ್ಲಿ ಹಾರುತ್ತೇನೆ, ಬೆಂಕಿಯಲ್ಲಿ ಬೀಳುತ್ತೇನೆ ಮುಂತಾಗಿ ಹೆದರಿಸಿ ಅವನನ್ನು ಕಳಿಸುತ್ತಾಳೆ. ರಾವಣನು ತಪಸ್ವಿಯ ವೇಷದಲ್ಲಿ ಬಂದು ಸೀತೆಯಿಂದ ಸತ್ಕೃತನಾಗಿ ಕಾಮಪೂರಿತವಾದ ಮಾತುಗಳನ್ನು ಹೇಳಿ ಅವಳನ್ನು ಒಲಿಸಿಕೊಳ್ಳಲು ನೋಡಿದಾಗ ಸೀತೆಯು ಕೋಪದಿಂದ ರಾವಣನನ್ನು ತುಚ್ಛ ಮಾಡುವ ಅನೇಕ ಮಾತುಗಳಲ್ಲಿ ರಾಮನ ಮೇಲಿನ ಸೀತೆಯ ಅನುರಾಗವೂ ಅವಳ ಪಾತಿವ್ರತ್ಯವೂ ರಾಮನ ಶ್ರೇಷ್ಠತೆಯೂ ಬಹಳ ಉತ್ತಮವಾಗಿ ವರ್ಣಿತವಾಗಿವೆ. "ಹಸಿದ ಸಿಂಹದ ಹಾಗು ವಿಷಸರ್ಪದ ದವಡೆಯಿಂದ ಹಲ್ಲುಗಳನ್ನು ಕೀಳುವದಕ್ಕೆ ಇಚ್ಛಿಸಿದಂತೆ ನನ್ನನ್ನು ಇಚ್ಛಿಸುವೆ ನೀನು....ಸಿಂಹಕ್ಕೂ ನರಿಗೂ, ಆನೆಗೂ ಬೆಕ್ಕಿಗೂ, ಗರುಡನಿಗೂ ಕಾಗೆಗೂ ಇರುವ ಅಂತರವು ರಾಮನಿಗೂ ನಿನಗೂ ಉಂಟು' ಮುಂತಾಗಿ ರಾವಣನನ್ನು ತಿರಸ್ಕರಿಸುತ್ತಾಳೆ. ರಾವಣನ ಪ್ರಲೋಭನೆಗಳಿಗೆ ಅವಳ ಕ್ರೋಧದ ಶಾಪವೇ ಉತ್ತರವಾಗುತ್ತದೆ. ಸೀತಾಪಹರಣ ಪ್ರಸಂಗ ಹಾಗು ಅಶೋಕವನದ ಸೀತಾ ಶೋಕಜೀವನ ಸೀತೆಯ ಪಾತಿವ್ರತ್ಯದ ಏಕನಿಷ್ಠೆಯ ನಿಜವಾದ ಅಗ್ನಿ ಪರೀಕ್ಷೆಯಾಗುತ್ತವೆ.

ಮಾರೀಚನನ್ನು ಕೊಂದು ತಿರುಗಿ ಬರುವಾಗ ರಾಮನು ಲಕ್ಷ್ಮಣನು ಬರುವದನ್ನು ನೋಡಿ ಸೀತೆಯ ಕ್ಷೇಮವನ್ನು ಕುರಿತು ಶಂಕಿಸುತ್ತ ಸೀತೆಯನ್ನು ಬಿಟ್ಟು ಬಂದುದಕ್ಕೆ ಭರ್ತ್ಸನೆ ಮಾಡುತ್ತಾನೆ. "ವೈದೇಹಿಯು ಜೀವದಿಂದಿದ್ದರೆ ಮಾತ್ರ ಆಶ್ರಮಕ್ಕೆ ಹೋಗುವೆನು. ಅವಳು ಮರಣಪಟ್ಟರೆ ನಾನೂ ಪ್ರಾಣವನ್ನು ತ್ಯಜಿಸುವೆನು" ಎಂದು ದುಃಖಿಸುತ್ತಲೇ ಸೀತಾದರ್ಶನಕಾತರನಾಗಿ ತ್ವರೆಯಿಂದ ಬಂದು ಶೂನ್ಯವಾದ ಕುಟಿಯನ್ನು ನೋಡಿ ಉದ್ವಿಗ್ನನಾದನು.

ಕದಂಬ ಬಿಲ್ವ ಇತ್ಯಾದಿ ವೃಕ್ಷಗಳನ್ನೂ ಪ್ರಾಣಿಗಳನ್ನೂ ಸಹ "ವೈದೇಹಿಯೆಲ್ಲಿ?" ಎಂದು ಕೇಳಿದನು. ಮರಗಳಲ್ಲಿ ಮರೆಯಾಗಿದ್ದು ಹಾಸ್ಯಶೀಲೆ ಸೀತೆಯು ತನ್ನನ್ನು ಹಾಸ್ಯ ಮಾಡುವಳೆಂದು ಅವಳನ್ನು ಕರೆದನು. ವನಗಳಲ್ಲಿ, ಹಳ್ಳಕೊಳ್ಳಗಳಲ್ಲಿ ಗಿರಿಗಳಲ್ಲಿ ರಾಮಲಕ್ಷ್ಮಣರು ವೈದೇಹಿಯನ್ನು ಅರಸಿದರು. 'ವಿರಹಿ'ಗಳು ಚೇತನ ಅಚೇತನ ಭೇದವನ್ನು ಅರಿಯರೆಂದು ಕಾಲಿದಾಸನು ಹೇಳುವದನ್ನು ಈ ಕಾವ್ಯಭಾಗವು ಸುಂದರವಾಗಿ ಪ್ರತಿಪಾದಿಸಿದೆ.

ಕಿಷ್ಕಿಂಧಾ ಕಾಂಡದ ಮೊದಲನೆಯ ಸರ್ಗದಲ್ಲಿ ವಿರಹಿಯಾದ ರಾಮನು ವಸಂತಶೋಭೆಯನ್ನು ವರ್ಣಿಸುತ್ತಾನೆ. ತರುಲತೆಗಳು ಪುಷ್ಪ ಭಾರದಿಂದ ಸಮೃದ್ಧವಾಗಿವೆ. ಚಂದನ ಶೀತಲವಾದ ತೆಂಗಾಳಿಯು ಸುಖಾವಹವಾಗಿ ಬೀಸುತ್ತಿದೆ. ಗಾಳಿಯು ಮತ್ತಕೋಕಿಲ ನಿನಾದದಿಂದ ಗೀತವನ್ನು ಹಾಡಿ ಮರಗಳನ್ನು ಕುಣಿಸುವಂತೆ ತೋರುತ್ತಿದೆ. ಆದರೆ ವಸಂತವು ವಿರಹಿಯಾದ ನನಗೆ ಶೋಕವನ್ನೇ ಉದ್ದೀಪಿಸುತ್ತಿದೆ. ನವಿಲುಗಳು ನರ್ತಿಸುತ್ತವೆ. ಹೆಣ್ಣು ನವಿಲು ರಾಗಾವಿಲವಾಗಿ ಗಂಡು ನವಿಲನ್ನು ಸಮೀಪಿಸುತ್ತದೆ. ಜಾನಕಿಯು ಅಪಹೃತಳಾಗಿರದಿದ್ದರೆ ಅನುರಾಗದಿಂದ ಸಂಭ್ರಮಾನ್ವಿತಳಾಗಿ ನನ್ನನ್ನು ಅಗಲದೆಯೇ ಹತ್ತಿರವೇ ಇರುತ್ತಿದ್ದಳು. ನನ್ನ ಪ್ರಿಯೆಯು ಎಲ್ಲಿರುವಳೋ ಅಲ್ಲಿಯೂ ವಸಂತ ಋತುವು ಪ್ರಾಪ್ತವಾಗಿರುವದಾದರೆ ಪರವಶಳಾದ ಸೀತೆಯು ನಾನು ಇಲ್ಲಿ ಶೋಕಿಸುವಂತೆಯೇ ಶೋಕಿಸುತ್ತಾಳೆ. ನನ್ನನ್ನು ಅಗಲಿ ಅವಳು ವಸಂತ

ಮಾಸದಲ್ಲಿ ಹೇಗೆ ಜೀವಿಸಿಯಾಳು? ಮರಣಹೊಂದುವದೇ ನಿಶ್ಚಿತ. ಯಾವ ಯಾವ ದೃಶ್ಯಗಳು ಅವಳು ನನ್ನೊಡನಿದ್ದಾಗ ರಮಣೀಯವಾಗಿ ತೋರುತ್ತಿದ್ದವೋ ಅವೇ ಅವಳಿಲ್ಲದುದರಿಂದ ರಮಣೀಯತೆಯನ್ನು ಕಳೆದುಕೊಂಡಂತೆ ತೋರುತ್ತವೆ. ರಾಮನ ಈ ಮಾತುಗಳು ಓದುಗರ, ಕೇಳುವವರ ಹೃದಯಗಳನ್ನು ಶೋಕದಿಂದ ಹಿಂಡುತ್ತವೆ.

ವಾಲಿ ವಧಾನಂತರ ಮಾಲ್ಯವಂತ ಪರ್ವತದಲ್ಲಿ ರಾಮನು ವಾಸ ಮಾಡಿದಾಗ ಮಳೆಗಾಲವು ಪ್ರಾರಂಭವಾಯಿತು, ಸೆಕೆಯಿಂದ ಬಹಳ ಕಷ್ಟಪಟ್ಟ ಭೂಮಿಯು ಹೊಸ ನೀರಿನಿಂದ ತಾಗಿಬಿ ಸೀತೆಯಂತೆಯೇ ಶೋಕ ಸಂತಪ್ತವಾಗಿ ಕಣ್ಣೀರು ಸುರಿಸುತ್ತದೆ. ರಾವಣನ ತೊಡೆಯ ಮೇಲೆ ತಪಸ್ವಿನಿಯಾದ ವೈದೇಹಿಯು ನಡುಗುತ್ತಿದ್ದಂತೆ ನೀಲಮೇಘಾಶ್ರಿತವಾದ ವಿದ್ಯುತ್ತು ಸ್ಫುರಿಸುತ್ತದೆ. ಅಪ್ಸರ ಸ್ತ್ರೀಯರ ರತಿವಿಲಾಸದ ನಂತರದಲ್ಲಿ ಮುತ್ತುಗಳು ಉದುರುವಂತೆ ಆಗಸದಲ್ಲಿ ಮಳೆ ಹನಿಗಳು ಬೀಳುತ್ತವೆ.

### ಸೀತಾವಿರಹದ ಉದ್ವೇಗ

ಶರತ್ಕಾಲದಲ್ಲಿ ಪರವಾತುರನಾದ ರಾಮನು ಬಹಳ ಮೋಹಪರವಶನಾಗಿ ವಿಲಾಪಿಸಿದನು. ಪ್ರಕೃತಿಯ ವಿವಿಧ ದೃಶ್ಯಗಳನ್ನು ರಾಮನ ಮೂಲಕ ವರ್ಣಿಸುವ ವಾಲ್ಮೀಕಿಯ ಕಾವ್ಯಾಮೃತದ ರುಚಿಯೇ ಸೊಗಸು. ಪ್ರಕೃತಿಯಲ್ಲೆಲ್ಲಾ ಸ್ತ್ರೀವಿಲಾಸ ಶೋಭೆಗಳನ್ನು ಕಂಡು ಕಂಡು ಸೀತಾವಿರಹದ ಉದ್ವೇಗದಿಂದ ರಾಮನು ಬಹುವಾಗಿ ಶೋಕಿಸಿದನು.

ಅಶೋಕವನದಲ್ಲಿ ಕ್ರೂರರಾದ ರಾಕ್ಷಸಿಯರಿಂದ ಸುತ್ತುವರಿಯಲ್ಪಟ್ಟ ಸೀತೆಯು ಅವರ ನಾನಾತರದ ಉಪಟಳವನ್ನು ಅನುಭವಿಸುತ್ತ ರಾಮನನ್ನೆ ಹಗಲಿರುಳು ನೆನೆಯುತ್ತ ಕಾಲ ಕಳೆಯುತ್ತಿದ್ದಳು.

"ಸರ್ವಾತ್ಮನಾ ರಾಮಮನುಸ್ಮರಂತೀ"

ಎಂದು ವಾಲ್ಮೀಕಿಯು ಅವಳನ್ನು ವರ್ಣಿಸಿದ್ದಾನೆ. ಆತ್ಮಹತ್ಯೆಯ ಉಪಾಯಗಾಣದೆ ತನ್ನ ವೇಣಿಯನ್ನೇ ಕುತ್ತಿಗೆಗೆ ಬಿಗಿದುಕೊಂಡು ಸಾಯುವ ವಿಚಾರವನ್ನೂ ಮಾಡಿದ್ದಳು. ನಂತರ ಹನುಮಂತನಿಂದ ರಾಮನ ಸಂದೇಶವನ್ನು ತಿಳಿದು ಅವಳು ಆ ಕಷ್ಟದಲ್ಲಿಯೂ ಹೃಷ್ಟಮಾನಸಳಾದಳು.

ರಾಮನ ಮಾಯಾಶಿರವನ್ನು ತೋರಿಸಿದಾಗ ಸೀತೆಗೆ ಆದ ದುಃಖವು ಅಸದಳ. ರಾಮನ ಮೇಲಿನ ನಿಷ್ಠೆ ಆಗಲೂ ಕದಲಲಿಲ್ಲ. ತನ್ನನ್ನೂ ರಾಮನೊಡನೆ ಸೇರಿಸಲು ಕೊಲ್ಲು ಎಂದು ರಾವಣನಿಗೆ ಹೇಳುವಂತೆ ದುಃಖಿಸುತ್ತಾಳೆ. ಮತ್ತೊಮ್ಮೆ ವಾನರಬಲವನ್ನೂ ರಾಮಲಕ್ಷ್ಮಣರನ್ನೂ ಇಂದ್ರಜಿತು ಕೊಂದನೆಂದು ಮಾಯಾದೃಶ್ಯವನ್ನು ಪುಷ್ಪಕವಿಮಾನದಿಂದ ನೋಡಿ ಮೂರ್ಛಿತಳಾದ ಸೀತೆಯು ರಾಕ್ಷಸಿಯಿಂದ ಸಾಂತ್ವನವನ್ನು ಪಡೆಯುತ್ತಾಳೆ.

ರಾವಣವಧೆಯ ನಂತರ ಸೀತಾ-ರಾಮ ಪುನರ್ಮಿಲನದ ಸಂದರ್ಭವನ್ನು ಯುದ್ಧಕಾಂಡದ ೧೧೭-೧೧೮ನೇ ಸರ್ಗಗಳಲ್ಲಿ ನೋಡುತ್ತೇವೆ. ಮೋರೆಯನ್ನು ವಸ್ತ್ರದಿಂದ ಅಡ್ಡಗಟ್ಟಿಕೊಂಡು ಲಜ್ಜೆಯಿಂದ ಸೀತೆಯು "ಆರ್ಯಪುತ್ರ" ಎಂದು ಸಂಬೋಧಿಸಿ ಅವನನ್ನು ಸಮೀಪಿಸಿ ಹೋಗಿ ಅತ್ತಳು. ರಾಮನು ಕ್ರೋಧದಿಂದ ಕಠಿಣವಾದ ಮಾತುಗಳಿಂದ ರಾವಣನ ಮನೆಯಲ್ಲಿ ವಾಸ ಮಾಡಿದ ಸೀತೆಯನ್ನು ದೂಷಿಸುತ್ತಾನೆ. ಲಕ್ಷ್ಮಣನನ್ನು ಪೌರುಷ ವಾಕ್ಯಗಳಿಂದ ಕಳುಹಿಸಿ ಏಕಾಕಿಯಾಗಿ ಇಂಥ ಗಂಡಾಂತರವನ್ನು ತಂದುಕೊಂಡು ಅಪವಾದಕ್ಕೆ ಆಸ್ಪದ ಮಾಡಿಕೊಟ್ಟು ಎಲ್ಲ ಕಷ್ಟಗಳಿಗೆ ಕಾರಣಳಾದಳೆಂದು ಅವನ ಸಿಟ್ಟಿನ ವಿವರಣೆಯನ್ನು ಕೊಡುವದುಂಟು. "ಆದಿಕವಿ ವಾಲ್ಮೀಕಿ" ಗ್ರಂಥದಲ್ಲಿ ಶ್ರೀ ಮಾಸ್ತಿ ವೆಂಕಟೇಶ ಅಯ್ಯಂಗಾರರು "ಅಗ್ನಿಪ್ರವೇಶ ವಿಚಾರ" (ಪುಟ ೧೨೫-೧೩೨) ಎಂಬ ಭಾಗದಲ್ಲಿ ಈ ವಿಷಯ ವಿಚಾರ ಮಾಡಿದ್ದಾರೆ. "ಅಗ್ನಿಯನ್ನು ಹೊಕ್ಕದ್ದು ಸೀತೆ ಮಾತ್ರವಲ್ಲ, ಅವಳ ಜೊತೆಯಲ್ಲಿ ರಾಮನೂ ಒಂದು ಅಗ್ನಿಯನ್ನು ಹೊಕ್ಕನು. ಅವಳು ಬದುಕಿಕೊಂಡಾಗ, ಅವನೂ ಬದುಕಿಕೊಂಡನು. ಆ ಎರಡು ಮನಸ್ಸು, ಎರಡು ಜೀವ ಹೀಗೆ ಒಂದಾಗಿದ್ದದ್ದರಿಂದಲೇ ಸ್ವಲ್ಪ ಹೊತ್ತು ಕವಲೊಡೆದು ಮತ್ತೆ ಕ್ರೋಧವಿಲ್ಲದೆ ಬೆರೆತದ್ದು" ಎಂದು ಅವರು ಹೇಳುತ್ತಾರೆ. ಆದರೂ ರಾಮನು ಕ್ರೋಧದ ಕೈಗೆ ಬುದ್ಧಿ ಕೊಟ್ಟು "ಜಾನಕಿ, ನೀನು ಹತ್ತು ದಿಕ್ಕುಗಳಲ್ಲಿ ಯಾವ ಕಡೆ ಬೇಕಾದರೂ ಹೋಗು. ನಿನ್ನಲ್ಲಿ ನನಗೇನೂ ಕೆಲಸವಿಲ್ಲ. ಸುಗ್ರೀವ, ವಿಭೀಷಣ ಯಾರಲ್ಲಿಯಾದರೂ ಮನಸ್ಸನ್ನಿರಿಸಿ ಸುಖದಿಂದಿರು" ಎಂದು ಹೇಳುವದು ಅತಿ ಹೆಚ್ಚಾದ ಮಾತುಗಳೆಂದು ಕಾಣುತ್ತದೆ. ಈ ಮಾತುಗಳು ಪ್ರಕ್ಷಿಪ್ತವಾಗಿದ್ದರೂ ಇದ್ದಿರಬಹುದು. ಸೀತೆಯ ಉತ್ತರವು ಗಂಭೀರವಾಗಿ ಗೌರವಪೂರ್ಣವಾಗಿದೆ. "ನಾನು ಅಸಹಾಯಳಾಗಿದ್ದಾಗ ಪರಪುರುಷ ಸ್ಪರ್ಶವಾದರೆ ಅದಕ್ಕೆ ನಾನು ಹೊಣೆಯಲ್ಲ. ನೀನು ಮೊದಲೇ ನನ್ನನ್ನು ತ್ಯಜಿಸಿದ್ದರೆ ನಾನು ಜೀವಿತವನ್ನೇ ತ್ಯಜಿಸುತ್ತಿದ್ದೆನು. ಲಕ್ಷ್ಮಣಾ, ಈ ವ್ಯಸನಕ್ಕೆ ಔಷಧರೂಪವಾದ ಚಿತೆಯನ್ನು ಸಿದ್ಧಗೊಳಿಸು. ಮಿಥ್ಯಾಪವಾದದಿಂದ ನಾನು ಜೀವಿಸಲು ಇಚ್ಛಿಸುವದಿಲ್ಲ."

ಭವಭೂತಿಯು 'ಉತ್ತರರಾಮ ಚರಿತ'ದ ಎರಡನೇ ಅಂಕದಲ್ಲಿ ವಾಸಂತಿಯ ಬಾಯಿಂದ "ವಜ್ರಾದಪಿ ಕಠೋರಾಣಿ ಮೃದೂನಿ ಕುಸುಮಾದಪಿ ಲೋಕೋತ್ತರಾಣಾಂ ಚೇತಾಂಸಿ ಕೋನು ವಿಜ್ಞಾತುಮರ್ಹತಿ" ಎಂದು ರಾಮನ ಪಾತ್ರದ ವಿವರಣೆಯನ್ನು ಕೊಟ್ಟಿರುವನು.

ಅವರನ್ನು ಲೋಕೋತ್ತರ ಪಾತ್ರಗಳಾಗಿ ಕಂಡು ಸಹಜಭಾವಸ್ಪಂದನವನ್ನು ಮಿಡಿದಿರುವ ವಾಲ್ಮೀಕಿ ಋಷಿಯ ಸೀತಾರಾಮಪ್ರಣಯ ನಿರೂಪಣೆಯೂ ಲೋಕೋತ್ತರವಾಗಿಯೇ ಇದೆಯೆಂಬುದು ವೇದ್ಯವಾಗದಿರಲಾರದು. *



ಶ್ರೀಮತಿ ಜಯಲಕ್ಷ್ಮಿ ಶ್ರೀನಿವಾಸನ್
ಬೆಂಗಳೂರು

# ತೌರುಮನೆ

ನಾಲ್ಕು ವರುಷಗಳ ನಂತರ ಅವಳು ತವರಿಗೆ ಬಂದಳು; ತುಂಬ ಉತ್ಸಾಹದಿಂದಲೇ ಬಂದಳು. ತಂಗಿಯ ಮದುವೆಗೆ ಬರಲಾಗದ್ದರಿಂದ ಇದ್ದೊಬ್ಬ ಅಣ್ಣನ ಮದುವೆಗಾದರೂ ಬರುವ; ತಂದೆ-ತಾಯಿ, ತಂಗಿ ಎಲ್ಲರನ್ನು ಕಂಡು ಕೆಲ ದಿನ ಆನಂದವಾಗಿರುವ ಎಂದು ಬಂದಳು. ಆದರೆ ಅವಳಿಗೆ ನಿಲ್ಲಲು ಆಗಲೇ ಇಲ್ಲ. ಅದೇಕೆ ಎಂಬುದನ್ನು ಅರಿಯುವ ಕುತೂಹಲವಿದ್ದರೆ ಈ ಕಥೆ ಓದಬೇಕು.

ಬಾಂ, ಬಾಂ ಎಂದು ಸ್ಟೇಷನದಿಂದ ಟ್ಯಾಕ್ಸಿಯು ಹೊರಟಿತು. ತೌರುಮನೆಗೆ ಹೋಗುವ ಉತ್ಸಾಹ ದಿಂದಲೂ, ತನ್ನ ಎಳೆತನ ಕಳೆದ ವಾತಾವರಣದ ಇಂಪಿನ ಸ್ಪರ್ಶದಿಂದಲೂ ಪರವಶಳಾದಳು ಗೌರಿ.

ಸ್ಟೇಷನಿಗೆ ಅವಳಅಣ್ಣ ನಾಗರಾಜ ಬಂದಿದ್ದ. ತುಂಬು ಚೆಲುವೂ, ಅದರಲ್ಲಿ ಮಿಳಿತವಾದ ನವ-ನಾಗರಿಕ ವೈಖರಿಯ ಉಡುಗೆ ತೊಡಗೆಯೂ.... ಆಹಾಹಾ! ತನ್ನ ನೆಚ್ಚಿನ ತಂಗಿಯ ಸೊಬಗನ್ನು ಕಂಡು ಬೆರಗಾದನು ನಾಗರಾಜ. ಹೌದು ಅವನು ಅವಳನ್ನು ನೋಡಿ ನಾಲ್ಕು ವರ್ಷವಾಗಿತ್ತು. ಮದುವೆಯಾಗಿ ಗಂಡನ ಮನೆಗೆ ಹೋದ ಗೌರಿ ಈಗ ತಾನೇ ಮೊಟ್ಟಮೊದಲು ತೌರುಮನೆಗೆ ಮರಳಿ ಬರುತ್ತಿದ್ದಾಳೆ. ತಂಗಿ ಸೀತೆಯ ಮದುವೆಗೆ ಕೂಡ ಹೋಗಲಿಲ್ಲ. ಅಣ್ಣನ ಮದುವೆಗಾದರೂ ಹೋಗಿ ಬರಬೇಕು.... ಎಂಬ ಮನದಾಸೆಯು ಅವಳ ಹೃದಯಾಂತರಾಳದಲ್ಲಿ ಮೊಳೆತು ಪೀಡಿಸುತ್ತಿರುವುದನ್ನು ಅರಿತ ಅವಳ ಗಂಡ, ದಫೇದಾರ ಗಂಗನನ್ನು ಜೊತೆ ಸೇರಿಸಿ ಅವಳನ್ನು ತೌರುಮನೆಗೆ ಕಳುಹಿಸಿಕೊಟ್ಟರು.

ಅಣ್ಣನು ಕೈಹಿಡಿಯುವ ಹುಡುಗಿ ತಮ್ಮೂರಿನವಳೇ "ಅಣ್ಣಾ, ಪ್ರೇಮವಿವಾಹವನ್ನು ನೀನೇ ನಿಶ್ಚಯ ಮಾಡಿಕೊಂಡಂತಿದೆ!... ಕಾಮಾಕ್ಷಿಯ ಕಟಾಕ್ಷಕ್ಕೆ ನೀನು ಎಂದು ಸಿಲುಕಿಬಿದ್ದೆ?..." ಎಂದೆಲ್ಲಾ ಅಣ್ಣನನ್ನು ಪರಿಹಾಸ್ಯಮಾಡಬೇಕೆಂದು ದಾರಿಯುದ್ದಕ್ಕೂ ಸವಿಗನಸುಗಳಲ್ಲಿ ತಲ್ಲೀನಳಾಗಿದ್ದ ಗೌರಿ. ಈಗ ಸ್ಟೇಷನದಲ್ಲಿ ಅಣ್ಣನನ್ನು ಕಂಡೊಡನೆ ಮೌನವಾಗಿ ನಿಂತಿರುವುದೇಕೆ? ಅಷ್ಟು ದಿನಗಳ ಬಳಿಕ ಅಣ್ಣನನ್ನು ಮರಳಿ ಸಂಧಿಸಿದ ಆನಂದಪ್ರಭಾವದಿಂದಲೋ ಅಥವಾ ಬಹಳ ದಿನದ ಅಗಲಿಕೆಯ ಬಳಿಕ ಸಂಧಿಸಿದುದರಿಂದ ಏರ್ಪಟ್ಟಂತಹ ಒಂದು ರೀತಿಯ ಸಂಕೋಚದಿಂದಲೋ.... ಕಾಣೆ!.... ಅವಳ ಬಾಯಿಂದ ಮಾತು ಹೊರಡದಂತಾಯಿತು. ಅವಳ ಅತಿಶಯವಾದ ಮೌನವನ್ನು ಕಂಡ ರಾಜುವೂ ಕೂಡ "ಹರಟೇಮಲ್ಲಿ ಗೌರಿಯೇ ಇವಳು!" ಎಂದು ಆಚ್ಚರಿಗೊಂಡನು. ಅವನು ಮಾತ್ರವೇನು. "ಅಳಿಯಂದಿರು ಬರಲಿಲ್ಲವೇ ಗೌರಿ? ಎಂದು ಕೇಳಲು ಸಹ ತೋರದವನಾಗಿ ಭ್ರಮಿಸಿ ನಿಂತಿದ್ದನು. "ಮುದುಕನ ಕೈಹಿಡಿದರೂ ಕೂಡ ಥೋರಣೆಗೇನೂ ಕಡಿಮೆಯಿಲ್ಲ. ಒಳ್ಳೆಯ ಅದೃಷ್ಟಶಾಲಿ ಗೌರೀ!" ಎಂಬ ಅಸೂಯೆಯು ಅವನ ಮನಸ್ಸಿನಲ್ಲಿ ಲೇಸಾಗಿ ಪಸರಿಸಿತು.

ದಫೇದಾರ್ ಗಂಗ ಡಬ್ಬಿಯಿಂದ ಸಾಮಾನುಗಳನ್ನು ಕೆಳಗಿಳಿಸಿಟ್ಟ. ಆ ವೇಳೆಗೆ ರಾಜು ಒಂದು ಟ್ಯಾಕ್ಸೀ ಗೊತ್ತುಮಾಡಿದ. ದಫೇದಾರ್ ಕೂಲಿಯವನ ಸಹಾಯದಿಂದ ಟ್ಯಾಕ್ಸಿಯಲ್ಲಿ ಸಾಮಾನುಗಳನ್ನು ತಂದಿರಿಸಲು, ಮೂವ್ವರೂ ಗಾಡಿಯನ್ನು ಹತ್ತಿ ಕುಳಿತರು. ಆ ಕೂಡಲೇ ಅದು ವಾಯುವೇಗವಾಗಿ ಓಡಲಾರಂಭಿಸಿತು.

ಆ ಟ್ಯಾಕ್ಸಿಯು ಚಂದ್ರಶೇಖರರಾಯರ ಮನೆಯ ಮುಂದೆ ನಿಂತಿತು. ಗಾಡಿಯಿಂದ ಇಳಿದುಬಂದ ಗೌರಿಯು ಮನೆಯೊಳಗೆ ಹೊಕ್ಕು ತಾಯಿತಂದೆಯವರಿಗೆ ಸಾಷ್ಟಾಂಗವಾಗಿ ನಮಸ್ಕರಿಸಿ, ಎದ್ದಳು. "ಬಾ, ತಾಯೀ. ಅಳಿಯಂದಿರು ಬರಲಿಲ್ಲವೇನಮ್ಮ?" ಎಂದು ತಂದೆ ಮಗಳನ್ನು ಆದರದಿಂದ ಕೇಳಿದರು.

"ಅವರಿಗೆ ರಜ ಸಿಗಬೇಕಲ್ಲಾ, ಅಪ್ಪಾ" ಎಂದಳು ಗೌರೀ ನಮ್ರತೆಯಿಂದ.

ಆಗ ಒಳನುಗ್ಗಿದ ನಾಗರಾಜ "ಅವರಿಗೆ ಈ ಮುದಿವಯಸ್ಸಿನಲ್ಲೂ ಕೂಡ ಉದ್ಯೋಗದ ಮೇಲಿನ ಚಪಲ ಕಡಿಮೆಯಿಲ್ಲ. ನಾಲ್ಕು ದಿನ ರಜ ತೆಗೆದುಕೊಂಡು ಬಂದರೇನಂತೆ, ಮುಳುಗಿ ಹೋದುದು?" ಎಂದು ವ್ಯಂಗವಾಗಿ ನುಡಿದನು. ಗೌರಿ ಮುಖ ಚಿಕ್ಕದು ಮಾಡಿಕೊಂಡಳು. ರಾಯರು ಮಗನನ್ನು ದುರುಗುಟ್ಟಿ ನೋಡಲು, ನಾಗರಾಜ ತನ್ನ ರೂಮಿಗೆ ಹೊರಟುಹೋದನು. ದಫೇದಾರ್ ಗಂಗ ತಂದಿರಿಸಿದ ಹಣ್ಣುಹಂಪಲು-ತಿಂಡಿತಿನಿಸುಗಳ ಬುಟ್ಟಿಗಳಿಂದ ಘಮಘಮ ವಾಸನೆ ಬಂದಿತು. "ಅಮ್ಮಾ ಗೌರಕ್ಕ ನಮಗೆ ಇಷ್ಟೊಂದು ತಿಂಡೀ, ಇಷ್ಟೊಂದು ಹಣ್ಣೂ ಎಲ್ಲ ತಂದಿದ್ದಾಳೆ!" ಎಂದು ಪುಟಾಣಿಕೈಗಳನ್ನು ಅಷ್ಟಗಲಚಾಚಿ ತೋರಿಸುತ್ತ ಆನಂದದಿಂದ ಕುಣಿದಾಡಿದಳು ರಮಾ. ಬಾಲಕಿಯನ್ನು ಬಾಚಿ ಅಪ್ಪಿಕೊಂಡು ಗೌರೀ "ಅಮ್ಮಾ ರಮಾ ಈಗಾಗಲೇ ಅದೆಷ್ಟು ಎತ್ತರ ಬೆಳೆದುಬಿಟ್ಟಾಳಮ್ಮಾ! ನನಗೆ ಮೊದಲು ಇವಳ ಗುರುತೇ ಸಿಗಲಿಲ್ಲಾ!" ಎಂದು ಅಚ್ಚರಿಗೊಂಡಳು.

"ಹೌದು, ಗೌರಾ! ನೀನವಳನ್ನು ನೋಡಿ ನಾಲ್ಕು ವರ್ಷವಾಗಲಿಲ್ಲವೇ. ಅವಳಿನ್ನೂ ಪುಟ್ಟ ಮಗುವಾಗಿಯೇ ಇರುವಳೇನು?" ಎಂದಂದಳು ತಾಯಿ ಭಾಗೀರಥಿ.

ಅಮ್ಮನ ಕಂಕುಳಲ್ಲಿ ಇದ್ದ ಮಗುವನ್ನು ಕಂಡ ಗೌರಿ "ಸೀತನ ಮಗುವೇನಮ್ಮ ಇದು? ಬಹಳ ಮುದ್ದಾಗಿದೆ. ಬಾ, ಪಾಪಾ." ಎಂದು ಆಸೆಯಿಂದ ಕರೆದಳು ಮಗುವನ್ನು.

ಭಾಗೀರಥಿ ತಲೆತಗ್ಗಿಸಿಕೊಂಡು "ಇಲ್ಲ, ಗೌರಾ, ಸೀತನ ಮಗು ಇನ್ನೂ ಸಣ್ಣದು" ಎಂದಂದಳು.

"ನಿನ್ನ ಅಕ್ಕಾ ಕಣೋ ಮುರಳೀ! ಹೋಗು ಅವಳ ಹತ್ತರ" ಎಂದರು ತಂದೆ ಹುಸಿನಗೆಯಿಂದ

"ಓಹೋ! ನನ್ನ ಪುಟ್ಟ ತಮ್ಮನೇ ಇವನು! ಯಾಕಮ್ಮಾ ಇಷ್ಟು ದಿವಸ ನನಗೆ ತಿಳಿಸಲೇ ಇಲ್ಲ?" ಎಂದು ವಿಸ್ಮಯದಿಂದ ನುಡಿದಳು ಗೌರಿ. ಮಗುವನ್ನು ವಾತ್ಸಲ್ಯದಿಂದ ಬಾಚಿ ತಬ್ಬಿ ಮುದ್ದಾಡಿದಳು. ಗೌರಿಗೆ ಚಿಕ್ಕಂದಿನಿಂದಲೂ ಮಕ್ಕಳೆಂದರೆ ಬಹಳ ಮಮತೆ. ಆದರವಳ ನೀರಸ ಜೀವನದಲ್ಲಿ ಅವಳಿಗೆಲ್ಲಿ ಇಂತಹ ಅದೃಷ್ಟ? ತಾಯ್ತನದ ತುಂಬು ವಾತ್ಸಲ್ಯವು ಅವಳ ಹೃದಯಾಂತರಾಳದಿಂದ ಹೊಮ್ಮಿ ಸುರಿಯಿತು. ಆ ಪ್ರೇಮಸುಧೆಯನ್ನು ಮಗುವಿನ ಮೇಲೆ ವರ್ಷಿಸಿ ಮನದಣಿದಳು ಗೌರಿ. ಆದರೆ, ಮಗು ಹೊಸ ಮುಖವನ್ನು ಕಂಡು ಅಳತೊಡಗಿತು. ಅವನನ್ನು ಅವನ ತಾಯ ಕೈಯಲ್ಲಿ ಮತ್ತೆ ಕೊಟ್ಟು "ಅಮ್ಮಾ! ಸೀತನ್ನ ನೋಡಬೇಡವೆ?" ಎಂದು ಪಕ್ಕದ ಕೊಠಡಿಗೆ ನಡೆದಳು.

ಒಳಗೆ ಬಂದ ಅಕ್ಕನನ್ನು "ಬಾ, ಅಕ್ಕಾ!" ಎಂದು ಬರಮಾಡಿಕೊಂಡು ಮಂಚದ ಮೇಲೆ ಕುಳ್ಳಿರಿಸಿಕೊಂಡಳು ಸೀತಾ. ನಾಲ್ಕು ವರ್ಷಗಳ ಬಳಿಕ ಒಟ್ಟುಗೂಡಿದ ಅಕ್ಕ-ತಂಗಿಯರ ನಡುವೆ ಮಾತಿಗೇನು ಕಡಿಮೆ?

"ಅಕ್ಕಾ, ಕೊನೆಗೆ ಭಾವ ದೊಡ್ಡ ಮನಸ್ಸು ಮಾಡಿ ನಿನ್ನನ್ನು ಕಳುಹಿಸಿಕೊಟ್ಟರಲ್ಲಾ! ನಮಗಿರುವುದು ಒಬ್ಬ ಅಣ್ಣ, ಅವನ ಮದುವೆಗೆ ಅವರು ಬರದಿದ್ದರೂ ನಿನ್ನನ್ನಾದರೂ ಕಳುಹಿಸಿಕೊಟ್ಟರಲ್ಲಾ" ಎಂದಳು ಸೀತೆ.

ಆಗ ಒಳಬಂದ ರಾಜೂ "ಏನಂದರೂ ಅವರು ದೊಡ್ಡ ಆಫೀಸರಲ್ಲವೇ? ನಮ್ಮ ಮನೆಗೆ ತಮ್ಮ ಹೆಂಡತಿಯನ್ನು ಕಳುಹುವದೆಂದರೆ ಅವರಿಗೆ ಅಗೌರವವಲ್ಲವೇ" ಎಂದು ಕಣ್ಣನ್ನು ಮಿಟಿಕಿಸಿದ. ಅವನನ್ನು ಹಿಂಬಾಲಿಸಿಬಂದ ಭಾಗೀರಥಿ "ಏನೋ ಮಾತು, ನಿನ್ನದು! ಪಾಪ, ಗೌರಾ, ಬಂದವಳು ಇನ್ನೂ ಮುಖತೊಳೆದು, ಒಂದು ಗುಟುಕು ಕಾಫಿ ಸಹ ಕುಡಿದಿಲ್ಲ. ಮುಂಚೆ ಮುಖತೊಳೆದು, ಸ್ನಾನಮುಗಿಸಿಕೊಂಡು ಬಾ ತಾಯಿ! ಕಾಫೀ ಕುಡಿದ ಬಳಿಕ ಮಿಕ್ಕಮಾತೆಲ್ಲ" ಎಂದು ಮಗಳನ್ನು ಅವಸರ ಮಾಡಿದಳು.

ಅಷ್ಟರೊಳಗಾಗಿ ಸೀತೆ "ಅಮ್ಮಾ. ಅಕ್ಕನ ಕೊರಳನ್ನು ನೋಡೆ! ಹೊಸದಾಗಿ ವಜ್ರದ ನೆಕ್

ಲೇಸ್ ಮಾಡಿಸಿಕೊಂಡಿದ್ದಾಳೆ! ಅದು ಹೇಗೆ ಜ್ವಲಿಸುತ್ತಿದೆ ನೋಡು!'' ಎಂದಳು.

''ಮತ್ತೆ ಅವಳೇನು, ನಿನ್ನಂತೆ ಬಡಲೆಕ್ಚರರ ಹೆಂಡತಿಯೇನು? ಕರೀಮಣಿ ಸರದೊಡನೆ ಕಟ್ಟಿಕೊಳ್ಳಿರಲು!'' ಎಂದಳು ಮಗುವಿನ ತೊಟ್ಟಿಲನ್ನು ತೂಗುತ್ತ, ಭಾಗೀರತಿಯ ತಂಗಿ ಸಾತಿ.

ಈ ಮಾತು ಕೇಳಿ ಗೌರಿಗೆ ದುಃಖ ಉಕ್ಕಿ ಬಂತು. ಸಾತಿಯನ್ನು ಮಾತನಾಡಿಸಲೇ ಇಲ್ಲ. ನೆಟ್ಟಗೆ ಬಚ್ಚಲು ಮನೆಯ ದಾರಿಹಿಡಿದಳು.

ಆ ನಾಲ್ಕು ವರ್ಷಗಳ ಬಳಿಕ ಅವಳೇಕೆ ತೌರು ಮನೆಗೆ ಅಷ್ಟೊಂದು ಆಗ್ರಹದಿಂದ......ಆಸೆ ಆಸೆಯಾಗಿ ಬಂದಳು? ನೆಂಟರಿಷ್ಟರೊಡನೆ ಉಲ್ಲಾಸವಾಗಿ ನಾಲ್ಕು ಪ್ರೀತಿಯ ಮಾತುಗಳನ್ನಾಡಿ ಹೋಗಲು. ಆದರೆ......ಆದರೆ ಅವಳು ಇಲ್ಲಿ ಕಂಡದ್ದೇನು? ಅಸೂಯೆಯನ್ನೂ ಅಹಂಕಾರವನ್ನೂ ಮಾತ್ರ. ತಾನು ಇವರುಗಳೆಲ್ಲರ ಕ್ಷೇಮಕ್ಕಾಗಿ ಅಲ್ಲವೇ ಮುದುಕನಿಗೆ ಬಲಿಯಾದದ್ದು!.... ಈಗ ಅವರೆಲ್ಲ ತನ್ನನ್ನು ಕಂಡು ಅಸೂಯೆಪಡುವುದೇಕೆ? ವಿಷಯ ಬಗೆಹರಿಯದೆ ಪೇಚಾಡಿದಳು ಗೌರೀ.

ಸೀತೆಗೆ ಮಾತ್ರ ಏನು ಕಡಿಮೆ? ''ಕೈ ನೆರೆದ ಗಂಡನಿಗಿಂತ ಕಣ್ಣಿಗೆ ಹಬ್ಬವಾದ ಗಂಡನನ್ನು ಪಡೆದ ಅವಳಲ್ಲವೇ ಅದೃಷ್ಟಶಾಲಿನಿ! ಹೆಂಗಸರೇ ಹೀಗೆ ಅಸೂಯೆಪಡುವವರು ಅಂದರೆ...... ಈ ಅಣ್ಣ ಕೂಡ ಹೀಗೆ! ರಾಮ, ರಾಮಾ!......'' ಎಂದು ಪೇಚಾಡಿಕೊಂಡಳು ಗೌರೀ.

ತಾನು ಅಂದುಕೊಂಡು ಬಂದ ಕುತೂಹಲಯುಕ್ತವಾದ ಸುಖಾಗಮನವೂ ಆನಂದವೂ ಅವಳಿಗೆ ಇಲ್ಲಿ ಕಾದಿರಲಿಲ್ಲ. ಈ ಅರ್ಧಗಂಟೆಯ ಬಾಳ್ವೆಯೇ ಅವಳಿಗೆ ಬೇಸರವಾಯಿತು. ತಾನು ಇಷ್ಟುದಿನ ಶೂನ್ಯಬಾಳ್ವೆಯೆಂದು ತಿಳಿದಿದ್ದ ಗಂಡನ ಮನೆಯ ಬದುಕೇ ಇದೀಗ ಅವಳಿಗೆ ಸ್ವರ್ಗಭೋಗವಾಗಿ ತೋರಿತು. ಆ ನಾಲ್ಕು ವರ್ಷ ಕಾಲವೂ ಅವಳನ್ನು ಒಂದುಸಲವಾದರೂ ಕೋಪಿಸಿಕೊಂಡದ್ದು ಉಂಟೇ ಅವಳ ಪ್ರಾಣನಾಥ! ಅವರು ಒಳ್ಳೆಯವರು! ಚಿನ್ನದಂತಹ ಸ್ವಭಾವ, ನಾಥ... ನಾಥ! ತನ್ನ ಪ್ರಾಣನಾಥ, ಆ ಪುನೀತಪದವಿಗೆ ಅದೆಷ್ಟು ಮಹಿಮೆ! ತನ್ನ ಪ್ರೇಮಮೂರ್ತಿಯಾದ ಪತಿಯನ್ನು ಅವಳು ಈಗ ಎಂದೂ ಇಲ್ಲದಷ್ಟು ಪ್ರೀತಿಸಿದಳು. ಹಿಂದೂರಮಣಿಯಾದವಳು ತಾನು ಅರಿತೋ ಅರಿಯದೆಯೋ ಕೈಹಿಡಿದು ಮಾಲೆಹಾಕಿದ ಪ್ರಾಣನಾಥನನ್ನು ಕುರಿತು ಯಾರೇ ಆಗಲಿ ಸಾಸುವೇಕಾಳಷ್ಟು ನಿಂದಿಸಿದರೂ ಕೂಡ ಸಹಿಸಳು!

ಹೌದು!......ಅದೊಂದು ಕಾಲ. ಆಗ ಅವಳ ತಂದೆಯು ಅವಳಿಗೆಂದು ನಿಷ್ಕರಿಸಿದ ವರನನ್ನು ಅವಳು ಕಟುವಾಗಿ ದ್ವೇಷಿಸಿದ ದಿನ ಉಂಟು. ಆದರೆ...ಆದರೆ ಆತನಿಗೆ ಮಾಲೆಹಾಕಿ ತನ್ನ ಬಾಳ್ವೆಯ ಬೆಳಕೆಂದು ಸ್ವೀಕರಿಸಿದ ಬಳಿಕ, ಆ ಅಮೂಲ್ಯವಾದ ಬೊಕ್ಕಸವನ್ನು ಕುರಿತ ನಿಂದನೆಯನ್ನು ಅವಳು ಸಹಿಸಬಲ್ಲಳೇ? ಹೌದು...... ...ಅವಳ ಪ್ರಾಣನಾಥನು ಭಾರೀ ಉದ್ಯೋಗಸ್ಥರೇ ...ಆ ವಿಷಯದಲ್ಲಿ ಅವಳು ತಂಗೀ ಸೀತೆಗಿಂತ ಅದೃಷ್ಟಶಾಲಿನಿಯೇ. ಆದರೆ ಅವಳ ಗಂಡ ಹರೆಯದವನಲ್ಲ. ಯೌವನದ ಮನೋಹರವಾದ ಸವಿಯನ್ನು ಅದೇ ತಾನೇ ಸವಿಯಲು ಉಪಕ್ರಮಿಸಿರುವ ಮನ್ಮಥನನ್ನು ಪಡೆದಿರುವ ಸೀತೆ ಭಾಗ್ಯವಂತಳೇ...ಅಥವಾ ಒಣಗಿಹೋದ ಮರವು ಪುನಃ ಚಿಗುರಲು ಯತ್ನಿಸುವಂತಹ ಗಂಡನನ್ನು ಪಡೆದ ಗೌರಿ ಭಾಗ್ಯವಂತಳೇ, ನೀವೇ ಹೇಳಿ. ಆದರೆ ಹೆಂಡತಿಯಾದವಳಿಗೆ ಗಂಡನಾದವನು ಯೌವನಪ್ರಾಯದವನೇ ಆಗಲೀ, ಅರುವತ್ತು ವರ್ಷದ ಮುದುಕನೇ ಆಗಲೀ, ಅಮೂಲ್ಯ ನಿಧಿಯೇ.

ಗೌರಿಯ ಮನಸ್ಸು ತಳಮಳಿಸಿತು. ಮುಖ ತೊಳೆದು ಸ್ನಾನ ಮುಗಿಸಿಕೊಂಡು ಅಡಿಗೆಯ ಮನೆಗೆ ಬಂದಳು. ಅಮ್ಮ ಕೊಟ್ಟ ಕಾಫಿಯನ್ನು ಕುಡಿದು, ಬಳಿಕ ಅಮ್ಮನಿಗೆ ಅಡಿಗೆಯ ಕೆಲಸದಲ್ಲಿ ನೆರವಾದಳು. ಮಗಳ ಮೌನವ್ರತವನ್ನು ಕಂಡು ತಾಯಿಗೆ ಪರಮಾಶ್ಚರ್ಯವಾಯಿತು. ದಿನ ಬೆಳಗಾದರೆ ರೇಡಿಯೋವಿಗೆ ಸ್ವಿಚ್ ಹಾಕಿದಂತೆ ಸದಾ ಲೊಟಗುಟ್ಟುತ್ತಿದ್ದ ಗೌರಿಯೇ ಇವಳು! ಈ ಹೆಣ್ಣುಮಕ್ಕಳೇ ಹೀಗೆ! ಮದುವೆಯಾಗಿ ಮನೆ, ಮಠ, ಯಜಮಾನರು ಎಂಬ ಹೊಣೆಗಾರಿಕೆಯನ್ನು ವಹಿಸಿಬಿಟ್ಟರೆ ತನ್ನಷ್ಟಕ್ಕೆ ಮಾತಿನಲ್ಲಿ ಒಂದು ಒಕ್ಕಣೆ, ನಡತೆಯಲ್ಲೊಂದು ಭವ್ಯತೆ, ಸ್ವೈರಣೆ ಎಲ್ಲ ತಿಳಿದುಹೋಗುತ್ತೆ'' ಎಂದು ಹಿರಿಹಿರಿ ಹಿಗ್ಗಿದಳು ಭಾಗೀರತಿ. ಮದುವೆಗೆ ಮುಂಚೆ ಭಾಗೀರತಿ '' ಗೌರೀ ಕೊಂಚ ಊಟದ ಮನೆ ಗುಡಿಸಿಕೊಟ್ಟು ಹೋಗೇ...... '' ಎಂದು ಏನಾದರೂ ಕೆಲಸ ಹೇಳಿದರೆ '' ಹೋಗಮ್ಮ ನನ್ನ ಕೈಯಲ್ಲಾಗೋಲ್ಲ'' ಎಂದು ಓಡಿಹೋಗುತ್ತಿದ್ದಳು. ಈಗ ಬೇಡ ಬೇಡವೆಂದರೂ ಓಡಿ ಓಡಿ ಅಮ್ಮನಿಗೆ ಒತ್ತಾಸೆ ಮಾಡುತ್ತಿರುವಳಲ್ಲಾ ಎಂದು ಆಕೆಗೆ ಹಿಗ್ಗು.

''ಗೌರಾ, ಲಕ್ಷ್ಮಣರಾಯರ ಮಗಳು ಲಲಿತೆಗೆ ಮದುವೆಯಾಯಿತು! ಭೇಷಾದ ಗಂಡಸಿಕ್ಕಿದ್ದಾನೆ. ಒಂದು ಮಗು ಸಹ ಆಗಿದೆ.......ಕೃಷ್ಣ ಐಯ್ಯಂಗಾರ್ಯರ ಮಗಳು ಕನಕಳಿಗೆ ಅದೆಲ್ಲಿ ಗಂಡ ಹುಟ್ಟಿ ಬೆಳೆಯುತ್ತಿದ್ದಾನೋ ಕಾಣೆ....ಲೇ ಗೌರಾ! ಶಾಮಾಶಾಸ್ತ್ರಿಗಳ ಮಗ....ಆ ದಡ್ಡ ಹುಡುಗ ನಾಣಿಗೆ ಎಂತಹ ಅದೃಷ್ಟ ಬಂದಿದೆ ಗೊತ್ತೆ! ಇಂಜನೀಯರ್ ಪರೀಕ್ಷೆ ಪ್ಯಾಸಾಗಿ ಸ್ಕಾಲರ್‌ಷಿಪ್



ಹೊಡೆದು ಅಮೇರಿಕೆಗೆ ಹೋಗಿದ್ದಾನೆ ಕಣೇ!..." ಇಂಥಹ ಊರ ಸಂಗತಿಗಳನ್ನು ಮಗಳಿಗೆ ತಿಳಿಸುತ್ತ ಅಡಿಗೆಮಾಡಿ ಮುಗಿಸಿದಳು ಭಾಗೀರತಮ್ಮ. ಆದರೆ ಗೌರಿಯು ಹೃದಯ ಮೂಕವೇದನೆಯಿಂದ ತುಳುಕಿ ಸುತ್ತಿತ್ತೇ ಹೊರತಾಗಿ ಅಮ್ಮನ ವಿಚಾರಸ್ವರಣೆಗೆ ಅವಳ ಮನಸ್ಸು ಎಡೆಗೊಡಲಿಲ್ಲ.

ತಾಯಿ—ಮಗಳ ಮಾತಿನ ನಡುವೆ ಬಂದುಸೇರಿಕೊಂಡ ರಾಜು "ಅಮ್ಮಾ ಈ ಗೌರಿಗೆ ಅಷ್ಟರೊಳಗಾಗಿ ಗಂಡನ ಯೋಚನೆಹತ್ತಿದೆಯೆಂದು ತೋರುತ್ತೆ! ನಮ್ಮೊಡನೆಲ್ಲ ಮಾತನಾಡಲೇ ಇಲ್ಲವಲ್ಲ!....." ಎಂದು ಪರಿಹಾಸ್ಯ ಮಾಡಿದನು. ಭಾಗೀರತಮ್ಮ "ಹೌದಪ್ಪಾ ಹೌದು. ಈಗ ಅವಳನ್ನು ಹಾಸ್ಯಮಾಡುತ್ತೀ. ನಾಳೆ ನಿನ್ನ ಹೆಂಡತಿ ಬಂದರೆ ನೀನು ಹೇಗಿರುವೆಯೆಂದು ಅದನ್ನೂ ನೋಡುತ್ತೇನೆ" ಎಂದಳು.

"ಅತ್ತಿಗೆಯನ್ನು ಅರೆಕ್ಷಣ ಬಿಟ್ಟಿರಲಾರ ಅಣ್ಣ! ನಾನರಿಯೆನೇ...ಕಾಮೂ...ಕಾಮೂ..." ಎಂದು ಅವಳ ಸೆರಗನ್ನು ಹಿಡಿದುಕೊಂಡು ಸುತ್ತುತ್ತಾನಷ್ಟೆ! ನೋಡು ಬೇಕಾದರೆ!" ಎಂದಂದು..... "ಅಣ್ಣಾ, ಅವರಿಗೊಂದು ಟೆಲಿಗ್ರಾಂ ಕೊಟ್ಟುಬಿಟ್ಟರೆ ಒಳ್ಳೆಯದು. ಊರನ್ನು ತಲುಪಿದೊಡನೆಯೇ ಟೆಲಿಗ್ರಾಂ ಕೊಡಲು ಮರೆಯಬೇಡವೆಂದು ಒತ್ತಿ ಒತ್ತಿ ಹೇಳಿದರು ಪಾಪ. ಟೆಲಿಗ್ರಾಂನಲ್ಲಿ ಹಾಗೆಯೇ, ನಾನು ಶನಿವಾರ ಬೆಳಗಿನ ಗಾಡಿಯಲ್ಲಿ ಅಲ್ಲಿಗೆ ಬಂದು ಸೇರುತ್ತೇನೆಂದು ತಿಳಿಸಿಬಿಡು. ಸ್ಟೇಷನಿಗೆ ಕಾರು ಬರಬೇಡವೇ?" ಎಂದಳು ಗೌರಿ ನಾಚಿಕೊಂಡು.

ಭಾಗೀರತಿ "ಏನು ಗೌರಾ! ಅಪರೂಪವಾಗಿ ಬಂದವಳು ಒಂದುತಿಂಗಳಾದರೂ ಇದ್ದುಹೋಗಬೇಡವೇ. ಅಷ್ಟರೊಳಗಾಗಿ ಏನವಸರ?"

ಗೌರಿ, "ಶುಕ್ರವಾರ ಮದುವೆ. ನಾನು ಶನಿವಾರವಲ್ಲವೇ ಹೊರಡುವುದು? ನಾಲ್ಕು ದಿನಗಳು ಇದ್ದಹಾಗಾಯಿತಲ್ಲ"

ರಾಜು "ಅಮ್ಮಾ! ನಿನ್ನ ಅಳಿಯನಿಗೆ ಯೌವನ ತಿರುಗುತ್ತಿದೆ! ಅರೆಕ್ಷಣ ಹೆಂಡತಿಯನ್ನು ಬಿಟ್ಟಿರಲಾರರಂತೆ! ಅದೇ ಮದುವೆಯ ಮರುದಿನವೇ ಹೊರಟುಬರುವಂತೆ ಹೆಂಡತಿಗೆ ಅಪ್ಪಣೆ ಇತ್ತಿರುವಂತಿದೆ!"

ಒಳಗೆ ಬಂದು ತಪ್ಪಲೆಯಿಂದ ನೀರು ತೆಗೆದು ಕುಡಿಯುತ್ತ ಸೀತೆ "ಅಕ್ಕಾ, ಈಗ ಭಾವನವರಿಗೆ ತಲೆ ಪೂರ್ತಿ ನೆರೆತುಬಿಟ್ಟಿದೆಯೇ? ಇಲ್ಲ..... ಒಂದೆರಡು ಕಪ್ಪು ಕೂದಲು ಉಳಿದಿವೆಯೋ?" ಎಂದು ಕೀಟ್ಲೆಮಾಡಿದಳು.

ಭಾಗೂ "ಸಾಕೋ ನಿನ್ನ ಹಾಸ್ಯ, ಊಟಕ್ಕೇಳೋ. ಏನೇ ಇದು ಸೀತಾ! ಎಲೆ ಹಾಕಿದೆ. ಮಗು ಎಚ್ಚೆತ್ತೇಳುವುದರೊಳಗಾಗಿ ಊಟಮಾಡುವುದು ಬಿಟ್ಟು ಬರೀ ಹೊಟ್ಟೆಯಲ್ಲಿ ಬಾಣಂತಿ ನೀರು ಕುಡಿಯುತ್ತಾರೇನೆ!"

ಊಟಕ್ಕೆ ಬಂದು ಕುಳಿತ ಗೌರಿಯು ತಮ್ಮ ತುಂಟ ಸುಂದರು "ಇಲ್ಲವೆ......ಅಕ್ಕನೇ ಮತ್ತೆ ಪ್ರತಿನಿತ್ಯ ಅವರ ಕೂದಲಿಗೆ ಬಣ್ಣಹಚ್ಚಿ ಒಪ್ಪಮಾಡುತ್ತಾಳಂತೆ!" ಎಂದ.

ಗೌರಿಗಂತೂ ಕೋಪ ಒಂದು ಕಡೆ, ಅಳು ಒಂದು ಕಡೆ ಉಕ್ಕಿ ಬಂತು. ತುಟಿಗಳು ಮಾತನಾಡಬೇಕೆಂದು ಅದುರಿದುವು. ಆದರವಳಿಂದ ಮಾತನಾಡಲು ಆಗಲಿಲ್ಲ. ಕೈಗೆಲಸವನ್ನು ಅಷ್ಟಕ್ಕೇ ಬಿಟ್ಟು, ಅಲ್ಲಿಂದ ಎದ್ದು ದಡದಡನೆ ಹೊರಟು ಹೋದಳು.

"ಮಗುವನ್ನು ಯಾಕೋ ಹೀಗೆ ಆಳಿಗೊಂದು ಮಾತು ಸಿಕ್ಕಾಪಟ್ಟೆ ಅನ್ನುತ್ತೀರಿ. ನಾವು ಮಾಡಿದ ತಪ್ಪಿಗೆ ಅವಳೇನು ಮಾಡಿಯಾಳು?" ಎಂದು ಅಂಗಲಾಚಿದಳು ತಾಯಿ ಭಾಗೀರತಿ. ಏನೆಂದರೂ ಹೆತ್ತ ಕರುಳು, ಅಲ್ಲವೇ.

* * * *

ಚಿರಂಜೀವಿ ನಾಗರಾಜನ ಮದುವೆ ಸಾಂಗವಾಗಿ ನೆರವೇರಿತು. ಅಣ್ಣನಿಗೆ ಐನೂರು ರೂಪಾಯಿಗಳನ್ನು ಓದಿಸಿದಳೇ ವಿನಾ, ಗೌರಿಯು ಮದುವೆಯ ಆನಂದಕೋಲಾಹಲದಲ್ಲಿ ಮನಸಾರೆ ಭಾಗವಹಿಸಲಿಲ್ಲ. ಮದುವೆ ಬೇಗ ಮುಗಿದರೆ, ತಾನು ತನ್ನ ಸ್ವಂತಮನೆಯನ್ನು ಹೋಗಿ ತಲುಪಬಹುದಲ್ಲಾ ಎಂಬುದೊಂದೇ ಯೋಚನೆ ಅವಳಿಗೆ.

ಮದುವೆ ಮುಗಿದ ಮರುದಿನ ಬೆಳಿಗ್ಗೆಯೇ ತೌರುಮನೆಯಿಂದ ಗಂಡನಮನೆಗೆ ಹೊರಟೇ ಬಿಟ್ಟಳು ಆ ಮುದುಕನ ಹೆಂಡತಿ ಗೌರಿ.

# ಚಂದ್ರನಿಗೂ ಚಿಂತೆ

ಚಿಂತಾಮಗ್ನರಾದವರಿಗೂ ತನ್ನ ತಂಗದಿರಿನಿಂದ ಅಹ್ಲಾದ ನೀಡುವ ಚಂದ್ರ, ಪ್ರಣಯಿಗಳಿಗೆ ಬೆಳಕು ನೀಡುವ ಚಲುವ ಚಂದ್ರಾಮ, ಇಂದು ಮಾನವರಿಗೆ ಹೆದರಿದ್ದಾನೆ. ಅವರ ಆಕಾಶ ಬಾಣಗಳಿಂದ ತನಗೆ ಉಳಿಗಾಲವಿಲ್ಲ ಎಂದುಕೊಂಡಿದ್ದಾನೆ. ಮಾನವ ತನ್ನ ಚಿಂತೆಯನ್ನು ಆವನಿಗೆ ವರ್ಗಾಯಿಸಿ ತನ್ನ ಭಾರವನ್ನು ಸ್ವಲ್ಪ ಕಡಿಮೆ ಮಾಡಿಕೊಂಡಿದ್ದಾನೇನೊ! ಚಂದ್ರಮನ ಈ ಚಿಂತೆಯ ಒಂದು ಸೊಗಸಾದ ಕಲ್ಪನೆಯನ್ನು ಲೇಖಕರು ಇಲ್ಲಿ ನೀಡಿದ್ದಾರೆ.

( ಹರಟೆ )



ಬಿ. ಆರ್. ವಾಡಪ್ಪಿ
ಧಾರವಾಡ

ಮನೆಯ ಪರಿವಾರವೆಲ್ಲ ಪರಊರಿಗೆ ಹೋಗಿದ್ದರೆ ನನಗೆ ಪರಬ್ರಹ್ಮನನ್ನು ಪ್ರತ್ಯಕ್ಷ ಕಂಡಷ್ಟು ಆನಂದ! ಇಂದಿನ ದಿನಗಳಲ್ಲಿ ಚಿಂತೆ ಇಲ್ಲದೆ ಕುಳಿತುಕೊಳ್ಳುವದೆಂದರೆ ಸಾಮಾನ್ಯವೆ? ನಾನೋ ಅಂದು ಸಾಯಂಕಾಲ ಮನೆಗೆ ಬಂದಾಗ—ನನ್ನನ್ನು ಎದುರುಗೊಂಡು ಮಾತನಾಡಿಸುವ ಮಡದಿ—ತಮಗೆ ಬೇಕಾದ ವಸ್ತುಗಳನ್ನು ತಂದಿರುವೆನೋ ಇಲ್ಲವೊ ಎಂದು ಸುತ್ತುಗಟ್ಟಿ ದಾಳಿ ಮಾಡುವ ಮಕ್ಕಳು— ಯಾರೂ ಮನೆಯಲ್ಲಿರದಿರುವ ಸಮಾಧಾನ ಸಾಮಾನ್ಯವೆ? ಇಷ್ಟೇಕೆ? ಅಂದು ಊಟದ ಚಿಂತೆಯೂ ಕೂಡಾ ಇರಲಿಲ್ಲ— ಶನಿವಾರವಾದುದರಿಂದ. ಆಯಿತು ಹಾಲು ಹಣ್ಣು ಇತ್ಯಾದಿ ಇದ್ದರಾಯಿತಲ್ಲ ಅಷ್ಟು' ಸಾಕು!! ದೇಶದಲ್ಲಿ ಆಹಾರ ಪರಿಸ್ಥಿತಿ ಸುಧಾರಿಸುವವರೆಗೆ "ಇನ್ನು ರಾತ್ರಿ ಊಟ ಮಾಡುವದಿಲ್ಲ" ಎಂದು ವೀರಪ್ರತಿಜ್ಞೆ ಮಾಡಿ ಹಾಲು, ಹಣ್ಣು, ಸಾಧ್ಯವಾದಾಗ ಬ್ರೆಡ್ಡು (ತಾಜಾ) ಬೆಣ್ಣೆ— ಇಷ್ಟೇ ಸ್ವೀಕರಿಸುವಂತೆ ನಿಯಮ ಸಡಲಿಸಿದರಾಯಿತಲ್ಲಾ ಎಂದು ಮುಂತಾಗಿ ಯೋಚನೆ ಮಾಡುತ್ತ ಮನೆಯ ಮುಂಭಾಗದ ಕೈತೋಟದಲ್ಲಿ ಒಂದು ವಿರಾಮ ಕುರ್ಚಿಯನ್ನೆಳೆದುಕೊಂಡು ಮಂಡಿಸಿದೆ.

ಶಾಂತವಾದ ವಾತಾವರಣ, ಸುಳಿಯುತ್ತಿರುವ ಶರತ್ಕಾಲದ ಗಾಳಿ, ಗಾಳಿಗೆ ತೊನೆದಾಡುತ್ತಿರುವ ಗಿಡ, ಬಳ್ಳಿ, ಅದರಲ್ಲಿಯೂ ಒಬ್ಬರೇ ಕುಳಿತುಕೊಳ್ಳುವದೆಂದರೇನು? ಕಲ್ಪನಾ ವಿಲಾಸದ ನೌಕೆಯನ್ನು ಏರಿದಂತೆಯೇ ಸರಿ! ಕಲ್ಪನಾ ವಿಲಾಸವೆಂದೆನಲ್ಲ— ಅದು ಎಷ್ಟರ ಮಟ್ಟಿಗೆ ಇಂದಿನ ಜಂಜಾಟದ ದಿನಗಳಲ್ಲಿ ಸಿಕ್ಕಬಹುದು ಎಂದು ನಮ್ಮನ್ನೇ ನಾವು ಕೇಳಿಕೊಳ್ಳುವಂಥ ಮಾತು. ನೂರಾರು ಚಿಂತೆಗಳ ಜಾಳಿಗೆಯಲ್ಲಿ 'ಸೇತಿದೆ ಜೋತಿದೆ ಜೀವನ ಜೇಡ' ಎಂಬುವಂತಾಗಿದೆ ಈಗಿನ ನಮ್ಮ ಜೀವನ. ಮುಂಜಾವಿನಲ್ಲಿ ಎದ್ದು ಮೊದಲು ವೃತ್ತಪತ್ರದ ಮೇಲೆ ಕಣ್ಣಾಡಿಸಿದರೆ ಇದ್ದ ಉತ್ಸಾಹ ಅಲ್ಲಿಯೇ ಕುಗ್ಗಿ ಹೋಗುವಂತಹ ಸದ್ಯದ ಪರಿಸ್ಥಿತಿಗಳ ವಿವರಣೆ, ಕೈಯಲ್ಲಿ ಹಿಡಿದ ಕಪ್ಪುಚಹ ಅಲ್ಲಲ್ಲ ಚಹ ತುಂಬಿದ ಕಪ್ಪು (ಬೆಲ್ಲದ ನೀರು) ಇದ್ದಲ್ಲಿಯೇ ಆರಿ ಹೋಗುತ್ತಿದೆ. 'ಹಾಯ್ ದೇವಾ' ಎಂದು "ಇದ್ದಾಗ ಇದ್ದಾಂಗ ಅನಿಸಲೇ ಇಲ್ಲ" ಎಂಬ ಕವಿಯ ಸತ್ಯವಾಣಿಯನ್ನು ನೆನೆದುಕೊಳ್ಳಬೇಕಾಗುತ್ತದೆ. ಅರ್ಥ ಹೀನವಾದ ಮಾತುಗಳನ್ನಾಡುವ ಜನರೊಡನೆ ತಿರುಗಾಡಿ ಇದ್ದ ಬುದ್ಧಿ ಕಳೆದುಕೊಳ್ಳುವದಕ್ಕಿಂತ ಒಬ್ಬರೇ ಕುಳಿತುಕೊಂಡರೇನು ತಪ್ಪು? ಎಂದು ನನ್ನನ್ನೇ ನಾನು ಅನೇಕ ಸಲ ಕೇಳಿಕೊಂಡಿದ್ದೇನೆ.

'ಮಂದೀಗೊಡವಿ ನಿನಗೇನು ಮಗಳೇ ಮುನ್ನೋಡಿ ಹಂಜಿ ನೂಲಮ್ಮ' ಎಂಬುವ ಪುರಂದರ ದಾಸರ ನುಡಿ ನೆನಪಾಗಿ— 'ನಾವಾಯಿತು ನಮ್ಮ ಕಲ್ಪನೆಯಾಯಿತು' ಎಂದು ಸುಮ್ಮನೆ ಕುಳಿತುಕೊಳ್ಳುವವರಲ್ಲಿ ನಾನೊಬ್ಬನಾಗಿ ಬಿಟ್ಟಿದ್ದೇನೆ. ನಾವು ಸುಮ್ಮನೆ ಕುಳಿತರೆ ನಮ್ಮ ಮನಸ್ಸು ಸುಮ್ಮನೆ ಕುಳಿತುಕೊಳ್ಳಬೇಕಲ್ಲ? ಅದೋ ಮಿಂಚಿನ ವೇಗದಿಂದ ಸಪ್ತಲೋಕಗಳನ್ನು ಸುತ್ತಿ ಇರುವ ಇದ್ದ, ಇರಬಹುದಾದ ಸಂಗತಿಗಳನ್ನು ನಮ್ಮ ಅಂತಃಶ್ಚಕ್ಷುಗಳ ಮುಂದೆ ತಂದು ನಿಲ್ಲಿಸಬಲ್ಲದು. ಹೀಗೆ ಏನೋ ಯೋಚನೆ ಮಾಡುತ್ತ ಪೂರ್ವ ದಿಗಂತವನ್ನು ನೋಡಿದೆ. ಅಹಃ ಕೇಳುವದೇನು? ಬೆಳ್ಳಿಯ ಕಿರಣಗಳನ್ನು ಹರಡುತ್ತ, ನೀಲಾಕಾಶದಲ್ಲಿ ಕಂಗೊಳಿಸುವ ಚಂದ್ರನನ್ನು ಕಂಡಾಗ ನನ್ನ ಮನಸ್ಸು ಶಾಂತವಾಯಿತು! ಇಂದುಮಂಡಳವನ್ನು ಕಂಡು ಇಂದಿನ ಸಮಸ್ಯೆಗಳಾದರೂ ಮರೆಯೋಣವೆ? ಎಂದು ಕೊಂಕಮನಸ್ಸು ಕುಚೇಷ್ಟೆ ಮಾಡಿತಾದರೂ ಚಂದಿರನ ಚಲುವಾದ ಬಿಂಬವನ್ನು ಕಂಡು ಹಿರಿ ಹಿರಿ ಹಿಗ್ಗಿದ ಮನಸ್ಸು ಮತ್ತೆ ತನ್ನ ವಿಹಾರವನ್ನು ಪ್ರಾರಂಭಿಸಿತೆನ್ನಬೇಕು.

ಈ ಚಂದ್ರನಾದರೊ ದೇವತೆಗಳಲ್ಲೊಬ್ಬ; ಈತನನ್ನು ಹೊಗಳದ ಕವಿಯಿಲ್ಲ ಪುರಾಣಗಳಿಲ್ಲ, ಅಷ್ಟೇಕೆ? ಚಂದಿರ ನಮ್ಮ ಜೀವನದಲ್ಲಿಯೇ ಹಾಸುಹೊಕ್ಕಾಗಿದ್ದಾನೆ. ಮಗುವಾಗಿದ್ದಾಗಿನಿಂದ.

"ಚಂದಪ್ಪ ಚಂದಪ್ಪ ಚಾರೀಕಾಯಿ, ಬಟ್ಟಲ ತುಂಬ ಬಾರೀಕಾಯಿ" ಎಂದು ಕೈಮಾಡಿ ಕರೆದ ಮಗುವಿನ ಮುಗ್ಧ ಮನಸ್ಸು ಇನ್ನೊಮ್ಮೆ ಬರಬಾರದೇ ಎಂದು ಯಾರಿಗೆ ಅನಿಸಲಿಕ್ಕಿಲ್ಲ! ಇರಲಿ. ಈ ಚಂದ್ರನಿಗಾದರೂ ಚಿಂತೆ ತಪ್ಪಿದೆಯೆ? ಎಂದು ನಮ್ಮಂತಹ ಹಗುರುಮನಸ್ಸಿನ ಜನ ಪ್ರಶ್ನೆ ಹಾಕಬಹುದು. ಬುದ್ಧಿಪ್ರಧಾನವಾದ ಇಂದಿನ ಯುಗದಲ್ಲಿ ಭಾವನೆಗಳ ಸುವೇದನೆಯು ಕಡಿಮೆಯಾಗುವದೆಂದು ಹೇಳುವದುಂಟು.

'As Civilization advances, poetry almost necessarily declines' ಎಂಬುವ ಮಾತು ಈಗ ನಿಜವಾಗಹತ್ತಿದೆ. ಜಗತ್ತಿನ ಎಲ್ಲ

ಸಾಹಿತ್ಯದಲ್ಲಿ ಭದ್ರವಾದ ಸ್ಥಾನ ಹಿಡಿದು ಕುಳಿತ ಚಂದ್ರನು ಇಂದು ಕೇವಲ ಒಂದು ಗ್ರಹವಾಗಿದ್ದಾನೆ. ಅಲ್ಲಿ ಹೋಗಿ ನಾವು ಕೆಲವು ದಿನಗಳಲ್ಲಿ ನೆಲಿಸಲೂ ಬಲ್ಲೆವಂತೆ! ನಮ್ಮ ಮಕ್ಕಳೊ ಮೊಮ್ಮಕ್ಕಳೊ, ಚಂದ್ರಲೋಕಕ್ಕೊ ಮಂಗಳಲೋಕಕ್ಕೊ — ಹೋಗಿಬರಬಲ್ಲ ಧೀಮಂತರು, ಇರಲಿ. ವಿಜ್ಞಾನಗಳ ಈ ಆಟದಲ್ಲಿ ನಮ್ಮ ಚಂದಿರ ತನ್ನ ಪೂರ್ವದ ವೈಭವವನ್ನು ಕಳೆದುಕೊಳ್ಳುತ್ತಿದ್ದಾನೆ. ಪ್ರಜಾಸತ್ತಾತ್ಮಕ ಇಂದಿನ ದಿನಗಳಲ್ಲಿ ನಮ್ಮ ರಾಜ, ಮಹಾರಾಜರುಗಳು ತಮ್ಮ ಪುರಾತನ ವೈಭವವನ್ನು ನೆನೆದು ಹಳಹಳಿಸುವಂತೆ— ನಮ್ಮ ಚಂದ್ರನ ಗತಿಯೂ ಆಗುತ್ತದೆಯೋ—ಏನೋ ಎಂದು ರಸಿಕರು ಹಳಹಳಿಸಲೂಬಹುದು— ನೋಡಿರಿ, "ಚಂದ್ರನು ಜಿಗರೆಯನ್ನೇರಿ ಬರುತ್ತಿದ್ದಾನೆ" ಎಂಬ ವಿಚಾರಕ್ಕೂ ಚಂದ್ರನ ಮಧ್ಯದಲ್ಲಿರುವ ಕಪ್ಪು ಕಲೆಗಳು ಜ್ವಾಲಾಮುಖಿಯಿಂದ ಆದವುಗಳು" ಎಂಬ ವಿಚಾರಗಳಿಗೂ ಅಜಗಜಾಂತರ! ಇಂದು ಮಾನವನು ವಿಜ್ಞಾನದ ಬಲದಿಂದ ಚಂದ್ರನ ಮೇಲೆ ದಾಳಿ ನಡೆಯಿಸಿದ್ದಾನೆ! ವಿಜ್ಞಾನಿಗೆ ಚಂದಿರ ಕೇವಲ ಭೌತಿಕ ವಸ್ತು! ಉಪಮಾ ಉತ್ಪ್ರೇಕ್ಷೆಗಳಿಂದ— ಹೊಗಳುವ ಚಂದಿರನೆಲ್ಲಿ— ಇಂದು ನಾವು ಕಾಣುವ ಚಂದಿರನೆಲ್ಲಿ? ಇದನ್ನೆಲ್ಲ ತಿಳಿದ ನಮ್ಮ ಚಂದ್ರಮನಿಗೆ ಚಿಂತೆ ಏಕೆ ಉಂಟಾಗಬಾರದು? ತಿಳಿದು ನೋಡಿದರೆ ನಮ್ಮ ಭಾವನೆಗೆ ಇದು ಒಂದು ದೊಡ್ಡ ಆಘಾತವೇ ಸರಿ. ನೀರಸವಾದ ಜೀವನವು ಇಂದು ತಲೆಯತ್ತಿ ನಿಂತುದಕ್ಕೆ ನಮ್ಮ ಭಾವನೆಗಳ ಬುಗ್ಗೆ ಬತ್ತಿದುದೇ ಕಾರಣವಾಗಿದೆ! ಅಹುದಲ್ಲವೆ? ಎಂದು ನಮ್ಮನ್ನೇ ನಾವು ಕೇಳಿಕೊಳ್ಳಬೇಕಾಗಿದೆ. ಆಕಾಶದ ಅಂತರಾಳವನ್ನು ಗೆದ್ದು ವಿಹರಿಸುತ್ತಿರುವ ವಿಜ್ಞಾನಿಗಳ ಈ ಆಟ ನಿಜಕ್ಕೂ ಸಾಹಸಮಯವಾದುದೆಂದು ನಾವು ಒಪ್ಪಿಕೊಂಡರೂ, ಚಂದ್ರನನ್ನು ಕಂಡಾಗ ಮಾತ್ರ ಮನಸ್ಸಿಗೆ ಮರುಕ ಉಂಟಾಗುತ್ತದೆ! ನಾನೋ ಚಂದ್ರನ ಪಕ್ಷಪಾತಿ!! ಅವನ ಪುರಾತನ ವೈಭವ ಕಡಿಮೆಯಾಗಬಾರದೆಂದೇ ನನ್ನ ಮತ. ನಕ್ಷತ್ರಾಧಿಪತಿ ಚಂದಿರ ...... ಆಕಾಶದಂಗಣದಲ್ಲಿ ತನ್ನ ಬೆಳ್ಳಿಯ ಕಿರಣಗಳನ್ನು ಹರಡುತ್ತ ರಸಿಕರ ಕಣ್-ಮನಗಳನ್ನು ತಣಿಸುವ ಆನಂದ ಸಾಮಾನ್ಯವೆ? ಇದನ್ನು ಯಾರೂ ಅಲ್ಲಗಳೆಯಲಾರರು.

ಚಂದ್ರನ ಬಗ್ಗೆ ನಾವು ಕೇಳುವ ಕಥೆಗಳಾದರೂ ಎಷ್ಟು ರಮ್ಯ! ರೋಹಿಣಿ ಚಂದ್ರನ ಮಡದಿ. ಇಂಗಡಲಿನಲ್ಲಿ ಬೆಳ್ಳಿಯ ನೌಕೆಯಲ್ಲಿ ಕುಳಿತು—ವಿಹಾರ ಮಾಡುತ್ತಿರುವ ರೋಹಿಣಿ ಚಂದ್ರನ ರೂಪವನ್ನು ನಮ್ಮ ಕಂಗಳೆದುರು ತಂದುಕೊಂಡದ್ದಾದರೆ ಎಷ್ಟು ಸಂತೋಷ! ಚಂದ್ರನು ಕಲಾದೃಷ್ಟಿಯಿಂದ ಎಷ್ಟು ಮಹತ್ವ ಪಡೆದಿರುವನೋ ಅಷ್ಟೇ ಅವನಿಗೆ ಕುತ್ತುಗಳು ತಪ್ಪಿದಂತಿಲ್ಲ. ಅಮೃತ ಮಂಥನದ ಕಾಲದಲ್ಲಿ ಹೊರಬಂದ ಅಮೃತವನ್ನು ಸೇವಿಸಲು ಸುರಾಸುರರು ಹೋರಾಡಹತ್ತಲು ಮಹಾವಿಷ್ಣು ಮೋಹಿನಿ ರೂಪವನ್ನು ತೆಗೆದು-ಕೊಂಡು ಎಲ್ಲರಿಗೂ ಅಮೃತ ಕೊಡುವದಾಗಿ ಹೇಳಿ ಎಲ್ಲರೂ ಸಾಲಾಗಿ ಕುಳಿತುಕೊಳ್ಳಲು ಹೇಳಿದನಂತೆ. ಇಂದು ಊರ್ಜಿತದಲ್ಲಿರುವ "ಕ್ಯೂ" ಪದ್ಧತಿಯ ಮೂಲವು ಆಗಲೇ ಪ್ರಾರಂಭವಾಗಿರಬೇಕು! ಮೊದಲು ದೇವತೆಗಳು ಬಳಿಕ ಅಸುರರು ಸಾಲಾಗಿ ಅಮೃತ ಕುಡಿಯಲು ಕುಳಿತುಕೊಂಡರು. ಅಸುರರೋ ಮೋಸವರಿಯದವರು! ದೇವತೆಗಳಿಗೆ ಅಮೃತ ಉಣಿಸುತ್ತ ಮೋಹಿನಿ ಹೊರಟಳು. ತನ್ನ ಮೋಹಕ ರೂಪವನ್ನು ಅಸುರರು ನೋಡುತ್ತಿರುವಾಗಲೇ— ಎಲ್ಲ ಅಮೃತವನ್ನು ದೇವತೆಗಳಿಗೆ ಉಣಿಸಿದರಾಯಿತೆಂದು ಮಹಾವಿಷ್ಣುವಿನ ಎಣಿಕೆ! ಆದರೆ ಒಬ್ಬ ಅಸುರ ಚಂದ್ರ ಸೂರ್ಯರ ನಡುವೆ ಹೇಗೋ ನುಸುಳಿಕೊಂಡು ಕುಳಿತಿದ್ದ. ಪಾಪ ಅವನಿಗೂ ಅಮೃತ ಸಿಕ್ಕಿತು! ಆದರೆ ಚಂದ್ರ ಸೂರ್ಯರು ಅದನ್ನು ಕಂಡುಹಿಡಿದು ಹೇಳಲಾಗಿ ಆ ಅಸುರನ ಶಿರಚ್ಛೇದನ ಮಾಡಲಾಯಿತು. ತಲೆ "ರಾಹು" ದಡ "ಕೇತು" ಗಳಾಗಿ ಆಕಾಶದಲ್ಲಿ ತಿರುಗಹತ್ತಿದವು! ಹೀಗೆ ರಾಹು ಕೇತುಗಳ ಜನನವಾಯಿತು. ನೋಡಿರಿ ಇಂದಿಗೂ ಚಂದ್ರನಿಗೆ ರಾಹು ಕೇತುಗಳ ತೊಂದರೆ ತಪ್ಪಿಲ್ಲ. ಹೇಗೋ ವರುಷಕ್ಕೆ ಒಮ್ಮೆ ಅಥವಾ ಎರಡು ಸಲವೂ ಗ್ರಹಣ ಕಾಲದಲ್ಲಿ ನಮ್ಮ ಚಂದ್ರ ಅದನ್ನು ತಾಳಿಕೊಳ್ಳುತ್ತಾನೆನ್ನಿರಿ. ಆದರೆ ಈಗ ಪ್ರತಿನಿತ್ಯ ತನ್ನ ಮೇಲೆ ಬಂದು ಬೀಳುವ ಆಕಾಶಬಾಣಗಳ ದಾಳಿಯನ್ನು ಅವನು ಹೇಗೆ ತಪ್ಪಿಸಿಕೊಂಡಾನು? ಎಷ್ಟೆಂದರೂ ಮೃದು ಹೃದಯದವರಿಗೆ ಆಘಾತ ಮೇಲಿಂದ ಮೇಲೆ ತಪ್ಪಿದ್ದಲ್ಲವಲ್ಲ! ಅದುವೇ ಜೀವನ!!

ಚಂದ್ರನ ಸುತ್ತಲೂ ತಿರುಗುವ ಮರಿಚಂದ್ರಗಳನ್ನು ನೋಡಲು ನಾವು ಆಕಾಶದತ್ತ ನೋಡುತ್ತಿದ್ದೇವೆ! ಈ ಮರಿಚಂದ್ರಗಳನ್ನು ಕಂಡು ಚಂದ್ರ ಹಿಗ್ಗಬೇಕೆ ಕುಗ್ಗಬೇಕೆ? ತಾನಾಯಿತು ತನ್ನ ಚಂದ್ರಮಂಡಳವಾಯಿತು ಎಂದು ಚಂದ್ರ ಇಂದು ನಿಶ್ಚಿಂತೆಯಿಂದ ಇರಲಾರ! ರಶಿಯಾ ಅಮೇರಿಕಾ ದೇಶಗಳು ಸ್ಪರ್ಧೆಯಿಂದ ಆಕಾಶಬಾಣ ಬಿಡುವದನ್ನು ನಮ್ಮ ಬಡ ಚಂದ್ರ ತಾಳಿಕೊಳ್ಳಬೇಕಾಗಿದೆ. ಎಂಥೆಂತಹರಿಗೆ ಎಂತೆಂತಹ ವಿಪತ್ತುಗಳು ಬರುತ್ತಿವೆಯಲ್ಲಾ ಎಂದು ಮನ ಮರುಗುತ್ತಿದೆ. ಇದನ್ನೆಲ್ಲ ಯೋಚಿಸುತ್ತಿದ್ದಂತೆ ನನಗೆ ಚಂದ್ರ ರೋಹಿಣಿಯರ ಮೆಲು ಮಾತುಗಳನ್ನು ಕೇಳಿದಂತಾಗುತ್ತದೆ:

"ತಾರಾಪತಿಯೆ—ಏಕೆ ಮ್ಲಾನನಾಗಿದ್ದಿ?"

"ಮನೋಹರೆ, ರೋಹಿಣಿದೇವಿ, ನೀನೂ ಅರಿಯದವಳಂತೆ ನಟಿಸುತ್ತಿರುವೆಯಲ್ಲ!"

"ಮಹಾರಾಜ—ಹಿಂದಕ್ಕೆ ತಮಗೆ ಅನೇಕ ವಿಪತ್ತುಗಳು ಬಂದುಹೋದವು. ಈ ಮರಿಚಂದ್ರಗಳಿಗೇಕೆ ನೀವು ಭೀತರಾಗಿದ್ದೀರಿ?"

"ದೇವಿ—ಮಾನವರೆಂದರೆ ಸಾಮಾನ್ಯರಲ್ಲ ಅವರು ಹಟವಾದಿಗಳು"

"ನಾಥಾ ಹಾಗೆಂದರೇನು?"

"ಛೀ ಹುಚ್ಚೀ—ಮೊದಲಿನಿಂದಲೂ ಈ ಮಾನವರು ದೇವತೆಗಳನ್ನು ಗೆದೆಯಲು ಹಾರೈಸುತ್ತಿದ್ದಾರೆ."

"ಇರಲಿ ಬಿಡು ಪ್ರಾಣನಾಥ, ಈ ಸುಂದರವಾದ ಹಾಲುಗಡಲಿನಂತಹ ಬೆಳದಿಂಗಳಿನಲ್ಲಿ, ಬೆಳ್ಳಿಯ ನೌಕೆಯಲ್ಲಿ ಜೋಡಾಗಿ ಕುಳಿತು ಇರುಳನ್ನು ಕಳೆಯೋಣ" ಎಂಬ ಮೆಲು ನುಡಿಗಳನ್ನು ಕೇಳಿದಂತಾದಾಗ-ಚಂದ್ರನ ಬಗೆಗೆ ನನಗೆ ಇಲ್ಲದ ಮರುಕ ಉಂಟಾಗುತ್ತದೆ. ನವದಂಪತಿಗಳಿಗೆ ಹರುಷವನ್ನೀಡುವ ಚಂದಿರನ ತನಿ ಬೆಳಕು ನಮಗೆ ಇಂದು ಬೇಡವೆ? ಕೊನೆ ಮೊದಲಿಲ್ಲದ ಆಶೆ ಆಕಾಂಕ್ಷೆಗಳ ಗಾಳಿ-ಗೋಪುರ ಕಟ್ಟುತ್ತ ಬೆಳದಿಂಗಳಿರುಳಿನಲ್ಲಿ ನಲಿಯುವ ನವದಂಪತಿಗಳಿಗೆ ಚಂದಿರನೇ ಸ್ಫೂರ್ತಿ ಕೊಡುವವನಲ್ಲವೆ? ಚಂದಿರನು ಇಂದು ನಮ್ಮ ಪಾಲಿಗೆ ಇಲ್ಲದಾದನೆಂದು ಒಂದು ಕ್ಷಣ ವಿಚಾರಿ-ಸಿದರೆ ಅದೆಂಥ ಭೀತಿ ನಮ್ಮನ್ನಾವರಿಸಲಿಕ್ಕಿಲ್ಲ! ಛೀ ಅಂತಹ ವಿಚಾರವೂ ಕೂಡಾ ಬೇಡ ಎನಿಸುವದು. ತೀರ ಸಹಜವಾದ ಮಾತು. ಹೋಗಲಿ ಇಂದು ಚಂದ್ರನಿಗೆ ಬಂದ ವಿಪತ್ತುಗಳನ್ನು ನಾವು ಕಡೆಗಣಿಸಿದರೂ ಆತನು ಹಿಂದೆ ಪಟ್ಟ ಪಾಡೇನು ಮರೆಯುವಂತಹದಲ್ಲ!

'ಏಕಶ್ಚಂದ್ರಸ್ತಮೋಹಂತಿ ನ ಚ ತಾರಾಗಣೋಪಿ ಚ' ಎಂದು ಸುಭಾಷಿತ ಹೇಳಿದ ಕವಿಗೆ— ಚಂದ್ರನು ಕೃಷ್ಣಪಕ್ಷದಲ್ಲಿ ಕ್ಷಯಿಸುವುದರ ಅರಿಕೆ ಇದ್ದಂತಿಲ್ಲ; ಶುಕ್ಲಪಕ್ಷದಲ್ಲಿ ಪ್ರತಿದಿನ ವೃದ್ಧಿಹೊಂದುವದೆಂದರೆ— ಅಮೃತ ತುಂಬಿಕೊಳ್ಳುವುದು. ದೇವತೆಗಳು— ಆ ಅಮೃತವನ್ನು ಕೃಷ್ಣಪಕ್ಷದಲ್ಲಿ ಕುಡಿಯುತ್ತ ಹೋಗುತ್ತಾರಂತೆ. ಅಂದ ಬಳಿಕ ಚಂದ್ರನ ತ್ಯಾಗವೇನು ಸಾಮಾನ್ಯವೆ? ತನ್ನನ್ನೇ ತಾನು ಹೆರವರಿಗಾಗಿ ಅರ್ಪಿಸುವದೆಂದರೇನು ಸಾಮಾನ್ಯ ತ್ಯಾಗವೆ? ಅಂತಲೇ ಹೇಳುತ್ತಾರಲ್ಲ ದೊಡ್ಡವರು ದೊಡ್ಡವರೆ!

ನೋಡಿರಿ ಚಂದ್ರನು ತನ್ನ ಕಿರಣಗಳನ್ನು ಭೇದ ಭಾವವಿಲ್ಲದೆ ಹೇಗೆ ಹರಡುತ್ತಾನೆ " ನಹಿ ಸಂಹರತೇ ಜ್ಯೋತ್ಸ್ನಾಂ ಚಂದ್ರಶ್ಚಾಂಡಾಲವೆಶ್ಮನಃ" ಹೀಗಿದೆ ದೊಡ್ಡವರ ಮನಸ್ಸು !

ಇಂದಿನ ಏಕ-ಪತ್ನೀ ಕಾಯದೆಯ ದಿನಗಳಲ್ಲಿ ಯಾವುದಾದರೂ ಪುಣ್ಯಾತ್ಮ ಚಂದ್ರನನ್ನು ಕೋರ್ಟಿಗೆ ಎಳೆದರೂ ಎಳೆದನೇ; ನೋಡಿರಿ ನಮ್ಮ ಚಂದ್ರ ಇಪ್ಪತ್ತೇಳು ತಾರೆಯರ ಗಂಡನಾಗಿದ್ದಾನೆ. ಹೀಗೆಲ್ಲ ವಿಚಾರ ಮಾಡುತ್ತ ಹೋದಂತೆ ಚಂದ್ರನಿಗೆ ಚಿಂತೆ ಏಕೆ ಒದಗಬಾರದು ? ಎಂಬ ಪ್ರಶ್ನೆ ನಮಗೆ ಉದ್ಭವಿಸದಿರದು. ನಮ್ಮ ಪ್ರಕೃತಿಯಲ್ಲಿ ಉಂಟಾದ ಭಾವನೆಗಳ ಛಾಯೆಯನ್ನೇ ನಾವು ಸುತ್ತುಮುತ್ತಲೂ ಕಾಣುತ್ತೇವೆ. ಅಂಜಿಕೆ ಎಂಬುವ ಅಲೆಗಳು ಸುತ್ತಲೂ ಹರಡುತ್ತವೆ ಎಂಬುದನ್ನು ನಮ್ಮ ವಿಜ್ಞಾನಿಗಳು ಹೇಳುತ್ತಾರೆ. ನಮ್ಮ ಚಿಂತೆಯನ್ನೇ ಚಂದ್ರನಿಗೂ ಹೊಂದಿಸಬಹುದೇನೋ— ಎಂದೆನಿಸುತ್ತದೆ. ಇರಲಿ ಚಂದ್ರನ ಬಗ್ಗೆ ನಮಗೇಕೋ ಇಲ್ಲದ ವಾತ್ಸಲ್ಯ ! ಗೆಳೆಯನಿಗಾದ ಹಾನಿ ನಮಗಲ್ಲವೆ? ವಿರಹಿ ಜನಗಳು ಚಂದ್ರನನ್ನು ತೆಗಳುತ್ತಾರೆ. ಆದರೆ ಪ್ರಿಯ ಹೃದಯಗಳು ಕೂಡಿದಾಗ ಚಂದ್ರನೇ ಬೇಕಾಗುತ್ತಾನೆ. ರತಿ-ಮನ್ಮಥರ ಪೂಜೆಯನ್ನು ಬೆಳದಿಂಗಳ ಇರುಳಿನಲ್ಲಿ ಉದ್ಯಾನಗಳಲ್ಲಿ ಪೂಜಿಸುವ—ಜವ್ವನೆಯರ ಕಂಗಳ ಕಾಂತಿಯನ್ನು ನಿಮ್ಮ ಕಲ್ಪನೆಯಲ್ಲಿ ಒಮ್ಮೆಯಾದರೂ ತಂದುಕೊಳ್ಳಿರಿ, ಅದೆಂಥ ಆನಂದ! ಇದನ್ನೆಲ್ಲ ಬರಹದಲ್ಲಿ ವ್ಯಕ್ತಪಡಿಸುವದಕ್ಕಿಂತ ಕಲ್ಪನೆಗೆ ಬಿಡುವದೇ—ಲೇಸು ! ತಥಾಸ್ತು !!

"ಬಿದಗಿ ಚಂದ್ರನಾ ಚೆಂಗಚೀ-ನಗಿ-ಹೂ ಮೆಲ್ಲಗ ಮೂಡಿತ್ತs ಮ್ಯಾಲಕ ಚೆಳ್ಳನ ಕೂಡಿತ್ತ;" ಎಂದು ಕವಿ ಹೇಳುವ ಬಿದಿಗಿ ಚಂದಿರನ ಚಲುವೇ ಬೇರೆ—ಪೂರ್ಣಾಕಾರದ ಪೌರ್ಣಿಮೆಯ ಚಂದ್ರನ ಶೋಭೆಯೇ ಬೇರೆ! ಸೌಂದರ್ಯೋಪಾಸಕರೇ ಅದನ್ನು ಅನುಭವಿಸಬಲ್ಲರು. ನೀರಸ ಜೀವಿಗಳು ಅದನ್ನು ಅನುಭವಿಸುವದು ಸಾಧ್ಯವಿಲ್ಲ.

ಚಂದ್ರನ ಕಷ್ಟ ಪರಂಪರೆಗಳನ್ನು ಹೇಳುತ್ತ ಹೊರಟರೆ ಕೊನೆ ಮೊದಲಿಲ್ಲ. ಭಾದ್ರಪದ ಶುಕ್ಲಪಕ್ಷದ ಚತುರ್ಥಿ ದಿನ ಆ ನಮ್ಮ ಮಹಾತ್ಮ ಗಣೇಶ ಭೂಲೋಕಕ್ಕೆ ಬರುತ್ತಾನಲ್ಲ, ಆತನೂ ನಮ್ಮ ಚಂದ್ರನ ಬಗ್ಗೆ ಒಂದು ಚರಿತ್ರೆಯನ್ನೇ ನಿರ್ಮಾಣ ಮಾಡಿಬಿಟ್ಟ. ತನ್ನನ್ನು ಕಂಡು ಅಪಹಾಸ್ಯ ಮಾಡಿದನೆಂಬುವ ಕಲಮಿನ ಮೇರೆಗೆ ಶಾಪ ಕೊಟ್ಟು ಬಿಟ್ಟ! ಅಷ್ಟೇಕೆ—ತನ್ನ ಕೋರೆ ಕಿತ್ತು ಬೀಸಾಡಿದ. "ನಿನ್ನನ್ನು ಯಾರೂ ನೋಡದಿರಲಿ" ಎಂದು ಉಗ್ರ ಶಾಪ ಕೊಟ್ಟುಬಿಟ್ಟ. ಪಾಪ—ಚಂದ್ರಮ ಬಗೆಬಗೆಯಾಗಿ ಗಣಪತಿಗೆ ಬಿದ್ದು ಬೇಡಿಕೊಳ್ಳಲು—ಮಹಾರಾಯ ಗಣಪತಿಗೆ ಕೋಪ ಇಳಿದು "ಭಾದ್ರಪದ ಶುಕ್ಲ ಪಕ್ಷ ಚತುರ್ಥಿ ದಿನ ಮಾತ್ರ ನಿನ್ನನ್ನು ಜನರು ನೋಡದಿರಲಿ" ಎಂಬ ಹೇಳಿಕೆಯನ್ನಿತ್ತು ಚಂದ್ರನಿಗೆ ದಯ ತೋರಿದ! ಚಂದ್ರನಿಗೆ ದೇವತೆಗಳಿಂದ ಭಯ, ರಾಕ್ಷಸನಿಂದ ಭಯ, ಮಾನವನಿಂದ ಭಯ, ಆದರೂ ಗಗನದಂಗಣದಲ್ಲಿ ಚಲುವಾದ ಬೆಳದಿಂಗಳ ಕಿರಣ ಹರಡುವ ಚಂದ್ರನನ್ನು ಎಲ್ಲರೂ ಬಯಸುವವರೆ? ಹೇಗಿದೆ ಈ ಜಗದ ರೀತಿ! ಚಂದ್ರನಿಲ್ಲದ ಆಕಾಶ; ಮಕ್ಕಳಿಲ್ಲದ ಮನೆ ಎಂದು ಮುಂತಾಗಿ ಅಲಂಕಾರದಿಂದ ಕೂಡಿದ ಕವಿಗಳ ವಾಣಿ ಬೇರೆ! ಚಂದ್ರನಿಗೆ ಬರುವ ಕಷ್ಟ ಪರಂಪರೆಗಳಿಗೆ ಕೊನೆಯೇ ಇಲ್ಲದಾಗಿದೆ. ಸಹನಶೀಲನಾದ ಚಂದ್ರನು 'ಬಂದದ್ದೆಲ್ಲ ಬರಲಿ; ಗೋವಿಂದನ ದಯ ಒಂದಿರಲಿ' ಎಂದು ತನ್ನ ಚಿರಂತನ ಸೌಂದರ್ಯದಿಂದ ಭೂಲೋಕಕ್ಕೆ ಅಮೃತ-ರಶ್ಮಿಗಳನ್ನು ಹರಡುತ್ತ ಕಲ್ಯಾಣವನ್ನೇ ಮಾಡುತ್ತಲಿದ್ದಾನೆ. ಕ್ಷಯ-ವೃದ್ಧಿ ಎರಡನ್ನೂ 'ಸಮ' ಎಂದು ತಿಳಿದ ನಿಷ್ಕಾಮವೃತ್ತಿಯ ಚಂದ್ರನು ಕಾಲಾತೀತನಾಗಿದ್ದು ತುಂಬಾ ಉಪಕಾರಿಯಾಗಿರುವದನ್ನು ಕ್ಷುದ್ರಮಾನವನು ಅರಿತರೆ ಒಳಿತು.

'ಅನ್ಯಂ ಇಂದ್ರಂ ಕರಿಷ್ಯಾಮಿ' ಎಂದು ಪ್ರತಿಜ್ಞೆ ಮಾಡಿದ ವಿಶ್ವಾಮಿತ್ರ ಋಷಿ ತ್ರಿಶಂಕು ಸ್ವರ್ಗ ನಿರ್ಮಾಣ ಮಾಡಿದ, ನಿಜ ! ಅದೆಂತಹ ಸ್ವರ್ಗ–ವಿಕಾರದಿಂದ ಕೂಡಿದ ವಿಚಿತ್ರ ಪ್ರಪಂಚ-ಅದು ! ಇಂದು ಮಾನವನು ತನ್ನ ಬುದ್ಧಿಬಲದಿಂದ ಪ್ರಕೃತಿಯ ಸೊಬಗನ್ನು ವಿಕೃತಗೊಳಿಸುತ್ತಿದ್ದಾನೆ. ವಿಜ್ಞಾನವು ನಮ್ಮ ಸರಳ ಸುಖಜೀವನವನ್ನು ಹಾಳು ಮಾಡುತ್ತಿದೆ ಎಂದು ಮುಂತಾಗಿ ಗೊಣಗುವವರ ಸಂಖ್ಯೆ ಕಡಿಮೆ ಇಲ್ಲ. ವಿಜ್ಞಾನದ ಬಲದಿಂದ ಇಂದು ವೇಳೆ-ಅವಕಾಶ ನಾವು ಗದ್ದಿರಬಹುದು. ಇದರಿಂದ ನಮಗೆ ನಿಶ್ಚಿಂತಿ ಬಂಧಿದೆಯೆ ? ಲೆಕ್ಕಾಚಾರದ ಜೀವನವು ಹೃದಯವಂತಿಕೆಯನ್ನು ಕಳೆದು ಬಿಡುತ್ತದೆ. ಪ್ರಯೋಜನಪ್ರಿಯವಾದ ಶುಷ್ಕಜೀವನವು ಬರಡು. ಬರಡು ಜೀವನಕ್ಕೂ ಕಾವ್ಯಪ್ರಪಂಚಕ್ಕೂ ಎಷ್ಟೊಂದು ಅಂತರ. ನೀಲಾಕಾಶದಲ್ಲಿ ಚಂದ್ರನು ಬೆಳಗಿದೊಡನೆ ಕಾಸಾರದಲ್ಲಿಯ ಕುಮುದಗಳು ಅರಳಿ ನಿಲ್ಲುವವು. ಚಕೋರ ಪಕ್ಷಿಗಂತೂ ಬೆಳದಿಂಗಳನ್ನು ಕುಡಿಯುವ ಹವ್ಯಾಸ 'ಚಕೋರಂಗೆ ಚಂದ್ರಮನ ಬೆಳದಿಂಗಳ ಚಿಂತೆ' ಎಂಬುವ ವಚನ ನಮ್ಮನ್ನು ಒಂದು ಕ್ಷಣ ದಿವ್ಯ ಪ್ರಪಂಚದಲ್ಲಿಳಿಸಬಹುದು ! ಈ ಎಲ್ಲ ಮಾತುಗಳು ರಸಿಕರ ಮನವನ್ನು ತಣಿಸಿ ಸುಖ ಸಮಾಧಾನವನ್ನು ತಂದು ಕೊಡಬಲ್ಲವು.

ನಾವು ಭೂಲೋಕದ ಜನವೆಲ್ಲ ಸೇರಿ ಚಂದ್ರಲೋಕದಲ್ಲಿ ಇಳಿದಿದ್ದಾದರೆ-ಅಲ್ಲಿ ಪಡೆಯುವದೇನು? ವಿಜ್ಞಾನಿಗಳ ಹೇಳಿಕೆ ಕೇಳಿದರೆ 'ಸಾಕಪ್ಪಾ ಸಾಕು' ಎಂದೆನ್ನಬಹುದು. ನೀರಿಲ್ಲದ, ಹವೆ ಇಲ್ಲದ, ನೆಲಕ್ಕೆ ಕಾಲು ಮುಟ್ಟದ-ಸ್ಥಿತಿ-ನಮ್ಮದಾಗುವದಂತೆ ! ಮಾನವರ ಈ ದಾಳಿಯಿಂದ ನಮ್ಮ ಚಂದಪ್ಪ ಎಲ್ಲಿಯೋ ಕಾಣದಂತೆ ಅಡಗಿಕೊಳ್ಳಬೇಕಾದೀತು. ಈ ಚಿಂತೆ ಚಂದ್ರನಿಗಿಂತ ನಮಗೇ ಹೆಚ್ಚಾಗಬಹುದು. ಸುಂದರವಾದ ವಸ್ತುಗಳನ್ನು ದೂರದಿಂದಲೇ ನೋಡಬೇಕೆ ಹೊರತು ಹತ್ತರದಿಂದಲ್ಲ! ಕಲಾಪ್ರಪಂಚವೇ ಹೀಗೆ. ಕಲಾಪ್ರಪಂಚಕ್ಕೆ ಸ್ಫೂರ್ತಿಯನ್ನು ಮೊದಲಿನಿಂದಲೂ ಕೊಡುತ್ತ ಬಂದಿದ್ದ ಚಂದ್ರನನ್ನು ನಾವು ದೂರದಿಂದಲೇ ನೋಡಿ ತಣಿಯಬೇಕು, ಎಂಬುವ ಅರಿವು ಮಾನವನಿಗೆ ಬಂದಿದ್ದಾದರೆ ಚಂದ್ರನ ಚಿಂತೆ ತಪ್ಪೀತು! ಹಿಮಾಂಶು, ಉಡುರಾಜ, ಅಮೃತರಶ್ಮಿ, ತಾರಾಪತಿ ರಜನೀಕಾಂತ, ಶಶಿ, ಸಸ್ಯಾಧಿಪ—ಹೀಗೆ ಕೊನೆ ಮೊದಲಿಲ್ಲದ ಹೊಗಳಿಕೆಯ ನಾಮಗಳಿಂದ ಕೂಡಿದ ಚಂದಿರನನ್ನು ನಾವು ಈಗ ಛಾಯಾ ಚಿತ್ರದಲ್ಲಿ ಹಿಡಿದಿಟ್ಟದ್ದೇವೆ! ಆ ಚಿತ್ರದಲ್ಲಿ ಕಂಡ ಚಂದ್ರ ಎಂಥವ-ತೀರ ವಿಚಿತ್ರ, ಚಂದ್ರಮ-ಶಿಖರ-ದರಿ ಕೊಳ್ಳಗಳು ಕಪ್ಪು ಕಲೆಗಳಿಂದ ಕೂಡಿದ-ಕುರೂಪಿ ಚಂದ್ರಮ.



ಹಿರಿಯ : ಒಣರೊಟ್ಟಿ ಬೇಡ, ಏನಾದರೂ ಸ್ವೀಟ್ ಭಿಕ್ಷೆ ನೀಡವ್ವಾ.
ಕಿರಿಯ : ನನಗೊಂದು ಪಟಾಕಿ ಕೊಡಿಯವ್ವ.

ಕೇವಲ ಜಡವಸ್ತು ! ಇಂತಹ ಚಂದ್ರಮ ನಮಗೆ ಯಾವ ಬಗೆಯ ಆನಂದ ಕೊಡಬಲ್ಲ. ಆದುದರಿಂದಲೇ ಇಂದು ರಸಿಕರ ಮನ ಮ್ಲಾನವಾಗಿದೆ. ಅಂತೆಯೇ ಚಂದ್ರನೂ ಚಿಂತೆಗೊಳಗಾಗಿದ್ದಾನೇನೊ ಪಾಪ! ದೇವತೆಗಳ ವಿಚಾರ ಕ್ಷುದ್ರ ಮಾನವರಿಗೇಕೆ ತಕ್ಕೆ ಎಂದು ನಾವು ಸುಮ್ಮನೆ ಕುಳಿತುಕೊಳ್ಳಲಾರೆವು. ಅಲ್ಲಿಯೇ ಮಾನವನ ಹಿರಿಮೆ ಇದೆ.

ಇನ್ನೊಂದು ವಿಚಾರ, ಈ ಪ್ರಸಂಗದಲ್ಲಿ ಶಿವನನ್ನು ನಾವು ಮರೆಯಲಾರೆವು. ಶಿವನೋ ಮಹಾದೇವ, ಕೇಳುವದೇನು ? ಚಂದ್ರನನ್ನು ಕಿತ್ತು ತನ್ನ ತಲೆಯಲ್ಲಿಟ್ಟುಕೊಂಡು ಕುಳಿತ. ಅಲ್ಲಿಯಾದರೂ ಚಂದ್ರನಿಗೆ ಸುಖವಿದೆಯೆ? ಇಲ್ಲ. ಗಂಗೆಯನ್ನು ತಲೆಯಮೇಲಿಟ್ಟುಕೊಂಡ ಶಿವನನ್ನು ಪಾರ್ವತಿ ಮೇಲಿಂದ ಮೇಲೆ ಮತ್ಸರದಿಂದ ಕೇಳುತ್ತಾಳೆ, "ತಲೆಯಮೇಲೆ ಕುಳಿತವಳಾರು?" ಎಂದು ಇಂತಹ ಬಡಿದಾಟದ ಮಾತುಗಳನ್ನು ನಿತ್ಯ ನಮ್ಮ ಚಂದ್ರ ಕೇಳಬೇಕು. ಶಿವನಾದರೂ ಸಾಮಾನ್ಯನೆ? ಹುಚ್ಚು ಎದ್ದರೆ—ಅಲ್ಲಲ್ಲ—ಶಾಂತಂ ಪಾಪಂ—ಹುರುಪು ಬಂದರೆ ನೃತ್ಯಲೀಲೆ ಪ್ರಾರಂಭಿಸುತ್ತಾನೆ-ಆಗ ಚಂದ್ರನ ಗತಿ ಏನಾಗಬೇಕು ನೀವೇ ಊಹಿಸಿರಿ. ಹಿಂದಿನ ತೊಂದರೆಗಳನ್ನು ಹೇಗೋ ತರೆದುಕೊಂಡು, ಬದುಕಿಕೊಂಡ:— ಇಳೆಯ ಜನಕ್ಕೆ ತನ್ನ ಶೀತ ಕಿರಣಗಳನ್ನು ಹರಡಿ, ಆನಂದ ಕೊಡುತ್ತಿರುವ ಚಂದ್ರನ ಮೇಲೆ ಇಂದು ಮತ್ತೆ ಮಾನವರು ಬಾಣಗಳನ್ನು ಬಿಟ್ಟು ಗಾಬರಿಗೊಳಿಸುತ್ತಿದ್ದಾರೆ. ಇದೆಲ್ಲವೂ ವಿಚಿತ್ರವೇ ಸರಿ.

ಚಂದ್ರನ ಬಗ್ಗೆ ಮರುಕಗೊಂಡು ಏನೇನೋ ವಿಚಾರಿಸುತ್ತಾ ಕುಳಿತಿದ್ದ ನನಗೆ ಸರಿ ರಾತ್ರಿಯಾದದ್ದು ತಿಳಿಯಬೇಡವೆ?

ಎಲ್ಲಿಯೋ ಒಂದು ತೇನೆ ಹಕ್ಕಿ ಸ್ನಿಗ್ಧ ಶರತ್ಕಾಲದ ಇರುಳಿನಲ್ಲಿ ಕೂಗುವದನ್ನು ಕೇಳಿ, ಪಕ್ಕನೆ ಎಚ್ಚತ್ತವನಂತೆ ನೋಡಿದೆ.

ಸುತ್ತಲೂ ಶಾಂತತೆ ನೆಲಸಿತ್ತು, ರಾತ್ರಿ ಬಲಿತಿತ್ತು, ಇಳೆಯ ಮೇಲೆ ಹಾಲಹೊಳೆ ಹರಿದಂತೆ ಹುಚ್ಚು ಬೆಳದಿಂಗಳು ಹರಡಿತ್ತು ಎಲ್ಲಾ ಚಿಂತೆ ಬಿಟ್ಟು ಚಿಕ್ಕಮಗುವಿನಂತೆ :—

'Lady moon, Lady moon, where are you roving ?' ಎಂದು ಗುಣಗುಟ್ಟುತ್ತ ಒಳಗೆ ಹೋದೆ !





ದೀ
ಪಾ
ವ
ಳಿ
ಯ
ಶು
ಭಾ
ಶ
ಯ
ಗ
ಳು



# ಸಂಸ್ಕೃತ ಸುಭಾಷಿತಗಳಲ್ಲಿ

# ಕುಟುಂಬ ದರ್ಶನ

ಶ್ರೀಮತಿ ಗೀತಾ ದೇಸಾಯಿ
ನಿಪ್ಪಾಣಿ

ಗೃಹಸ್ಥಾಶ್ರಮದ ಸುಖದುಃಖಗಳು, ಕುಟುಂಬಕಲಹದ ವ್ಯಾಧಿ, ಮಾನಿನಿಯ ಕೋಪ, ಪ್ರಿಯಾಗಮನದ ಆತುರ, ಹೀಗೆ ಜೀವನಕ್ಕೆ ಸಂಬಂಧಪಟ್ಟ ಹಲವಾರು ಸನ್ನಿವೇಶಗಳನ್ನು ಸುಭಾಷಿತಕಾರರು ಕವಿಹೃದಯದಿಂದ ತುಂಬ ಸ್ವಾರಸ್ಯವಾಗಿ ಬಣ್ಣಿಸಿರುವರು. ಆ ಸ್ವಾರಸ್ಯವನ್ನು ಈ ಲೇಖನದಲ್ಲಿ ಲೇಖಿಕೆಯರು ತುಂಬ ಸೊಗಸಾಗಿ ಬಿಡಿಸಿ ತೋರಿಸಿರುವರು. . . . . . . . . .

ಸಂಸ್ಕೃತ ಸಾಹಿತ್ಯದಲ್ಲಿ ಸುಭಾಷಿತಗಳಿಗೆ ಒಂದು ವಿಶಿಷ್ಟವಾದ ಸ್ಥಾನವಿದೆ. 'ಕಿರಿದರೊಳ್ ಪಿರಿದರ್ಥಮಂ ಪೇಳುವ' ಸುಭಾಷಿತಗಳು ಪ್ರಾಚೀನ ಕಾಲದಿಂದಲೂ ರಾಜಾಸ್ಥಾನಗಳಲ್ಲಿ ವಿದ್ವದ್ಗೋಷ್ಠಿಗಳಲ್ಲಿಯಂತೆಯೆ ಜನಸಾಮಾನ್ಯರಿಂದಲೂ ಮೆಚ್ಚುಗೆಯನ್ನು ಗಳಿಸಿವೆ. ಬೇರೆ ಬೇರೆ ಕಾವ್ಯ, ನಾಟಕಗಳಿಂದ ಆರಿಸಿ ಅಥವಾ ಸ್ವತಂತ್ರವಾಗಿ ರಚಿಸಲ್ಪಟ್ಟ ಇಂಥ ಸುಭಾಷಿತ ಸಂಗ್ರಹಗಳಲ್ಲಿ ಜೀವನಕ್ಕೆ ಸಂಬಂಧಪಟ್ಟ ಎಲ್ಲ ವಿಷಯಗಳ ಮೇಲೂ ಪದ್ಯಗಳಿವೆ. ಒಂದೊಂದು ಶ್ಲೋಕವೂ ಸ್ವತಂತ್ರವಾಗಿ, ಬೇರಾವುದರ ಸಹಾಯವೂ ಇಲ್ಲದೆ ಒಂದು ಪೂರ್ಣ ವಿಚಾರ ಅಥವಾ ಸನ್ನಿವೇಶವನ್ನು ಓದುಗರ ಮುಂದೆ ಚಿತ್ರಿಸುತ್ತದೆ. ಅವು ತಮ್ಮದೇ ಆದ ವರ್ಣನಾ ವೈಖರಿಯಿಂದ, ಶಬ್ದಗಳ ಚಮತ್ಕಾರದಿಂದ, ಕವಿ ಹೃದಯದ ಅನುಭಾವಗಳಿಂದ ಮನಸ್ಸನ್ನು ಸೆರೆಹಿಡಿಯುತ್ತವೆ. ಅಂತೆಯೇ ಒಬ್ಬ ಸುಭಾಷಿತಕಾರ, "ಸಂಸಾರ ಕಟುವೃಕ್ಷಸ್ಯ ದ್ವೇ ಫಲೇಹ್ಯಮೃತೋಪಮೇ। ಸುಭಾಷಿತ ರಸಾಸ್ವಾದಃ ಸಂಗತಿಃ ಸುಜನೈಃ ಸಹ॥ ಎಂದಿದ್ದಾನೆ,

ಸುಭಾಷಿತಗಳಲ್ಲಿ ಸ್ಥೂಲವಾಗಿ ನಾವು ಎರಡು ಭಾಗಗಳನ್ನು ಮಾಡಬಹುದು. ಪ್ರಪಂಚದ ವ್ಯವಹಾರಕ್ಕೆ ಸಂಬಂಧಿಸಿದವುಗಳು ಹಾಗು ಮಾನವ ಹೃದಯದಲ್ಲಿ ಅನಂತ ಮುಖವಾಗಿ ಹರಿಯುವ ವಿವಿಧ ಭಾವನೆಗಳಿಗೆ ಮರುದನಿಗೊಡುವ ಭಾವಗೀತೆಗಳು. ಇಂಥ ಗೀತೆಗಳಲ್ಲಿ ಧ್ವನಿಗೇ ಹೆಚ್ಚು ಅವಕಾಶವಿದ್ದು, ಭಾವನಾಪ್ರಧಾನವಾಗಿರುವದರಿಂದ ಅವು ರಸಿಕರನ್ನಾಕರ್ಷಿಸುವದರಲ್ಲಿ ಸಂದೇಹವೇ ಇಲ್ಲ. ಆದರೆ ನಮ್ಮ ನಿತ್ಯ ಜೀವನಕ್ಕೆ ಸಂಬಂಧಿಸಿದ ಪದ್ಯಗಳನ್ನು ಸಹ ಕೇವಲ ಶುಷ್ಕವಾದ ನೀತಿಬೋಧೆಯನ್ನು ಮಾಡದೆ ತಮ್ಮ ಉಕ್ತಿವೈಚಿತ್ರ್ಯ ಹಾಗೂ ತ್ರಿಕಾಲ ಸತ್ಯವೆಂದೆನಿಸುವ ವಾಸ್ತವಿಕವಾದ ವರ್ಣನೆಗಳಿಂದ ಹೊಸ ರೂಪವನ್ನೂ, ಸಂಸ್ಕಾರವನ್ನೂ ಪಡೆದು ಓದುಗರ ಹೃದಯದಲ್ಲಿ ಚಿರಕಾಲ ನಿಲ್ಲುತ್ತವೆ. ಈ ತರದ ಸುಭಾಷಿತಗಳಲ್ಲಿಯೇ ಮನುಷ್ಯನ ಭಾವನೆಗಳಿಗೆಲ್ಲ ಮೂಲಸ್ಥಾನವಾದ ಕುಟುಂಬದರ್ಶನವನ್ನು ನಾವು ಕಾಣುತ್ತೇವೆ

## ಗೃಹಸ್ಥಾಶ್ರಮದ ಸುಖ-ದುಃಖಗಳು

ಸುಭಾಷಿತಗಳು ಭಿನ್ನಭಿನ್ನ ಕವಿಗಳಿಂದ ಆಯಾ ಕಾಲದಲ್ಲಿ ರಚಿತವಾಗಿದ್ದರೂ ಮಾನವನ ಕುಟುಂಬ ಜೀವನದಲ್ಲಿಯ ಏರು-ಪೇರುಗಳು, ಸುಖದುಃಖಗಳು ಎಲ್ಲ ಕಾಲಕ್ಕೂ ಒಂದೇ ಸಮನಾಗಿರುತ್ತವೆಯೆಂಬ ಸತ್ಯ ಅವುಗಳನ್ನೋದಿದಾಗ ಗೋಚರಿಸದಿರದು. ಒಬ್ಬ ಕವಿ ಸುಖವಾದ ಗೃಹಸ್ಥಾಶ್ರಮದ ವರ್ಣನೆ ಹೀಗೆ ಮಾಡಿದ್ದಾನೆ:—

ಸಾನಂದಂ ಸದನಂ ಸುತಾಶ್ಚ ಸುಧಿಯಃ
ಕಾಂತಾ ನ ದುರ್ಭಾಷಿಣೀ
ಸನ್ಮಿತ್ರಂ ಸುಧನಂ ಸ್ವಯೋಷಿತಿ ರತಿಶ್ಚಾ-
ಜ್ಞಾಪರಾ ಸೇವಕಾಃ ।
ಅತಿಥ್ಯಂ ಶಿವಪೂಜನಂ ಪ್ರತಿದಿನಂ ಮಿಷ್ಟಾ-
ನ್ನಪಾನಂ ಗೃಹೇ,
ಸಾಧೋಃ ಸಂಗಮುಪಾಸತೇ ಹಿ ಸತತಂ
ಧನ್ಯೋ ಗೃಹಸ್ಥಾಶ್ರಮಃ ॥

'ಆನಂದದಿಂದ ತುಂಬಿದ ಮನೆ, ಬುದ್ಧಿವಂತರಾದ ಮಕ್ಕಳು, ಮೃದುವಾಗಿ ಮಾತನಾಡುವ ಪ್ರಿಯತಮೆ, ಒಳ್ಳೆಯ ಮಿತ್ರ, ಸಾಕಷ್ಟು ಸಂಪತ್ತು, ಪತ್ನಿಯಲ್ಲಿ ಪ್ರೇಮ, ಆಜ್ಞಾಧಾರಕರಾದ ಸೇವಕರು ದಿನವೂ ಅತಿಥಿ ಸತ್ಕಾರ, ಶಿವಪೂಜೆ, ಮೃಷ್ಟಾನ್ನಪಾನಗಳು, ಯಾವಾಗಲೂ ಸಜ್ಜನರ ಸಂಗ ಇವೆಲ್ಲ ಇರುವಂಥ ಗೃಹಸ್ಥಾಶ್ರಮವು ಧನ್ಯವು!' ನಿಜ. ಆದರೆ ಇಂಥ ಗೃಹ-ಸೌಖ್ಯ ಎಲ್ಲರಿಗೂ ದೊರಕುವಷ್ಟು ವಿಧಿ ಉದಾರನಾಗಿರುವದಿಲ್ಲ! ಅಂಥ ದುರ್ದೈವಿಯ ಗೃಹಸ್ಥಾಶ್ರಮದ ಚಿತ್ರ ಬೇರೆ? ಇಲ್ಲಿದೆ:

ಕ್ರೋಶಂತಃ ಶಿಶವಃ ಸವಾರಿ ಸದನಂ
ಪಂಕಾವೃತಂ ಚಾಂಗಣಮ್
ಶಯ್ಯಾ ದಂಶವತೀ ಚ ರುಕ್ಷಮಶನಂ
ಧೂಮೇನ ಪೂರ್ಣಂ ಗೃಹಮ್ ।
ಭಾರ್ಯಾ ನಿಷ್ಠುರಭಾಷಿಣೀ ಪ್ರಭುರಪಿ
ಕ್ರೋಧೇನ ಪೂರ್ಣಃ ಸದಾ
ಸ್ನಾನಂ ಶೀತಲವಾರಿಣಾ ಹಿ ಸತತಂ
ಧಿಗ್‌ಧಿಗ್ ಗೃಹಸ್ಥಾಶ್ರಮಮ್ ॥

ಹೊರಗಿನಿಂದ ದಣಿದು ಮನೆಗೆ ಬಂದರೆ ಅಳುತ್ತಿರುವ ಮಕ್ಕಳು ಸ್ವಾಗತಬಯಸುತ್ತವೆ! ಮನೆಯೆಲ್ಲ ತೇವು, ಅಂಗಳ ಕೆಸರಿನಿಂದ ತುಂಬಿಹೋಗಿದೆ. ಹಾಯಾಗಿ ಮಲಗಬೇಕೆಂದರೆ ಹಾಸಿಗೆಯಲ್ಲಿ ತಗಣಿ ಚಿಕ್ಕಾಡುಗಳ ಕಡಿತ, ರುಚಿಯಿಲ್ಲದ ಊಟ, ಹೊಗೆಯಿಂದ ತುಂಬಿದ ಮನೆ, ಹೆಂಡತಿ ನಿಷ್ಠುರವಾಗಿ ಮಾತನಾಡುವಂಥವಳು, ಒಡೆಯನು ಯಾವಾಗಲೂ ಸಿಟ್ಟಿನಿಂದ ಉರಿಯುತ್ತಿರುವಂತಹನೂ ಇದ್ದಾರೆ. ಬಿಸಿನೀರಿನ ಸ್ನಾನದಿಂದ ಮೈ-ಮನಗಳೆರಡನ್ನೂ ಹಗುರಾಗಿಸಿಕೊಳ್ಳಬೇಕೆಂದರೆ ಅದೂ ಸಾಧ್ಯವಿಲ್ಲ! ಈ ರೀತಿ ಕುಟುಂಬದ ಜನರೂ ಪರಿಸರವೂ ಮನಸ್ಸಿಗೆ ಬೇಸರ ತರಿಸಿದಾಗ ಯಜಮಾನ 'ಇಂಥ ಗೃಹಸ್ಥಾಶ್ರಮಕ್ಕೆ ಧಿಕ್ಕಾರವಿರಲಿ' ಎಂದು ಉದ್ಗಾರ ತೆಗೆದರೆ ಆಚ್ಚರಿಪಡಬೇಕಿಲ್ಲ.

ಸಾಂಸಾರಿಕ ತಾಪತ್ರಯಗಳಿಗೂ ದಾರಿದ್ರ್ಯಕ್ಕೂ ಮೊದಲಿನಿಂದಲೂ ಸ್ನೇಹ ಅಂಥ ಕಡುಬಡತನದ ದಾರುಣ ಚಿತ್ರವನ್ನು ಈ ಸುಭಾಷಿತದಲ್ಲಿ ಕಾಣಬಹುದು:—

ವೃದ್ಧೋಂಧಃ ಪತಿರೇಷ ಮಂಚಕಗತಃ
ಸ್ಥೂಣಾವಶೇಷಂ ಗೃಹಂ
ಕಾಲೋಭ್ಯರ್ಣಜಲಾಗಮಃ ಕುಶಲಿನೀ
ವತ್ಸಸ್ಯ ವಾರ್ತಾಪಿ ನ ।
ಯತ್ನಾತ್ಸಂಚಿತ ತೈಲಬಿಂದುಘಟಿಕಾ
ಭಗ್ನೇತಿ ಪರ್ಯಾಕುಲಾ



ದೃಷ್ಟ್ವಾ ಗರ್ಭಭರಾಲಸಾಂ ನಿಜವಧೂಂ
ಶ್ವಶ್ರೂಶ್ಚಿರಂ ರೋದಿತಿ ॥

ಕುರುಡನೂ ಮುದುಕನೂ ಆಗಿರುವ ಗಂಡ ರೋಗಗ್ರಸ್ತನಾಗಿ ಮುರುಕುಮಂಚದ ಮೇಲೆ ಮಲಗಿದ್ದಾನೆ. ಮನೆಯ ಮೇಲ್ಛಾವಣಿಯೆಲ್ಲ ಕಿತ್ತು ಹೋಗಿ ಕಂಬಗಳು ಮಾತ್ರ ನಿಂತಿವೆ. ಮಳೆಗಾಲ ಬೇರೆ ಕಾಲಿಡುತ್ತಿದೆ. ಇದ್ದ ಒಬ್ಬ ಮಗ ಧನಾರ್ಜನೆಗಾಗಿ ದೇಶಾಂತರಕ್ಕೆ ಹೋಗಿದ್ದಾನೆ; ಅವನಿಂದ ಕುಶಲವಾರ್ತೆ ಸಹ ಇಲ್ಲ. ಇಂಥದರಲ್ಲಿ ಕಷ್ಟಪಟ್ಟು ಕೂಡಿಸಿಟ್ಟ ಎಣ್ಣೆಯ ಮಡಕೆ ಸಂಜೆಯ ಹೊತ್ತಿನಲ್ಲಿ ಒಡೆದು ಹೋಗುತ್ತದೆ. ಆಗ ದುಃಖಿತಳಾದ ಅತ್ತೆ ಗರ್ಭಭಾರದಿಂದ ಆಲಸ್ಯಗೊಂಡ ತನ್ನ ಸೊಸೆಯನ್ನು ನೋಡಿ ಸುಮ್ಮನೆ ಕಣ್ಣೀರು ಹಾಕುತ್ತಿದ್ದಾಳೆ! ಇಂಥ ಮನೆಯ ಸ್ಥಿತಿಯನ್ನು ನೋಡಿ ಎಂಥ ನಿರ್ದಯಿಯ ಹೃದಯವೂ ಕರಗದಿರಲಾರದು.

ಬಡತನವಿರಲಿ, ಸಿರಿತನವಿರಲಿ ಮನೆಯ ಜನರನ್ನು ಜೋಡಿಸುವ ಪ್ರೀತಿಯ ಬಂಧನ ಅಲ್ಲಿರದಿದ್ದರೆ ಗೃಹ-ಸ್ವಾಸ್ಥ್ಯ ಬುಡಮೇಲಾಗಿ ಕೌಟುಂಬಿಕ-ಕಲಹಗಳು ಕಾಲಿಡುತ್ತವೆ. ಮದುವೆಯಾದ ಮೇಲೆ ತನ್ನ ಮನದನ್ನೆಯೊಡನೆ ಹಾಯಾಗಿ ಇರಬಹುದೆಂದು ಭಾವಿಸಿ ಲಗ್ನವಾದ ಗೃಹಸ್ಥನೊಬ್ಬನಿಗೆ ತನ್ನ ತಾಯಿ ಹಾಗು ಹೆಂಡತಿಯರಲ್ಲಿ ಶಾಂತಿಯುತ ಸಹಜೀವನ ಸಾಧ್ಯವಿಲ್ಲೆಂದು ಮನವರಿಕೆಯಾಗುತ್ತದೆ. ತನ್ನ ಸಮಸ್ಯೆಯ ಪರಿಹಾರಕ್ಕಾಗಿ ಅವನು ತನ್ನ ಊರಿನ ರಾಜನ ಹತ್ತಿರ ಹೋಗಿ ಹೀಗೆ ಹೇಳುತ್ತಾನೆ:—

ಅಂಬಾ ತುಷ್ಯತಿ ನ ಮಯಾ ನ ಸ್ನುಷಯಾ
ಸಾ ಪಿ ನಾಂಬಯಾ ನ ಮಯಾ ।
ಅಹಮಪಿ ನ ತಯಾ, ನ ತಯಾ
ವದ ರಾಜನ್ ಕಸ್ಯ ದೋಷೋಽಯಮ್

"ನನ್ನ ತಾಯಿ ನನ್ನಿಂದಲೂ ಸಂತುಷ್ಟಳಾಗುವದಿಲ್ಲ; ತನ್ನ ಸೊಸೆಯಿಂದಲೂ ತೃಪ್ತಳಾಗುವದಿಲ್ಲ. ನನ್ನ ಹೆಂಡತಿಗೆ ನನ್ನಿಂದಾಗಲೀ ನನ್ನ ತಾಯಿಯಿಂದಾಗಲೀ ಸಮಾಧಾನವಿಲ್ಲ. ನನಗಂತೂ ಅವರಿಬ್ಬರಿಂದಲೂ ಸುಖವಿಲ್ಲ! ಎಲೈ ಅರಸನೇ, ನೀನೇ ಹೇಳು ಇದರಲ್ಲಿ ಯಾರ ತಪ್ಪಿದೆ?" ಆದರೆ ಪಾಪ ಆ ರಾಜನ ಮನಃಸ್ಥಿತಿಯೂ ಚೆನ್ನಾಗಿರುವದಿಲ್ಲ. ಅವನು ಪ್ರೀತಿಸಿದ ಯುವತಿ ಬೇರೊಬ್ಬನಲ್ಲಿ ಅನುರಕ್ತಳಾಗಿರುತ್ತಾಳೆ. ಆ ಯುವತಿಯಾದರೂ ಸುಖದಿಂದಿರುವಳೆಂದರೆ ಅವಳು ಪ್ರೀತಿಸಿದ ಯುವಕ ಬೇರೊಬ್ಬ ಚೆಲುವೆಯ ಮೇಲೆ ಮನಸ್ಸು ಇಟ್ಟಿರುತ್ತಾನೆ! ಹೀಗೆ ಪ್ರೀತಿಯ ತ್ರಿಕೋಣದಲ್ಲಿ ಸಿಲುಕಿ ಮನಃಸ್ಥೈರ್ಯವನ್ನು ಕಳೆದುಕೊಂಡ ಆ ಅರಸ ತನ್ನ ಪ್ರಜೆಯ ತೊಂದರೆಯನ್ನು ನಿವಾರಿಸಲು ಅಸಮರ್ಥನಾಗಿದ್ದರೆ ಅಚ್ಚರಿಯೇನು?

## ಕುಟುಂಬ ಕಲಹದ ವ್ಯಾಧಿ

ಕುಟುಂಬಕಲಹದ ವ್ಯಾಧಿ ಗುಡಿಸಲಿನಿಂದ ಅರಮನೆಯ ವರೆಗೆ ವ್ಯಾಪಿಸಿದಂತೆಯೇ ಹುಲು-ಮನುಜನಿಂದ ದೇವತೆಗಳ ವರೆಗೂ ಅದರ ವ್ಯಾಪ್ತಿಯಿದೆ. ಪರಶಿವನು ಹಾಲಾಹಲವನ್ನೇಕೆ ಕುಡಿದ ಗೊತ್ತೇ? ಸುಭಾಷಿತಕಾರ ಹೇಳುತ್ತಾನೆ ಕೇಳಿರಿ—

ಅತ್ತುಂ ವಾಂಛತಿ ವಾಹನಂ ಗಣಪತೇ-
ರಾಖುಂ ಕ್ಷುಧಾರ್ತಃ ಫಣೀ
ತಂ ಚ ಕ್ರೌಂಚಪತೇಃ ಶಿಖೀ, ಚ
ಗಿರಿಜಾಸಿಂಹೋಽಪಿ ನಾಗಾನನಮ್ ।
ಗೌರೀ ಜಹ್ನುಸುತಾಮಸೂಯತಿ,
ಕಲಾನಾಥಂ ಕಪಾಲಾನಲೋ
ನಿರ್ವಿಣ್ಣಃ ಸ ಪಪೌ ಕುಟುಂಬ-
ಕಲಹಾದೀಶೋಽಪಿ ಹಾಲಾಹಲಮ್ ॥

"ಹಸಿವೆಯಿಂದ ಬಳಲುವ ಹಾವು ಗಣಪತಿಯ ವಾಹನವಾದ ಇಲಿಯನ್ನು ತಿನ್ನಲು ಇಚ್ಛಿಸುತ್ತಿದೆ ಕಾರ್ತಿಕೇಯನ ವಾಹನವಾದ ನವಿಲು ಆ ಸರ್ಪವನ್ನೂ ಹಾಗು ಗಿರಿಜೆಯ ವಾಹನ ಸಿಂಹವು ಗಣಪತಿಯ ಆನೆಮೊಗವನ್ನು ತಿನ್ನಲು ಹವಣಿಸುತ್ತವೆ. ಗೌರಿಗೆ ಗಂಗೆಯನ್ನು ಕಂಡರೆ ಹೊಟ್ಟೆಕಿಚ್ಚು; ಕಪಾಲದಲ್ಲಿರುವ ಅಗ್ನಿಗೆ ಚಂದ್ರನ ಮೇಲೆ ಅಸೂಯೆ. ಹೀಗೆ ತನ್ನ ಪ್ರಪಂಚದಲ್ಲಿಯ ಜಗಳದಿಂದ ಜುಗುಪ್ಸೆಗೊಂಡು ಈಶ್ವರನು ಹಾಲಾಹಲವನ್ನು ಕುಡಿದನು." ಸರ್ವಶಕ್ತನಾದ ಹರನಿಗೇ ತನ್ನ ಕೌಟುಂಬಿಕ ಕಲಹವನ್ನು ಬಿಡಿಸುವದು ಅಸಾಧ್ಯವಾದ ಮೇಲೆ ಸಾಮಾನ್ಯ ಮನುಷ್ಯರ ಪಾಡೇನು! ಹರಿಯ ಸಂಸಾರದ ಕಥೆಯೂ ಹೆಚ್ಚುಕಡಿಮೆ ಇದೇ ರೀತಿಯದಾಗಿದೆ:

ಏಕಾ ಭಾರ್ಯಾ ಪ್ರಕೃತಿಮುಖರಾ
ಚಂಚಲಾ ಚ ದ್ವಿತೀಯಾ
ಪುತ್ರಸ್ತ್ವೇಕೋ ಭುವನವಿಜಯಿ
ಮನ್ಮಥೋ ದುರ್ನಿವಾರಃ ।
ಶೇಷಃ ಶಯ್ಯಾ, ಶಯನಮುದಧೇ,
ವಾಹನಂ ಪನ್ನಗಾರಿಃ
ಸ್ಮಾರಂ ಸ್ಮಾರಂ ಸ್ವಗೃಹಚರಿತಂ
ದಾರುಭೂತಃ ಮುರಾರಿಃ ।

ಒಬ್ಬ ಹೆಂಡತಿಯು ಸ್ವಭಾವತಃ ವಾಚಾಳಿಯಾಗಿದ್ದರೆ ಇನ್ನೊಬ್ಬಳು ಚಂಚಲೆಯಾಗಿದ್ದಾಳೆ. ಮಗನಾದ ಮನ್ಮಥವಿಶ್ವವನ್ನೇ ಜಯಿಸಿದವ— ತಂದೆಯ ಮಾತನ್ನು ಲೆಕ್ಕಿಸಬಹುದೇ! ಹಾಸಿಗೆ ಹಾವಿನದು, ಅದೂ ಸಮುದ್ರದಲ್ಲಿ. ವಾಹನ ಸರ್ಪವೈರಿ. ಈ ರೀತಿಯಿರುವ ತನ್ನ ಮನೆಯ ಇತಿಹಾಸವನ್ನು ನೆನೆದೇ ಮುರಾರಿ ಸಾರಥಿತನವನ್ನು ಕೈಕೊಂಡಿರಬೇಕೆಂದು ಕವಿಯ ಕಲ್ಪನೆ!

ಸುಭಾಷಿತಕಾರರು ದೇವತೆಗಳ ಕುಟುಂಬ-ಕಲಹ, ಸವತಿ-ಮತ್ಸರ, ಪತಿ-ಪತ್ನಿಯರ ಕೋಪ-ಪ್ರದರ್ಶನ, ಸರಳ-ಸಂಭಾಷಣೆ ಮುಂತಾದ ಮಾನವ-ಸಹಜವಾದ ಚರ್ಯೆಗಳನ್ನು ಅನೇಕ ಪದ್ಯಗಳಲ್ಲಿ ಚಿತ್ರಿಸಿದ್ದರೂ ನಮಗೆ ಆ ದೇವತೆಗಳ ಬಗೆಗಿನ ಭಕ್ತಿ-ಆದರಗಳು ಕುಂದದ ರೀತಿಯಲ್ಲಿ ವರ್ಣಿಸಿ ಅವರನ್ನು ಹೆಚ್ಚು ಆತ್ಮೀಯರನ್ನಾಗಿ ಮಾಡಿದ್ದಾರೆ. ಅಲ್ಲದೆ ಪ್ರಾಪಂಚಿಕ ತೊಂದರೆಗಳು ರಸ-ವಿರಸಗಳು ಮಾನವ ಕುಟುಂಬದಲ್ಲಷ್ಟೇ ಇರದೆ ದೇವತೆಗಳ ಸಂಸಾರದಲ್ಲೂ ಇದೆಯಾದುದರಿಂದ ಅವುಗಳ ಬಗೆಗೆ ವ್ಯಸನಪಟ್ಟುಕೊಳ್ಳುವ ಕಾರಣವಿಲ್ಲೆಂದು ತಿಳಿಸುವದೂ ಅವರ ಉದ್ದೇಶವಾಗಿರಬೇಕು.

ಪ್ರಾಪಂಚಿಕ-ಕಲಹದ ಇನ್ನೊಂದು ಸ್ವರೂಪ ಪತಿ-ಪತ್ನಿಯರ ಪ್ರಣಯ-ಕಲಹ. ಆದರೆ ಈ ಜಗಳ ಕುಟುಂಬ-ಕಲಹದಂತೆ ಸಂಸಾರದಲ್ಲಿ ವಿರಸವನ್ನೂ, ಮನಸ್ತಾಪವನ್ನೂ ತಂದೊಡ್ಡದೆ ದಾಂಪತ್ಯ ಜೀವನದಲ್ಲಿ ವೈವಿಧ್ಯವನ್ನೂ, ಮಾಧುರ್ಯವನ್ನೂ ತರುವದು. ಇಂಥ ಕಲಹದಲ್ಲಿ ಸಾಮಾನ್ಯವಾಗಿ ಪ್ರಿಯನೇ ಅಪರಾಧಿಯಾಗಿರುತ್ತಾನೆ. ಹೆಣ್ಣು ಅಬಲೆಯಾಗಿದ್ದರೂ ಅವಳು ಮುನಿದಾಗ ಅವಳ ಒಂದು ಕುಡಿನೋಟಕ್ಕಾಗಿ, ಹೂ-ನಗೆಗಾಗಿ ಎಂಥ ಬಲಿಷ್ಠನಾದ ಪುರುಷನೂ ಅವಳಿತ್ತ ಶಿಕ್ಷೆಯನ್ನನುಭವಿಸಲು ಸಿದ್ಧನಾಗಿರುತ್ತಾನೆಂಬುದು ಅನುಭವ ಸಿದ್ಧವಾದ ಮಾತು. ಪ್ರಿಯನ ಅಪರಾಧಕ್ಕಾಗಿ ಅವನಿಗೆ ವಿಲಕ್ಷಣವಾದ ಶಿಕ್ಷೆಯನ್ನೀಯುವ ಮಾನಿನಿಯರ ಚಿತ್ರಗಳು ಸುಭಾಷಿತಗಳಲ್ಲಿ ಬಹಳೇ ಸರಸವಾಗಿ ಮೂಡಿ ಬಂದಿವೆ.

## ಮಾನಿನಿಯ ಕೋಪ

ಪ್ರಿಯಕರನಿಗೆ ತನ್ನಲ್ಲಿರಬೇಕಾದಷ್ಟು ಅನುರಾಗವಿಲ್ಲೆಂದು ಭಾವಿಸಿ ಮುನಿದ ಯುವತಿಯೊಬ್ಬಳು ತನ್ನ ನಲ್ಲನನ್ನು ನೋಡಿದೊಡನೆ ಮೌನವ್ರತಧರಿಸಿ ಕಣ್ಣೀರುಗರೆಯುತ್ತಾಳೆ. ಆಗ ಆ ಪತಿ ಅವಳನ್ನು ಹತ್ತಿರಕ್ಕೆಳೆದು ಮಾತನಾಡಿಸುತ್ತಾನೆ:

ಬಾಲೇ, ನಾಥ, ವಿಮುಂಚ ಮಾನಿನಿ ರುಷಂ,
ರೋಷಾನ್ಮಯಾ ಕಿಂ ಕೃತಂ
ಖೇದೋಽಸ್ಮಾಸು, ನ ಮೇಽಪರಾಧ್ಯತಿ
ಭವಾನ್ ಸರ್ವೇಽಪರಾಧಾ ಮಯಿ ।
ತತ್ಕಿಂ ರೋದಿಷಿ ಗದ್ಗದೇನ ವಚಸಾ,
ಕಸ್ಯಾಗ್ರತೋ ರುದ್ಯತೇ,
ನನ್ವೇತನ್ಮಮ ಕಾ ತವಾಸ್ಮಿ, ದಯಿತಾ,
ನಾಸ್ಮೀತ್ಯತೋ ರುದ್ಯತೇ ॥

"ಬಾಲೆ," "ಒಡೆಯ!" "ನಿನ್ನ ಸಿಟ್ಟನ್ನು ಬಿಡು." "ಕೋಪಗೊಂಡು ನಾನೇನು ಮಾಡಿದ್ದೇನೆ?" "ನನ್ನಮೇಲೆ ಮುನಿಸು." "ತಾವೇನೂ ಅಪರಾಧ ಮಾಡಿಲ್ಲ; ಎಲ್ಲ ತಪ್ಪೂ ನನ್ನದೇ." "ಹಾಗಾದರೆ ಗದ್ಗದ ಕಂಠದಿಂದ ಏಕೆ ಅಳುತ್ತಿರುವಿ?" "ಯಾರ ಮುಂದೆ!" "ನನ್ನ ಮುಂದೆ ನನ್ನ ಮುಂದೆ ಅಲ್ಲವೇ!" "ನಾನಾರು ನಿಮಗೆ" "ಪ್ರಿಯತಮೆ!" "ಅಯ್ಯೋ, ಹಾಗಿಲ್ಲವಲ್ಲಾ ಎಂದೇ ಕಂಬನಿಸುರಿಸುತ್ತಿದ್ದೇನೆ." ಕಠಿಣವಾದ



ಮಾತುಗಳಿಲ್ಲದಿದ್ದರೂ ಇಲ್ಲಿ ಬಹಳ ಜಾಣ್ಮೆಯಿಂದ ಮಾನಿನಿ ತನ್ನ ಕೋಪವನ್ನು ಪ್ರದರ್ಶಿಸಿದ್ದಾಳೆ. ಕೊನೆಯ ಒಂದೇ ವಾಕ್ಯ ಅವಳ ಪ್ರಿಯಕರನಿಗೆ ಅವಳ ವ್ಯಥೆಯ ಕಾರಣವನ್ನು ಹೇಳಲು ಸಮರ್ಥವಾಗಿದೆ.

ಇನ್ನೊಬ್ಬಳು ತನ್ನ ನಲ್ಲನ ವಿಷಯದಲ್ಲಿ ತನಗಿದ್ದ ಕೋಪವನ್ನು ವಿಲಕ್ಷಣವಾದ ರೀತಿಯಲ್ಲಿ ತೋರ್ಪಡಿಸಿದ್ದಾಳೆ :—

ಏಕತ್ರಾಸನಸಂಸ್ಥಿತಿಃ ಪರಿಹೃತಾ
ಪ್ರತ್ಯುದ್ಗಮಾದ್ದೂರತಃ
ತಾಂಬೂಲಾಹರಣಚ್ಛಲೇನ ರಭಸಾಶ್ಲೇಷ-
ಕ್ರಿಯಾವಿಘ್ನಿತಾ
ಸಂಲಾಪೋಽಪಿ ನ ಮಿಶ್ರಿತಃ ಪರಿಜನಂ
ವ್ಯಾಪಾರಯಂತ್ಯಾಂತಿಕೆ
ಭರ್ತುಃ ಪ್ರತ್ಯುಪಚಾರತಶ್ಚತುರಯಾ
ಕೋಪಃ ಕೃತಾರ್ಥೀಕೃತಃ ||

ಅವನು ಇನ್ನೂ ದೂರದಲ್ಲಿ ಬರುತ್ತಿರುವಾಗಲೇ ಸ್ವಾಗತವನ್ನು ಕೋರುವದಕ್ಕಾಗಿ ಎದ್ದು ಬಂದು ತನ್ನ ಜೊತೆಯಲ್ಲಿ ಅವನು ಕೂಡ್ರುವದನ್ನು ನಿವಾರಿಸಿದಳು. ತಾನೇ ಸ್ವತಃ ಅವನಿಗೆ ತಾಂಬೂಲವನ್ನು ತಂದುಕೊಡುವ ನಿಮಿತ್ತದಿಂದ ಆಲಿಂಗನವನ್ನು ತಪ್ಪಿಸಿದಳು. ಪರಿಜನರಿಗೆ ಅವರವರ ಕಾರ್ಯಗಳನ್ನು ನಿಯಮಿಸಿಕೊಡುವ ನೆವದಲ್ಲಿ ಅವನೊಡನೆ ಒಂದು ನಿಮಿಷವೂ ಮಾತನಾಡುವದಿಲ್ಲ. ಈ ರೀತಿ ತನ್ನ ಗಂಡನನ್ನು ಉಪಚರಿಸುವ ನೆವದಲ್ಲಿ ಅವನ ಮೇಲಿದ್ದ ಸಿಟ್ಟನ್ನು ಆ ಯುವತಿ ಸಾರ್ಥಕಪಡಿಸಿಕೊಳ್ಳುತ್ತಾಳೆ

ದಾಂಪತ್ಯ ಜೀವನದಲ್ಲಿ ಆಗಾಗ ಬರುವ ಇಂಥ ಹುಸಿ-ಮುನಿಸು-ಕೋಪ ಪ್ರದರ್ಶನಗಳು ತಾತ್ಕಾಲಿಕವಾದವುಗಳು. ಅವುಗಳನ್ನು ನಿವಾರಿಸಿ, ತಪ್ಪು ತಿಳಿವಳಿಕೆಯನ್ನು ದೂರಮಾಡುವದರಲ್ಲಿ ಅಪರಾಧಿಯಾದ ವ್ಯಕ್ತಿ ಒಂದು ಬಗೆಯ ಆನಂದವನ್ನೇ ಅನುಭವಿಸುತ್ತಾನೆ. ಆದರೆ ಒಮ್ಮೊಮ್ಮೆ ಪತಿಯ ಪ್ರೀತಿಯ ಸೆಲೆ ಪೂರ್ಣವಾಗಿಯೇ ಬತ್ತಿಹೋದಾಗ ಹೆಣ್ಣು ಹೃದಯ ಎಂಥ ವೇದನೆಯನ್ನನುಭವಿಸಬೇಕಾಗುತ್ತದೆಯೆಂಬುದನ್ನು ಈ ಪದ್ಯ ಸುಂದರವಾಗಿ ನಿರೂಪಿಸುತ್ತದೆ :—

ತದಾಭೂದಸ್ಮಾಕಂ ಪ್ರಥಮಮವಿಭಿನ್ನಾ
ತನುರಿಯಂ
ತತೋನು ತ್ವಂ ಪ್ರೇಯಾನಹಮಪಿ
ಹತಾಶಾ ಪ್ರಿಯತಮಾ ।
ಇದಾನೀಂ ನಾಥಸ್ತ್ವಂ ವಯಮಪಿ
ಕಲತ್ರಂ ಕಿಮಪರಂ
ಮಯಾಪ್ತಂ ಪ್ರಾಣಾನಾಂ
ಕುಲಿಶಕಠಿಣಾನಾಂ ಫಲಮಿದಮ್ ||

"ಮೊದಲು ನಮ್ಮಿಬ್ಬರ ದೇಹಗಳು ಒಂದೇ ಏನೋ ಅನ್ನುವಷ್ಟು ಅನ್ಯೋನ್ಯತೆ ಇತ್ತು. ಆ ಮೇಲೆ ನೀನು ಪ್ರಿಯಕರ ನಾನು ದುರ್ದೈವಿಯಾದ ಪ್ರಿಯತಮೆಯಾದೆ. ಈಗ ನೀನು ಒಡೆಯ ನಾನು ಕೇವಲ ಹೆಂಡತಿ. ಹೆಚ್ಚೇನು, ವಜ್ರಕ್ಕಿಂತ ಕಠಿಣವಾದ ಪ್ರಾಣಗಳ ಫಲವನ್ನು ನಾನು ಪಡೆದೆ." ಪರಸ್ಪರರನ್ನು ಒಂದುಗೂಡಿಸಿದ ಪ್ರೇಮದ ಬಂಧನ ಬರ-ಬರುತ್ತ ಶಿಥಿಲವಾಗಿ ಪತಿ-ಪತ್ನಿಯರ ಸಂಬಂಧ ಒಡೆಯ-ಸೇವಕನಂತಾದುದರ ದುರಂತದ ವರ್ಣನೆ ಇಲ್ಲಿದೆ. ಪ್ರಥಮ-ದರ್ಶನದಲ್ಲಿಯೇ ಅನುರಾಗವು ಅಂಕುರಿಸಿ ವಿವಾಹಬದ್ಧರಾಗಿ ದಿನಗಳೆದಂತೆ ಅವರ ದಾಂಪತ್ಯ ಜೀವನ ವಿರಸದಲ್ಲಿ, ವಿಚ್ಛೇದನದಲ್ಲಿ ಮುಕ್ತಾಯವಾಗುವ ಆಧುನಿಕ ಪ್ರೀತಿ-ವಿವಾಹಗಳಿಗೂ ಇದು ಅನ್ವಯಿಸದಿರುವದು.

## ಕುಲಟೆಯರ ಅಂದಗೇಡಿಯಾದ ಬಾಳು

ಸಂಸಾರದಲ್ಲಿ ಪುರುಷರಂತೆ ಸ್ತ್ರೀಯರೂ ಕೈಹಿಡಿದವನಿಗೆ ದ್ರೋಹಬಗೆಯಬಹುದು. ವೈವಾಹಿಕ ಜೀವನದ ಚೌಕಟ್ಟಿನಲ್ಲಿರಲು ಬಯಸದೆ ಸ್ವಚ್ಛಂದವಾಗಿರಲು ಇಚ್ಛಿಸುವ ಅಸತಿಯರು ಯಾವ ಕಾಲಕ್ಕೂ ಸಮಾಜದಲ್ಲಿ ಇದ್ದೇ ಇರುತ್ತಾರೆ. ಇಂಥ ಕುಲಟೆಯರ ಬಾಳಿನ ಅಂದಗೇಡಿತನವನ್ನು ಓರ್ವ ಕವಯಿತ್ರಿಯೇ ಹೀಗೆ ಎತ್ತಿ ತೋರಿಸಿದ್ದಾಳೆ : "ನೆರೆಮನೆಯವಳೇ ನಮ್ಮ ಮನೆಯ ಕಡೆಗೆ ತುಸು ನೋಡಿಕೊಂಡಿರು. ಈ ನನ್ನ ಮಗುವಿನ ತಂದೆ ಬಾವಿಯ ಸವಳು ನೀರನ್ನು ಕುಡಿಯುವದಿಲ್ಲ. ಆದುದರಿಂದ ಒಬ್ಬಂಟಿಗಳಾದರೂ ಚಿಂತೆಯಿಲ್ಲ. ಹಳ್ಳಕ್ಕೆ ಹೋಗಿ ಬರುವೆನು. ಅಲ್ಲಿ ತಮಾಲವೃಕ್ಷಗಳ ಕತ್ತಲಿದೆ. ಮುಳ್ಳು-ಕಂಟಿಗಳು ಮೈಗೆ ಚುಚ್ಚುತ್ತವೆ. ಬೇಗನೆ ಬರುತ್ತೇನೆ." ಈ ಪದ್ಯದಲ್ಲಿ ಅಸತಿಯು ಸಂಕೇತಸ್ಥಾನಕ್ಕೆ ಹೋಗುವದೂ, ನಖಕ್ಷತಾದಿಗಳೂ ಸೂಚಿತವಾಗಿ ಅಂಥ ಹೆಣ್ಣಿನ ಬಗೆಗೆ ನಮ್ಮಲ್ಲಿ ಜುಗುಪ್ಸೆಯುಂಟಾಗುತ್ತದೆ.

ಸತಿ-ಪತಿಯರಲ್ಲಿ ವಿವಾದ-ವಿರಸಗಳು ಸರ್ವೇಸಾಮಾನ್ಯವಾಗಿದ್ದರೂ ಅವರೀರ್ವರು ಅಗಲಬೇಕಾದ ಸಂದರ್ಭವೊದಗಿದಾಗ ಮಾತ್ರ ಅವರೊಳಗಿನ ಮತಭೇದಗಳೆಲ್ಲ ದೂರವಾಗಿ ವಿರಹ ದುಃಖದಿಂದ ಅವರ ಹೃದಯಗಳು ಭಾರವಾಗುವವು. ಧನಾರ್ಜನೆಗಾಗಿ ಅಥವಾ ಸ್ವಾಮಿಕಾರ್ಯಕ್ಕಾಗಿ ಪ್ರಯಾಣಕ್ಕೆ ಸನ್ನದ್ಧನಾದ ಪತಿ ತನ್ನ ಪತ್ನಿಗೆ 'ಹೋಗಿ ಬರಲೇ' ಎಂದು ಕೇಳಿದಾಗ, ಅವನನ್ನು ಬಿಟ್ಟಿರಲು ಮನಸ್ಸಿರದ ಆಕೆ ಏನು ಹೇಳಬೇಕೆಂದು ತೋಚದೆ ಕೊನೆಗೆ "ಹೋಗಬೇಡಿ" ಎನ್ನುವದು ಅಮಂಗಲ ; 'ಹೋಗಿರಿ' ಎಂದರೆ ಸ್ನೇಹಶೂನ್ಯ ; "ಇಲ್ಲೇ ಇರಿ" ಎಂದು ಹೇಳಿದರೆ ಆಜ್ಞೆ ; "ನಿಮ್ಮ ಇಚ್ಛೆಯಂತೆ ಮಾಡಿರಿ" ಎಂಬುವದು ಉದಾಸೀನತೆ ; "ನೀವಿಲ್ಲದೆ ನಾನು ಬದುಕಿರಲಾರೆ" ಎಂದರೆ ನಂಬುವಿರೊ ಇಲ್ಲವೊ ! ಆದುದರಿಂದ ನಾಥ, ನೀವು ಹೊರಟಿರುವಾಗ ಏನು ಹೇಳುವದು ಉಚಿತವೋ ಅದನ್ನು ನೀವೇ ನನಗೆ ಕಲಿಸಿಕೊಡಿರಿ" ಎಂದು ಹೇಳುತ್ತಾಳೆ.

ಇನ್ನೊರ್ವಳು,

ಯಾಸ್ಯಾಮೀತಿ ಗಿರಃಶ್ರುತಾ
ಹೃವಧಿರಪ್ಯಾರೋಪಿತಶ್ಚೇತಸಿ
ಗೇಹೇ ಯುಕ್ತಮಲೇ ಭವಿಷ್ಯಸಿ
ಸದೇತತ್ಸಮಾಕರ್ಣಿತಮ್ ।
'ಬಾಲೇ ಮಾ ಶುಚ' ಇತ್ಯುದೀರಿತವತಃ
ಪತ್ಯುರ್ನಿರೀಕ್ಷ್ಯಾನನಂ
ನಿಶ್ವಸ್ಯ ಸ್ತನಪಾಯಿನಿ ಸ್ವತನಯೇ
ದೃಷ್ಟಿಶ್ಚಿರಂ ಪಾತಿತಾ ॥

ಪತಿಯು "ಹೋಗಿಬರುತ್ತೇನೆ; ಅಳಬೇಡ; ಮನೆಯ ಕಡೆಗೆ ಜೋಕೆ" ಎಂದು ಮುಂತಾಗಿ ಹೇಳಿದಾಗ ನಿಟ್ಟುಸಿರುಬಿಟ್ಟು ಸ್ತನಪಾನಮಾಡುತ್ತಿದ್ದ ತನ್ನ ಮಗುವಿನೆಡೆಗೆ ದೃಷ್ಟಿಯನ್ನು ಹೊರಳಿಸುತ್ತಾಳೆ. ತಮ್ಮಿಬ್ಬರ ಹೃದಯಗಳನ್ನು ಬಂಧಿಸಿದ ಮುದ್ದುಮಗುವನ್ನು ನೋಡಿ ಅಗಲಿಕೆಯ ದುಃಖವನ್ನು ಮರೆಯಬಹುದೆಂದು ಪತಿಗೆ ಸೂಚಿಸುತ್ತಾಳೆ.

## ಪ್ರಿಯಾಗಮನದ ಆತುರ

ವರ್ಷಾಕಾಲ ಸನ್ನಿಹಿತವಾದೊಡನೆ ದೇಶಾಂತರ ಹೋಗಿರುವ ಪುರುಷರೆಲ್ಲ ತಂತಮ್ಮ ಮನೆಗಳಿಗೆ ಹಿಂತಿರುಗಿ ಕೌಟುಂಬಿಕ ಜೀವನದಲ್ಲಿ ಸಹಭಾಗಿಗಳಾಗುವದು ವಾಡಿಕೆಯಾಗಿತ್ತು. ಆಗಸದಲ್ಲಿ ಮೇಘದರ್ಶನವಾದೊಡನೆ ತಮ್ಮ ಪ್ರಿಯತಮರು ತಮ್ಮನ್ನು ಸೇರುವರೆಂಬ ಆಸೆಯಿಂದ ಯುವತಿಯರ ಮನಗಳು ಪ್ರಫುಲ್ಲಿತವಾಗುತ್ತವೆ. ಆದರೆ ಪತಿ ಬರುವದು ಸ್ವಲ್ಪತಡವಾಯಿತೆಂದರೆ ಪ್ರೋಷಿತ ಭರ್ತೃಕೆಯ (ದೇಶಾಂತರ ಹೋಗಿರುವವನ ಪತ್ನಿ) ಮನ ಇಲ್ಲದ ಶಂಕೆಗೊಳಗಾಗುತ್ತದೆ. ಅಂಥ ತರುಣಿಯ ವ್ಯಥೆಯನ್ನು ಒಂದು ಸುಭಾಷಿತ ಹೀಗೆ ವರ್ಣಿಸುತ್ತದೆ—

ಲಿಖತಿ ನ ಗಣಯತಿ ರೇಖಾ
ನಿರ್ಝರಭಾಷ್ಪಾಂಬುಧೌತಗಂಡತಲಾ ।
ಅವಧಿ ದಿವಸಾವಸಾನಂ ಮಾ ಭೂದಿತಿ
ಶಂಕಿತಾ ಬಾಲಾ ॥

ಪ್ರಿಯನು ಮರಳಿ ಬರುವ ದಿನವನ್ನು ಹೇಳಿ ಹೋಗಿರುತ್ತಾನೆ. ಅವನು ಹೋದ ಮೇಲೆ ದಿನಕ್ಕೆ ಒಂದು ಗೆರೆಯಂತೆ ಅವಳು ಗುರುತು ಹಾಕಿರುತ್ತಾಳೆ. ಆದರೆ ಆ ಗೆರೆಗಳನ್ನವಳು ಎಣಿಸಲಾರಳು. ಏಕೆಂದರೆ ಗಡುವಿನ ದಿನ ಮುಗಿಯಿತೋ ಏನೋ ಎಂದು ಅವಳ ಮನಸ್ಸು ಅಳುಕುತ್ತದೆ. ಅಂತೆಯೇ ಕಣ್ಣೀರು ಸುರಿಸುತ್ತ ಕುಳಿತಿದ್ದಾಳೆ!



ಗಂಡನ ದಾರಿಕಾಯ್ದು ಬೇಸತ್ತ ಇನ್ನೊಬ್ಬಳು ಒಬ್ಬ ದಾರಿಕಾರನಿಗೆ ತನ್ನ ಪತಿಯ ವಿಷಯ ಕೇಳುತ್ತಾಳೆ—

"ಅಣ್ಣ, ಮಾರ್ಗಸ್ಥ! ನಿನಗೆ ದಾರಿಯಲ್ಲಿ ಯಾರಾದರೂ ಪಥಿಕರು ಸಿಕ್ಕಿದ್ದರೇ?"

"ತಂಗಿ, ನೂರಾರು ಮಂದಿ ಭೆಟ್ಟಿಯಾಗುತ್ತಾರೆ! ನಿನ್ನ ಗಂಡ ಹೇಗಿದ್ದಾನೆಂದು ಬಣ್ಣಿಸಿದರೆ ಹೇಳಬಹುದು.

"ಯಾರನ್ನು ನೋಡಿದರೆ ಯುವತಿಯರ ಕಣ್ಣುಗಳು ಆನಂದದಿಂದ ಅರಳುವವೋ ಅವನೇ ನನ್ನ ಪ್ರಾಣಪ್ರಿಯ!" ಹೀಗೆ ಹೇಳಿ ಅವಳು ಮೂರ್ಛೆ ಹೋಗುತ್ತಾಳೆ! ಸಂಪರ್ಕಸಾಧನಗಳ ಅಭಾವದ ಮೂಲಕ ಆಗಿನ ಕಾಲದಲ್ಲಿ ಪ್ರವಾಸ ಎಷ್ಟು ಗಂಡಾಂತರಕಾರಿಯಾಗಿತ್ತೆಂಬುದನ್ನು ನೆನೆದರೆ ಹೆಣ್ಣು ಹೃದಯದ ಈ ಉದ್ವೇಗದ ಅರ್ಥ ನಮಗಾಗುತ್ತದೆ.

ಪತಿ ಮನೆಗೆ ಬಂದೊಡನೆ ಅವನಿಗೆ ಎಲ್ಲ ತರದ ಸುಖ-ಸೌಲಭ್ಯಗಳನ್ನೊದಗಿಸುವದು ಹೆಂಡತಿಯ ಕರ್ತವ್ಯವಾಗಿರುತ್ತದೆ. ಪ್ರಾಚೀನಕಾಲದಿಂದಲೂ ಭಾರತೀಯ ಕುಟುಂಬದಲ್ಲಿ ಸ್ತ್ರೀಗೆ ಪೂಜ್ಯವಾದ ಸ್ಥಾನವಿದೆ. ಸುಭಾಷಿತಕಾರರು ಸಹ, "ಗೃಹಂ ತು ಗೃಹಿಣೀಹೀನಂ ಕಾಂತಾರಾದತಿರಿಚ್ಯತೇ" ಎಂದು ಹೇಳಿದ್ದಾರೆ- ಗೃಹಿಣಿಯೂ ತನ್ನ ಗೌರವಯುತವಾದ ಸ್ಥಾನಕ್ಕೆ ಕಲಂಕ ಬರದಂತೆ ಜಾಗ್ರತೆವಹಿಸಬೇಕಾಗುತ್ತದೆ. ತನ್ನ ಹೊಣೆಯನ್ನು ಮರೆತು ಮಹಿಳೆ ಗಂಡುಬೀರಿಯಂತೆ ವರ್ತಿಸತೊಡಗಿದರೆ ಅಂಥ ಮನೆ ನಾಶವಾದಂತೆಯೇ. ಇದನ್ನೇ ಕವಿಯೊಬ್ಬ, "ಸ್ತ್ರೀ ಪುಂವಚ್ಚ ಪ್ರಭವತಿ ಯದಾ ತದ್ಧಿ ಗೇಹಂ ವಿನಷ್ಟಮ್" ಎಂದಿದ್ದಾನೆ. "ಅಬಲಾ ಯತ್ರ ಪ್ರಬಲಾ... ...ನಹಿ ನಹಿ ತತ್ರ ಧನಾಶಾ ಜೀವಿತಾಶಾಪಿ ದುರ್ಲಭಾ" ಎಂದು ಹೇಳುವ ಇನ್ನೊಂದು ಸುಭಾಷಿತವೂ ಇದೇ ಅರ್ಥವನ್ನು ಸೂಚಿಸುತ್ತದೆ.

ಪ್ರಾಪಂಚಿಕರಿಗೆ ದುಃಖ-ಕಷ್ಟಗಳು ಬರುವದು ಸಹಜ. ಅವುಗಳನ್ನು ಮರೆಯುವದಕ್ಕೆ ಭಗವದ್ಭಕ್ತಿಯೊಂದೇ ಶ್ರೇಷ್ಠವಾದ ಸಾಧನವೆಂದು ಸುಭಾಷಿತಗಳು ಒಂದಿಲ್ಲೊಂದು ರೀತಿಯಲ್ಲಿ ತಿಳಿಸುತ್ತವೆ. 'ಅಶನಂ ಮೇ, ವಸನಂ ಮೇ, ಜಾಯಾ ಮೇ, ಬಂಧುವರ್ಗೋ ಮೇ। ಇತಿ 'ಮೇಮೇ' ಕುರ್ವಾಣಾಂ ಕಾಲವೃಕೋ ಹಂತಿ ಪುರುಷಾಜಮ್॥' ಎಂದು ಅವರು ಎಚ್ಚರಿಸಿದ್ದಾರೆ. ಎಲ್ಲ ಸಂಸಾರಿಗಳು, "ಅಹಿಂಸಾ, ಸತ್ಯವಚನಂ, ಸರ್ವಭೂತಾನುಕಂಪನಮ್। ಶಮೋ, ದಾನಂ ಯಥಾಶಕ್ತಿ ಗಾರ್ಹಸ್ಥೋ ಧರ್ಮ ಉಚ್ಯತೇ॥" ಎಂಬ ಗೃಹಸ್ಥ ಧರ್ಮವನ್ನು ಪಾಲಿಸಬೇಕು. ಆಗ ಭೂಮಿಯು ಸ್ವರ್ಗವಾದೀತು, ಭವಸಾಗರವನ್ನು ದಾಟುವ ಮಾರ್ಗವನ್ನು ಜನಸಾಮಾನ್ಯರಿಗೂ ತಿಳಿಯುವ ಭಾಷೆಯಲ್ಲಿ ಸುಭಾಷಿತಕಾರರು ಹೇಳಿದ್ದಾರೆ:—

ಕಸ್ಯಚಿತ್ ಕಿಮಪಿ ನೊ ಹರಣೀಯಂ
ಮರ್ಮವಾಕ್ಯಮಪಿ ನೋಚ್ಚರಣೀಯಮ್।
ಶ್ರೀಪತೇಃ ಪದಯುಗಂ ಸ್ಮರಣೀಯಂ
ಲೀಲಯಾ ಭವಜಲಂ ತರಣೀಯಮ್॥

ಈ ರೀತಿ ಕುಟುಂಬದ ಹಲವಾರು ಸನ್ನಿವೇಶಗಳು, ನಿತ್ಯಜೀವನಕ್ಕೆ ಸಂಬಂಧಿಸಿದ ವಿವೇಕವಾಕ್ಯಗಳು ಸುಭಾಷಿತಗಳಲ್ಲಿ ಸುಲಭವಾಗಿ ನೆನಪಿಟ್ಟುಕೊಳ್ಳಬಹುದಾದಂಥ ಭಾಷೆಯಲ್ಲಿ ಬಹುರಮ್ಯವಾಗಿ ಮೂಡಿಬಂದಿವೆ. ಇವುಗಳಲ್ಲೆಲ್ಲ ನಮ್ಮೆಲ್ಲರಿಗೂ ಸಾಮಾನ್ಯವಾಗಿರುವ ಕುಟುಂಬ-ದರ್ಶನವನ್ನೇ ನಾವು ಕಂಡರೂ ಕವಿಹೃದಯ ನಿಪುಣತೆಯಿಂದ ಪ್ರತಿಭೆಯ ಬಣ್ಣದಲ್ಲದ್ದಿ ಅನುಭವದ ಕುಂಚದಿಂದ ಚಿತ್ರಿಸಿದ ಆ ಚಿತ್ರಗಳು ಸಾಮಾನ್ಯತೆಯಲ್ಲಿಯೇ ಸ್ವಾರಸ್ಯವನ್ನು ತೋರುತ್ತವೆ. ಅದಕ್ಕೆಂದೇ "ಸುಭಾಷಿತ ರಸವು ಉಳಿದೆಲ್ಲ ರಸಗಳನ್ನು ಮೀರಿಸುವಂತಹದು" ಎಂದಿದ್ದಾರೆ. "ದ್ರಾಕ್ಷಾ ಮ್ಲಾನಮುಖೀ ಜಾತಾ ಶರ್ಕರಾ ಚಾಶ್ಮತಾಂ ಗತಾ। ಸುಭಾಷಿತ ರಸಸ್ಯಾಗ್ರೇ ಸುಧಾ ಭೀತಾ ದಿವಂಗತಾ॥ ಎಂದು ಆ ರಸವನ್ನು ವರ್ಣಿಸಿದ್ದು ಯಥಾರ್ಥವಾಗಿದೆ.



ಹೆಣ್ಣಿನ ಶಕ್ತಿಗೆ ಮೀರಿದ್ದು ಯಾವುದೂ ಇಲ್ಲ

# ಸಾಮಾಜಿಕ ಅನಿಷ್ಟ ನಿವಾರಣೆ ಮಹಿಳೆಯರಿಂದಲೇ ಸಾಧ್ಯ

ಶ್ರೀಮತಿ ನೀಳಾದೇವಿ, ಮೈಸೂರು

ನಮ್ಮ ಸಮಾಜದಲ್ಲಿ ಇಂದು ಅನೇಕ ಅನಿಷ್ಟಗಳು ಹಣಿಕಿಕ್ಕಿವೆ. ಕಳ್ಳಪೇಟೆ, ವರದಕ್ಷಿಣೆ, ಬಾಲ ದುಡಿಮೆಗಾರರ ಶೋಷಣೆ ಹೀಗೆ ಹಲವಾರು ಅನಿಷ್ಟಗಳು ಸಮಾಜದ ಉನ್ನತಿಗೆ ಮಾರಕವಾಗಿ ಪರಿಣಮಿಸಿವೆ. ಈ ಅನಿಷ್ಟಗಳನ್ನು ಕೇವಲ ಕಾಯ್ದೆಯಿಂದ ಮಾತ್ರ ನಿವಾರಿಸಲು ಸಾಧ್ಯವಿಲ್ಲ. ಜನರಲ್ಲಿ ತಿಳುವಳಿಕೆ ಮೂಡಿಸಬೇಕು; ತಾವು ಮಾಡುತ್ತಿರುವುದು ತಪ್ಪು ಎಂಬ ಭಾವನೆ ಅವರಲ್ಲಿ ಒಡಮೂಡಬೇಕು. ಆಗಲೇ ಅವರಲ್ಲಿ ಎಚ್ಚರಿಕೆ ಮೂಡುವುದು. ಈ ಕೆಲಸವನ್ನು ಯಾರು ಮಾಡಬೇಕು? ಮಹಿಳೆಯರು ಮಾತ್ರ ಇದನ್ನು ಯಶಸ್ವಿಯಾಗಿ ನಿರ್ವಹಿಸಬಲ್ಲರು. ಅದು ಹೇಗೆ ಸಾಧ್ಯ ಎಂಬುದನ್ನು ಈ ಮತ್ತು ಮುಂದಿನ ಐದು ಲೇಖನಗಳಲ್ಲಿ ಲೇಖಿಕೆಯರು ವಿವಿಧ ದೃಷ್ಟಿಕೋನಗಳಿಂದ ವಿವರಿಸಿರುವರು. ಇದೊಂದು ತುಂಬ ಉಪಯುಕ್ತವಾದ ವಿಚಾರಸಂಕಿರಣ

ಹಿಂದಿನ ಕಾಲದ ಸಾಮಾಜಿಕ ಅನಿಷ್ಟಗಳ ಮುಖ ಒಂದು ರೀತಿಯಲ್ಲಿದ್ದರೆ, ನವೀನ ಕಾಲದಲ್ಲಿ ಮತ್ತೊಂದು ಮುಖವಾಗಿದೆ.

ಈಗ ಸಹಗಮನವಿಲ್ಲ. ತೊಟ್ಟಿಲ್ ಮದುವೆ ಇಲ್ಲ. ಬಹು ಪತ್ನಿತ್ವವಿಲ್ಲ. ಅದರ ಬದಲಿ ಈಗ ಹುಟ್ಟಿಕೊಂಡಿರುವ ಅನ್ಯಾಯಗಳು ಮನೆಯಲ್ಲಿ ಹುಟ್ಟಿ, ದೇಶವನ್ನೇ ತೊಡಕಿಸಿ ನುಂಗಹತ್ತಿವೆ.

ಬೇರನ್ನೇ ಕೊರೆಯುವ ಹುಳುಗಳು ಈ ಅನ್ಯಾಯಗಳು ಮರ ಉರುಳಿ ಬೀಳುವಂತಾಗಿದ್ದರೂ ಬೇರಿನ ಸತ್ವ ತಿಂದು ಕೊಬ್ಬಿಹೋಗುತ್ತಿವೆ. ಈ ಕೀಟಗಳು. ನೆರೆಮನೆಯ ಶೆಟ್ಟಿ ಮನೆ ಎಬ್ಬಿಸಿದರೆ ಈಚೆ ಮನೆಯ ೨೫೦-೩೦೦ ರೂಪಾಯಿ ತಿಂಗಳಿಗೆ ಸಂಪಾದಿಸುವ ಸರ್ಕಾರಿ ನೌಕರನಿಗೆ ತಾನೂ ಆ ರೀತಿ ಮನೆ ಕಟ್ಟಬೇಕು, ಮೋಟಾರಿನಲ್ಲಿ ಮಡದಿ ಮಕ್ಕಳನ್ನು ತಿರುಗಿಸಬೇಕೆಂಬ ಆಸೆ. ಅದಕ್ಕಾಗಿ ಅವನ ಅಲ್ಪವೇತನ ಸಾಲುವುದೆ?!...... ಕೈ ಬೀಸುತ್ತಾನೆ. ಝುಣ ಝುಣ ಹರಿದು ಬರುತ್ತದೆ ಲಂಚದ ಸುಲಭ ಹಣವಾಹಿನಿ. ನೀತಿ, ನಿಯತ್ತು ಮೂಲೆಗುಂಪಾಗಿ ಸಮಾಜಘಾತುಕನಾಗುತ್ತಾನೆ. ಗಂಡಸಿನ ಇಂಥ ದುರ್ಬಲ ಮನಸ್ಸನ್ನು ತಿರುಗಿಸಲು ಹೆಂಗಸರಿಗೆ ಸುಲಭಸಾಧ್ಯ. ಸಾಧಾರಣವಾಗಿ ನಡೆಯುವಂತೆ ಗಂಡನ ಹಣದ ಮೋಹಕ್ಕೆ ಹೆಣ್ಣು ಬೀಸಣಿಗೆ ಹಾಕದಿದ್ದರೆ ಆ ಕಿಡಿ ಜ್ವಲಿಸಿ ಕೆಂಡವಾಗುವುದೆ? ಇಲ್ಲ, ಹೆಣ್ಣು ಅವನ ಘಾತುಕತನಕ್ಕೆ ತಣ್ಣೀರೆರಚಿ ಅದನ್ನು ಶಾಂತಪಡಿಸಬಹುದು.

## ದೊಡ್ಡಿಸ್ತಿಕೆಯ ಗಾಳಿ

ಸಮಾಜದ ಬಂಡಿಗೆ ಇರುವುದೇ ಹೆಣ್ಣು-ಗಂಡೆಂಬ ಎರಡು ಗಾಲಿಗಳು. ಅದರಲ್ಲಿ ಒಂದು ಗಾಲಿ ಅನ್ಯಾಯದ ಹಾದಿ ಹಿಡಿಯಲು ಒಲ್ಲದೆ, ಮೊಂಡಾಗಿ ಮೊರಡು ಬಿದ್ದರೆ ಮುಂದಿನ ಘಾತುಕವಾದ ಹಾದಿಯನ್ನು ಗಂಡೊಬ್ಬನಿಂದ ಸಾಗಿಸಲು ಸುಲಭಸಾಧ್ಯವೆ?

ಇಲ್ಲಿ ಹೀಗಾದರೆ ಮತ್ತೊಂದು ಸಂಸಾರದ ಸ್ಥಿತಿ ಸ್ವಲ್ಪ ಬೇರೆ. ಮೆದು, ಮರ್ಯಾದಸ್ಥನಿಗೆ ಬೆಡಗುಸುಂದರಿ ಪತ್ನಿ. ತನ್ನಗೆಳತಿಯ ವೈಭವಕಂಡು ಕರುಬುತ್ತಾಳೆ. "ಆ ಜೀವನ ತನ್ನದಾಗಬೇಕು" ಎಂದುಗಂಡನಕಿವಿಯಲ್ಲಿ ಸದಾ ಗುಂಜಾರವ ಎಬ್ಬಿಸುತ್ತಾಳೆ. ಮನಸ್ಸಿನ ನೆಮ್ಮದಿ ಹಾಳಾಗಿ, ಮನೆಯ ವಾತಾವರಣ ಕೆಟ್ಟು ಅವನ ತಲೆ ಕೆಸರು ಮೊಸರಾಗುತ್ತದೆ. ಹೆಂಡತಿಯ ನಗುಮುಖ ನೋಡುವುದಕ್ಕೋಸ್ಕರ ಅವನು ಮೆಲ್ಲಮೆಲ್ಲನೆ ಪಾತಾಳದ ಹಾದಿ ಹಿಡಿಯುತ್ತಾನೆ. ಕಾಳಸಂತೆ ಖದೀಮನಾಗಬಹುದು. ತನಗಿಷ್ಟವಿಲ್ಲದಿದ್ದರೂ ಪಾತಕಿಯಾಗಿ ಬಿಡುವನು. ಹೆಣ್ಣು ತನ್ನ ನಿಜಶಕ್ತಿ ನೀತಿಗಳನ್ನು ಕಂಡುಕೊಂಡಿದ್ದರೆ ಈ ಪರಿಸ್ಥಿತಿಯನ್ನು ಅವಳೇ ಉಂಟು ಮಾಡುವುದಿರಲಿ, ಮಾಡಿದ್ದನ್ನೂ ತಪ್ಪಿಸಬಹುದು. ಈಚಿನ ಮತ್ತೊಂದು ಕೆಡಕು ಚಿನ್ನಾಭರಣ, ಕರೀ ಹಣವನ್ನು ಅನ್ಯಾಯ ರೀತಿಯಲ್ಲಿ ಶೇಖರಿಸುವುದು. ಹೆಣ್ಣು ತನ್ನ ಧನ, ಕನಕ ಮೋಹವನ್ನು ದೇಶಕ್ಕಾಗಿ ಕೊಂಚ ಕಮ್ಮಿ ಮಾಡಿಕೊಂಡರೆ ಅದರಿಂದ ಎಂಥ ಉನ್ನತಿಗಳನ್ನು ಸಾಧಿಸಬಹುದು. ಆದರೆ ಇದು ಬಹು ಕಾಲಾಂತರಗಳಿಂದ ಬೇರು ಬಿಟ್ಟ ಮಹಾವೃಕ್ಷ. ಕಿತ್ತು ಹಾಕುವುದು ಅಷ್ಟು ಸುಲಭವಲ್ಲ. ಚಿನ್ನ ಬರಿಯ ಅಲಂಕಾರಿಕ ವಸ್ತು, ಇಲ್ಲವೇ ಕೂಡಿಡುವ ವಸ್ತು ಎಂಬುದನ್ನು ಮರೆತು, ನಾಡಿಗೆ ಈಗ ಬೇಕಾಗಿರುವ ಬರೀ ಹಳದಿಯ ಲೋಹ ಅದು ಎಂದು ಅರಿತರೆ ಚಿನ್ನ ಎಷ್ಟೋ ಮನೆಗಳಲ್ಲಿ ಧೂಳು ಕಡಿಯುತ್ತಾ ಬಿದ್ದಿರುವ ಬದಲಿ ನಾಡಿಗೆ ಹೊನ್ನಿನ ಹೊಳೆಯನ್ನೇ ತರುವುದು. ಚಿನ್ನದ ಮೋಹಕ್ಕೂ ಹೆಣ್ಣೇ ಮೂಲ. ಅವಳು ಆ ಮೋಹ ಬಿಟ್ಟರೆ ನಮ್ಮ ನಾಡಿಗೆ ಎಷ್ಟೋ ಕಷ್ಟ ನಿವಾರಣೆ?

## ವರದಕ್ಷಿಣೆ

ಮತ್ತೊಂದು ಒಳಪಿಡುಗು ವರದಕ್ಷಿಣೆಯದು. ಎಷ್ಟೇ ನಿಬಂಧನೆಗಳನ್ನು ಸರ್ಕಾರ ಹಾಕಿದರೂ ಇದರ ಸೋಂಕುಮಾತ್ರ ಒಳಗೊಳಗೆ ಹಬ್ಬುತ್ತಲೇ ಹೋಗಿದೆ. ಅನೇಕ ಕುಟುಂಬಗಳ ಜಿಗುಪ್ಸೆಗಳಿಗೆ ಈ ಪದ್ಧತಿಯೇ ಮೂಲ. ಹೆಣ್ಣು ಹುಟ್ಟಿದೊಡನೆಯೇ ಆ ಬಡತಂದೆಗೆ ಬರುವ ಮೊದಲ ಯೋಚನೆ ಆ ಕೂಸಿಗಾಗಿ ತಾನು ಶೇಖರಿಸಿಡಬೇಕಾದ ಹಣದ ಬಾಬ್ತಿನದು. ಹೊಟ್ಟೆಬಟ್ಟೆ ಕಟ್ಟಿಯಾದರೂ ಸಂಸಾರಿಯಾದವನು ಹೆಣ್ಣುಮಗಳ 'ವರದಕ್ಷಿಣೆ' ಮತ್ತು ಅವಳ ಮದುವೆ ಖರ್ಚಿಗಾಗಿ ಉಳಿತಾಯ ಮಾಡಬಯಸುತ್ತಾನೆ. ಉಳಿತಾಯವೇನೋ ಒಳ್ಳೆಯದೆ. ಆದರೆ ಅಷ್ಟುಕಷ್ಟಪಟ್ಟು ಉಳಿತಾಯ

ಮಾಡಿದ ಹಣವು ದುಷ್ಟಪದ್ಧತಿ ಇರದಿದ್ದರೆ ಬೇರೆ ಯೋಗ್ಯವಾದ ಖರ್ಚಿಗೆ ಬಳಸಿಕೊಳ್ಳಬಹುದಾಗಿತ್ತು. ಆಗ ಆ ಹಣಕ್ಕೆ ಮರ್ಯಾದೆ ಬರುತ್ತಿತ್ತು. ಹೆಣ್ಣಿಗೆ ತಾನು ತನಗಾಗಿ ಹಣಕೊಟ್ಟು ಕೊಳ್ಳಲು ಬಯಸುತ್ತಾರೆ ಎನ್ನುವ ಭಾವ ತಪ್ಪುತ್ತಿತ್ತು. ಪವಿತ್ರವಾದ ವಿವಾಹ ಬಂಧನ ಈ ಪದ್ಧತಿಯಿಂದ ದನದ ಜಾತ್ರೆಯಾಗಿದೆ. ಕಣ್ಣಿ ಕಟ್ಟಿದ ದನ ಹೆಣ್ಣು. ಅವಳಿಗೆ ದನಕ್ಕಿರುವ ಮರ್ಯಾದೆಯೂ ಇಲ್ಲ. ಇಲ್ಲಿ ಅವಳಿಗಾಗಿ ಹಣವನ್ನೂ ತೆತ್ತು ವಿಕ್ರಯಿಸಬೇಕು! ಮಗನನ್ನು ಪಡೆದ ಪೂಜ್ಯ ಮಾತೆಯರು ನಮ್ಮ ಮಹಿಳೆಯರಿಗಾಗಿರುವ ಈ ಅಧ್ಯಾಯವನ್ನು ಅರಿತು ಅದರ ವಿರುದ್ಧ ಶ್ರಮಿಸಿದರೆ ಇದರ ನಿವಾರಣೆ ಆಗದೆ ಉಂಟೆ ?!

ಈ ವರದಕ್ಷಿಣೆಯಷ್ಟೇ ಕೆಟ್ಟಪದ್ಧತಿ ನಮ್ಮಲ್ಲೀಗ ದಿನೇ ದಿನೇ ಹೆಚ್ಚುರುವ ಮದುವೆಯ ಖರ್ಚಿನದು. ಒಬ್ಬರ ಮನೆ ಮದುವೆಯಲ್ಲಿ ಒಂದ್ಯೆನೂರು ಮಂದಿಗೆ ಎಲೆಹಾಕಿದರೆ ಮತ್ತೊಬ್ಬ ಶಕ್ತಿ ಇಲ್ಲದಿದ್ದರೂ ಅಷ್ಟೇ ಹಾಕಬೇಕು, ಅಷ್ಟೇ ಉಡುಗೊರೆ ನೆಂಟರಿಗೆ ವಿನಿಯೋಗ ಮಾಡಬೇಕು, 'ಷೋ' ಮಾಡಬೇಕು ಅನ್ನುತ್ತಾನೆ. ಶ್ರೀಮಂತನೊಬ್ಬನಿಂದ ಮೊದಲಾಗುವ ಈ ಥಳುಕಿನ ಖರ್ಚು, ಹತ್ತು ಬಡಸಂಸಾರಿಗಳನ್ನು ಕೆಡಿಸುತ್ತದೆ. ಆ ಶ್ರೀಮಂತನನ್ನು ನೋಡಿ ಒಬ್ಬ ಕೆಂಬೂತನಾಗುತ್ತಾನೆ. ಮಿಕ್ಕವರೂ ಅದನ್ನೇ ಅನುಸರಿಸುತ್ತಾರೆ. ಒಂದು ವೇಳೆ ಅನುಸರಿಸಲಾರೆನೆಂದರೆ ತೀರಿತು! ಸುತ್ತಲ ಅವನ ನೆಂಟರೆಲ್ಲಾ ಅವನನ್ನು ಮೂದಲಿಸುತ್ತಾರೆ. ನಗುತ್ತಾರೆ. ಈ ಭಯಕ್ಕಾಗಿ ಅವನು ಶಕ್ತಿಮೀರಿ ವ್ಯಯಿಸಿ, ಸಾಲಗಾರನಾಗಿಯೇ ಉಳಿಯುತ್ತಾನೆ. ಈ ಪ್ರತಿಸ್ಪರ್ಧೆ ನಡೆಯುವದೂ ಹೆಚ್ಚಾಗಿ ಲಲನಾಮಣಿಗಳಿಂದಲೇ! ಉಳ್ಳವರು ಮಾಡುವುದನ್ನು ಕಂಡು ಹೊಗಳಿದಾಗ ಇಲ್ಲದವರಿಗೂ ಆ ರೀತಿ ಸಾಧ್ಯವಾದಷ್ಟೂ ತಾವೂ ಮಾಡಬೇಕು ಅನ್ನಿಸುತ್ತದೆ. ಎಷ್ಟೇ ಕಷ್ಟವಾದರೂ 'ಯಾರಿಂದಲೂ ಇದು ಕಮ್ಮಿ ಆಯ್ತು, ಅದು ಕಮ್ಮಿ ಆಯ್ತು ಅಂತ ಆಕ್ಷೇಪಣೆ ಮಾತು ಕೇಳಬಾರದು...ಮಾಡುವುದು ಒಂದೇ ಸಲ. ಮದುವೆ ಖರ್ಚಿನ ಬಾಬಿನ ಕಡೆ ಗಮನವೀಯದೇ ನಾಲ್ಕು ಜನ ಮೆಚ್ಚುವಂತೆ ಮಾಡಿಬಿಡಬೇಕು...' ಎಂದು ಕನ್ಯೆಯನ್ನು ಹೆತ್ತ ತಾಯಿ ಪ್ರಪಂಚವನ್ನೇ ಮರೆತು ಸಾಮಾನಿನ ಪಟ್ಟಿ ಏರಿಸಿ ಬಿಡುತ್ತಾಳೆ! ಈ 'ಒಂದು ಸಲ ಮಾಡುವ ಖರ್ಚು' ಅವರ ಜೀವಮಾನದ ಆರ್ಥಿಕ ಸ್ಥಿತಿಯನ್ನೇ ತಳಕ್ಕೆ ತಳ್ಳಿಹಾಕಿಬಿಡುವುದು. ಆದರೂ ಆ ಕ್ಷಣಕ್ಕೆ ಅವರು ಚಿಂತಿಸುವುದಿಲ್ಲ. ಇದನ್ನು ತಪ್ಪಿಸಲೂ ಹೆಂಗಸಿನಿಂದಲೇ ಸಾಧ್ಯ. ತಮ್ಮ ಇತಿಮಿತಿಯನ್ನರಿತು ಹಾಸಿಗೆ ನೋಡಿ ಕಾಲುಚಾಚಬೇಕು. ಜನರ, ಬಂಧುಗಳ ಮೆಚ್ಚಿಗೆ ಪಡೆಯಬೇಕೆಂದು ಹಂಬಲಿಸಿದರೆ ಅದು ಸಿಗುವುದೇ ಇಲ್ಲ. ಅದೊಂದು ಮರೀಚಿಕೆ.

ನೂರಾರು ರೂಪಾಯಿಗಳಲ್ಲಿ ಸಂತೋಷದಿಂದ ಮಾಡಬಹುದಾದ ಈ ಪವಿತ್ರ ಬಂಧನವನ್ನು ಸಾವಿರಾರು ರೂಪಾಯಿಗಳಿಗೇರಿಸಿ, ನಂತರ ಕಣ್ಣೀರಲ್ಲಿ ಕೈ ಏಕೆ ತೊಳೆಯಬೇಕು? ಇದನ್ನರಿತು ಹೆಣ್ಣುಮಕ್ಕಳು ಮದುವೆ ವೈಭೋಗಗಳ ಬಗ್ಗೆ ಆಡುವ ನಿಷ್ಠುರ ಮಾತುಗಳನ್ನು ಬಿಟ್ಟು, ನಿರಾಡಂಬರವನ್ನು ಪ್ರೋತ್ಸಾಹಿಸಿದರೆ ಅದೆಷ್ಟು ಕುಟುಂಬಗಳು ಉದ್ಧಾರವಾಗುವವು.

## ಅತಿ ಸಂತಾನ

ಪೂಜ್ಯ ನೆಹರೂರವರು ಉಸಿರಿರುವ ತನಕ ಕೂಗಿಕೊಂಡಿದ್ದ ಸಮಾಜದ ಮತ್ತೊಂದು ಸಮಸ್ಯೆ ಅತಿಸಂತಾನದ್ದು. ಇದರ ನಿವಾರಣೆಯಾಗಬೇಕಾದರೂ ಮಹಿಳೆಯರಿಂದಲೇ ಸಾಧ್ಯ. ವರ್ಷಂಪ್ರತಿ ಹುಟ್ಟುವ ಮಕ್ಕಳಿಂದ ಆಗುವ ಆರ್ಥಿಕ ಇಳಿಮುಖತೆ, ಆರೋಗ್ಯಕ್ಷೀಣತೆ ಎಲ್ಲವನ್ನೂ ಅರಿತ ಹೆಣ್ಣು ತಾನೇ ಜಾಣೆಯಾಗಬೇಕು. ತನ್ನ ಸಂಸಾರ ಅಚ್ಚುಕಟ್ಟಾಗಲು ಹೊರಗೆ ದುಡಿಯುವ ಗಂಡಸಿಗಿಂತಲೂ ಮನೆಯೊಳಗಿನ ಹೆಂಗಸು ಕುಶಲಳಾಗಿದ್ದರೇ ಹೆಚ್ಚು ಸುಲಭ. ತನ್ನ ಮಿತವಾದ ಸಂತಾನದ ಮುದ್ದು ಸಂಸಾರದಿಂದ ತನ್ನ ಸಂಸಾರ ಒಂದೇ ಸುಖಮಯವಾಗುವದಿಲ್ಲ; ಇಂಥ ನಿಯೋಜಿಕ ಸಂಸಾರಗಳನೇಕ ಕಲೆತು ಇಡೀ ದೇಶ ಸತ್-ಸಂತಾನಹೊಂದಿ ಸಂವೃದ್ಧವಾಗುವುದು. ಹೆಣ್ಣು ಇದನ್ನರಿಯದೆ ಸಂಸಾರ ಬೆಳೆಯಗೊಟ್ಟರೆ ನಾಳೆ ನಿಲ್ಲಲೂ ಎರಡು ಅಡಿ ಜಾಗ ಒಬ್ಬೊಬ್ಬರಿಗೆ ಸಿಗಲಾರದು! ಈಗಿನ ಅರೆಹೊಟ್ಟೆಗಾಗುತ್ತಿರುವ ಆಹಾರವೂ ಇಲ್ಲದಾಗಿ ನಮ್ಮ ಕಷ್ಟ ತನಗೆತಾನೇ ನಿವಾರಣೆಯಾಗಿ ಹೋದೀತು!

ಅರೆಹೊಟ್ಟೆ, ಅವಿದ್ಯೆ, ಅರುಚಿಯ ಅನಿಷ್ಟ-ಪೀಡೆಗಳೆಲ್ಲಾ ತೊಲಗಲು ಹೆಣ್ಣಿನ ಶ್ರಮದಿಂದಲೇ ಸುಲಭಸಾಧ್ಯ.

ತಾಯಂದಿರು ತೊಲಗಿಸಬಹುದಾದ ಮತ್ತೊಂದು ಅನಿಷ್ಟ ನಿರಕ್ಷರತೆಯದು. ಈಗ ಅದು ಎಷ್ಟೊ ಕಮ್ಮಿಯಾಗಿದೆ. ಆದರೂ ಹಳ್ಳಿಗಾಡಿನ ಕಡೆಇದರ ನಿವಾರಣೆ ಇನ್ನೂ ಆಗಿಲ್ಲ. ಅಲ್ಲಿನ ತಾಯಂದಿರಿಗೇ ವಿದ್ಯೆ ಬಗ್ಗೆ ತಾತ್ಸಾರ. ಇನ್ನು ಅವರು ಮಕ್ಕಳಿಗೆ ಪ್ರೋತ್ಸಾಹ ಕೊಡುವರೇ! ನಮ್ಮ ಮನೆಯ ಕೆಲಸದಾಕೆ ತನ್ನ ಆರು ವರ್ಷದ ಕೂಸನ್ನು ಒಮ್ಮೆ ಮನೆಗೆಲಸಕ್ಕೆ ಕಳುಹಿಸಿದಳು. ಓದು ಕಲಿತು ಶಾಲೆಗೆ ಹೋಗುವ ವಯಸ್ಸಿನ ಆ ಕೂಸು ದೊಡ್ಡ ಹೆಂಗಸಿನಂತೆ ಬಟ್ಟೆ ಒಗೆದು, ಒಂದು ಬುಟ್ಟಿ ಪಾತ್ರೆ ಉಜ್ಜಿ, ಕಸಗೂಡಿಸಲು ತಯಾರಾಗಿ ಬಂದದ್ದನ್ನು ಕಂಡು ನನಗೆ ಬಹಳ ಖೇದವೆನ್ನಿಸಿತು. ಯಾರ ಪಾಪಕ್ಕಾಗಿ ಈ ಕೂಸು ಈ ವಯಸ್ಸಿನಲ್ಲಿ ಇಂಥ ಕೆಲಸಗಳನ್ನು ಮಾಡಬೇಕು? ಈ ಮಗುವನ್ನು ಶಾಲೆಗೆ ಕಳಿಸಬೇಕು. ಈಗಲೇ ದುಡಿತಕ್ಕೆ ಹಚ್ಚಬೇಡವೆಂದು ಆ ಕೂಸಿನ ತಾಯಿಗೆ ಹೇಳಿದಾಗ ಅವಳು ಹೇಳಿದ್ದಳು. "ಶಾಲೆಗೆ ಕಳಿಸಿದರೆ ಏನ್ರವ್ವಾ ಉಪಯೋಗ?... ಅಕ್ಷರಗಳಲ್ಲಿ ಹೊಟ್ಟೆ ತುಂಬುತ್ತೆ?...ನಮ್ಮಂಥ ಬಡವರಿಗಲ್ಲ ಶಾಲೆ...ಇದನ್ನೂ ಸಾಲೆಗೆ ಕಳ್ಸಿಬುಟ್ರೆ ಇದಕ್ಕೆ ಹಿಂದಿರೊ ನಾಲ್ಕು ಮಕ್ಕಳ ಗತಿ ಏನು? ಅವರನ್ನು ನೋಡಿಕೊಳ್ಳುವವರಾರು? ಹಿಟ್ಟು-ಬೇಯಿಸುವವರಾರು......ಕೆಲಸದ ಮನೆಗಳಿಗೆ ಹೋಗುವವರಾರು?...

## ಮಕ್ಕಳ ದುಡಿತ

ಸರಿ ೬ ವರ್ಷಕ್ಕೆ ಮೊದಲಾದ ಈ ದುಡಿತದ ಜೀವನ ಒಂದೇ ರೀತಿ ಸೆಗಣಿ ಹುಳುವಿನಂತೆ ಸಾಯುವ ತನಕ ನಡೀಬೇಕು. ಅನಕ್ಷರಸ್ಥನಾಗಿ ಯಾವ ಅನ್ಯಾಯಗಳಿಗೆ ಬೇಕಾದರೂ ಗುರಿಯಾಗಬಹುದು. ತಾಯಿ ಇದನ್ನು ಯೋಚಿಸಬೇಕು. ತನ್ನ ದುಡಿತಕ್ಕೆ ಮಕ್ಕಳನ್ನು ಬಳಸಿಕೊಳ್ಳದೆ, ಮಕ್ಕಳಿಗಾಗಿ ತಾನಾದರೆ ಮುಂದಿನ ಪೀಳಿಗೆ ಉದ್ಧಾರವಾದೀತು.

ಹೊಟ್ಟೆಬಟ್ಟೆ ಕಟ್ಟಿ ಶಾಲೆಗೆ ಮಕ್ಕಳನ್ನು ಕಳುಹಿಸಿರುವ ತಾಯಂದಿರನ್ನೂ ನೋಡಿದ್ದೇನೆ. ೧೦-೧೨ ವರ್ಷ ಆ ತಾಯಂದಿರು ಪಟ್ಟ ಪರಿಶ್ರಮದ ಪ್ರತಿಫಲ ಆ ಮಕ್ಕಳಿಗೆ ಚನ್ನಾಗಿ ಆಗಿದೆ. ತಾನು ಕಷ್ಟಪಟ್ಟು ಬೆಳೆಸಿದ ಮಕ್ಕಳು ಇಂಥ ಸುಸ್ಥಿತಿಗೆ ಬಂದದ್ದನ್ನು ಕಂಡು ಆ ತಾಯಿಗೆ ಅದೆಷ್ಟು ಆನಂದವಾದೀತು! ಒಟ್ಟಿನಲ್ಲಿ ಮಹಿಳೆಯರ ಪಾತ್ರ ಪ್ರಧಾನವಾದದ್ದು. ಮಕ್ಕಳಿಗೆ ಒಳ್ಳೆ ಅಸ್ತಿಭಾರ ಹಾಕುವುದು, ಸಂಸಾರದಲ್ಲಿ ಆರ್ಥಿಕ ಆರೋಗ್ಯದ ಉನ್ನತಿ, ಕೊನೆಗೆ ತಾನು ವಾಸಿಸುವ ಹಳ್ಳಿ, ನಾಡಿನ ಉನ್ನತಿಗೆ ಅವಳೇ ಬಾಧ್ಯಳು. ಹೊರಗೆ ದುಡಿಯುವ ಗಂಡಸಿನ ಕಾರ್ಯ ಒಂದು ರೀತಿ. ಮನೆಯಲ್ಲೇ ಕುಳಿತು ಎಷ್ಟೊ ಅನಿಷ್ಟಗಳನ್ನು ತೊಡೆದು ಹಾಕಿ ನಾಡನ್ನೇ ತೊಳೆಯುವ ಶಕ್ತಿ ಮಹಿಳೆಯರಿಂದಲೇ ಸಾಧ್ಯ.

ಗಾಂಧೀಜಿಯವರು ಆರಂಭಿಸಿದ ಅಸ್ಪೃಶ್ಯತಾ ನಿವಾರಣೆ 'ಬಾ'ರವರಂಥ ಬೆಂಬಲದಿಂದಲೇ ಸುಗಮವಾಯಿತು. ಧೈರ್ಯದಿಂದ ಒಂದು ಕೆಟ್ಟಪದ್ಧತಿಯನ್ನು ಸ್ತ್ರೀ ಮುರಿದು ಹಾಕಿದರೆ ಮುಳ್ಳುತಳ್ಳಿದ ಹಾದಿಯಂತೆ ಜೀವನ ಸುಗಮವಾಗುವುದು. ವಿಧವಾವಿವಾಹ, ಬೀದಿ ಪಾಲಾದ ಅರಿಯದ ಕಂದಮ್ಮಗಳ ಯೋಗಕ್ಷೇಮ ಎಲ್ಲದಕ್ಕೂ ಇರುವ ಕಂಟಕ ತೊಲಗಬೇಕು. ಇದಕ್ಕೆ ವಿಶಾಲ ಮನೋಭಾವವಿರುವ ಹೆಣ್ಣಿನ ಬೆಂಬಲವೇ ಮುಖ್ಯ.

ತಾವೇನೂ ಸಮಾಜಕ್ಕೆ ಉಪಯೋಗವಿಲ್ಲವೆಂದು ಕೈಕಟ್ಟಿ ಕುಳಿತ 'ಅಂಗವಿಕಲರಿಗೆ' ಕಿವುಡು-ಮೂಗು-ಕುರುಡಾಗಿಯೂ ಓದು ಬರೆಹ ಕಲಿತು ಸಮಾಜದಲ್ಲಿ ಉನ್ನತ ಸ್ಥಾನ ಗಳಿಸಿದ 'ಹೆಲನ್‌ಕೆಲರ್' ಎಂಥ ಮಾರ್ಗದರ್ಶಿನಿಯಾದಳು! ಇಂಥವರ ಮೇಲ್ಪಂಕ್ತಿ ತೆಗೆದುಕೊಂಡು ಅಂಗವಿಕಲರು ಕಾರ್ಯೋನ್ಮುಖರಾಗುತ್ತಿದ್ದಾರೆ.

ಇದೇ ರೀತಿ ಹೆಣ್ಣಿನ ಶಕ್ತಿಗೆ ಮೀರಿದ ಸಾಮಾಜಿಕ ಅನಿಷ್ಟಗಳು ಯಾವುದೂ ಇಲ್ಲ. ಪುರಾಣದಲ್ಲಿ ವರ್ಣಿಸಿರುವಂತೆ ಹೆಣ್ಣು 'ಚಂಡಿ', ಆ ಚಂಡಿತನವನ್ನು ಕೆಟ್ಟದರಲ್ಲಿ ಬಳಸದೆ ಒಳ್ಳೆಯದರಲ್ಲಿ ಬಳಸಿಬಿಟ್ಟರೆ ಯಾರೂ ಅದನ್ನು ತಳ್ಳಿಹಾಕುವುದಕ್ಕಾಗುವುದಿಲ್ಲ! ಬಲೆ ಬೀಸಿ, ಹಠಹಿಡಿದು ಹೆಣ್ಣು ಏನನ್ನು ಬೇಕಾದರೂ ಸಾಧಿಸಬಹುದು. ಆದರೆ ಹಾಕುವ ಬಲೆ ಸತ್ವಯುತವಾಗಿ, ಒಳ್ಳೆಯದಕ್ಕಾಗಿಯಾದರೆ ಒಳ್ಳೆಯದು. ಹೆಣ್ಣಿನಶಕ್ತಿಗೆ ಕೆಡಕು ಮಾಡುವಷ್ಟೆ ಒಳ್ಳೆಯದನ್ನೂ ಮಾಡುವ ಯೋಗ್ಯತೆ ಇದೆ.

ತನ್ನ ಶಕ್ತಿಯನ್ನು ಒಳ್ಳೆಯದಕ್ಕೆ ಉಪಯೋಗಿಸಿ, ನಮ್ಮ ಸಮಾಜದ ಅನೇಕ ಅನಿಷ್ಟಗಳ ನಿವಾರಣೆಗೆ ಆಕೆಯೇ ಮೂಲಳಾಗಬಹುದು ಮತ್ತು ಆಗಬೇಕು!

×××××

# ಸಮಾಜದ ಅನಿಷ್ಟಗಳ ನಿರ್ಮೂಲನೆಗಾಗಿ ಮಧ್ಯಮವರ್ಗದ ಮಹಿಳೆ ಏನು ಮಾಡಬಹುದು?

ಶ್ರೀಮತಿ ಶಾಂತಾ ವಿ. ದಿವಾಕರ, ಬೆಂಗಳೂರು

ಸಮಾಜದ ಅನಿಷ್ಟಗಳಿಂದ ಕೂಡಲೇ ಸಾಮಾನ್ಯವಾಗಿ ಗೃಹಿಣಿಯರ ಎದುರಿಗೆ ನಿಲ್ಲುವುದು, ಅವರ ದೈನಂದಿನ ಜೀವನದಲ್ಲಿ ಹಾಸುಹೊಕ್ಕಾಗಿ ಬೆಳೆದಿರುವ ಭ್ರಷ್ಟಾಚಾರದ ಭೂತ. ವರದಕ್ಷಿಣೆಯಂಥ ಪದ್ಧತಿಗಳೂ ನಿತ್ಯ ಜೀವನವನ್ನು ದುಸ್ತರ ಮಾಡುತ್ತಿರುವ ಭ್ರಷ್ಟಾಚಾರದ ಪ್ರತಿರೂಪ. ಭಾರತದ ಪ್ರಾಚೀನ ಸಂಸ್ಕೃತಿಯ ಬಗ್ಗೆ ಎಷ್ಟೇ ಹೆಮ್ಮೆಯಿದ್ದರೂ ಎಷ್ಟೇ ಅಭಿಮಾನವಿದ್ದರೂ ಇಂದಿನ 'ಭಾರತ' ಅದೇಕೆ ಈ ಸ್ಥಿತಿಗೆ ಇಳಿಯುತ್ತಿದೆ ಎಂಬ ಪ್ರಶ್ನೆ ಯಾರ ಮನಸ್ಸಿನಲ್ಲೂ ಕಾಡದೆ ಇರದು!

ಭ್ರಷ್ಟಾಚಾರ ಎಂಬ ಪದವು ಈಗ ಮನೆಯ ಮಾತಾಗಿದೆ. ದೊಡ್ಡ ಉದ್ಯಮಗಳಲ್ಲಿ, ಸರ್ಕಾರದಲ್ಲಿ, ಜನಜೀವನದ ವಿವಿಧ ರಂಗಗಳಲ್ಲಿ ಭ್ರಷ್ಟಾಚಾರದ ಕಾಳಸರ್ಪ ಹೆಡೆಯೆತ್ತಿ ನಿಂತಿದೆ. ಈ ಎಲ್ಲ ರಂಗಗಳಲ್ಲಿ ಮಹಿಳೆ ಮಾಡುವುದು ಬಹಳ ಸಾಧ್ಯವಿಲ್ಲದಿದ್ದರೂ ನಮ್ಮ ದಿನನಿತ್ಯ ಜೀವನವನ್ನು ಆವರಿಸಿರುವ ಭ್ರಷ್ಟಾಚಾರಗಳನ್ನು ಮೂಲದಲ್ಲೇ ನಿವಾರಿಸುವುದು ಮಹಿಳೆಗೆ ಮನಸ್ಸು ಮಾಡಿದರೆ ಸಾಕಷ್ಟು ಸಾಧ್ಯವಿದೆ.

## ಸಂಸಾರದ ತಾಪತ್ರಯಗಳು

ಪತಿಯು ತರುವ ಸಂಬಳದಲ್ಲಿ ಮನೆಯ ಅವಶ್ಯಕತೆಗಳಲ್ಲದೆ, ತನ್ನ ಹಾಗೂ ಮಕ್ಕಳ ಆಹಾರ ಉಡುಪು, ಪುಸ್ತಕಗಳನ್ನು ಮತ್ತು ಇತರ ಅತ್ಯಾವಶ್ಯಕ ವಸ್ತುಗಳನ್ನು ಒದಗಿಸಬೇಕಾದ ಹೊಣೆ ಮನೆಯೊಡತಿಯ ಮೇಲೆ ಬಿದ್ದಿರುತ್ತದೆ. ತನ್ನ ಪತಿಯ ಅಥವಾ ತನ್ನ ಸ್ವಂತ ಇಚ್ಛೆಗಳನ್ನು ಆಕೆ ಪೂರೈಸದೆ ತ್ಯಾಗಿಯಾಗಲು ಸಾಧ್ಯ. ಆದರೆ ತನ್ನ ಮುದ್ದು ಕಂದಮ್ಮಗಳ ಹಸಿದ ಮುಖ ಆಸೆಯ ಕಣ್ಣುಗಳನ್ನು ನೋಡಿ ಹೇಗೆ ಸಹಿಸಬೇಕು? ನಾವು ಈಗ ವಿಚಾರ ಮಾಡುತ್ತಿರುವುದು ಮಧ್ಯಮವರ್ಗದ ಜನಜೀವನವನ್ನು— ಭಿಕ್ಷುಗಳ ಅಥವಾ ಶ್ರೀಮಂತರ ವ್ಯತಿರಿಕ್ತ ಜೀವನವನ್ನಲ್ಲ. ಗಂಡಸಿಗೆ ಬೆಳಗಿನಿಂದ ಸಂಜೆಯ ವರೆಗೆ ದುಡಿಯುವುದೇ ಗೊತ್ತು. ಮನಸ್ಸಿನ ಬೇಸರವನ್ನು ಹೆಂಡತಿಯ ಮೇಲೆ ಅಥವ ತನ್ನ ಅರ್ಧ ಡಜನ್ ಮಕ್ಕಳ ಮೇಲೆ ತೋರಿಸುವುದು ಗೊತ್ತು. ಆದರೆ ಗಂಡನ ಕೋಪ ತಾಪ ಸಹಿಸಿ, ಮಕ್ಕಳನ್ನು ಸಂತೈಸಬೇಕಾದವಳು ಮಹಿಳೆ. ಗಂಡ ತರುವ ಸಂಬಳ ಅರ್ಧ ತಿಂಗಳು ಸಾಕಾದರೆ ಹೆಚ್ಚು. ಅಂಗಡಿಯಲ್ಲಿ ಮಾರುವ ರಾಗಿ, ಅಕ್ಕಿ, ಗೋದಿ, ಮತ್ತು ಬೇಳೆಗಳಲ್ಲಿ ಕಲ್ಲು ಮಣ್ಣು ಆರಿಸಿ ಆರಿಸಿ ಬೇಸತ್ತಿರುತ್ತಾಳೆ. ತೆಗೆದುಕೊಳ್ಳುವ ಹಣಕ್ಕಾದರೂ ಕಲ್ಲು ಮಣ್ಣು ಬೆರಸದ ಪದಾರ್ಥಗಳನ್ನು ಕೊಡಬಾರದೆ ಅಂಗಡಿಯವರು. ತಮ್ಮಿಬ್ಬರ ಕಾಫಿ ಚಟ ತೀರಿಸಿಕೊಳ್ಳಲು ಮಕ್ಕಳಿಗೆ ಹಾಲು ಕುಡಿಸುವ ಶಾಸ್ತ್ರಮಾಡಲು ಹಾಲು ಕೊಳ್ಳಬೇಕು. ಹಾಲು ಎಂದರೆ ಅರ್ಧನೀರು ಅರ್ಧ ಹಾಲು. ಅದನ್ನು ಸಹಿಸಲೇಬೇಕು. ಇಲ್ಲದಿದ್ದರೆ ಹಾಲಿನವರ ಆಕ್ರೋಶಕ್ಕೆ ಒಳಗಾಗಿ ಆ ನೀರು ಹಾಲೂ ಹೋಟಲಿನವರ ಪಾಲು ಆಗುತ್ತದೆ. ಈ ಐಶ್ವರ್ಯಕ್ಕೆ ಎರಡು ವರ್ಷಕ್ಕೊಮ್ಮೆ ಗರ್ಭಿಣಿಯಾಗುವುದು ಬೇರೆ, ಆಕೆಯ ಹಣೆಯಲ್ಲಿ ಬರೆದ ಭಾಗ್ಯ. ಸರ್ಕಾರಿ ಆಸ್ಪತ್ರೆಯಲ್ಲಿ ವಿನಾಶುಲ್ಕದ ಹೆರಿಗೆಗೆಂದು ಹೋದರೂ, ಅಲ್ಲಿ ನರ್ಸಮ್ಮಗಳು, ಡಾಕ್ಟರರ ಕೃಪಾಕಟಾಕ್ಷಕ್ಕೆ ಒಳಗಾಗಿ ಜೀವಂತವಾಗಿ ಹೊರಬರಬೇಕಾದರೆ ಹತ್ತಾರು ರೂಪಾಯಿಗಳನ್ನು ಸಾಲ ಮಾಡಿಯಾದರೂ ತೆತ್ತಬೇಕು. ಇನ್ನು ಪತಿಯ ಅವಸ್ಥೆಯೂ ಹೀಗೆಯೆ ಸರಿ. ತನ್ನ ಸ್ಥಾನವನ್ನು ಭದ್ರವಾಗಿ ಕಾಪಾಡಿಕೊಳ್ಳಬೇಕಾದರೆ, ಆಗಾಗ್ಗೆ ಮೇಲಿನವರ ಅಟಾಟೋಪಗಳಿಂದ ಮುಕ್ತನಾಗಬೇಕಾದರೆ, ಆಳಿನಿಂದ ಹಿಡಿದು, ಆಫೀಸರ್‌ನವರೆಗೆ ಕೈಗಳನ್ನು ಬೆಚ್ಚಗೆ ಮಾಡಬೇಕಾಗುತ್ತದೆ. ಮೇಲಿನವರು ತಮ್ಮ ಕೆಲಸ ಕಾರ್ಯನಿರ್ವಹಣೆಯಲ್ಲಿ ಮಾಡುತ್ತಿರುವ ಮೋಸವಂಚನೆಗಳನ್ನು ನೋಡುತ್ತಿದ್ದರೂ ಬಾಯಿ ಮುಚ್ಚಿ ಕೈತಟ್ಟಿ ಕುಳಿತಿರಬೇಕು.

ಇಂಥ ಭ್ರಷ್ಟಾಚಾರವು ಹಾಸುಹೊಕ್ಕಾಗಿರುವ ನಮ್ಮ ಜೀವನದಲ್ಲಿ ಮೋಕ್ಷ ಮಾರ್ಗವಿಲ್ಲವೆ? ಎಲ್ಲಕ್ಕಿಂತ ಹೆಚ್ಚಾಗಿ ಬಳಲಬೇಕಾಗಿರುವ ಮಹಿಳೆ ಎಚ್ಚೆತ್ತುಕೊಳ್ಳಬೇಕಾಗಿದೆ. ಎರಡು ಮೂರು ಮಕ್ಕಳಾಗುತ್ತಲೇ ಮಕ್ಕಳಾಗುವುದನ್ನು ತಪ್ಪಿಸಲೇಬೇಕು. ಸಂತಾನನಿಯಂತ್ರಣ ಯೋಜನೆಯ ಸಹಾಯ ಸಿಕ್ಕಿದರೆ ಒಳಿತು, ಇಲ್ಲದಿದ್ದರೆ ತಜ್ಞ ಡಾಕ್ಟರಲ್ಲಿ ಹೋಗಿಯಾದರೂ ಆಪರೇಷನ್ ಮಾಡಿಸಿಕೊಳ್ಳಲು ಹಿಂಜರಿಯಬಾರದು. "ಏನೋ ದೇವರು ಕೊಡುತ್ತಾನೆ!" ಎಂಬ ವಾದವು ಹುರುಳಿಲ್ಲದ್ದೆಂಬುದನ್ನು ಮನಗಾಣಬೇಕು. ಸಂತಾನನಿಯಂತ್ರಣದಿಂದ ತನಗೇ ಅಲ್ಲದೆ, ತನ್ನ ಪತಿಗೆ, ತನ್ನ ಸಂಸಾರಕ್ಕೇ ದೊಡ್ಡ ಭಾರ. ವಿಪತ್ತನ್ನು ಕಡಮೆ ಮಾಡಿಕೊಂಡರೆ ಸರಿ.

ಇನ್ನು ಮಹಿಳೆ ಸ್ವತಂತ್ರ ಉದ್ಯಮಿಯಾಗಲು ಸಾಧ್ಯವಿಲ್ಲದೆ ಇರಬಹುದು. ವಿಶ್ವವಿದ್ಯಾನಿಲಯ ಪದವೀಧರೆಯಾಗದೇ ಇರಬಹುದು. ಆದರೂ ಆಕೆಯು ಗೃಹಿಣಿಯಾಗಿಯೇ ಅನೇಕ ಪರಿಹಾರ ಮಾರ್ಗಗಳನ್ನು ಕೈಕೊಳ್ಳಲೇಬೇಕಾದ ಸಮಯ ಬಂದಿದೆ.

## ಸಹಕಾರಮನೋಭಾವ ಬೇಕು

ಪ್ರಥಮವಾಗಿ ಮಹಿಳೆಯರಲ್ಲಿರುವ ದೊಡ್ಡ ಕೊರತೆಯೆಂದರೆ ಸಹಕಾರಮನೋಭಾವವಿಲ್ಲದಿರುವುದು. ಅದರ ಜೊತೆಗೆ ಬಿಚ್ಚು ಮನಸ್ಸಿನ ಕೊರತೆ. ತನ್ನ ಮನೆಯಲ್ಲಿ ಬಡತನದ ಅಟ್ಟಹಾಸವಾಗುತ್ತಿದ್ದರೂ ಪಕ್ಕದ ಮನೆಯವರೊಂದಿಗೆ ಸಿರಿತನದ ಮಂದಹಾಸ ಬೀರುವುದು ಮಹಿಳೆಗೆ ಚಟವಾಗಿಯೇ ಇದೆ. ಈ ಆಷಾಢಭೂತಿತನ ನಿಲ್ಲಬೇಕು. ಅಂದರೆ ತಮ್ಮ ಗೋಳನ್ನು ಅವರ ಮುಂದೆ ಹೇಳಬೇಕು ಎಂದಲ್ಲ. ಪರಸ್ಪರ ವಿಚಾರ ಮಾಡುವ ರೂಢಿಯನ್ನು ಬೆಳೆಸಿಕೊಳ್ಳಬೇಕು. "ಕೋಲಿನ ಮೇಲೆ ಎರಡು ಪಂಚೆಗಳನ್ನು ಒಣಹಾಕಬಹುದು, ಎರಡು ಸೀರೆ ಹಾಕಲು ಆಗುವುದಿಲ್ಲ" ಎಂಬ ಗಾದೆಯ ಮಾತೇಕೆ ಬಂತು ಎಂದು ನಮ್ಮನ್ನು ನಾವೇ ವಿಚಾರಿಸಬೇಕಾಗಿದೆ. ಆದರೆ ಈಗೀಗ ಮಧ್ಯಮವರ್ಗದ ಗೃಹಿಣಿಯರೆಲ್ಲ ಸೇರಿ ರಾಜಕೀಯ ಧುರೀಣರ ಮನೆಗಳ ಮುಂದೆ ಸತ್ಯಾಗ್ರಹ ಹೂಡಲು ಮುಂದೆಬರುತ್ತಿರುವುದು ಅವರ ಜಾಗ್ರತಿಯ ಸಂದೇಶ. ಆದರೆ ಸತ್ಯಾಗ್ರಹ, ಉಪವಾಸವ್ರತಗಳಿಂದ ಹೆಚ್ಚಾಗಿ ಮಹಿಳೆ ಕರ್ತವ್ಯಶೀಲಳಾಗಬೇಕಾಗಿದೆ. ಯಾವ ಸಾಮಾನೇ ಆಗಲಿ ತನ್ನ ವರ್ಗದವರಿಗೆ ಕೊಳ್ಳಲು ಅಸಾಧ್ಯವಾಗಿರುವಾಗ ಅದನ್ನು ಮನೆಯಲ್ಲಿ ಉಪಯೋಗ ಮಾಡುವುದನ್ನು ಸಂಪೂರ್ಣ ನಿಲ್ಲಿಸಬೇಕು. ಇದಕ್ಕೆ ಪ್ರತಿಯೊಬ್ಬ ಮಹಿಳೆಯೂ ಸಹಕರಿಸಬೇಕು. ಇಂಗ್ಲೆಂಡಿನಲ್ಲಿ ಯುದ್ಧಕಾಲದಲ್ಲಿ ಸಕ್ಕರೆಗೆ ಬರಗಾಲವಿದ್ದಾಗ ಮಧ್ಯಮವರ್ಗದ ಮಹಿಳೆಯರಷ್ಟೇ ಅಲ್ಲ, ಪ್ರಧಾನ ಮಂತ್ರಿಯ ಪತ್ನಿಯ ಮನೆಯಲ್ಲಿ ಸಕ್ಕರೆಯ ಉಪಯೋಗವನ್ನು ನಿಷೇಧಿಸಿದ್ದಳು. ಕಳ್ಳಸಂತೆಕೋರರಿಗೆ ಇದಕ್ಕಿಂತ ಇನ್ನಾವ ಪಾಠ ಬೇಕು? ಅದರ ಬದಲು "ನಾವು ಸಕ್ಕರೆ ಬದಲು ಕಲ್ಲುಸಕ್ಕರೆ ಉಪಯೋಗಿಸುತ್ತಿದ್ದೇವೆ" ಎಂಬ ಗರ್ವದ ಮಾತು ಬೇಡ.

ಮಹಿಳೆಯರಿಗೆ ಪ್ರಸಾದ ರೂಪವಾಗಿ ಬಂದಿದೆಯೆಂದು ಹೇಳಲಾದ ಚಂಚಲತೆ ಪರಸ್ಪರ ಅಸೂಯೆ, ನಿರುಪಯುಕ್ತ ಒಡವೆ ವಸ್ತುಗಳ ಬಗ್ಗೆ ಇರುವ ಮೋಹವನ್ನು ಇಂದಿನ ಮಹಿಳೆಯರು ದೂರಮಾಡಲೇಬೇಕು.

ಶ್ರೀಮಂತ ಮಹಿಳೆಯರು ರೇಷ್ಮೆ ಸೀರೆ ಉಡು

ತ್ತಾರೆಂದು ತಾವು ಕೃತಕ ರೇಷ್ಮೆ ಸೀರೆಯನ್ನಾದರೂ ಉಡೋಣ ಎಂಬ ಮನೋಭಾವವೇಕೆ? ಅಕ್ಕಿಯ ಅಭಾವವಿದ್ದರೆ, ಜೋಳ ರಾಗಿಗಳ ಉಪಯೋಗ ವನ್ನು ಮಾಡಲು ಹಿಂದೆಗೆಯಬಾರದು. ಆಹಾರ ವಸ್ತುಗಳಲ್ಲಿ ಮೇಲುಕೀಳೆಂಬುದಿಲ್ಲ.

## ಸಂಘಟನೆ ಅವಶ್ಯ

ಮಧ್ಯಮವರ್ಗದ ಮಹಿಳೆಯರು ಸಂಘಟನೆ ಹೊಂದಿದರೆ ಎಂಥ ಕೆಲಸ ಕಾರ್ಯಗಳನ್ನಾದರೂ ಸಿದ್ಧಿಸಬಹುದು. ಈಚೆಗೆ ಪಾರ್ಲಿಮೆಂಟ್‌ನ ಮುಂದೆ ಗೃಹಿಣಿಯರು ಭ್ರಷ್ಟಾಚಾರಕ್ಕೆ ವಿರೋಧ ಪ್ರದರ್ಶಿಸಿದ್ದಾರೆ. ಕಲಕತ್ತಾದಲ್ಲಿ ಕಸಬರಿಗೆಗ ಳನ್ನು ಹಿಡಿದು ವ್ಯಕ್ತಪಡಿಸಿದ್ದಾರೆ. ಉಸಿರಾಡುವ ಗಾಳಿ, ಕುಡಿಯುವ ನೀರು, ತಿನ್ನಲು ಅನ್ನ, ಉಡುವ ಬಟ್ಟೆಯನ್ನು ಹೊಂದಲೂ ಗೃಹಿಣಿ ಯರು ಎಷ್ಟು ಸಂತಾಪಪಡುತ್ತಿದ್ದಾರೆಂದು, ಸಂಬಂಧಪಟ್ಟವರು, ಗೃಹಿಣಿಯರ ಪ್ರದರ್ಶನ ಗಳನ್ನು ಕಂಡು ಎಚ್ಚೆತ್ತರು.

ಸಾಮಾನ್ಯ ಜನತೆಯ ಪ್ರತಿಬಿಂಬ ವೃತ್ತ-ಪತ್ರಿಕೆಗಳು. ಈಗಂತೂ ವೃತ್ತಪತ್ರಿಕೆಗಳು ಪತ್ರಿಕಾರಂಗವು ರಾಜ್ಯಾಂಗಗಳಲ್ಲಿ ಒಂದು ಮುಖ್ಯ ಅಂಗವೆಂದೂ ಪರಿಗಣಿಸಲ್ಪಟ್ಟಿದೆ. ವೃತ್ತಪತ್ರಿಕೆಗಳ ಉಪಯೋಗವನ್ನು ಹೆಚ್ಚು ಹೆಚ್ಚಾಗಿ ಮಧ್ಯಮವರ್ಗದ ಮಹಿಳೆಯರು ಮಾಡಿಕೊಳ್ಳಬೇಕು. ತಮ್ಮ ದೈನಂದಿನ ಜೀವ ನದ ಕಷ್ಟಕಾರ್ಪಣ್ಯಗಳನ್ನು ಲೇಖನಗಳ ಮೂಲಕ ವಾಗಲೀ, ಪತ್ರಗಳಮೂಲಕವಾಗಲೀ ಬರೆಯ ಬೇಕು.

ಅಕ್ಕಿಯಲ್ಲಿ ಕಲ್ಲು ಬೆರಸಿ ಅಂಗಡಿಯವರು ಮಾರುತ್ತಿದ್ದರೆ ತಕ್ಷಣ ಅಂಗಡಿಯವನ ಹೆಸರು ಪತ್ತೆಯೊಂದಿಗೆ ಪತ್ರಿಕೆಗಳಿಗೆ ಬರೆಯಲೇಬೇಕು. ಹಾಗೆಯೇ ತಾವು ಜೀವನದಲ್ಲಿ ಅನುಭವಿಸಬೇಕಾಗಿರುವ ಭ್ರಷ್ಟಾಚಾರದ ವಿವಿಧ ಸ್ವರೂಪಗಳನ್ನು ಮುಚ್ಚುಮರೆಯಿಲ್ಲದೆ ವ್ಯಕ್ತಪಡಿಸುತ್ತಲೇ ಇರ ಬೇಕು.

ಈಗ ಕಾನೂನಿಗೆ ವಿರೋಧವಾಗಿರುವ ವರದ ಕ್ಷಿಣೆಯ ಪದ್ಧತಿಯನ್ನು ಸಂಪೂರ್ಣ ಮನಸ್ಸಿನಿಂದ ಬಿಡಬೇಕು. ಕೊಡುವುದಷ್ಟೇ ಅಲ್ಲ, ತೆಗೆದುಕೊ ಳ್ಳುವುದನ್ನೂ ಮಹಿಳೆಯರೇ ನಿಲ್ಲಿಸಬೇಕು. ಮದುವೆ ಸಮಾರಂಭಗಳು ಡಂಭಾಚಾರದ ಪ್ರತೀಕಗಳಾ ಗದೆ, ಸುಲಿಗೆಯ ಪರಮಾವಧಿಯಾಗದೆ, ಸರಳ ಸಂತೋಷ ಸಮಾರಂಭಗಳಾಗಬೇಕು. ಗಂಡಿನ ತಾಯಿಯಾಗಿ ಮಹಿಳೆ ವರದಕ್ಷಿಣೆಯ ದುರಾಚಾರ ಗಳನ್ನು ತಕ್ಷಣ ನಿಲ್ಲಿಸಲೇಬೇಕು.

ಪ್ರತಿಯೊಬ್ಬ ತಾಯಿಯೂ ವರದಕ್ಷಿಣೆ ಬೇಡದ ಯುವಕನಿಗೆ ತಮ್ಮ ಮಗಳನ್ನು ಕೊಡುತ್ತೇವೆಂಬ ನಿಶ್ಚಯಮಾಡಬೇಕು. ಯೋಗ್ಯ ಹೆಣ್ಣುಗಳು ಸಿಗದೆ ಗಂಡುಗಳು ಪರದಾಡುವ ಸ್ಥಿತಿ ಬರಬೇಕು. ಆಗಲೇ ವರದಕ್ಷಿಣೆ ಬೇರುಸಹಿತ ಕೀಳಬಲ್ಲದು. ಆದರೆ ಈ ಕಾರ್ಯ ಹೇಳುವಷ್ಟು ಸುಲಭವಲ್ಲ. ಇದರಲ್ಲಿ ಮನೆಯಲ್ಲಿನ ಮಹಿಳೆಯರ, ಸಮಾಜದ ಮಹಿಳೆಯರ ಸಂಘಟನಾಶಕ್ತಿಯ ಮೇಲೆ, ಯಶಸ್ಸು ಅವಲಂಬಿಸಿದೆ.

ನಮ್ಮ ಸಮಾಜದ ಹಾಗೂ ರಾಷ್ಟ್ರದ ಮುನ್ನ ಡೆಯನ್ನು ಕುಂಠಿತಮಾಡುತ್ತಿರುವ ಅಂಶವೆಂದರೆ ಜನತೆಯ ನಿರಕ್ಷರತೆಯ ಗಾಢಾಂಧಕಾರ. ಅಜ್ಞಾ ನದ ಕತ್ತಲು. ಪ್ರತಿಯೊಬ್ಬ ವಿದ್ಯಾವಂತ ಮಹಿ ಳೆಯೂ ನಾಲ್ಕು ಮಂದಿಗಾದರೂ ಅಕ್ಷರಾಭ್ಯಾಸ ವನ್ನು ಮಾಡುತ್ತೇವೆಂಬ ದೃಢಸಂಕಲ್ಪಮಾಡಿಕೊ ಳ್ಳಬೇಕು. ಅಕ್ಕಪಕ್ಕದವರು, ಮನೆಯಲ್ಲಿನ ಹಿರಿಯರು, ಕೆಲಸದವರು ಇವರಲ್ಲಿನ ನಾಲು ಜನಕ್ಕೆ ತನ್ನ ಜೀವನದಲ್ಲಿ ವಿದ್ಯಾದಾನ ಮಾಡುತ್ತೇ ವೆಂಬ ನಿರ್ಧಾರಮಾಡಿಕೊಂಡು ತನ್ನ ಬಿಡುವಿನ ವೇಳೆಯನ್ನು ಉಪಯೋಗಿಸಿದರೆ ರಾಷ್ಟ್ರಕ್ಕೆ ಮಹ ತ್ತರ ಸೇವೆ ಮಾಡಿದಂತೇ ಸರಿ. ಅಜ್ಞಾನದ ಅಂಧ ಕಾರವು ತೊಲಗಿ ಬೆಳಕಿನ ಪ್ರಕಾಶ ಬೀರುವುದು ಸಾಮಾನ್ಯವಲ್ಲ.

ಮಹಾರಾಷ್ಟ್ರದ ಮಹಿಳೆಯರು ಕೈಗೊಂಡಿರುವ ಒಂದು ಉತ್ಸಾಹಕರ ಸುದ್ದಿ ಕೇಳಿದೆ: ಮಾರಾಟಕ್ಕೆ ಬರುವ ಕತೆ-ಕಾದಂಬರಿಗಳನ್ನು ಒಂದು ಮಹಿಳಾ ಸಂಘವು ಪರಿಶೀಲಿಸಿ, ಆ ಪುಸ್ತಕಗಳನ್ನು ತಮ್ಮ ಮಕ್ಕಳು ವಿದ್ಯಾರ್ಥಿ ವಿದ್ಯಾರ್ಥಿನಿಯರು ಓದಲು ಯೋಗ್ಯವಿದೆಯೋ ಇಲ್ಲವೋ ಎಂದು ತೀರ್ಪು ಕೊಡುತ್ತಾರೆ. ಆ ಸಂಘವು ನಿಷೇಧಿಸಿದ ಯಾವ ಪುಸ್ತಕವನ್ನೂ ಪುಸ್ತಕದ ಅಂಗಡಿಗಳವರಿಗೆ ಮಾ-ರಾಟ ಮಾಡಲು ಧೈರ್ಯ ಸಾಲದು. ಎಂಥ ಉದಾತ್ತ ಸೇವೆ! ಸಾಹಿತ್ಯದ ಮಾಲಿನ್ಯವನ್ನು ದೂರ ಮಾಡಲು ಮಹಿಳೆಯರು ಕೈಕೊಂಡಿರು ವುದು ಸ್ತುತ್ಯಕಾರ್ಯ. ಕನ್ನಡ ಸಾಹಿತ್ಯದಲ್ಲಿ ಇದೀಗ ವಿಷಬಳ್ಳಿಯಂತೆ ಹಬ್ಬುತ್ತಿರುವ ಅಶ್ಲೀಲ ಸಾಹಿತ್ಯ, ಮುಗ್ಧಮನಸ್ಸಿನ ವಿದ್ಯಾರ್ಥಿ-ವಿದ್ಯಾರ್ಥಿ ನಿಯರ ವೇಳೆ ಹಾಳುಮಾಡುವುದಲ್ಲದೆ ತಪ್ಪುದಾರಿಗೆ ಎಳೆಯುತ್ತಿದೆ. ಕನ್ನಡ ಮಹಿಳೆಯರೂ ಸಂಘ-ಟಿತಗೊಂಡು ಇಂಥ ಅನಿಷ್ಟವನ್ನು ದೂರಮಾಡಲು ಸಾಧ್ಯವಿದೆ.

ಒಟ್ಟಿನಲ್ಲಿ ಮಹಿಳೆಯರಲ್ಲಿ ಆತ್ಮಶಕ್ತಿಯ ಅರಿವು ಜಾಗ್ರತಗೊಂಡು, ಅವರು ತಮ್ಮ ಸಂಘಟನಾ ಶಕ್ತಿಯ ಪೂರ್ಣಪ್ರಯೋಜನ ಪಡೆದುಕೊಂಡರೆ, ಸಮಾಜವು ತನ್ನ ಅನಿಷ್ಟಗಳನ್ನು ದೂರ ಮಾಡಲು ಖಂಡಿತ ಸಾಧ್ಯವೆಂದು ಹೇಳಬಹುದು.

ಹೆಣ್ಣು ಶಿಕ್ಷಣದ ಸದುಪಯೋಗ ಮಾಡಿಕೊಳ್ಳಬೇಕು

# ಮಹಿಳೆಯರಿಂದ ಅನಿಷ್ಟ ನಿವಾರಣೆಯೇನೊ ಸಾಧ್ಯ; ಆದರೆ ಅದು ಯಾವಾಗ?

**ಶ್ರೀಮತಿ ಸುಶೀಲಾ ಕೊಪ್ಪರ, ಬೆಂಗಳೂರು**

ಸಾಧಾರಣವಾಗಿ ನಾವು ಸಮಾಜಕ್ಕೆ ಹಾನಿಯನ್ನುಂಟುಮಾಡುವ ಯಾವುದೇ ವಿಷಯ ಅಥವಾ ವ್ಯಕ್ತಿಗೆ ಅನಿಷ್ಟ ಅಥವಾ ಅನಿಷ್ಟಕಾರಕ ಎನ್ನುತ್ತೇವೆ. ಅನಿಷ್ಟಗಳು ಅನೇಕ ವಿಧವಾದವು-ಗಳಾಗಿದ್ದರಿಂದ ಅವುಗಳನ್ನು ವಿಂಗಡಿಸುವದು ಕಷ್ಟ. ಕಾರಣ ಯಾವುದೇ ಒಂದು ಒಳ್ಳೆಯ ಕಾರ್ಯವೂ ಇನ್ನೊಂದಕ್ಕೆ ಅನಿಷ್ಟಕಾರಕವಾಗಿ ಪರಿಣಮಿಸಬಹುದು. ಅನೇಕ ಸಲ ಒಂದು ಅನಿಷ್ಟ ಇನ್ನೊಂದಕ್ಕೆ ಎಡೆ ಕೊಟ್ಟು ಅದರ ಸರಪಳಿಯೇ ಉಂಟಾಗಿ ಅದೊಂದು ತಡೆಯಲು ಅತಿ ಕಷ್ಟವಾದ ಸಾಮಾಜಿಕ ರೋಗವಾಗುವ ಸಂಭವವುಂಟು.

ಯಾವುದೇ ರೋಗವನ್ನು ಗುಣಪಡಿಸಲು ಅದರ ಮೂಲವನ್ನೇ ತಿಳಿದು ಅದಕ್ಕೆ ಉಪಚಾರ ಮಾಡಬೇಕಾಗುವಂತೆ ಅನಿಷ್ಟ ರೋಗಕ್ಕೆ ಮಹಿಳೆಯೇ ಮೂಲಕಾರಣವಾಗಿದ್ದು — ಆಕೆ ಗುಣಹೊಂದಿದಾಗಲೇ ಸಮಾಜಕ್ಕೆ ಅಂಟಿದ ಈ ಅಂಟುರೋಗವು ನಿವಾರಣೆಯಾಗಲು ಸಾಧ್ಯವಿದೆ.

"ಮಹಿಳೆಯರ ಪರಿಸ್ಥಿತಿ ಸುಧಾರಿಸುವವರೆಗೆ ವಿಶ್ವದಕಲ್ಯಾಣಕ್ಕೆ ಮಾರ್ಗವಿಲ್ಲ" ಎಂದು ಶ್ರೀ ಸ್ವಾಮಿ ವಿವೇಕಾನಂದರು ಹೇಳಿದ್ದಕ್ಕೆ ಈ ಅರ್ಥವೂ ಇರಬಹುದು: ಅಂದರೆ ಮೊದಲು ಮಹಿಳೆಯರು ಅಜ್ಞಾನದ ಅಂಧಕಾರದಿಂದ— ಪ್ರಕಾಶಕ್ಕೆ ಬರಬೇಕು. ಅವಳಿಗೆ ಅಂಟಿಕೊಂಡ ಕೊಳೆ ದೂರವಾಗಬೇಕು. ಆಗ ಅವಳಿಂದಲೇ ಕಲ್ಯಾಣವಾದೀತು. ಅಂದರೆ ಅವಳು ಮೊದಲು ಸುಧಾರಿಸಬೇಕು. ಕಾರಣ ಅವಳು ಕುಟುಂಬಕ್ಕೆ ಸಮಾಜಕ್ಕೆ ವಿಶ್ವಕ್ಕೆ ಮೂಲಾಧಾರ.

## ಶಿಕ್ಷಣಮಾರ್ಗ

ಆ ಸುಧಾರಣೆಯ ಮಾರ್ಗವನ್ನು ನಮ್ಮ ಸುಧಾರಕರು ಶಿಕ್ಷಣಮಾರ್ಗದಿಂದ ಪ್ರಾರಂಭಿಸಿದರು. ಆಗ ಶಿಕ್ಷಣಕ್ಕೆ ಹಿನ್ನೆಲೆ ಸಂಸ್ಕೃತಿಯ ಮೂಲವಿದ್ದುದರಿಂದ ಆ ಮಾರ್ಗವೇ ಸರ್ವಶ್ರೇಷ್ಠ ಮತ್ತು ಪರಿಣಾಮಕಾರಿ ಎಂದು ಭಾವಿಸಿದ್ದರೆ ತಪ್ಪಿಲ್ಲ. ಸ್ತ್ರೀಶಿಕ್ಷಣ ಸ್ವಾವಲಂಬನಕ್ಕೆ ಸಹಾಯಕವಾಗಿದ್ದರೂ ಅದು ಕೇವಲ ಪಟ್ಟಣವಾಸಿ ಮಹಿಳೆಯರಿಗೆ ಮಾತ್ರ ಉಪಯುಕ್ತವಾಯಿತು. ಹಳ್ಳಿಯ ಮಹಿಳೆಯರು ಯಾವಾಗಲೂ ಪುರುಷರಿಗೆ ಸಮಸಮವಾಗಿ ದುಡಿಯುತ್ತಿದ್ದುದರಿಂದ ಅವರಿಗೆ ಸ್ವಾವಲಂಬನಕ್ಕಾಗಿ ಶಿಕ್ಷಣದ ಆವಶ್ಯಕತೆ ಉಂಟಾಗಲಿಲ್ಲ. ಇದರಿಂದ ಸಮಾಜದ ಅನಿಷ್ಟವನ್ನು ದೂರಮಾಡುವ ಉದ್ದೇಶಕ್ಕಿಂತ ಆಗಿನ ಮಹಿಳಾಶಿಕ್ಷಣ ಸ್ವಾವಲಂಬನದತ್ತ ಹೆಚ್ಚು ವಾಲಿ ಅದು ತನ್ನ ಉದ್ದೇಶವನ್ನು ಪೂರ್ಣಹೊಂದಿಲ್ಲ ಎಂದು ಹೇಳಬೇಕಾಗಿದೆ.

ಅನೇಕರು ಇಂದು ಸುಶಿಕ್ಷಿತರೆನಿಸಿಕೊಂಡಿದ್ದಾರೆ. ಉಚ್ಚಶಿಕ್ಷಣದ ಪದವಿಯನ್ನೂ ಪಡೆದಿದ್ದಾರೆ. ಎಲ್ಲ ಕ್ಷೇತ್ರದಲ್ಲಿಯೂ ಪುರುಷರಿಗೆ ಸಮಸಮವಾಗಿ ಶಿಕ್ಷಣಪಡೆದು "ಸರಿಸಮಾನರೂ" ಆಗಿದ್ದಾರೆ. ಆದರೂ ನಮ್ಮ ದೇಶದಲ್ಲಿಯ ಅನೇಕ ಅನಿಷ್ಟಗಳು ಯಾಕೆ ನಿವಾರಣೆಯಾಗಲಿಲ್ಲ ?

ಕಾಲ ಬದಲಾದಂತೆ ಒಂದು ಅನಿಷ್ಟ ನಿವಾರಣೆಯಾದರೆ ರಾವಣನ ತಲೆಯಂತೆ ಇನ್ನೊಂದು ಉದ್ಭವಿಸಿರುತ್ತದೆ. ಇದನ್ನು ನೋಡಿದಾಗ ಕೇವಲ ಶಾಲಾಶಿಕ್ಷಣದಿಂದ—ಸ್ತ್ರೀಸ್ವಾತಂತ್ರ್ಯದಿಂದ-ಮತ್ತು ಸ್ವಾವಲಂಬನ ಜೀವನದಿಂದ ಮಹಿಳೆಯರು ಸುಧಾರಣೆಹೊಂದಿ ನಮ್ಮ ಕುಟುಂಬ ಸಮಾಜ ಮತ್ತು ವಿಶ್ವಕ್ಕೆ ಕಲ್ಯಾಣಕಾರಿಯಾದಾರೆಂಬ ಭರವಸೆ ನಮಗೆ ಸಿಕ್ಕಿಲ್ಲ.

ಅನೇಕರು ಇಂದಿನ ಸ್ತ್ರೀಶಿಕ್ಷಣ ಹಾನಿಕಾರಕವೆಂದು ವಾದವನ್ನೂ ಮಾಡುತ್ತಾರೆ. ಅವಳಿಗೆ ಉಪಯುಕ್ತವಾಗುವ ಗೃಹವಿಜ್ಞಾನದಂಥ ಶಿಕ್ಷಣ ದೊರೆಯಬೇಕೆಂದು ಮತ್ತೆ ಕೆಲವರು ಹೇಳುತ್ತಾರೆ. ಹುಟ್ಟಿದ ಮಗುವಿಗೆ ಹಾಲು ಕುಡಿಯಲು ಯಾರಾದರೂ ಕಲಿಸುವ ಅವಶ್ಯಕತೆಯಿರುವದಿಲ್ಲ. ಅದರಂತೆಯೇ ಗೃಹಶಿಕ್ಷಣ ಹೆಣ್ಣುಮಕ್ಕಳಿಗೆ ತಾನಾಗಿಯೇ ಬರುವುದು. ಅದನ್ನು ಹಣ ಕೊಟ್ಟು ಸಮಯ ಕಳೆದು ಕಾಲೇಜಿನಲ್ಲೇಕೇ ಕಲಿಯಬೇಕು ? ಇದು ಕೆಲವು ನುರಿತ ಗೃಹಿಣಿಯರ ವಾದ. ಇದು ಏನೇ ಇದ್ದರೂ ಯಾವುದೇ ವಿದ್ಯೆಯಾದರೂ ಸರಿ. ವಿದ್ಯೆಯಾವುದಾದರೇನು ? ವಿದ್ಯೆ ವಿದ್ಯೆಯೆ. ಯಾವುದೊಂದರಲ್ಲಿ ಪರಿಣತೆಯನ್ನು ಪಡೆಯುವುದು ಅಷ್ಟೆ. ಅದಕ್ಕೆ ಗೌರವ ಇದ್ದೇ ಇದೆ. ಆದರೆ ಅದನ್ನು ಪಡೆದ ವ್ಯಕ್ತಿಯ ಆಚರಣೆ ಉಪಯೋಗ ಮತ್ತು ಹಿನ್ನೆಲೆ ಇವು ಇಷ್ಟ-ಅನಿಷ್ಟಗಳನ್ನು ನಿರ್ಧರಿಸುತ್ತವೆ. ಇದನ್ನು ಪ್ರತಿಬಿಂಬಿಸುವ ವ್ಯಕ್ತಿತ್ವ ಮತ್ತು ಸಾಧನೆಗಳು ನಮಗೆ ಇಂದು ಅವಶ್ಯವಿರುವುದು. ಸಾಧಾರಣವಾಗಿ ವ್ಯಕ್ತಿತ್ವಗಳು ಸಾಮಾನ್ಯರ ಕಣ್ಣಿಗೆ ಬೀಳುವಂತಿರದ್ದರಿಂದ ಪ್ರಚಾರವೇ ಸಾಧನವಾಗಿದೆ.

ಪ್ರಚಾರ ಎಂದೊಡನೆ ಪತ್ರಿಕೆ-ಲೇಖನ-ಪುಸ್ತಕ ಇವೇ ಇಂದಿನ ಜನಾಂಗದ ಕಣ್ಣೆದುರಿಗೆ ಬರುವ ಚಿತ್ರಗಳು. ಆದರೆ ಈ ಸಾಧನಗಳು ಇಂದಿನ ಪ್ರಪಂಚದಲ್ಲಿ ರಾಜಕೀಯ ಕ್ಷೇತ್ರಕ್ಕೆ ಒಳಗಾಗಿ ತಮ್ಮ ಪ್ರಭಾವವನ್ನು ಕಳೆದುಕೊಂಡು ಆತ್ಮವಂಚನೆಗೆ ಈಡಾಗಿವೆ; ತಮ್ಮ ನಿಜ ಮೌಲ್ಯ-ವನ್ನು ಕಳೆದುಕೊಂಡಿವೆ.

ನಮ್ಮ ಅಜ್ಜಿಯೂ ಹೇಳುತ್ತಿದ್ದಳು "ಅಯ್ಯೋ ಕಾಲ ಕೆಟ್ಟುಹೋಯಿತು. ನಮ್ಮ ಕಾಲದಲ್ಲಿ ಇಪ್ಪ ರೂಪಾಯಿಗೆ ಪಂಥೇರು ಬಂಗಾರ . . . ಈಗ ಹುಣಸೇಹಂಣೂ ಇಲ್ಲ ..." ಎಂದು ಪ್ರಾರಂಭಿಸಿ ಆ ಕಾಲದ ಧನ-ಸಂಪತ್ತು ಸಮಾಜವ್ಯವಸ್ಥೆ ಇವುಗಳನ್ನು ಬಣ್ಣಿಸುತ್ತಾಳೆ. ಅವಳ ಅಜ್ಜಿಯೂ ಅವಳಿಗೆ ಇದನ್ನೇ ಹೇಳುತ್ತಿದ್ದಳು. ನಾವೂ ಇಂದಿನ ಮಕ್ಕಳಿಗೆ ಇದೇ ತರದ ಮಾತು ಹೇಳುತ್ತೇವೆ. ಅಂದರೆ ಕಾಲ ಎಂದು ಚೆನ್ನಾಗಿತ್ತು ? ಅದು ದಿನದಿನಕ್ಕೆ ನಿತ್ಯ ಸ್ವಲ್ಪ ಸ್ವಲ್ಪ ಕೆಡುತ್ತಲೇ ಹೋಗಿದೆಯೆ ?

## ಕಾಲ ಸರಿದಂತೆ. . . . .

ಕಾಲ ಸರಿದಂತೆ ರಾಜಕೀಯ ಪರಿಸ್ಥಿತಿ ಬದಲಾದಂತೆ ನಮ್ಮ ಸಮಾಜ ವ್ಯವಸ್ಥೆಯೂ ಆಗಾಗ ಬದಲಾಗುತ್ತಿರುತ್ತದೆ. ಒಂದು ತಲೆಮಾರಿನಿಂದ ಇನ್ನೊಂದಕ್ಕೆ ಬರುವವರೆಗೆ ಸ್ವಲ್ಪಸ್ವಲ್ಪವಾಗಿ ಬದಲಾದ ಆ ಸ್ಥಿತಿಗೆ ಹೊಂದಿಕೊಳ್ಳಲಾಗದ ಅಜ್ಜಿಯಿಂದ ಮೇಲಿನ ಮಾತನ್ನು ನಾವು ಕೇಳುತ್ತೇವೆ.

ಕಾಲ ಕೆಡುವದೆಂದರೇನು ? ಅನಿಷ್ಟಗಳು ಬೆಳದಿವೆ ಎಂದರ್ಥ ಅಷ್ಟೆ. ಅನಿಷ್ಟಗಳು ಬೆಳೆಯಲು ಅನೇಕ ಕಾರಣಗಳಿದ್ದರೂ ಅದರ ನಿವಾರಣೆ ಮಾತ್ರ ಮಹಿಳೆಯರಿಂದಲೇ ಸಾಧ್ಯ. ಅದಕ್ಕೆ ಅವಳಲ್ಲಿದ್ದ ಒಳ್ಳೆಯ ಗುಣಗಳ ಶಕ್ತಿಯ ಸಂಚಯವಾಗಬೇಕು. ಅಂಥ ಶಕ್ತಿಯನ್ನು ಸ್ತ್ರೀ ಪಡೆದರೆ ಮಾತ್ರ ಯಾವ ಅನಿಷ್ಟವಾದರೂ ಸರಿ— ಅವಳು ತನ್ನ ಸಾಮರ್ಥ್ಯದಿಂದ ಕತ್ತರಿಸಿ ಹಾಕಬಲ್ಲಳು. ಅನ್ನಪೂರ್ಣೆ ಸೌಮ್ಯಳಾದರೂ ಕಾಲ-ಮಾರಿಯರ ಅವತಾರಗಳನ್ನೂ ಅವಳು ಹೊಂದಬೇಕಾಗುವದು. ಆದರೆ ಆ ಶಕ್ತಿಯನ್ನು ಅವಳು ಮೊದಲು ಸಂಪಾದಿಸಬೇಕಲ್ಲವೆ ?

ಸ್ತ್ರೀಯರನ್ನು ಎಲ್ಲಿ ಗೌರವಿಸುವರೋ ಅಲ್ಲಿ ದೇವತೆಗಳು ವಾಸಿಸುತ್ತಾರೆ ಎಂದು ಮನು ಹೇಳಿದನು. ಕೆಟ್ಟ ಮಗ ಜಗತ್ತಿನಲ್ಲಿ ಹುಟ್ಟಬಹುದು. ಆದರೆ ಕೆಟ್ಟ ಮಾತೆ ಪ್ರಪಂಚದಲ್ಲಿ ಜನ್ಮತಾಳಲಾರಳೆಂದು ಶ್ರೀ ಶಂಕರಾಚಾರ್ಯರು ಹೇಳಿದರು. ಸತಿ ಸಾವಿತ್ರಿ–ಅರುಂಧತಿಯರಿಂದ ಪ್ರಾರಂಭಿಸಿ ಕಸ್ತೂರಬಾ ವರೆಗೂ ಆದರ್ಶ ಶಕ್ತಿಯುತ ಸ್ತ್ರೀಯರನ್ನೂ — ಮನು–ಶಂಕರಾಚಾರ್ಯ–ಗಾಂಧೀಜಿಯವರು ತೋರಿದ ಗೌರವಯುಕ್ತ ಮಾತುಗಳನ್ನೂ ಭಾಷಣ ಮತ್ತು ಲೇಖನಗಳಲ್ಲಿ ಇಂದಿನ

ಮಹಿಳೆಯರು ಅನೇಕ ಸಲ ಉದಾಹರಿಸುತ್ತಾರೆ. ಆದರೆ ಹೇಳಿ ಮುಗಿದಾಗ ಹೇಳಿದವರ ಕಾರ್ಯ ಮುಗಿಯಿತು— ಕೇಳಿ ಮುಗಿದಾಗ ಕೇಳಿಸಿಕೊಂಡವರ ವಿಧಿ ಮುಗಿಯಿತು— ಎಂಬಷ್ಟೇ ಆ ಮಾತುಗಳಿಗೆ ಇಂದು ಬೆಲೆ ಉಳಿದಿದೆ. ಆದರೆ ಮಹಿಳೆಯರು ನಾವೇನಿದ್ದೇವೆ? ನಮ್ಮ ಸ್ಥಾನ ಯಾವುದು? ನಮ್ಮಿಂದ ವ್ಯಕ್ತಿಗತವಾಗಲೀ ಸಮಾಜಕ್ಕಾಗಲೀ ರಾಷ್ಟ್ರಕ್ಕಾಗಲೀ ಲಾಭವಾಗದಿದ್ದರೂ ಹಾನಿಯಾದರೂ ತಟ್ಟದಿರಲಿ—ಅನಿಷ್ಟ ಒದಗದಿರಲಿ- ಇಷ್ಟು ಯೋಚಿಸಿ ನಡೆದುಕೊಂಡರೂ ಅನೇಕ ಅನಿಷ್ಟಗಳನ್ನು ನಿವಾರಿಸಿದಂತಾಗುವದು.

## ಆತ್ಮವಂಚನೆ ಬೇಡ

ಅಜ್ಞಾನಕ್ಕಿಂತಲೂ ಆತ್ಮವಂಚನೆಯೇ ಅತಿ ಘಾತುಕವಾದ ಅನಿಷ್ಟವಿರುವದು. "ಗೃಹಿಣಿ ಗೃಹಮುಚ್ಯತೇ" ಎಂಬ ವಾಕ್ಯದಿಂದ ತಮ್ಮ ಪ್ರಶಂಸೆಯನ್ನು ತಾನೇ ಮಾಡಿಕೊಳ್ಳುವಾಗ– ಅಥವಾ "ಹೆಣ್ಣು ಕೊಟ್ಟೆಯೋ ಕಣ್ಣು ಕೊಟ್ಟೆಯೋ" ಎನ್ನುತ್ತಾರೆ—- ಗಂಡನಿಗೆ ಹೆಂಗಸು ಕಣ್ಣಿದ್ದಂತೆ ಎಂದು ಹೊಗಳಿಕೊಳ್ಳುವಾಗ–ಅಥವಾ ಗುಣವತಿಯಾದ ಪತ್ನಿಯೇ ಪತಿಯ ಕಿರೀಟವೆಂದು ಹಳೇ ಬೈಬಲ್ಲಿನ ನುಡಿಯನ್ನು ಸರಾಗವಾಗಿ ಉಚ್ಚರಿಸುವಾಗ ಆತ್ಮವಂಚನೆಯನ್ನು ಬಿಟ್ಟು 'ಪಂಚತಂತ್ರ' ದಲ್ಲಿಯ ನುಡಿಯನ್ನೂ ಮಹಿಳೆಯರು ಅವಶ್ಯವಾಗಿ ವಿಚಾರಮಾಡಬೇಕು. ತಮ್ಮಲ್ಲಿ ಆ ದೋಷಗಳಿದ್ದರೆ ತಿದ್ದಿಕೊಳ್ಳಬೇಕು. ಅವಳ ಪರಿಪೂರ್ಣ-ತೆಯ ಪ್ರಯತ್ನವೇ ಅನಿಷ್ಟ ನಿವಾರಣೆಯ ಮಾರ್ಗವಾಗಿರುವದು.

ಸಂಶಯಗಳ ಸುಳಿ, ಅವಿನಯದ ವಾಸಸ್ಥಾನ-ಸಾಹಸಗಳ ಪಟ್ಟಣ-ದೋಷಗಳ ಸಾನ್ನಿಧ್ಯ-ನೂರು ಮೋಸಗಳ ಮನೆ-ಅಪನಂಬಿಕೆಯ ಕ್ಷೇತ್ರ-ಎಲ್ಲ ವಿಧ ಮಾಯೆಗಳ ಪೆಟ್ಟಿಗೆಯೂ-ಮಹಾಮಹಾ ಘಟಾನುಘಟಿಗಳಾದ ಪುರುಷಶ್ರೇಷ್ಠರಿಂದಲೂ ನಿವಾರಿಸಲು ಸಾಧ್ಯವಾಗದಂಥ-ಅಮೃತದಿಂದ ಕೂಡಿದ ವಿಷದಂತಿರುವ ಈ ಸ್ತ್ರೀಯ ಯಂತ್ರವನ್ನು ಧರ್ಮನಾಶಕ್ಕೋಸ್ಕರ ಈ ಲೋಕದಲ್ಲಿ ಯಾರು ಹುಟ್ಟಿಸಿದರೊ? (ಭರ್ತೃಹರಿ ಹೇಳಿದ್ದು.)

ಅಸತ್ಯ, ಸಾಹಸ, ಮಾಯೆ, ಮೂರ್ಖತನ, ದುರಾಸೆ, ಕೊಳಕುತನ, ನಿರ್ದಯತ್ವ, ಈ ಗುಣಗಳು ಸ್ತ್ರೀಯರಿಗೆ ಹುಟ್ಟುವಾಗಲೇ ಜೊತೆಯಲ್ಲಿ ಹುಟ್ಟಿಬಂದಂಥವು. ( ಪಂಚತಂತ್ರ. )

ಇವುಗಳನ್ನು ಬರೆದವರೂ ಮಹಾವಿದ್ವಾನ್ನರೇ. ಇವು ಹಾಸ್ಯಕ್ಕಾಗಿ ಬರೆದವುಗಳಾಗಿರಬಹುದು ಎನ್ನಲಾಗದು. ನಾರಿಯರನ್ನು ತೆಗಳಬೇಕೆಂಬ ಉದ್ದೇಶವಂತೂ ಖಂಡಿತ ಇರಲಾರದು. ಕೆಲವರು ಸ್ತ್ರೀಯರ ಒಂದು ಮುಖವನ್ನು ತೋರಿಸಿದರೆ ಮತ್ತೆ ಕೆಲವರು ಸ್ತ್ರೀಯರ ಜೀವನದ ಇನ್ನೊಂದು ಮುಖವನ್ನೂ ತೋರಿಸಿದ್ದಾರೆ. ಸ್ತ್ರೀಯರಿಂದಲೇ ಪ್ರೇಮ ಮಾಡುವದನ್ನು ಕಲಿಯಬೇಕೆಂದು ಮೊಪಾಸಾ ಹೇಳಿದ್ದರೆ— ಮನೆಗೆ ಬಂದ ಅತಿಥಿಯಂತೆ ಅವಳನ್ನು ಗೌರವಿಸಬೇಕೆಂದು ಪ್ರೇಮಚಂದರು ಹೇಳುತ್ತಾರೆ—ಎಂದು ತಮ್ಮ ಹಕ್ಕುಗಳ ವಿಷಯ—ಹೊಗಳಿಕೆಯ ವಿಷಯ ಇವನ್ನೇ ನೆನೆಸಿಕೊಳ್ಳುತ್ತ ತಮ್ಮಲ್ಲಿ ಗೌರವಯುಕ್ತವಾದ ಆ ಗುಣಗಳು ಇಲ್ಲದಿದ್ದರೂ ಆತ್ಮವಂಚನೆಯಿಂದ ಪ್ರಶಂಸೆ ಮಾಡಿಕೊಳ್ಳುತ್ತಹೋದರೆ ಅವಳು ವ್ಯಕ್ತಿಗತವಾಗಿಯೂ ಪ್ರಗತಿಹೊಂದಲಾರಳು; ಅಲ್ಲದೇ ಸಮಾಜದ ಅನಿಷ್ಟವನ್ನೂ ದೂರಮಾಡಲಾರರು. ವ್ಯಕ್ತಿಯ ಪ್ರಗತಿಯೇ ಸಮಾಜದ ಮತ್ತು ಅದರಿಂದ ರಾಷ್ಟ್ರದ ಪ್ರಗತಿಯಾಗಿದ್ದರಿಂದ —ಮೂಲಶಕ್ತಿಯಾದ ಮಹಿಳೆ ಜೀವನದ ಮೂಲ ತತ್ವಗಳನ್ನು ಮರೆಯಬಾರದು. ಅವಳು ಸತ್ಯ-ಧರ್ಮಗಳ ನೆಲೆಗಟ್ಟಿನಲ್ಲಿ ನಿಂತಿದ್ದರೆ ಮಾತ್ರ ಇನ್ನಾತರಿಂದಲೂ ನಿವಾರಣೆಯಾಗದಂಥ ಎಂಥ ಜಟಿಲ ಅನಿಷ್ಟಗಳನ್ನೂ ಅವಳು ನಿವಾರಿಸಿ ವಿಶ್ವಕಲ್ಯಾಣಕಾರಿಯಾಗಬಹುದು.

## ಮಹಿಳೆಯ ಶಕ್ತಿ

"ಧರ್ಮದ ಬಗ್ಗೆ ಏನಾದರೂ ಸಂಶಯ ಬಂದಾಗ ಮನೆಯಲ್ಲಿ ಹೆಂಗಸರನ್ನು ಕೇಳಿ ನಿವಾರಿಸಿಕೊಳ್ಳಿರಿ" ಎಂದು ಗೌತಮ ಧರ್ಮಸೂತ್ರದಲ್ಲಿ ಬರೆದಿದ್ದಾರೆ. ಎಂದರೆ ಅವಳ ಶಕ್ತಿ ಎಷ್ಟಿರಬಹುದು ಮತ್ತು ಏತರಿಂದ ಉಂಟಾಗಿರಬಹುದು ಎಂಬುದು ಶೀರ ಸರಳವಾಗಿ ಅರ್ಥವಾಗುತ್ತದೆ. ದಯೆಯಿಂದ ಹುಟ್ಟಿದ ಧರ್ಮ—ಧರ್ಮಕ್ಕೆ ಮೂಲ ದಯೆ! ದಯೆ ಅವಳ ಹುಟ್ಟುಗುಣ, ಅದೇ ಅವಳ ಶಕ್ತಿ.

ಗುಣವಿಲ್ಲದ ನಾರಿ ನರಕಕ್ಕೆ ದಾರಿಯಾಗಿದ್ದರೂ ನಾರಿ ಒಂದು ಶಕ್ತಿ ಎಂದು ಮಾತ್ರ ಎಲ್ಲರೂ ಒಪ್ಪುತ್ತಾರೆ. ಇದು ವಿವಾದಾಸ್ಪದ ವಿಷಯವಾಗಿಲ್ಲ. ನಾರಿ ನಿಜವಾಗಿಯೂ ಒಂದು ಶಕ್ತಿಯೆ. ಒಂದು ಚಿಕ್ಕ ಚಕ್ರದಿಂದ ಅನೇಕ ಚಿಕ್ಕ ದೊಡ್ಡ ಚಕ್ರಗಳು ತಿರುಗಿ ಅದರ ಪ್ರಭಾವದಿಂದ ವಿದ್ಯುತ್ ಶಕ್ತಿಯು ಪೂರೈಕೆಯಾಗುವಂತೆ ಅಥವಾ ಅದರಿಂದ ಅನೇಕ ದೊಡ್ಡ ಉದ್ದಿಮೆಗಳು ನಡೆಯುವಂತೆ - ಕೇವಲ ಗೃಹಿಣಿಯಾಗಿರುವ ಮಹಿಳೆಯಿಂದ ಅವಳ ಪ್ರಭಾವ ಅರಿವಿಲ್ಲದೆಯೇ ಸಮಾಜ ಮತ್ತು ರಾಷ್ಟ್ರದ ಮೇಲಾಗುತ್ತದೆ. ಯಾಂತ್ರಿಕ ಚಕ್ರಕ್ಕೆ ಬುದ್ಧಿಶಕ್ತಿಯಿಲ್ಲ. ಅದನ್ನು ಒಳ್ಳೆಯದಕ್ಕೆ ಆಗಲೀ ಅಥವಾ ಕೆಟ್ಟದ್ದಕ್ಕೇ ಆಗಲಿ, ಹೇಗೆ ಬೇಕಾದರೂ ಬಳಸಬ-ಹುದು. ಆದರೆ ಮಹಿಳೆ ಎಂಬ ಚಿಕ್ಕ ಚಕ್ರ ಬುದ್ಧಿಶಾಲಿಯಾಗಿರುವದರಿಂದ—ಪಡೆದ ಶಿಕ್ಷಣದ ಎಣ್ಣೆಯನ್ನು ಅದಕ್ಕೆ ಸುರುವಿ ಹೃದಯಚಕ್ರದಿಂದ ಮಿದುಳಿನ ಶಕ್ತಿಯ ಚಕ್ರ ಸರಿಯಾಗಿ ತಿರುಗುತ್ತಿದೆಯೆ ಎಂಬದನ್ನು ಪರೀಕ್ಷಿಸಿಕೊಳ್ಳುತ್ತಿದ್ದರೆ—ಮಹಿಳೆಯಿಂದಲೇ ಎಲ್ಲ ಅನಿಷ್ಟಗಳ ನಿವಾರಣೆಯಾಗುತ್ತದೆ. ಹಾಗಿಲ್ಲದೆ ಅವಳು ಆತ್ಮವಂಚಕಳಾದ್ದರೆ ಸ್ವಾರ್ಥಿಯಾಗಿದ್ದರೆ ಅನಿಷ್ಟದ ಹೊಣೆಯೂ ಅವಳದೇ ಆಗುತ್ತದೆ.



ರಾಷ್ಟ್ರದ ಭವಿಷ್ಯವು ಅದರ ಇಪ್ಪತ್ತೈದು ವರ್ಷಗಳೊಳಗಿನ
ತರುಣರ ಅಭಿಪ್ರಾಯವನ್ನು ಅವಲಂಬಿಸಿದೆ.

—ಗಯಟೆ

### ಲೆಕ್ಕಣಿಕೆಯ ಮೊನೆಯಿಂದ ಅಂತರಂಗವನ್ನು ಕೆದಕಬೇಕು

# ಸಾಮಾಜಿಕ ಅನಿಷ್ಟಗಳನ್ನು ಲೇಖಿಕೆ ಹೇಗೆ ನಿವಾರಿಸಬಹುದು?

**ಶ್ರೀಮತಿ ಶಾಂತಾದೇವಿ ಮಾಳವಾಡ,**
**ಧಾರವಾಡ**

ಪುರುಷ ಪ್ರಧಾನವಾದ ನಮ್ಮ ಸಮಾಜದಲ್ಲಿ ಹೆಣ್ಣು, ಹೊನ್ನು, ಮಣ್ಣುಗಳಿಗೆ ಸಮಾನ ಸ್ಥಾನ ದೊರೆತಿತ್ತು. ಹೊನ್ನನ್ನು ಬಚ್ಚಿಡುವಂತೆ, ಮಣ್ಣನ್ನು ತುಳಿಯುವಂತೆ ಹೆಣ್ಣಿನ ಸ್ಥಿತಿಯಾಗಿತ್ತು. ಧಾರ್ಮಿಕ ಜೀವನದಲ್ಲಿ ಶೂದ್ರಸಮಾನಳಾಗಿ, ಗೃಹಜೀವನದಲ್ಲಿ ದಾಸಿಯಾಗಿ ಬೆಳೆದುಬಂದ ಹೆಣ್ಣುಮಗಳು, ಕೆಲವರ ದೃಷ್ಟಿಯಲ್ಲಿ 'ನಾರಿ ನರಕಕ್ಕೆ ದಾರಿ' ಯಾದಳು. ಇನ್ನು ಕೆಲವರ ದೃಷ್ಟಿಯಲ್ಲಿ ಭೋಗದವಸ್ತುವಾದಳು. ಹಲವರ ಕಲ್ಪನೆಯಲ್ಲಿ ಅಪ್ಸರೆಯಾಗಿ ದೇವಿಯಾಗಿ ಬಹು ದೂರ ಇಡಲ್ಪಟ್ಟಳು. ಇಂಥ ಅಸಮಂಜಸ ಭಾವನೆಗಳಿಂದಾಗಿ ನಮ್ಮ ಸಮಾಜದಲ್ಲಿ ಅನೇಕ ಅನಿಷ್ಟ ಪರಂಪರೆಗಳು ಬೆಳೆದುಬಂದಿವೆ.

ಸಮಾಜದಲ್ಲಿರುವ ಅನಿಷ್ಟಗಳು ನಾಶವಾಗ ಬೇಕಾದರೆ ಪರಿಪೂರ್ಣ ಸಮಾಜ ರಚನೆಯಾಗ ಬೇಕು. ಅದಕ್ಕೆ ಸಮಾನತೆ, ವ್ಯಕ್ತಿ ಸ್ವಾತಂತ್ರ್ಯ ಆರ್ಥಿಕ ಸ್ವಾತಂತ್ರ್ಯ ಬೇಕು ಅಧ್ಯಾತ್ಮಜ್ಞಾನದ ಜೊತೆಗೆ ಜೀವನದ ಮೌಲ್ಯಗಳಿಗೆ ಮನ್ನಣೆ ದೊರೆಯಬೇಕು. ಮಾನವನಲ್ಲಿಯ ಪಶುತ್ವ ಅಳಿದು ಮನುಷ್ಯತ್ವ ಅರಳಿದಾಗಲೇ ಸಾಮಾಜಿಕ ಅನಿಷ್ಟಗಳ ನಿವಾರಣೆಯಾದೀತು.

"ಮಹಿಳೆಯರ ಸ್ಥಿತಿ ಉತ್ತಮಗೊಂಡಲ್ಲದೆ ಜಗತ್ತು ಮೇಲಾಗುವದಕ್ಕೆ ಅವಕಾಶವಿಲ್ಲ. ಹಕ್ಕಿ ಒಂದೇ ರೆಕ್ಕೆಯಿಂದ ಹಾರಲಾರದು" ಎಂದು ಸ್ವಾಮಿ ವಿವೇಕಾನಂದರ ವಿವೇಕವಾಣಿ ಉಸುರುತ್ತಿದೆ. ಈ ವಾಣಿಯಂತೆ ಸ್ವತಂತ್ರ ಭಾರತದಲ್ಲಿ ರಾಜ್ಯಘಟನೆಯಲ್ಲಿ ಹೆಣ್ಣುಮಕ್ಕಳಿಗೆ ಸಮಾನಸ್ಥಾನ ಮಾನಗಳು ದೊರೆತಿವೆ. ಹಿಂದೂ ಕಾಯ್ದೆಯಲ್ಲಿ ಅಗಾಧ ಬದಲಾವಣೆಯಾಗಿ ಸಕಲ ಸೌಕರ್ಯಗಳನ್ನು ಹೆಣ್ಣಮಕ್ಕಳಿಗಿತ್ತಿವೆ. ದೇಶಕ್ಕೆ ಸ್ವಾತಂತ್ರ್ಯ ದೊರೆತಿದೆ, ಹೆಣ್ಣಿಗೆ ಸಮಾನತೆ ದೊರೆತಿದೆ ಎಂಬುದೇನೊ ನಿಜ. ಆದರೆ ರಾಜಕೀಯ ಸ್ವಾತಂತ್ರ್ಯ ಪಡೆದರೂ ಆರ್ಥಿಕ ಸ್ವಾತಂತ್ರ್ಯವಿಲ್ಲದ ದೇಶದ ಸ್ಥಿತಿ ರಾಜ್ಯಘಟನೆಯಲ್ಲಿ ಸಮಾನತೆ ಪಡೆದರೂ ಮೂಢಸಂಪ್ರದಾಯಗಳ ಶೃಂಖಲೆಯಲ್ಲಿ ಹೊರಳಾಡುತ್ತಿರುವ ಹೆಣ್ಣಿನ ಸ್ಥಿತಿ ಶೋಚನೀಯವೆ ಅಹುದು.

## ಅನಿಷ್ಟ ಪರಂಪರೆ

ಸಾಮಾಜಿಕ ಅನಿಷ್ಟಗಳಿಗೆ ಆರ್ಥಿಕ ದುಃಸ್ಥಿತಿ, ಆಧ್ಯಾತ್ಮಿಕ ಅವನತಿ, ನೈತಿಕ ಪತನಗಳೇ ಮೂಲ ಕಾರಣ. ಒಂದು ಶತಮಾನದಲ್ಲಿ ಸಹಗಮನ, ಬಾಲ್ಯವಿವಾಹ, ವಿಧವೆಯರ ಗೋಳು, ಘೋಷಾ ಪದ್ಧತಿ, ಶಿಕ್ಷಣದ ಅಭಾವ ಮೊದಲಾದ ಅನಿಷ್ಟಗಳ ವಿರುದ್ಧ ಅನೇಕ ಜನ ಮಹನೀಯರು ಹೋರಾಡಿ ಅವುಗಳ ನಿವಾರಣೆಗೆ ನೆರವಾಗಿದ್ದಾರೆ. ಕೆಲವು ಅನಿಷ್ಟಗಳ ನಿವಾರಣೆಯಾಗುವುದರಲ್ಲಿ ಮತ್ತೆ ಹೊಸ ಅನಿಷ್ಟಗಳು ಸಮಾಜದಲ್ಲಿ ತಲೆಯೆತ್ತುತ್ತವೆ. ಅಂತೂ ಈ ಅನಿಷ್ಟ ಪರಂಪರೆಯ ಜೊತೆಗೆ ಮಾನವನ ಹೋರಾಟ ಸದಾಕಾಲ ನಡೆದಂತಿದೆ.

ಇಂದು ವರದಕ್ಷಿಣೆ, ಅತಿ ಸಂತಾನ, ಸಾಮಾಜಿಕ ಶಿಕ್ಷಣದ ಬಗೆಗೆ ಅಜ್ಞಾನ, ದೇವದಾಸಿ ಹಾಗೂ ವೇಶ್ಯಾ ಪದ್ಧತಿ ಮೊದಲಾದ ಅನಿಷ್ಟಗಳು ದೈತ್ಯಾಕಾರವಾಗಿ ಸಮಾಜದೆದುರು ನಿಂತಿವೆ. "ನಿರ್ಗತಿಕ ಅನಾಥ ಮಹಿಳೆಯರಿಗೆ, ಅವಿವಾಹಿತ ತಾಯಂದಿರಿಗೆ ನೈತಿಕ ಅಧಃಪತನದ ದಾರಿಯಲ್ಲಿದ್ದ ಬಾಲಕಿಯರಿಗೆ ಮತ್ತು ತೊಂದರೆಯಲ್ಲಿದ್ದ ಇತರ ಹೆಣ್ಣುಮಕ್ಕಳಿಗೆ ಆಶ್ರಯ ಮತ್ತು ಸಂರಕ್ಷಣೆ ನೀಡಿ ಅವರು ತಮ್ಮ ಕಾಲ ಮೇಲೆ ತಾವು ನಿಂತುಕೊಳ್ಳುವ" ಸದವಕಾಶವನ್ನು ಸಮಾಜ ಕಲ್ಯಾಣ ಮಂಡಲಗಳ ಮುಖಾಂತರ ಯೋಜಿಸಿದ್ದಾರೆ ಅದಕ್ಕಾಗಿ ಭಾರತ ಸರಕಾರದವರು ಪ್ರತಿ ವರುಷ ಕೋಟಿಗಟ್ಟಲೆ ಹಣವನ್ನು ವಿನಿಯೋಗಿಸುತ್ತಿದ್ದಾರೆ. ಈ ಯೋಜನೆಗಳ ಲಾಭ ನಮ್ಮ ಮಹಿಳೆಯರಿಗಾಗುವಂತೆ ಕಾಯ್ದೆಯ ನೆರವನ್ನೂ ನೀಡಲಾಗಿದೆ. ದ್ವಿಪತ್ನಿ ವಿವಾಹ ನಿರ್ಬಂಧ ಮಸೂದೆಯಾಗಿದೆ. ಮಹಿಳೆಯರಿಗೆ ವಾರಸಾ ಹಕ್ಕು ದೊರೆತಿದೆ. ವರದಕ್ಷಿಣೆ ನಿರ್ಬಂಧ ಕಾನೂನು ಜಾರಿಯಲ್ಲಿದೆ. ವೇಶ್ಯಾವೃತ್ತಿ ಪ್ರತಿಬಂಧಕ ಕಾನೂನು ಜಾರಿಗೊಂಡಿದೆ. ಮಹಿಳೆಯರ ಉನ್ನತಿಗಾಗಿ ಕಾಯ್ದೆಯ ನೆರವು ಸರಕಾರದ ಸಹಕಾರ ದೊರೆತಿರುವಾಗಲೂ ಅನೇಕ ಸಾಮಾಜಿಕ ಅನಿಷ್ಟಗಳು ಸಮಾಜದ ನೆಮ್ಮದಿಯನ್ನು ಹಾಳುಮಾಡುತ್ತಿವೆ. "ಮಹಿಳೆಯರ ಅಭ್ಯುದಯ ಮಹಿಳೆಯರಿಂದಲೇ ಸಾಧ್ಯ" ಎಂದು ಗಾಂಧೀಜಿಯವರು ಹೇಳಿದುದನ್ನು ಮಹಿಳೆಯರು ಮನದಂದು ಈ ಕಾರ್ಯಗಳತ್ತ ಗಮನ ಕೊಡಬೇಕಾಗಿದೆ.

## ಲೆಕ್ಕಣಿಕೆ ಬಲವಾದುದು

"ಖಡ್ಗಕ್ಕಿಂತ ಲೆಕ್ಕಣಿಕೆ ಬಲವಾದದ್ದು" ಎಂಬ ಗಾದೆಯ ಮಾತಿನಂತೆ ಕಾಯ್ದೆಗಳಿಗೆ ಬಗ್ಗದ ಸಾಮಾಜಿಕ ಅನಿಷ್ಟಗಳನ್ನು ನಿವಾರಣೆಗೈಯಲು ನಮ್ಮ ಸೋದರಿಯರಿಂದು ಲೆಕ್ಕಣಿಕೆ ಹಿಡಿಯಲೇ ಬೇಕಾಗಿದೆ. ಬ್ರಿಟಿಷರ ಸುಸಜ್ಜಿತ ಸೈನ್ಯವನ್ನು ಗಾಂಧೀಜಿಯ ಅಹಿಂಸಾವಾದಿಗಳ ಸತ್ಯಾಗ್ರಹ ತಂಡ ಗೆದ್ದಂತೆ ಕಾಯ್ದೆಯಿಂದ ದಂಡಿಸಲಾರದ ಅಪರಾಧಿ ಮನೋವೃತ್ತಿಯನ್ನು ಮಹಿಳೆಯರ ಪ್ರಭಾವಿತ ಸಾಹಿತ್ಯಗಳಿಂದ ತಡೆಗಟ್ಟಬಹುದು.

ಲಲಿತ ಸಾಹಿತ್ಯದಲ್ಲಿ ಮಾನವೀಯ ಅನುಭವಗಳನ್ನು ಕಲ್ಪಕತೆಯೊಂದಿಗೆ ಬಳಸಲಾಗುತ್ತಿದೆ. ವಿಚಾರ ಸಾಹಿತ್ಯದಲ್ಲಿ ಮಾನವೀಯ ವಿಚಾರಗಳನ್ನು ರಮ್ಯವಾಗಿ ರೂಪಿಸಲಾಗುತ್ತಿದೆ. ಇಂದಿನ ಮಹಿಳೆ ಲಲಿತ ಸಾಹಿತ್ಯ, ವಿಚಾರ ಸಾಹಿತ್ಯ ಇವೆರಡೂ ಕ್ಷೇತ್ರಗಳಲ್ಲಿ ಪ್ರವೇಶಿಸಿ ಸಫಲತೆ ಪಡೆಯುತ್ತಿದ್ದಾಳೆ. ಈ ಎರಡೂ ಬಗೆಯ ಸಾಹಿತ್ಯಗಳಲ್ಲಿ ಮಹಿಳೆಯು ಸಮಾಜವನ್ನು ಹೆಣ್ಣಿನ ದೃಷ್ಟಿಕೋನದಿಂದ ಕಂಡು ಚಿತ್ರಿಸಿದ್ದಾಳೆ. ಸ್ವಾಭಾವಿಕವಾಗಿ ಮಹಿಳೆಗೆ ಅನುಕಂಪ ಹೆಚ್ಚು. ಅವಳಲ್ಲಿ ಉತ್ಕಟ ಭಾವನೆಯೂ ಇರುವದು. ತಾಯಿಯ ಅಂತಃಕರಣ, ಪತ್ನಿಯ ಅನುರಾಗ, ಸೋದರಿಯ ವಾತ್ಸಲ್ಯಗಳು ಮುಪ್ಪುರಿಗೊಂಡು ರಚಿತವಾದ ಮಹಿಳಾ ಸಾಹಿತ್ಯ ಪ್ರಭಾವಕಾರಿಯಾಗಬಲ್ಲದು. 'ನಾರಿ ಮುನಿದರೆ ಮಾರಿ' ಎನ್ನುವಂತೆ ಅನ್ಯಾಯದ ಬಗೆಗೆ ತೀವ್ರ ಪ್ರತಿಭಟನೆಯನ್ನೂ ಮಹಿಳೆ ತೋರಬಲ್ಲಳು. ಮಹಿಳೆಯರ ಈ ಬಗೆಯ ಸ್ವಭಾವದ ವೈಶಿಷ್ಟ್ಯಗಳು ಅವರ ಸಾಹಿತ್ಯಕೃತಿಗಳಲ್ಲಿಯೂ ಮೂಡಿಬರುತ್ತಿವೆ. ಆದುದರಿಂದ ಸಾಮಾಜಿಕ ಅನ್ಯಾಯಗಳನ್ನು ನಿವಾರಿಸುವಲ್ಲಿ ಲೇಖಿಕೆಯ ಪಾತ್ರ ಮಹತ್ವದ್ದಾಗಿದೆ. ಸಾಮಾಜಿಕ ಅನ್ಯಾಯಗಳು ನಡೆಯುತ್ತಿರುವ ಪ್ರವೃತ್ತಿಯನ್ನು ತಡೆಯುವದಕ್ಕೆ 'ಕಾಂತಾ ಸಂಮಿತ ದೃಷ್ಟಿ ಇಲ್ಲವೆ ಪ್ರಭುಸಂಮಿತ ದೃಷ್ಟಿ' ಉಪಯುಕ್ತವೇ ಅಹುದು. ಮಹಿಳಾ ಸಾಹಿತಿ ಇವೆರಡು ದೃಷ್ಟಿಯಿಂದಲೂ ಪರಿಣಾಮಕಾರಿಯಾಗುತ್ತಾಳೆ.

## ವರದಕ್ಷಿಣೆ

ಆರ್ಥಿಕ ದುಃಸ್ಥಿತಿ, ಧಾರ್ಮಿಕ ಅಂಧಶ್ರದ್ಧೆ ಅಜ್ಞಾನ ಹಾಗೂ ಸುತ್ತಲಿನ ಪರಿಸರವನ್ನು ಅವಲಂಬಿಸಿ ಬೆಳೆದು ಬರುತ್ತಿರುವ ಅನಿಷ್ಟಗಳಲ್ಲಿ ವರದಕ್ಷಿಣೆಯೂ ಒಂದಾಗಿದೆ. ಇಂದು ಸ್ತ್ರೀಶಿಕ್ಷಣದ ಬಗೆಗೆ ಜಾಗ್ರತಗೊಂಡ ಜನತೆ ಹೆಣ್ಣುಮಕ್ಕಳಿಗೆ ಉಚ್ಚಶಿಕ್ಷಣದ ಅನುಕೂಲತೆಯನ್ನೂ ಕಲ್ಪಿಸಿಕೊಟ್ಟಿದ್ದಾರೆ. ಗಂಡುಮಕ್ಕಳಂತೆ ಹೆಣ್ಣುಮಕ್ಕಳ ಶಿಕ್ಷಣಕ್ಕೂ ಹೆಚ್ಚು ಹಣವನ್ನು ವೆಚ್ಚಮಾಡುತ್ತಿದ್ದರೂ ಸಹ ಮದುವೆಯ ಪ್ರಶ್ನೆಯೊಂದು ಪಾಲಕರಿಗೆ ತಲೆಭಾರವಾಗಿದೆ. ಕನ್ಯೆಯ ಗುಣ, ಶೀಲಗಳನ್ನು ನೋಡುವ ಬದಲು ಇಂದು ಕನ್ಯೆಯ ತಂದೆ ಹೆಚ್ಚು ವರದಕ್ಷಿಣೆ ಕೊಡಬಲ್ಲನೇ ಎಂಬುದನ್ನು ನೋಡುತ್ತಲಿದ್ದಾರೆ. ಇದರಿಂದಾಗಿ ಹೆಚ್ಚಿಗೆ ವರದಕ್ಷಿಣೆ ಕೊಡಲು ಅನುಕೂಲವಿಲ್ಲ-ದವರು ಅನಿವಾರ್ಯವಾಗಿ ತಮ್ಮ ಮಕ್ಕಳನ್ನು

ನೌಕರಿಗೆ ಕಳಿಸಬೇಕಾಗಿದೆ. ಹೇಗಾದರೂ ಮಾಡಿ ಕನ್ಯಾಸೆರೆಯಿಂದ ಪಾರಾಗೋಣ, ವರಪಕ್ಷದವರು ಬೇಡಿದಷ್ಟು ಹಣಕೊಡೋಣ ಎನ್ನುವವರು ನಾನಾ ಬಗೆಯ ಭ್ರಷ್ಟಾಚಾರದಿಂದ ಹಣಕೂಡಿಸಿಕೊಡ ಬೇಕಾಗಿದೆ. ಈ ವರದಕ್ಷಿಣೆಯು ಅನಿಷ್ಟದಿಂದ ಅವಿವಾಹಿತ ಕನ್ಯೆಯರ ಸಂಖ್ಯೆ ಬೆಳೆಯುತ್ತಲಿದೆ. ಇದರಿಂದ ಅನೇಕ ಸಮಸ್ಯೆಗಳು ತಲೆಯೆತ್ತುತ್ತಲಿವೆ. ವಯಸ್ಕಳಾದ ಸುಶಿಕ್ಷಿತ ಕನ್ಯೆ ಈ ವರದಕ್ಷಿಣೆಯ ಮಾರುಕಟ್ಟೆಯ ವ್ಯವಹಾರವನ್ನು ಕಂಡು ಮಾನಸಿಕ ಆಘಾತಕ್ಕೆ ಒಳಗಾಗುವದೂ ಉಂಟು. ಸಮಾಜದ ಬಗೆಗೆ ತಿರಸ್ಕಾರ ಭಾವತಾಳುವದೂ ಉಂಟು. ನಾಡಿನಲ್ಲಿ ನಡೆಯುತ್ತಿರುವ ಭ್ರಷ್ಟಾಚಾರಕ್ಕೆ ಈ ವರದಕ್ಷಿಣೆಯೂ ಪೋಷಕವಾಗಿದೆ. ಹೆಣ್ಣುಮಕ್ಕಳು ಸ್ವಾಭಿಮಾನಿಗಳಾಗಿ ಸ್ವಾವಲಂಬಿಗಳಾಗಿ ವರದಕ್ಷಿಣೆ ಬೇಡುವ ವರನನ್ನು ಲಗ್ನವಾಗಲಾರೆವು ಎಂದು ದೃಢನಿರ್ಧಾರ ಕೈಕೊಂಡಾಗಲೇ ಈ ಪಿಡುಗು ಮಾಯವಾಗಬಲ್ಲದು. ಈ ಬಗೆಗೆ ಈಗಾಗಲೇ ಅನೇಕ ಕಥೆ, ಕಾದಂಬರಿಗಳನ್ನು ನಮ್ಮ ಸೋದರಿಯರು ರಚಿಸಿದ್ದಾರೆ.

## ಅತಿಸಂತಾನ

ಅತಿಸಂತಾನ ಆಹಾರಸಮಸ್ಯೆಯನ್ನೂ, ನಿರುದ್ಯೋಗತನವನ್ನೂ ಬೆಳೆಸಿದೆ. ನಿಮಿಷಕ್ಕೆ ನೂರಾರು ಮಕ್ಕಳ ಜನನ ಭಾರತದಲ್ಲಿ ಆಗುತ್ತಲಿದೆ. ಮಕ್ಕಳ ಉತ್ಪಾದನೆಯಂತೆ ಆಹಾರ ಉತ್ಪಾದನೆಯೂ ಹೆಚ್ಚಾದರೆ ಭಾರತ ಬದುಕೀತು. ನೂರಾರು ವರುಷದ ಪಾರತಂತ್ರ್ಯದ ಜಾಡ್ಯ ಭಾರತೀಯರನ್ನು ಇನ್ನೂ ಬಿಟ್ಟಿಲ್ಲ. ದೈಹಿಕ ಶ್ರಮಗೈಯ್ಯಲೂ ಇಂದಿನವರು ಇಚ್ಛಿಸುತ್ತಿಲ್ಲ. ಇದರಿಂದಾಗಿ ಒಕ್ಕಲತನವನ್ನು ಅಲಕ್ಷ್ಯಗೈಯ್ಯಲಾಗಿದೆ. ಔದ್ಯೋಗಿಕ ಪ್ರಗತಿಯೂ ಆಗಿಲ್ಲ. "ಹುಟ್ಟಿಸಿದ ದೇವರು ಹುಲ್ಲುಮೇಯಿಸಲಾರ" ಎಂಬ ಮೂಢ ನಂಬಿಕೆಯಿಂದ ಸಂತತಿ ನಿಯಂತ್ರಣಕ್ಕೆ ಜನಸಾಮಾನ್ಯರು ಒಪ್ಪುವದಿಲ್ಲ. ತಮ್ಮ ಮಕ್ಕಳಿಗೆ ಯೋಗ್ಯಶಿಕ್ಷಣದೊರೆಯಬೇಕು, ಅವರು ಆರೋಗ್ಯವಂತರಾಗಿರಬೇಕು ಎಂದು ಆಶಿಸುವ ಸುಸಂಸ್ಕೃತ ಜನ ಸಂತತಿನಿಯಂತ್ರಣಕ್ಕೆ ಅಣಿಯಾಗಿದ್ದಾರೆ. ದೈಹಿಕ ಶ್ರಮಗೈಯ್ಯುತ್ತಿರುವ ಕಾರ್ಮಿಕರಲ್ಲಿ ಸಂತಾನಾಭಿವೃದ್ಧಿ ಹಾಗೇ ಸಾಗಿದೆ. ಇದರಿಂದಾಗಿ ಬುದ್ಧಿಶಕ್ತಿಯುಳ್ಳವರಲ್ಲಿ ಸಂಖ್ಯೆ ಕಡಿಮೆಯಾಗುತ್ತ ಸಮಾಜದಲ್ಲಿ ಹೆಚ್ಚಿನ ಅನಿಷ್ಟಗಳು ತಲೆದೋರಬಹುದಾಗಿದೆ. ಕುಟುಂಬ ಯೋಜನೆಗೆ ಜಾತಿಮತಗಳೂ ಕಾರಣವಾಗುತ್ತಿವೆ. ಕೆಲವೊಂದು ಮತೀಯರು ಸಂತತಿ ನಿಯಂತ್ರಣ ಧರ್ಮಬಾಹಿರವೆಂದು ಒಪ್ಪುವದಿಲ್ಲ. ಸರಕಾರದವರು ಈ ಸಂತತಿನಿಯಂತ್ರಣಕ್ಕಾಗಿ ಕೋಟಿಗಟ್ಟಲೆ ಹಣವನ್ನು ಖರ್ಚುಮಾಡುತ್ತಲಿದ್ದರೂ ಸಹ, ಜನತೆಯ ಅಜ್ಞಾನದಿಂದಾಗಿ ಬೋರ್ಗಲ್ಲ ಮೇಲೆ ನೀರು ಸುರುವಿದಂತಾಗುತ್ತಿದೆ. ಆಹಾರೋತ್ಪಾದನೆ ಕಡಿಮೆಯಾಗಿ, ಜನಸಂಖ್ಯೆಹೆಚ್ಚಾಗಿ ಆಹಾರದ ಬಗೆಗೆ ಎಲ್ಲೆಡೆ ಕೋಲಾಹಲ ನಡೆದಿದೆ. ಪರದೇಶಗಳ ಆಹಾರಕ್ಕಾಗಿ ಬಾಯ್ದೆರೆದು ಕುಳಿತುಕೊಳ್ಳುವ ಕರುಣಾಜನಕ ಪರಿಸ್ಥಿತಿಯುಂಟಾಗಿದೆ. ಅತಿ ಸಂತಾನದ ಅನಾಹುತವನ್ನು ಮಹಿಳೆಯರಿಗೆ ಮನದಟ್ಟಾಗುವಂತೆ ಚಿತ್ರಿಸುವದು ಮಹಿಳಾಲೇಖಕಿಯರಿಗೆ ಸಾಧ್ಯವಿದೆ.

## ಸಾಮಾಜಿಕ ಶಿಕ್ಷಣದ ಅಭಾವ

ಭಾರತ ಸ್ವತಂತ್ರವಾದಾಗಿನಿಂದ ಶಿಕ್ಷಣಸೌಕರ್ಯ ಹಾಗೂ ಸಾಮಾಜಿಕ ಶಿಕ್ಷಣಕ್ಕಾಗಿ ಭರದಿಂದ ಕಾರ್ಯ ನಡೆದಿದೆ. ೧೯೬೧ರ ಜನಗಣನೆಯ ಪ್ರಕಾರ ೪೩ ಕೋಟಿ ೬೭ ಲಕ್ಷ ಭಾರತದ ಜನತೆಯಲ್ಲಿ ೧೦,೩೨,೧೫,೭೮೦ ಜನ ಸಾಕ್ಷರರಿರುವದಾಗಿ ತಿಳಿದುಬರುತ್ತಿದೆ. ಶಿಕ್ಷಣದ ಅಭಾವ, ಪ್ರಜಾಪ್ರಭುತ್ವದ ಬಗೆಗೆ ನಮ್ಮ ಕರ್ತವ್ಯ ಹಾಗೂ ಹೊಣೆಗಾರಿಕೆಗಳ ಬಗೆಗಿನ ಅಜ್ಞಾನದಿಂದ ಅನೇಕ ಅನಾಹುತಗಳು ನಡೆದಿವೆ. ನಮಗೆ ದೊರೆತಿರುವ ಮತದಾನದ ಅಧಿಕಾರವನ್ನು ಸರಿಯಾಗಿ ಉಪಯೋಗಿಸಿಕೊಳ್ಳುವ ಜ್ಞಾನವಿಲ್ಲದೆ ನೋಟುಕೊಟ್ಟವರಿಗೆ ಹೋಟುಕೊಟ್ಟು ಅನೇಕ ಸಾಮಾಜಿಕ ಅನಿಷ್ಟಗಳನ್ನು ಆಹ್ವಾನಿಸಿದಂತಾಗಿದೆ. ನಮ್ಮ ರಾಷ್ಟ್ರ ಜಾತ್ಯಾತೀತರಾಷ್ಟ್ರವಾಗಿ ಧರ್ಮದ ತಿರುಳನ್ನೂ ಮರೆಯುತ್ತಿದ್ದೇವೆ. ನೈತಿಕಮೌಲ್ಯಗಳ ಪತನವೂ ನಡೆದಿದೆ. ಇವೆಲ್ಲವುಗಳ ಪರಿಣಾಮವಾಗಿ ಸಾಮಾಜಿಕ ಅನಿಷ್ಟಗಳು ವಿವಿಧಾಕಾರವಾಗಿ ಬೆಳೆದುನಿಂತಿವೆ. ಸುತ್ತಲಿನ ಸಮಾಜದಲ್ಲಿ ನಡೆದ ಈ ಅಧಃಪತನಗಳ ಮೇಲೆ ನಮ್ಮ ಸೋದರಿಯರು ಕ್ಷಕಿರಣ ಚೆಲ್ಲಬಲ್ಲ ಸಾಹಿತ್ಯರಚನೆಗೈಯ್ಯಬೇಕಾಗಿದೆ.

## ದೇವದಾಸಿ ಪದ್ಧತಿ ನಿರ್ಮೂಲನ

ದೇವದಾಸಿ ಪದ್ಧತಿಯೊಂದು ಸಾಮಾಜಿಕ ಅನಿಷ್ಟಪರಂಪರೆಯಲ್ಲಿ ಹಿರಿದಾದುದಾಗಿದೆ. ದೇವರ ಸೇವೆಗೆಂದು ಪವಿತ್ರ ಭಾವನೆಯಿಂದ ಪ್ರಾರಂಭವಾದ ದೇವದಾಸಿ ಪದ್ಧತಿ, ಮಾನವನ ಕಾಮಪಿಪಾಸೆಯನ್ನು ತೃಪ್ತಿಗೊಳಿಸುವಲ್ಲಿ ಪರ್ಯವಸಾನ ಹೊಂದಿತು. ದೇವದಾಸಿ ಪದ್ಧತಿ ನಮ್ಮ ಧಾರ್ಮಿಕ ಜೀವನದ ಡಂಭಾಚಾರಕ್ಕೆ ಹೆಣ್ಣಿನ ಆಹುತಿಗೈದ ದುರಂತವಾಗಿದೆ. "ಹೆಂಗಸರನ್ನು ದುರ್ಲಕ್ಷಿಸಿದುದಕ್ಕೆ—ಅಲ್ಲಲ್ಲ—ದುರುಪಯೋಗಿಸಿಕೊಂಡುದಕ್ಕೆ ಪುರುಷರು ದೋಷಾರ್ಹರೆಂಬುದರಲ್ಲಿ ಸಂಶಯವಿಲ್ಲ. ಆ ಬಗ್ಗೆ ಅವರು ಸಾಕಷ್ಟು ದಂಡತೆರಲೇಬೇಕು. ಆದರೆ ಮೂಢತನದಿಂದ ಮುಕ್ತರಾಗಿ ಗಂಡಸರ ಅತ್ಯಾಚಾರಗಳನ್ನರಿತ ಸ್ತ್ರೀಯರು, ಮಹಿಳೆಯರ ಸುಧಾರಣೆಗಾಗಿ ರಚನಾತ್ಮಕ ಕಾರ್ಯಗಳನ್ನು ಮಾಡಲೇಬೇಕು" ಎಂದು ಗಾಂಧೀಜಿ ಹೇಳಿದ್ದಾರೆ. ಆ ಬಗೆಗೆ ಅನೇಕ ಮಹಿಳೆಯರನ್ನು ಜಾಗ್ರತಗೊಳಿಸಿದ್ದಾರೆ. ಅವರ ಉಪದೇಶವನ್ನು ಕೇಳಿ ನೂರಾರು ಜನ ಮಹಿಳೆಯರು ವೇಶ್ಯಾವೃತ್ತಿಯಿಂದ ಬಿಡುಗಡೆ ಹೊಂದಿ ಕೈಗಾರಿಕೆಯಿಂದ ಉಪಜೀವನ ನಡೆಸಿದರು. ಈಗ ಕರ್ನಾಟಕ ರಾಜ್ಯದಲ್ಲಿ ಸಾಮಾಜಿಕ ನೈತಿಕ ಸ್ವಾಸ್ಥ್ಯ ಕಾರ್ಯಕ್ರಮದ ಅಂಗವಾಗಿ ವೇಶ್ಯಾವೃತ್ತಿಯ ನಿರ್ಮೂಲನ ಕಾರ್ಯ ಸಾಗಿದೆ. ಅಂಥ ಹೆಣ್ಣುಮಕ್ಕಳಿಗೆ ಶಿಕ್ಷಣಸೌಕರ್ಯ, ರಕ್ಷಣೆಯ ಭರವಸೆಯನ್ನು ಸರಕಾರದ ಪರವಾಗಿ ಸಾರ್ವಜನಿಕ ಸಂಸ್ಥೆಗಳ ಮೂಲಕ ಕೊಡಲಾಗಿದೆ. ದೇವದಾಸಿ ಪದ್ಧತಿಯ ಬಗೆಗೆ ಮೂಢ ನಂಬಿಕೆಗೊಳಗಾಗಿರುವ ಹೆಣ್ಣುಮಕ್ಕಳಲ್ಲಿ ಸ್ವಾವಲಂಬನ, ಸ್ವಾಭಿಮಾನಗಳು ಜಾಗೃತವಾಗುವಂತೆ ಕಾರ್ಯ ಪ್ರವೃತ್ತರಾಗಬೇಕಾದುದು ಮಹಿಳೆಯರ ಪಾಲಿಗಿದೆ. "ಸ್ತ್ರೀಯರೆಲ್ಲರನ್ನೂ ಜಗನ್ಮಾಯೆ ಪ್ರತಿಬಿಂಬದಂತೆ ಕಾಣಬೇಕು" ಎಂದು ಸ್ವಾಮಿ ವಿವೇಕಾನಂದರು ಹೇಳಿದ್ದಾರೆ. "ಪರವಧುವನ್ನು ಮಹಾದೇವಿ ಎಂಬೆ" ಎಂದು ಬಸವಣ್ಣನವರು ಹೇಳಿದ್ದಾರೆ. ಈ ಮಹಾತ್ಮರ ಉಕ್ತಿಯನ್ನು ಆಚರಣೆಯಲ್ಲಿ ತಂದರೆ ಶತಮಾನಗಳಿಂದ ಬಂದ ವೇಶ್ಯಾವೃತ್ತಿ ನಿರ್ಮೂಲನಗೊಳ್ಳುವದು, ಈ ಬಗೆಗೆ ಇನ್ನೂ ಅನೇಕ ಕಥೆ, ಕಾದಂಬರಿಗಳನ್ನು ನಮ್ಮ ಸೋದರಿಯರು ರಚಿಸಬೇಕಾಗಿದೆ.

ಶತಮಾನಗಳಿಂದ ಬಂದ ಮೂಢನಂಬಿಕೆ, ಅಜ್ಞಾನಗಳು, ಸಾಮಾಜಿಕ ಅನಿಷ್ಟಗಳು ಒಂದೆರಡು ವರ್ಷಗಳಲ್ಲಿ ಅಳಿಯಲಾರವು. ಸ್ವತಂತ್ರ ಭಾರತದಲ್ಲಿ ಇವುಗಳ ನಿರ್ಮೂಲನೆಯ ಬಗೆಗೆ ಕಾರ್ಯ ನಡೆದಿರುವುದನ್ನು ಗಮನಿಸಿದಾಗ ಈ ಅನಿಷ್ಟಗಳ ನಿವಾರಣೆಯಾದೀತೆಂಬ ಭರವಸೆಯಿದೆ. ನಮ್ಮ ಸಮಾಜದಲ್ಲಿ ದೈಹಿಕ, ಮಾನಸಿಕ, ಆಧ್ಯಾತ್ಮಿಕ ಬೆಳವಣಿಗೆಯಾದರೆ ಸಾಮಾಜಿಕ ಅನಿಷ್ಟಗಳು ನಿವಾರಣೆಯಾಗಬಲ್ಲವು. "ಖಡ್ಗದಮೊನೆಗಿಂತ ಹರಿತವಾದ ಲೆಕ್ಕಣಿಕೆಯ ಮೊನೆ"ಯಿಂದ ಹೃದಯವನ್ನು ಹೊಕ್ಕು, ಮನವನ್ನು ಬೆಳಗಿ, ಅಂತರಂಗವನ್ನು ಅರಳಿಸಬಲ್ಲ ಮಹಿಳೆಯರ ಸಾಹಿತ್ಯ ಕೃತಿಗಳಿಂದ ಸಾಮಾಜಿಕ ಅನಿಷ್ಟಗಳ ನಿವಾರಣೆ ಸಾಧ್ಯ.

# ಮಹಿಳೆ ಭವ್ಯ ಸಮಾಜದ ನಿರ್ಮಾತೃ

ಶ್ರೀಮತಿ ಅನುಪಮಾ ನಿರಂಜನ

ಒಂದು ಕಾಲ್ಪನಿಕ ಚಿತ್ರ. ಭದ್ರವಾದ ಆರ್ಥಿಕ ಅಡಿಪಾಯದ ಮೇಲೆ ಕಟ್ಟಿರುವ, ಸುಂದರವಾದ ಸಮಾಜ, ವಿದ್ಯಾವಂತರಾದ, ಪ್ರಾಮಾಣಿಕರಾದ ಜನರು. ವೈಜ್ಞಾನಿಕವಾಗಿ ಅವರು ಸಾಧಿಸಿರುವ ಪ್ರಗತಿ ಅದ್ಭುತ. ಕಾಹಿಲೆಗಳ ಸೋಂಕಿನಿಂದ ದೂರವಿದ್ದು ದೇಹದಾರ್ಢ್ಯ ಆರೋಗ್ಯಗಳನ್ನು ಹೊಂದಿರುವ ಮಕ್ಕಳು, ಬಡತನ-ಅಜ್ಞಾನಗಳ ನಿವಾರಣೆಗೆ ಪುರುಷರಷ್ಟೇ ದುಡಿಯುತ್ತಿರುವ ಜ್ಞಾನವತಿಯಾದ ಮಹಿಳೆಯರು. ಇಂತಹ ಒಂದು ಮಾದರಿ ಸಮಾಜ, ಮುನ್ನಡೆದ ಸಮಾಜ ಭೂಮಿಯ ಮೇಲೆ ಸೃಷ್ಟಿಯಾಗಬೇಕು. ಈ ಸಮಾಜದ ಕಲ್ಪನೆ ಬರೀ ಕನಸಾಗಿಯೇ ಉಳಿಯ ಬಾರದು. ಅದನ್ನು ಸಾಧಿಸಲು ನಾವಿಂದು ಪಣತೊಟ್ಟರೆ ಮುಂದೆ ಎಂದಾದರೂ ಒಂದು ದಿನ, ಕನಸಿನ ಚಿತ್ರ ನೈಜಚಿತ್ರವಾಗಿ ಮೂಡು ವುದು ಸಾಧ್ಯವಾದೀತು.

ಸಮಾಜ ಮುನ್ನಡೆಯಬೇಕು ಎನ್ನುವ ಬಯಕೆ ಪ್ರಗತಿ ಸೂಚಕ. ಆದರೆ ಆ ಮುನ್ನ-ಡೆಗೆ ಪ್ರತಿ ಹೆಜ್ಜೆ ಹೆಜ್ಜೆಗೂ ಒದಗುವ ತೊಡಕು ಗಳು, ಸಾಮಾಜಿಕ ಅನಿಷ್ಟಗಳು ಎಷ್ಟೊಂದು; ಈ ಅನಿಷ್ಟಗಳು ಕೆಲವು ಬಡತನದಿಂದಾಗಿ ಉಂಟಾದವು. ಮತ್ತೆ ಕೆಲವು ಅಜ್ಞಾನದಿಂದ, ಉಳಿದುವು ಹಲವು ಸಂಪ್ರದಾಯದಿಂದ ನಡೆದು ಬಂದುವುಗಳು. ಕಾರಣ ಏನೇ ಇರಲಿ. ಈ ಪೀಡೆಗಳು ತೊಲಗಿದ ಹೊರತು ನಮಗೆ ಮುಕ್ತಿ ಯಿಲ್ಲ ಎಂಬುದಂತೂ ನಿಶ್ಚಯ. ಈ ದಿಶೆಯಲ್ಲಿ ಮಹಿಳೆಯದೇ ಮುಖ್ಯ ಪಾತ್ರ. ಹೊಸ ಜೀವನದ ಸೃಷ್ಟಿಯಲ್ಲಿ ಆಕೆ ಹೇಗೆ ಗುರುತರ ಹೊಣೆ ಹೊರು ತ್ತಾಳೋ ಹಾಗೆಯೇ ಹೊಸ ಸಮಾಜದ ಸೃಷ್ಟಿ-ಯಲ್ಲೂ ಆಕೆಯದೇ ಪಾಲು ಜಾಸ್ತಿ.

## ಸಾಮಾಜಿಕ ಅನಿಷ್ಟಗಳು ಯಾವು?

ಈ ಸಾಮಾಜಿಕ ಅನಿಷ್ಟಗಳು ಯಾವವು? ಎಂಬುದನ್ನು ಒಂದೊಂದಾಗಿ ಪರಿಶೀಲಿಸೋಣ. ಬಡತನವೇ ನಮ್ಮ ದೇಶದ ಮೊದಲನೆಯ ಶತ್ರು. ದುಡಿಯುವ ಕೈ ಒಂದಾದರೆ, ತಿನ್ನುವ ಬಾಯಿ ಗಳು ಹತ್ತಾರು. ಇದರಿಂದ ಸಹಜವಾಗಿಯೇ ನಮ್ಮ ದೇಶದ ಆರ್ಥಿಕ ಮಟ್ಟ ಹಾಗು ಜೀವನದ ಮಟ್ಟ-ಗಳು ಇಳಿದಿವೆ. ಪಾಶ್ಚಾತ್ಯ ದೇಶಗಳಂತೆ ಆರ್ಥಿಕ ಮಟ್ಟವನ್ನು ಏರಿಸಬೇಕಾದರೆ ಸರಾಸರಿ ಆದಾಯ ಹೆಚ್ಚಬೇಕು. ಸಂಸಾರದ ಆದಾಯ ಏರುವಂತೆ ಗಂಡನಿಗೆ ಹೆಂಡತಿಯ ನೆರವಾಗಬೇಕು. ಸಂಸಾ-ರದ ಅಗತ್ಯಗಳನ್ನು ಪೂರೈಸಲು ಗೃಹಿಣಿ ಹೊರಗೆ ದುಡಿಯಬೇಕಾಗಿ ಬಂದರೆ ಅದು ಖಂಡಿತವಾಗಿ ಅವಮಾನಕರವಲ್ಲ. ಹಳ್ಳಿಗಳಲ್ಲಿ ರೈತರಿಗೆ ಸರಿಸಮ ವಾಗಿ ಅವರ ಹೆಂಗಸರು ಕೆಲಸ ಮಾಡುತ್ತಾರೆ ಇದು ಅನುಕರಣೀಯ ಆದರ್ಶ. ಮನೆಯ ಹೊರಗೆ ದುಡಿಯಲು ಆಗದ ಮಹಿಳೆ, ಮನೆಯಲ್ಲಿ ಕುಳಿತು ಹೊಲಿಗೆ, ಗೊಂಬೆ ಕೆಲಸ, ಚಿತ್ರ ಹಾಗೂ ಮಣಿ ಕೆಲಸಗಳನ್ನು ಮಾಡಿ ಅಥವಾ ನೆರೆಹೊರೆಯ ಮಕ್ಕಳಿಗೆ ಪಾಠ ಹೇಳಿ, ಸಂಸಾರದ ಆದಾಯ ಹೆಚ್ಚಿಸಬಹುದು. ಬಡತನಕ್ಕೆ ಇನ್ನೊಂದು ಮುಖ್ಯ ಕಾರಣ, ಅತಿಯಾಗಿ ಏರುತ್ತಿರುವ ಜನ ಸಂಖ್ಯೆ. ಜನನ ನಿಯಂತ್ರಣವನ್ನು ಯಶಸ್ವಿಯಾಗಿ ಮಾಡಬಲ್ಲ ಸಾಮರ್ಥ್ಯ ಮಹಿಳೆಗೆ ಮಾತ್ರ ಇದೆ. ಸಂಸಾರ ಚಿಕ್ಕದಾಗಿದ್ದಷ್ಟೂ ಚೊಕ್ಕ-ವಾಗಿರುತ್ತದೆ ಎಂಬ ಮಾತು ಇಲ್ಲಿ ಉಲ್ಲೇಖ-ನೀಯ.

ಬಡತನದ ಬೇಗೆ ತಾಳಲಾರದ ಮಕ್ಕಳು ಬಾಲ ಅಪರಾಧಿಗಳಾಗುತ್ತಾರೆ. ಇದು ಸಮಾಜಕ್ಕೆ ಬಹು ಘಾತಕ. ಮಗುವಿಗೆ ಹೊಟ್ಟೆತುಂಬಾ ಊಟ ಸಿಕ್ಕಿ ಪ್ರೀತಿಯ ರಕ್ಷಣೆ ಹಾಗೂ ವಿದ್ಯಾ-ಭ್ಯಾಸವಿದ್ದರೆ, ಈ ಅಪರಾಧಿಗಳ ಪಿಡುಗು ಪೂರ್ಣ ವಾಗಿ ನಾಶವಾಗುತ್ತದೆ. ಬಡತನದಿಂದ ಉದ್ಭವಿ-ಸಿದ ಇನ್ನೊಂದು ಅನಿಷ್ಟ ವೇಶ್ಯಾಪದ್ಧತಿ. ಮಾನ ಸಿಕ ಇಚ್ಛೆಯೂ ಕೆಲವೊಮ್ಮೆ, ಸಂಪ್ರದಾಯ ಹಲವೊಮ್ಮೆ ಈ ಪದ್ಧತಿಗೆ ಕಾರಣವಿರಬಹುದು. ಗಂಡಸರು ವೇಶ್ಯಾಗೃಹಗಳಿಗೆ ಹೋಗಲು ಕೆಲ ವೊಮ್ಮೆ ಅವರ ಪತ್ನಿಯರೇ ಕಾರಣರಾಗಲೂ ಬಹುದು. ಕಾರಣವೇನೇ ಇದ್ದರೂ ಇದೊಂದು ಶಾಪವಿದ್ದಂತೆ. ವೇಶ್ಯೆಯರಿಗೆ ಸಾಕಷ್ಟು ಉದ್ಯೋ ಗದ ಅವಕಾಶ, ಗೌರವವಾಗಿ ಬದುಕಲು ಹಾದಿ ತೋರಿಸುವುದು— ಸುಸಂಸ್ಕೃತ ಮಹಿಳೆಯರ ಜವಾಬ್ದಾರಿ.

## ಬಡತನ ಭ್ರಷ್ಟಾಚಾರ

ಈ ನಡುವೆ ಭ್ರಷ್ಟಾಚಾರದ ಮಾತು ಎಲ್ಲೆಲ್ಲೂ ಕೇಳಬರುತ್ತಿದೆ. ಈ ಲಂಚಗುಳಿತನಕ್ಕೆ ಬಡತನವೇ ಮೂಲ ಕಾರಣವಲ್ಲವೆ? ಉದಾಹರಣೆಗೆ ಆಫೀಸಿ ನಲ್ಲಿ ಕೆಲಸ ಮಾಡುವ ಗುಮಾಸ್ತನೊಬ್ಬನನ್ನು ತೆಗೆದುಕೊಳ್ಳೋಣ. ಅವನ ಮಾಸಿಕ ವೇತನ ನೂರುರೂಪಾಯಿಗಳೊಳಗೆ. ಮನೆತುಂಬ ಮಕ್ಕಳು ಹೆಂಡತಿ ವೃದ್ಧರಾದ ತಂದೆ-ತಾಯಿಗಳು. ಇವ ರೆಲ್ಲರ ಆಹಾರ, ಬಟ್ಟೆ, ವಿದ್ಯಾಭ್ಯಾಸ, ಇವನ್ನೆಲ್ಲಾ ಪೂರೈಸಲು— ಬೆಲೆ ಏರಿಕೆಯ ಈ ದಿನಗಳಲ್ಲಿ ಆತನಿಗೆ ಹೇಗೆ ಸಾಧ್ಯ? ಹೀಗಾಗಿ ಬದುಕಲು ಇರುವ ಒಂದೇ ದಾರಿಯೆಂದು ಆತ ಲಂಚ ಸ್ವೀಕರಿಸುತ್ತಾನೆ. ಇದು ತಪ್ಪಬೇಕಾದರೆ ಅವನ ವೇತನ ಹೆಚ್ಚಬೇಕು. ಹೆಂಡತಿಯು ಸಾಧ್ಯವಿದ್ದಲ್ಲಿ ದುಡಿಯಲೂ ಸಿದ್ಧಳಾಗಬೇಕು. ತನ್ನ ಅವಶ್ಯಕತೆ ಗಳ ಪೂರೈಕೆಗೆ ಅನೀತಿಯ ಮಾರ್ಗದಿಂದ ಬರುವ ಹಣ ಎಂದಿಗೂ ಬೇಡ—ಎಂಬುದನ್ನು ಆಕೆ ಪತಿಗೆ ಮನದಟ್ಟು ಮಾಡಿಸಬೇಕು. ಆಗಷ್ಟೇ ಭ್ರಷ್ಟಾ-ಚಾರ ಮಾಯವಾದೀತು. ಕಾನೂನುಗಳಿಂದ, ಸರಕಾರದ ತನಿಖೆಗಳಿಂದ ಇದೆಂದಿಗೂ ನಾಶವಾಗು ವುದು ಸಾಧ್ಯವಿಲ್ಲ.

ಅಜ್ಞಾನದಿಂದ ಉಂಟಾಗುದ ಅನಿಷ್ಟಗಳು ನಾಯಿ ಕೊಡೆಗಳಂತೆ ಬೆಳೆದುಕೊಂಡಿವೆ. ಅವು ಗಳಲ್ಲಿ ಮುಖ್ಯವಾದುವು ವರದಕ್ಷಿಣೆ, ಬಾಲ್ಯ ವಿವಾಹ, ವಿಧವೆಗೆ ವಿವಾಹವಾಗುವ ಹಕ್ಕಿಲ್ಲದಿರು ವುದು, ಇತ್ಯಾದಿ. ನಮ್ಮ ಮಹಿಳೆಯರಿಗೆ ಸಾಕಷ್ಟು ಯೋಗ್ಯ ವಿದ್ಯಾಭ್ಯಾಸ ಹಾಗೂ ಪ್ರಾಪಂ-ಚಿಕ ತಿಳಿವಳಿಕೆ ಇಲ್ಲದಿರುವುದೇ ಈ ಪದ್ಧತಿಗಳು ಇನ್ನೂ ರೂಢಿಯಲ್ಲಿರುವುದಕ್ಕೆ ಕಾರಣ.

ಉದಾಹರಣೆಗೆ ತಾಯಿಯೊಬ್ಬಳಿರುತ್ತಾಳೆ. ಅವಳ ಮಗನಿಗೆ ಮದುವೆ ವಯಸ್ಸು. ಹಲವಾರು ಜನ ಕನ್ಯೆಯರನ್ನು ನೋಡುತ್ತಾರೆ. ಮಗನಿಗೆ ಸ್ಫುರದ್ರೂಪಿಯನ್ನು ಮದುವೆಯಾಗಬೇಕು ಎಂಬ ಹಂಬಲ. ತಾಯಿಗೆ, ಹೆಚ್ಚು ವರದಕ್ಷಿಣೆಯನ್ನು ತರುವ ಹುಡುಗಿ ಬರಲಿ ಎಂದು ಆಸೆ. ವರದಕ್ಷಿಣಾ ಪ್ರತಿಬಂಧಕ ಕಾನೂನೇನೋ ಆಚಾರದಲ್ಲಿದೆ. ಆದರೆ ನಿತ್ಯಜೀವನದಲ್ಲಿ ಅದರ ಕಣ್ಣು ತಪ್ಪಿಸಿ ವರದಕ್ಷಿಣ ಸ್ವೀಕಾರ ನಡೆಯುತ್ತಲೇ ಇದೆ ಇದನ್ನು ತಪ್ಪಿಸಲು ತಾಯಿಯಾದವಳು ಮನಸ್ಸು ಮಾಡಬೇಕು. ತನ್ನ ಮಗನಿಗೆ ವರದಕ್ಷಿಣೆ ಬಯ ಸಲಾರೆ; ಹಾಗೆಯೇ ತನ್ನ ಮಗಳಿಗೆ ವರದಕ್ಷಿಣೆ ಕೊಡಲೂ ಆರೆ—ಎಂದು ಆಕೆ ಹಟ ತೊಟ್ಟಾಗ ಮಾತ್ರ ಈ ಕೆಟ್ಟ ಪದ್ಧತಿ ನಶಿಸಿ ಹೋದೀತು.

## ಬಾಲ್ಯವಿವಾಹ

ಬಾಲ್ಯವಿವಾಹ ಎಷ್ಟು ಅಪಾಯಕಾರಿ ಎಂಬುದು ಎಲ್ಲರಿಗೂ ತಿಳಿದಿರುವ ಅಂಶವೇ. ಆದರೆ ತನ್ನ ಮಗಳು ಹದಿನಾಲ್ಕು ಹದಿನೈದು ವರ್ಷದವ ಳಾಗುವ ಹೊತ್ತಿಗೆ ತಾಯಿಗೆ ಆಕೆಗೆ ಮದುವೆ ಮಾಡುವ ಹುಚ್ಚು ಹಿಡಿಯುತ್ತದೆ. ಅದೇ ತಾನೇ ತನ್ನ ಬಾಲಿಷ ಅವಸ್ಥೆಯನ್ನು ಕಳೆದು ಪ್ರಪಂಚ ವನ್ನು ಅರ್ಥಮಾಡಿಕೊಳ್ಳಲೆತ್ನಿಸುತ್ತಿರುವ ಹಸು ಳೆಗೆ ಮದುವೆ ಮಾಡುವುದು ತುಂಬಾ ಅನರ್ಥ ಕಾರಿ. ಅಷ್ಟು ಸಣ್ಣ ವಯಸ್ಸಿನಲ್ಲಿ ಆಕೆಗೆ ಹುಟ್ಟುವ ಮಕ್ಕಳು ನಿರ್ವೀರ್ಯರೂ ಅನಾರೋಗ್ಯವಂತರೂ ಆಗಿರುತ್ತಾರೆ. ಬೇಗ ಬೇಗನೆ ಆಗುವ ಹೆರಿಗೆಗ ಳಿಂದಾಗಿ ಹುಡುಗಿ ನಿಶ್ಶಕ್ತಳಾಗಿ ಮಕ್ಕಳ ಬೆಳವ ಣಿಗೆಗೆ ಸಾಕಷ್ಟು ಗಮನ ಕೊಡಲಾರದವಳಾಗು-ತ್ತಾಳೆ. ಅಂತಹ ಮನೆಯಲ್ಲಿ ಸುಖ-ತೃಪ್ತಿಗಳಿ ಲ್ಲದೆ ಸದಾ ದುಃಖ ಅನಾರೋಗ್ಯ ಮನೆಮಾಡು ತ್ತವೆ.

ಬಾಲ್ಯದಲ್ಲೇ ವಿಧವೆಯರಾದ ಹೆಣ್ಣುಮಕ್ಕಳ ಸಮಸ್ಯೆ ಈ ಅನಿಷ್ಟಗಳಲ್ಲಿ ಮತ್ತೊಂದು. ಇವರು

ಗಂಡನ ಮನೆಯಲ್ಲೂ ಉಳಿಯುವಹಾಗಿಲ್ಲ. ತಾಯಿಯ ಮನೆಯಲ್ಲಂತೂ ಸಾಧ್ಯವೇ ಇಲ್ಲ. ಇಂಥವರನ್ನು ಸಮಾಜ ಬಹು ವಕ್ರದೃಷ್ಟಿಯಿಂದಲೇ ನೋಡುತ್ತದೆ. ಅದರಲ್ಲೂ ಸುತ್ತಮುತ್ತಲ ಹೆಂಗಸರು ಇವರನ್ನು ಬಹು ಹೀನಾಯವಾಗಿ ಕಾಣುತ್ತಾರೆ. ಬಾಲವಿಧವೆಯರೂ ಕೂಡ ತಮ್ಮ ಹಾಗೆಯೇ ಹೆಂಗಸರು, ಎಲ್ಲರಂತೆ ಬಾಳಿ ಬದುಕುವ ಆಸೆ ಅವರಿಗೂ ಇರುತ್ತದೆ—ಎಂಬುದನ್ನು ಅರ್ಥಮಾಡಿಕೊಳ್ಳುವ ವಿಶಾಲ ಮನೋಭಾವ, ಅಂತಃಕರಣ ಇವು ಸಾಮಾನ್ಯವಾಗಿ ಇರುವುದೇ ಇಲ್ಲ. ವಿಧವೆಗೆ ಮತ್ತೆ ವಿವಾಹ ಮಾಡಿಕೊಳ್ಳುವ ಅವಕಾಶ ಬೇಕೆಂದು ಈಗ ನಾಲ್ಕಾರು ದಶಕಗಳ ಹಿಂದೆಯೇ ಆಗಿನ ಮಹಿಳಾ ಧುರೀಣರು ಆಂದೋಲನವನ್ನೆಬ್ಬಿಸಿದ್ದರು. ಆದರೆ ಪರಿಸ್ಥಿತಿ ಮಾತ್ರ ಸುಧಾರಿಸಿಯೇ ಇಲ್ಲ.

## ಮಹಿಳೆಯ ಹೊಣೆಗಾರಿಕೆ

ದೇಶದ ಮಾನಸಿಕ ಹಾಗೂ ದೈಹಿಕ ಆರೋಗ್ಯವನ್ನು ಕಾಪಾಡುವ ಹೊಣೆ ಮುಖ್ಯವಾಗಿ ಮಹಿಳೆಯದೇ ಆಗಿದೆ. ಸಂಸಾರದ ಆರ್ಥಿಕ ಮಟ್ಟವನ್ನು ಸುಧಾರಿಸಿ, ಚಿಂತೆ-ವ್ಯಾಕುಲಗಳಿಲ್ಲದಂತೆ ಪತಿ ಹಾಗೂ ಮಕ್ಕಳನ್ನು ನೋಡಿಕೊಂಡರೆ, ಮಾನಸಿಕ ಆರೋಗ್ಯ ಸುಧಾರಿಸಿದಂತೆ. ದೈಹಿಕ ಆರೋಗ್ಯ ಪಾಲನೆಗೆ ಡಾಕ್ಟರು ಮಾತ್ರ ಜವಾಬ್ದಾರರಲ್ಲ. ಅನಾರೋಗ್ಯ ದೇಶದ ಪ್ರಗತಿಗೆ ಅಡ್ಡಿ ಎಂಬುದನ್ನು ಗಮನದಲ್ಲಿರಿಸಿದ ಮಹಿಳೆ ಆರೋಗ್ಯ ನಿಯಮಾವಳಿಗಳನ್ನೆಲ್ಲ ತಿಳಿದುಕೊಂಡಿರುವುದು ಒಳ್ಳೆಯದು. ಮಕ್ಕಳಿಗೆ ಸಾಮಾನ್ಯವಾಗಿ ಬರುವ ಕಾಹಿಲೆಗಳಾವುವು. ಅವು ಬಾರದಂತೆ ಮುಂಜಾಗ್ರತೆ ವಹಿಸುವುದು ಹೇಗೆ? ಕಾಹಿಲೆ ಬಂದಾಗ ಆಯಾ ಕಾಹಿಲೆಗೆ ಪ್ರಥಮ ಚಿಕಿತ್ಸೆ ಏನು? ಎಂಬುದನ್ನೆಲ್ಲ ಮಹಿಳೆ ಅರಿತಿರಬೇಕು. ಆಗಷ್ಟೆ ಸಶಕ್ತ ಜನಾಂಗವನ್ನು ಬೆಳೆಸಲು ಆಕೆ ಶಕ್ತಳು.

ಹೀಗೆ, ವಿವಿಧ ಸಾಮಾಜಿಕ ಅನಿಷ್ಟಗಳ ನಿವಾರಣೆ ಮಹಿಳೆಯಿಂದ ಮಾತ್ರ ಸಾಧ್ಯ ಎಂಬುದು ಮನದಟ್ಟಾಯಿತು. ಆದರ ಈ ಸಾಧ್ಯತೆ ಇನ್ನೂ ಗಗನತಾರೆಯಾಗಿದೆಯಲ್ಲ—ಯಾಕೆ? ಎಂದು ಚಿಂತಿಸಿದಾಗ, ಮಹಿಳೆಗೆ ತನ್ನ ಹೊಣೆಯ ಅರಿವು ಇನ್ನೂ ಉಂಟಾಗಿಲ್ಲ ಎಂಬುದು ಸುಸ್ಪಷ್ಟ. ನಮ್ಮ ದೇಶದ ಮಹಿಳೆಗೆ ಸಾಕಷ್ಟು ವಿದ್ಯಾಭ್ಯಾಸವಿಲ್ಲ. ಸಾಂಸ್ಕೃತಿಕ ಮೌಲ್ಯಗಳಿಗೆ ಆಕೆ ಬೆಲೆ ಕೊಡುವುದು ಕಡಿಮೆ. ಹಳೆಯ ಸಂಪ್ರದಾಯದ ಸಂಕೋಲೆಗಳು ಆಕೆಯನ್ನಿನ್ನೂ ಬಂಧಿಸಿವೆ. ಇವನ್ನೆಲ್ಲ ಕಿತ್ತೊಗೆದು ಆಕೆ ಹೊಸ ಮನ್ವಂತರದ ಮಹಿಳೆಯಾಗಬೇಕಾದರೆ, ಆಕೆಯ ಜ್ಞಾನಭಂಡಾರ ವೃದ್ಧಿಯಾಗಬೇಕು.

ಸಾಮಾಜಿಕ ಅನಿಷ್ಟಗಳಾದ ವರದಕ್ಷಿಣೆ, ಬಾಲ್ಯ ವಿವಾಹ, ವಿಧವೆಯರಿಗೆ ವಿವಾಹವಾಗುವ ಹಕ್ಕಿಲ್ಲದಿರುವುದು, ಇವನ್ನೆಲ್ಲ ನಿವಾರಿಸಲು ಭಾರತದ ರಾಜ್ಯಾಂಗದಲ್ಲಿ ಹೊಸ ಕಾನೂನುಗಳು ಘೋಷಿಸಲ್ಪಟ್ಟಿವೆ. ಆದರೆ ಬರಿಯ ಕಾನೂನುಗಳು ಅನಿಷ್ಟಗಳನ್ನೆಂದಿಗೂ ತೊಲಗಿಸಲಾರವು. ಮಹಿಳೆಯ ಜ್ಞಾನವಿಕಸನಗೊಂಡು ಆಕೆಯ ಮನಃಪರಿವರ್ತನೆಯಾದಾಗ ಮಾತ್ರ, ಕೆಟ್ಟ ಪದ್ಧತಿಗಳೆಲ್ಲ ನಶಿಸಿ ಹೋದಾವು.

ಈ ರೀತಿಯಾಗಿ ಸಂಸಾರದ ಸರಾಸರಿ ಆದಾಯದ ಏರಿಕೆಯಲ್ಲಿ ಗಂಡನಿಗೆ ನೆರವಾಗಿ ಬಡತನವನ್ನು ಹೊಡೆದೋಡಿಸುವುದು, ಆರೋಗ್ಯ ಭಾಗ್ಯವನ್ನು ಕಾಪಾಡುವುದು, ಕುರುಡು ನಂಬಿಕೆಗಳನ್ನು ನಾಶ ಮಾಡುವುದು, ವೈಜ್ಞಾನಿಕ ಪ್ರಗತಿಯಲ್ಲಿ ನೆರವಾಗುವುದು—ತನ್ಮೂಲಕ ಸುಸಂಸ್ಕೃತ ಸಮಾಜವೊಂದರ ನಿರ್ಮಾಣ ಕಾರ್ಯದಲ್ಲಿ ಭಾಗಿಯಾಗುವುದು ಪ್ರತಿಯೊಬ್ಬ ಮಹಿಳೆಯ ಕರ್ತವ್ಯ.



# ಸಮಾಜದ ಅನಿಷ್ಟಗಳ ನಿವಾರಣೆಯಲ್ಲಿ ಸಂಸತ್ಸದಸ್ಯೆಯ ಪಾತ್ರವೇನು?

ಡಾ. ಸರೋಜಿನಿ ಮಹಿಷಿ, ಎಂ. ಪಿ.

ಯಾವುದೇ ಕಾರ್ಯವನ್ನು ಪ್ರಾರಂಭ ಮಾಡುವ ಸಾಮರ್ಥ್ಯವುಳ್ಳವರು ಅದನ್ನು ಕೊನೆಗಾಣಿಸಲೂ ಸಮರ್ಥರಾಗಿರುತ್ತಾರೆ ಎಂಬುದು ತಾರ್ಕಿಕ ದೃಷ್ಟಿಯಿಂದ ಸರಿಯೆನಿಸಿದರೂ, ಸಜೀವ ಸಮಾಜಕ್ಕೆ ಸಂಬಂಧಿಸಿದ ಧಾರ್ಮಿಕ ನೈತಿಕ ಸಾಮಾಜಿಕ ಮೌಲ್ಯಗಳ ಮಾರ್ಪಾಟಿಗೆ ಮಾತ್ರ ಇದು ಅನ್ವಯಿಸುವದಿಲ್ಲ. ಈ ಮೌಲ್ಯಗಳ ಮಾರ್ಪಾಟು ಒಮ್ಮೆಲೇ ಕಣ್ಣಿಗೆ ಬೀಳುವಂತಹದೂ ಅಲ್ಲ; ಮಾರ್ಪಾಟಿಗೆ ಜೀವಮಾನವೋ, ಪೀಳಿಗೆಗಳೋ ಬೇಕು. ಈ ಮಾರ್ಪಾಟು ಇಷ್ಟವೂ ಆಗಿರಬಹುದು, ಅನಿಷ್ಟವೂ ಆಗಿರಬಹುದು ಅಥವಾ ಇಷ್ಟವಾದುದು ಕ್ರಮೇಣ ಅನಿಷ್ಟವಾಗಿಯೆ ಪರಿಣಮಿಸಬಹುದು. ಅನಿಷ್ಟವಾದುದು ಇಷ್ಟವಾಗಲೂಬಹುದು. ಅಂದಿನ ಸಾಮಾಜಿಕ ಮೌಲ್ಯಗಳನ್ನನುಸರಿಸಿಯೇ ಇಷ್ಟ ಅನಿಷ್ಟಗಳೆಂದು ಗಣಿಸಲ್ಪಡುತ್ತವೆ.

ಸಾಮಾಜಿಕ ಮೌಲ್ಯಗಳು ವ್ಯತ್ಯಾಸ ಹೊಂದುವಲ್ಲಿ ಸ್ತ್ರೀಯ ಪಾತ್ರವೇನು ? ಅನಿಷ್ಟಗಳು ರೂಪುಗೊಳ್ಳುವಲ್ಲಿ ಅವಳ ಪಾತ್ರವೇನಾದರೂ ಇದೆಯೇ ಎಂದರೆ ಇದೆ ಎಂತಲೇ ಹೇಳಬೇಕಾಗುತ್ತದೆ. ಅನಿಷ್ಟಗಳು ರೂಪುಗೊಳ್ಳಲು ಆಕೆ ಪ್ರತ್ಯಕ್ಷ ಸಹಾಯವನ್ನು ಸಲ್ಲಿಸುವದಿಲ್ಲ- ಆದರೆ ಅವಳ ಅನಾಸ್ಥೆಯ ಗೊಬ್ಬರದಲ್ಲಿ ಅನಿಷ್ಟಗಳು ಹುಲುಸಾಗಿ ಬೆಳೆಯುತ್ತವೆ. ಕೆಲವು ಮಹಿಳೆಯರ ಅನಾಸ್ಥೆ ಕೌಂಟುಂಬಿಕ ಜೀವನಕ್ಕೂ ಹತ್ತಿಕೊಂಡಿರುತ್ತದೆ. ಸಾಮಾಜಿಕ ರಾಜಕೀಯ ರಂಗದಲ್ಲಿ ಮಹಿಳೆಯರ ಅನಾಸ್ಥೆಗೆ ಕೊರತೆಯೇ ಇಲ್ಲ. ದುಡಿದು ತಂದು ಹಾಕುವದು ಗಂಡಸಿನದೇ ಕೆಲಸವೆಂದು ದೃಢವಾಗಿ ನಂಬಿದ ಮಧ್ಯಮವರ್ಗದ ಮಹಿಳೆ "ತಂದು ಹಾಕಿದ್ದನ್ನು ಬೇಯಿಸಿ ಇಡುವದು ನಮ್ಮ ಕರ್ತವ್ಯ, ನಮ್ಮದು ಹೆಚ್ಚಿನದೇನಿದೆ?'' ಎನ್ನುತ್ತಾಳೆ. ತನ್ನ ಹೊಣೆಯನ್ನು ಪೂರ್ಣ ಅರಿತವಳಂತೆ. ಅದಕ್ಕನುಕೂಲವಾಗಿ ಪತಿಯಾದವನೂ ಒಂದೊಂದು ಸಲ ಹೇಳುತ್ತಾನೆ. ''ಹೆಂಗಸರು ನಿಮಗೇಕೆ ಇದೆಲ್ಲ ಕಾರಭಾರ, ತಂದು ಹಾಕಿದ್ದನ್ನು ಬೇಯಿಸಿ ಇಟ್ಟರಾಯಿತು'' ಕುಟುಂಬದಲ್ಲಿ; ಸಮಾಜದಲ್ಲಿ ಸ್ತ್ರೀ—ಪುರುಷರ ಕಾರ್ಯ ಬೇರೆ ಬೇರೆಯಾಗಿದೆ ಎಂದು ತಿಳಿದರೂ ಪರಸ್ಪರರ ಕಾರ್ಯವನ್ನು ತಿಳಿದುಕೊಳ್ಳುವದು ಅತ್ಯವಶ್ಯವಾಗಿರುತ್ತದೆ. ದುಡಿಯುದ ಪುರುಷನು ಸಮಾಜಕ್ಕೆ ಹೊರೆಯಾದಂತೆ ದುಡಿಯದ ಮಹಿಳೆಯೂ ಸಮಾಜಕ್ಕೆ ಹೊರೆಯಾಗಿದ್ದಾಳೆ. ಸರ್ವತೋಮುಖ ದೃಷ್ಟಿಯಿಂದ ಕುಟುಂಬದ, ಸಮಾಜದ ಹಾಗೂ ರಾಷ್ಟ್ರದ ಏಳಿಗೆಗಾಗಿಯೂ ಮಹಿಳೆ ಸೇವೆ ಸಲ್ಲಿಸಬಲ್ಲಳು, ಆಕೆಯ ಸೇವೆ ಅವಶ್ಯವೂ ಇದೆ.

## ಈಚಿನ ಕಾಲದಲ್ಲಿ

ಪ್ರಾಚೀನ ಕಾಲದ ಮಹಿಳೆಯ ತಪಃಸಿದ್ಧಿ, ವಿದ್ವತ್ತೆಗಳನ್ನು ಕುರಿತು ಹೆಮ್ಮೆಯಿಂದ ಹೇಳಿಕೊಳ್ಳುವದನ್ನು ಸ್ವಲ್ಪ ಬದಿಗಿಟ್ಟರೆ ಈಚಿನ ಕಾಲದಲ್ಲಿ ಹೇಳಿಕೊಳ್ಳುವಂತಹದೇನಿದೆ? ಹೇಗೋ ತಿಂದು ಹೇಗೋ ಬದುಕಿದ್ದ ಅನಾಗರಿಕ ಕುಟುಂಬದಲ್ಲಿ ಸ್ತ್ರೀ ಒಂದು ಹೆರುವ ಯಂತ್ರವಾಗಿದ್ದಳು. ಜೊತೆಗೆ ದುಡಿಮೆಯೂ ಅವಳ ಪಾಲಿಗಿತ್ತು. ಕ್ರಮೇಣ ಸಮಾಜದಲ್ಲಿ ಬೆಳೆದುಬಂದ ಆಲಸ್ಯ, ದುಡಿಮೆಯ ಬಗ್ಗೆ ಅಶ್ರದ್ಧೆ ಅಗೌರವಗಳು ಆಕೆಗೂ ಬಡಿದುಕೊಂಡವು. ಕವಿಗಳು ಕೋಮಲೆಯಾದ ಆಕೆ ಮುಖವೆತ್ತದೆ ಕುಳಿತಿರುವದೇ ವಿನಯವೆಂದು ಹಾಡಿದರು. ಆಲಸ್ಯಕ್ಕೇ ವಿನಯ ಸೌಜನ್ಯಗಳ ಮುಖವಾಡವನ್ನು ಹಾಕಲು ಸಮಾಜವೂ ಹಿಂದೆಗೆಯಲಿಲ್ಲ, ಅದನ್ನು ಸ್ತ್ರೀಯೂ ಒಪ್ಪಿಕೊಂಡಳು.

ಸ್ತ್ರೀಯ ಈ ನಿಷ್ಕ್ರಿಯತೆ ಬಹಳ ದೂರಗಾಮಿಯಾಗಿ ಪರಿಣಾಮವನ್ನುಂಟುಮಾಡಿತು. ಅನಿಷ್ಟಗಳ ಪರಂಪರೆಯೇ ಬೆಳೆದು ಬಂತು. ಕೆಲವು ಮೌಲ್ಯಗಳ ಬಗೆಗೆ ಇದು ಅನಿಷ್ಟವೋ ಅಲ್ಲವೋ ಎಂಬ ಶಂಕೆ ಇನ್ನೂ ಪ್ರಚಲಿತವಿದೆ. ಹೆಣ್ಣಿನಪಾಲನೆ ಪೋಷಣೆ ಹಾಗೂ ಆಕರ್ಷಣ ಶಕ್ತಿಗಳು ಸಮಾಜಕ್ಕೆ ಹೊರೆ ಹಾಗೂ ವಿಘಾತುಕವೆಂದು ಪುರುಷ ಸಮಾಜ ಒಂದು ಕಾಲಕ್ಕೆ ನಿರ್ಧರಿಸಿ ಹುಟ್ಟಿದ ಹೆಣ್ಣುಗಳನ್ನೆಲ್ಲ ಹುಟ್ಟುತ್ತಲೇ ಕೊಂದುಬಿಡಬೇಕೆಂದು ನಿರ್ಣಯಿಸಿತು ನಿರ್ಣಯ ಬಳಕೆಯಲ್ಲೂ ಬಂತು. ಪ್ರತ್ಯಕ್ಷ ಕೊಲ್ಲದಿದ್ದರೂ ಹೆಣ್ಣು ಹುಟ್ಟಿದರೆ ಅಸಡ್ಡೆಮಾಡುವದು ಎಲ್ಲ ಜನಾಂಗಗಳಲ್ಲೂ ನಡೆದೇ ಇದೆ. ಹೆಣ್ಣು ಮಗುವಿಗೆ ಶಿಕ್ಷಣದ ಅವಶ್ಯಕತೆಯಿಲ್ಲ. ಮುಸುರೆ ತೊಳೆಯುವದೇ ಜೀವನದ ಗುರಿಯಾಗಿದ್ದವರಿಗೆ ಶಿಕ್ಷಣವಾದರೂ ಯಾಕೆ ಬೇಕು ?— ಎಂಬುದನ್ನೂ ಪುರುಷ ನಿರ್ಮಿತ ಸಮಾಜ ಅವಳಿಗಾಗಿ ನಿರ್ಧರಿಸಿತು. ಕೆಲವು ಜನಾಂಗಗಳಲ್ಲಿ ವಸ್ತುಗಳನ್ನು ಕೊಳ್ಳುವಂತೆ ಹೆಣ್ಣನ್ನು ದುಡ್ಡುಕೊಟ್ಟು ಕೊಳ್ಳುವದು ಬಳಕೆಯಲ್ಲಿ ಬಂತು. ಇನ್ನು ಕೆಲವುಗಳಲ್ಲಿ ದಾನ ಪಡೆಯುವ ಗಂಡಸು ತಾನು ದಾನದ ಜೊತೆಗೆ ದಕ್ಷಿಣೆಗೂ ಅರ್ಹನೆಂದು ದಕ್ಷಿಣೆಯನ್ನೂ ಬೇಡತೊಡಗಿದನು. ಇನ್ನು ಕೆಲವರು ಇದರಲ್ಲಿ ದಾನ ಮುಖ್ಯವಲ್ಲ ದಕ್ಷಿಣೆಯೇ ಮುಖ್ಯ ಎಂಬ ಮಟ್ಟಕ್ಕೂ ಬಂದು ಮುಟ್ಟಿದರು. ವರದಕ್ಷಿಣೆಯ ಪ್ರಶ್ನೆ ವಿಕೃತರೂಪವನ್ನೇ ತಾಳಿತು. ಕನ್ಯಾಪಿತೃಗಳಿಗೆ ಸಾಮಾಜಿಕ ಆರ್ಥಿಕ ದೃಷ್ಟಿಗಳೆರಡರಿಂದಲೂ ಕನ್ಯೆ ಭಾರವಾಗಿ ಕಂಡಳು. ಪಾಲಕರು ಮದುವೆ ಮಾಡದೆ ಕನ್ಯೆಯನ್ನು ಹಾಗೇ ಇಟ್ಟುಕೊಂಡರೆ ಸಮಾಜವನ್ನು ಎದುರಿಸಬೇಕು, ಮದುವೆ ಮಾಡುವದಾದರೆ ವರನನ್ನು ಎದುರಿಸಬೇಕು.

## ವಿಧವೆಯ ಸಮಸ್ಯೆ

ಕನ್ಯೆಯ ಮದುವೆ ಬಾಲ್ಯದಲ್ಲಿಯೇ ಆದಾಗ, ವಿಧವೆಯೂ ಸಮಾಜಕ್ಕೆ ಒಂದು ಸಮಸ್ಯೆಯಾದಳು. ಆಗ ಸತಿ ಹೋಗುವದು ಭಾರತದಲ್ಲಿ ಬಹು ಗೌರವದ ಸಂಪ್ರದಾಯವಾಗಿತ್ತು. ಅದು ಅನಿಷ್ಟವೆಂದು ತಿಳಿಯಲೂ ಬಹುಕಾಲಬೇಕಾಯಿತು. ಸತಿಹೋದರೆ ವಿಧವೆಯ ಸಮಸ್ಯೆಯಂತೂ ತಪ್ಪುತ್ತಿತ್ತು. ಆದರೆ ಸತಿಹೋಗುವದನ್ನು ಕಾನೂನಿನಿಂದ ನಿಲ್ಲಿಸಿದಾಗ, ಬಾಲವಿವಾಹ ಪ್ರತಿಬಂಧಕ ಕಾನೂನು ಪ್ರಚಾರದಲ್ಲಿ ಬಂದಾಗ, ವಿಧವೆಯ ಪುನರ್ವಿವಾಹಕ್ಕೆ ಅವಕಾಶ ಕೊಡಬೇಕಾದುದು ಸಮಾಜದ ನೈತಿಕ ಆರೋಗ್ಯವನ್ನು ಕಾಯುವ ದೃಷ್ಟಿಯಿಂದ ಅತ್ಯವಶ್ಯವಾಯ್ತು. ಮೊದಲು ಅನಿಷ್ಟವೆಂದು ತಿಳಿದುದು ಈಗ ಇಷ್ಟವಾಯ್ತು. ಬಾಲವಿವಾಹ ಪ್ರತಿಬಂಧಕ ಕಾನೂನು ಪ್ರಚಾರದಲ್ಲಿದ್ದರೂ ಬಾಲವಿವಾಹಗಳು ನಡೆದೇ ಇವೆ. ಆದರೆ ಪ್ರಮಾಣ ಕಡಿಮೆಯಾಗಿದೆ. ವಿಧವಾ ಪುನರ್ವಿವಾಹಕ್ಕೆ ಕಾನೂನಿನ ಸಮ್ಮತಿ ದೊರೆತಿದ್ದರೂ ಕಾನೂನಿನ ಆಶ್ರಯ ಪಡೆಯುವುದು ಅನೇಕರಿಗೆ ಅಗೌರವವಾಗಿದೆ. ವಿಧವೆಯ ಪುನರ್ವಿವಾಹದೆಡೆಗೆ ನೋಡುವ ಸಮಾಜದ ದೃಷ್ಟಿಯಲ್ಲಿ ಇನ್ನೂ ವಿಶೇಷ ವ್ಯತ್ಯಾಸವಾಗಿಲ್ಲ. ವಿಧುರನ ವಿವಾಹಕ್ಕೆ ಕಾನೂನಿನ ಅವಶ್ಯಕತೆ ಬೇಕೇ ಆಗಿರಲಿಲ್ಲ. ಅದನ್ನು ಸಮಾಜವು ಎಂದೋ ಒಪ್ಪಿಬಿಟ್ಟಿತ್ತು!

ಸಾಮಾಜಿಕ ಅನಿಷ್ಟಗಳು ನಿವಾರಣೆಯಾಗಬೇಕಾದರೆ ಇಡೀ ಸಮಾಜದಲ್ಲಿಯೇ ಜಾಗೃತಿಯಾಗ

ಬೇಕಾಗುತ್ತದೆ. ಆದರೆ ಅನಿಷ್ಟಕ್ಕೆ ಬಲಿಯಾದವರು ಅದರಲ್ಲಿ ಹೆಚ್ಚಿನ ಪಾತ್ರ ವಹಿಸಬೇಕಾಗುತ್ತದೆ. ಹೆಚ್ಚಿನ ಪಾತ್ರ ವಹಿಸುವ ಶಕ್ತಿ ಅವರಲ್ಲಿದ್ದುದಾದರೆ ಅನಿಷ್ಟಕ್ಕೆ ಅವರೇಕೆ ಬಲಿಯಾಗುತ್ತಿದ್ದರು?—ಎಂಬ ಪ್ರಶ್ನೆ ಇಲ್ಲಿ ಹುಟ್ಟುವುದು ಸ್ವಾಭಾವಿಕವಾದರೂ, ಅನಿಷ್ಟ ರೂಪುಗೊಂಡಾಗಿನ ಪರಿಸ್ಥಿತಿ ಇಂದು ಇಲ್ಲ. ಎಚ್ಚತ್ತು ಅನಿಷ್ಟವನ್ನು ಪ್ರತಿಭಟಿಸುವಷ್ಟು ಶಕ್ತಿ ಅನಿಷ್ಟದ ಕಟುವಾದ ಅನುಭವವನ್ನುಂಡ ಮಹಿಳೆಯರಿಗೇ ಬರಬೇಕು.

## ಸಹನೆಯೇ ಮಹಿಳೆಯ ದೌರ್ಬಲ್ಯವೇ?

ಎಂತಹ ಧಾರ್ಮಿಕ ಸಾಮಾಜಿಕ ಅನಿಷ್ಟಗಳು ಆವರಿಸಿದರೂ ಮಹಿಳೆ ಅವುಗಳನ್ನು ತುಂಬ ಸಹನೆಯಿಂದ ಅನುಭವಿಸಿದ್ದಾಳೆ. ಈ ಅತಿಶಯದ ಸಹನಶಕ್ತಿಯೇ ಅವಳ ದೌರ್ಬಲ್ಯವಾಗಿಯೂ ಪರಿಣಮಿಸಿದೆ. ಪರಿಸ್ಥಿತಿಯನ್ನು ಎದುರಿಸಿ ಅವಳು ಮೇಲೆದ್ದು ತನ್ನ ಶಕ್ತಿಯ ಪರಿಚಯವನ್ನು ಮಾಡಿಕೊಡಬೇಕಾಗಿದೆ. ಸುಶಿಕ್ಷಿತ ಮಹಿಳೆಯೂ ತನಗೆ ತಿಳಿಯದಂತೆಯೇ ಪುರುಷ ನಿರ್ಮಿತ ಪರಂಪರಾಗತ ಮೌಲ್ಯಗಳಿಗೆ ಬಲಿಬೀಳಬಹುದು. ಗುಲಾಮರಾಗಿ ಬದುಕುವುದೇ ಶ್ರೇಯಸ್ಕರ ಎಂದು ಗುಲಾಮರು ತಿಳಿದಿದ್ದರಂತೆ; ಅವರ ಆ ತಿಳುವಳಿಕೆಗೆ ಗುಲಾಮರ ಒಡೆಯರೂ ಕಾರಣರಾಗಿದ್ದರು, ಸಮಾಜದ ವಾತಾವರಣವೂ ಕಾರಣವಾಗಿತ್ತು. ಹಾಗೆ ಇಂದಿನ ಸಾಮಾಜಿಕ ಇಷ್ಟ—ಅನಿಷ್ಟಗಳನ್ನು ತಿಳಿಯುವಲ್ಲಿ ಮಹಿಳೆಯ ಪರಿಸ್ಥಿತಿಯೂ ಇದೆ. ಬಾಲಕಿಯನ್ನು ಶಾಲೆಗೆ ಕಳಿಸಬೇಕೊ ಬೇಡವೊ ಎಂಬ ಪ್ರಶ್ನೆಯಿಂದ ಪ್ರಾರಂಭವಾಗಿ ಅವಳ ಮದುವೆಯನ್ನು ಎಂದು ಮಾಡಬೇಕು ಎಂಬುದರ ಬಗ್ಗೆ ಅಕ್ಕಪಕ್ಕದ ಜನರೊಡನೆ ಆಕೆ ತನ್ನನ್ನು ಸರಿಗಟ್ಟಿಕೊಂಡು ನೋಡುತ್ತಾಳೆ. ಮಗಳಿಗೆ ವರದಕ್ಷಿಣೆ ಕೊಡದೆ ಮದುವೆಯಾಗುವ ಸಂದರ್ಭ ಬಂದರೆ, ವರದಕ್ಷಿಣೆ ಕೊಡದಿದ್ದರೆ ತನ್ನ ಗೌರವಕ್ಕೆ ಕುಂದುಬರಬಹುದಲ್ಲ ಎಂದು ಆಕೆ ಯೋಚಿಸುತ್ತಾಳೆ. ಮಗನಿಗೆ ವರದಕ್ಷಿಣೆ ತೆಗೆದುಕೊಳ್ಳುವಾಗಲೂ ಅದೇ ಮಾತು; ತೆಗೆದುಕೊಳ್ಳದೆ ಹಾಗೇ ಮದುವೆಮಾಡಿಕೊಂಡರೆ ಜನ ತನಗೆ ಏನೆನ್ನಬಹುದು! ತೆಗೆದುಕೊಳ್ಳದಿದ್ದರೂ ತೆಗೆದುಕೊಂಡಿದ್ದೇವೆಂದು ಗೌರವಕ್ಕಾಗಿ ಸುಳ್ಳು ಹೇಳುವವರದು ಒಂದು ಪಕ್ಷ! ಕಾನೂನು ಇದೆಯಾದ್ದರಿಂದ ತೆಗೆದುಕೊಂಡಿದ್ದರೂ ತೆಗೆದುಕೊಂಡಿಲ್ಲವೆಂದು ಹೇಳುವವರದು ಇನ್ನೊಂದು ಪಕ್ಷ. ಈ ಅರ್ಥರಹಿತ ಮೌಲ್ಯಗಳನ್ನು, ಸಾಮಾಜಿಕ ಅನಿಷ್ಟಗಳನ್ನು ತೊಡೆದುಹಾಕಬೇಕೆಂದರೆ ಮಹಿಳೆಯರೇ ಅದಕ್ಕೆ ಗಟ್ಟಿಗರಾಗಬೇಕು. ಪ್ರಭುಸಮ್ಮಿತದ ಗುರಿ ಒಂದು ವೇಳೆ ತಪ್ಪಬಹುದು, ಆದರೆ ಕಾಂತಾಸಮ್ಮಿತದ ಗುರಿತಪ್ಪುವದು ಕಡಿಮೆ?

ಮಹಿಳೆಯರಲ್ಲಷ್ಟೇ ದೌರ್ಬಲ್ಯವಿದೆಯೆ? ಪುರುಷರಲ್ಲಿ ದೌರ್ಬಲ್ಯವಿಲ್ಲವೆ? ಮಹಿಳೆಯರು, ನನ್ನ ಮಗಳಿಗೆ ವರದಕ್ಷಿಣೆ ಕೊಡುವದೂ ಇಲ್ಲ, ಮಗನಿಗೆ ವರದಕ್ಷಿಣೆ ತೆಗೆದುಕೊಳ್ಳುವದೂ ಇಲ್ಲ ಎಂದು ಸಾಮೂಹಿಕವಾಗಿ ನಿರ್ಧಾರಮಾಡಿ ಕೃತಿಯಲ್ಲಿ ತಂದರೆ ಈ ಅನಿಷ್ಟ ನಿವಾರಣೆಯಾಗದೆ ಎಷ್ಟುಕಾಲ ಉಳಿಯಬಹುದು? ಇಂದು ವರದಕ್ಷಿಣೆ ಪ್ರತಿಬಂಧಕ ಕಾನೂನು ಅವಳ ಸಹಾಯಕ್ಕೆ ಬಂದಿದೆ. ಪ್ರತಿಷ್ಠೆಯ ತಪ್ಪುಮೌಲ್ಯಗಳಿಗೆ ಬಲಿಯಾಗದೆ ಅವಳು ಧೈರ್ಯ ಮಾಡಿದರೆ, ಅದನ್ನು ಉಳಿಸುವ ಧೈರ್ಯ ಯಾರಿಗೆ ತಾನೆ ಇದೆ? ಸಾಲದ್ದಕ್ಕೆ ಇತ್ತೀಚೆ ಕೆಲವು ಪ್ರತಿಷ್ಠಿತ ಪುರುಷರು "ನಾವು ವರದಕ್ಷಿಣೆ, ವರೋಪಚಾರ ಇತ್ಯಾದಿಗಳೆಲ್ಲ ಬೇಡವೆಂದರೂ ಮನೆಯಲ್ಲಿ ಹೆಣ್ಣುಮಕ್ಕಳು ಕೇಳಬೇಕಲ್ಲ?'' ಎಂದು ಮಹಿಳೆಯರ ಪರಂಪರಾಗತ ದೌರ್ಬಲ್ಯಗಳ ಜೊತೆಗೆ ಇದನ್ನೂ ಸೇರಿಸಿ ತಾವು ಪ್ರತಿಷ್ಠಿತರಂತೆಯೇ ಹಿಂದೆಯಿರಲು ಯತ್ನಿಸುತ್ತಿದ್ದಾರೆ.

## ಸಮಾಜ ಸೇವಕಿಯಾಗಿ

ಮಹಿಳೆ ವಿಧಾನಸಭೆಗಳಲ್ಲಿ, ಲೋಕಸಭೆ ರಾಜ್ಯಸಭೆಗಳಲ್ಲಿ ಸದಸ್ಯಳಾಗಿ ಯೋಗ್ಯ ರೀತಿಯಲ್ಲಿ ಕಾರ್ಯ ನಿರ್ವಹಿಸಬಹುದು ಎಂಬುದನ್ನು ಈಗಲೂ ಜನ ಕೂಡಲೆ ಒಪ್ಪುವದಿಲ್ಲ. ಮಹಿಳೆ ಶಿಕ್ಷಕಿಯಾಗಿದ್ದಾಳೆ ಶಾಲೆಯಲ್ಲಿ, ಎಂದರೆ ಕೂಡಲೆ ನಂಬುತ್ತಾರೆ, ಡಾಕ್ಟರಳಾಗಿದ್ದಾಳೆ ಎಂದರೆ ಅದನ್ನೂ ನಂಬುತ್ತಾರೆ, ಹೆಣ್ಣುಮಕ್ಕಳ ಹಾಗೂ ಮಕ್ಕಳ ಬೇನೆಯ ಮಟ್ಟಿಗೆ ವೈದ್ಯಕಿ ಕಲಿತಿರಬಹುದು ಎನ್ನುತ್ತಾರೆ; ವಕೀಲಳಾಗಿದ್ದಾಳೆ ಎಂದರೆ ಸ್ವಲ್ಪ ಶಂಕೆಯನ್ನು ವ್ಯಕ್ತಪಡಿಸುತ್ತಾರೆ; ಸಂಸತ್ತಿನ ಸದಸ್ಯೆಯೆಂದರೆ ಆಗಲೂ ಸ್ವಲ್ಪ ಸಂಶಯವೇ! ಮಹಿಳೆ ವಕೀಲಳಾಗಿ, ಡಾಕ್ಟರಳಾಗಿ, ಇಂಜಿನಿಯರಳಾಗಿ, ಅಥವಾ ಇನ್ನಾವುದೇ ಸ್ವತಂತ್ರ ಉದ್ಯೋಗವನ್ನು ಮಾಡಿ ಬದುಕಬೇಕಾದರೆ, ಅವಳ ವ್ಯಕ್ತಿತ್ವವೇ ಅದಕ್ಕೆ ಕಾರಣ. ಅವಳಿಗೆ ಜನತೆಯ ಶಕ್ತಿಯೂ ಗೊತ್ತಿರಬೇಕು. ದೌರ್ಬಲ್ಯವೂ ಗೊತ್ತಿರಬೇಕು. ಸಮಾಜ ಸೇವಿಕೆಗಾದರೂ ಇದೇ ಮಾತು ಅನ್ವಯಿಸುತ್ತದೆ. ಯಾವುದೇ ಸ್ವತಂತ್ರ ಉದ್ಯೋಗವನ್ನು ಕೈಕೊಂಡರೂ ಮೊದಲು ಮಹಿಳೆ ಸಮಾಜಸೇವಕಿ ಬಳಿಕ ಆ ಉದ್ಯೋಗವನ್ನು ಕೈಕೊಂಡವಳು ಎಂದೇ ಎಣಿಸಬೇಕಾಗುತ್ತದೆ. ಧೈರ್ಯದಿಂದ ಜನತೆಯನ್ನೇ ನಂಬಿ ಸ್ವತಂತ್ರ ಉದ್ಯೋಗವನ್ನು ಕೈಕೊಂಡವರು ಒಟ್ಟಿನಲ್ಲಿಯೇ ಕಡಿಮೆ, ಮಹಿಳೆಯರಲ್ಲಿ ಬಹಳೇ ಕಡಿಮೆ; ಆದರೆ ಒಂದು ಸಲ ಜನತೆಯ ವಿಶ್ವಾಸವನ್ನು ಗಳಿಸಿಕೊಂಡರೆ ಜನತೆಯ ಆದರಕ್ಕೆ ಪಾತ್ರರಾದರೆ ಸಾಮಾಜಿಕ ಅನಿಷ್ಟಗಳನ್ನು ಮಹಿಳೆಯರು ತಮ್ಮ ವ್ಯಕ್ತಿತ್ವದಿಂದಾಗಿ ದೂರಗೊಳಿಸಬಲ್ಲರು.

೧೯೩೭ ರಲ್ಲಿ ಹಿಂದೂ ಮಹಿಳೆಯರ ಆಸ್ತಿ ಹಕ್ಕಿನ ಕಾಯಿದೆ ಬಳಕೆಯಲ್ಲಿ ಬಂತು. ಅಲ್ಲಿಯವರೆಗೆ ಹಿಂದೂ ವಿಧವೆಯನ್ನು ಮಾತನಾಡಿಸುವವರೇ ಇರಲಿಲ್ಲ. ವಿಧವೆಯಾದುದು ಅವಳದೇ ತಪ್ಪೇನೋ ಎಂಬಂತೆ ಸಮಾಜ ಅವಳನ್ನು ದುರುಗುಟ್ಟಿ ನೋಡುತ್ತಿತ್ತು; ಅವಳು ಅಶುಭದ ಸಂಕೇತ! ಜೊತೆಯಾಗಿ ಕೂಡಿ ಹೊರಟ ಗಂಡು ಹೆಣ್ಣುಗಳಲ್ಲಿ ಒಬ್ಬರು ಬೇಗನೆ ಪ್ರಯಾಣವನ್ನು ಮುಗಿಸುವ ಸಂಭವ ಎಲ್ಲೆಲ್ಲಿಯೂ ಇದ್ದದ್ದೇ! ಆದರೆ ಅದಕ್ಕೆ ಹೊಣೆ ಯಾರು? ಯಾರ ಸೊತ್ತೂ ಅಲ್ಲದ ವಿಧವೆ ಎಲ್ಲರ ಸೊತ್ತು ಎಂಬಂತೆ ಸಮಾಜದ ಒಂದು ಭಾಗ ನಡೆದುಕೊಂಡಿತು. ಕಾನೂನು ಬಂದ ಬಳಿಕ ಆಸ್ತಿ ಪಡೆದ ಸಿರಿವಂತ ವಿಧವೆಯ ಬಗೆಗೆ ಸಹಾನುಭೂತಿಯೂ ಆದರವೂ ಹುಟ್ಟಿ ಹವು. ಆದರೂ ಸಾಮೂಹಿಕವಾಗಿ ಮಹಿಳೆಯ ಸಾಮಾಜಿಕ ಸ್ಥಿತಿಯಲ್ಲಿ ವಿಶೇಷ ವ್ಯತ್ಯಾಸವಾಗಲಿಲ್ಲ. ೧೯೫೬ ರಲ್ಲಿ ಹಿಂದೂ ಕಾನೂನಿನ ಕ್ರೋಢೀಕರಣ ನಡೆದಾಗ ಎಷ್ಟು ಜನ ಮಹಿಳೆಯರು ಮಹನೀಯರು ಸಾಂಪ್ರದಾಯಿಕವಾಗಿ ವಿರೋಧವನ್ನು ವ್ಯಕ್ತಪಡಿಸಿಲ್ಲ?

## ಮಗಳಿಗೆ ಆಸ್ತಿಯಲ್ಲಿ ಹಕ್ಕು

ಹಿಂದೂ ಧರ್ಮಶಾಸ್ತ್ರ ಬಾಲಕ ಬಾಲಿಕೆಯರಲ್ಲಿ ಯಾವ ಭೇದವನ್ನೂ ಕಲ್ಪಿಸಲಿಲ್ಲ. ಸ್ಮೃತಿ

# ಆಹಾ... ಕೋಲಿನೋಸ್

Kolynos

## ತಾಜಾ ಮತ್ತು ನಿರ್ಮಲ...

**ಕೋಲಿನೋಸ್‌ನ ಸವಿ!**
ನಾಲಿಗೆ ಜುಮ್ಮೆನ್ನುವ, ಆಹ್ಲಾದಕರ ರುಚಿ
**ಕೋಲಿನೋಸ್‌ನ ನೊರೆ!**
ಹಲ್ಲುಜ್ಜುವುದನ್ನು ಸುಲಭಗೊಳಿಸುತ್ತದೆ,
ಪೂರ್ಣವಾಗಿ ಶುಭ್ರಗೊಳಿಸುತ್ತದೆ
**ಕೋಲಿನೋಸ್ ಕೊಡುವ ಸುಗಂಧ ಶ್ವಾಸ!**
(ನೀವು ಮತ್ತು ಇತರರು ಇದನ್ನು ಮೆಚ್ಚುವಿರಿ)

ಐವನೇ ಹುಡುಗಿಗೆ ಒಂದು ಯೋಗ್ಯ ಸಲಹೆ: ಕೋಲಿನೋಸ್ ಉಪಯೋಗಿಸಿರಿ, ಮತ್ತು ಇತರರಂತೆ ಮುಗುಳುನಗಿ! ಮುಂಜಾನೆ ಮತ್ತು ರಾತ್ರಿ ಮಲಗುವ ಮುನ್ನ ಕೋಲಿನೋಸ್‌ನಿಂದ ಹಲ್ಲುಜ್ಜಿರಿ...ಆಹ್ಲಾದತೆ ಮತ್ತು ನಿರ್ಮಲತೆಯನ್ನು ಅನುಭವಿಸಿರಿ. ಸಂಗಡಿಗರೊಡನೆ ಅಧಿಕ ಅಭಿಮಾನದಿಂದಿರಬಹುದು! ನಿಸ್ಸಂಕೋಚವಾಗಿ ಸಂಭಾಷಿಸಬಹುದು!



## ಮಧುರ ನಗೆ...ಅದು ಯಾವಾಗಲೂ ಕೋಲಿನೋಸ್ ನಗೆ

ರಿಜಿಸ್ಟರ್ಡ್ ಯೂಝರ್ಸ್: ಜೆಫ್ರಿ ಮ್ಯಾನರ್ಸ್ ಎಂಡ್ ಕಂಪೆನಿ ಲಿಮಿಟೆಡ್

ASP/GM/K-IN KAN

ಗಳಿಗೆ ತರುವಾಯ ಬರೆಯಲ್ಪಟ್ಟ ಟೀಕೆಗಳು ಸಾಮಾಜಿಕ ರಾಜಕೀಯ ವಾತಾವರಣವನ್ನನುಲಕ್ಷಿಸಿ ಮಹಿಳೆಗೆ ಸಾಮಾಜಿಕ ಆರ್ಥಿಕ ಸ್ಥಾನವನ್ನು ಕಲ್ಪಿಸಿದವು. ಇದನ್ನು ಜನತೆಗೆ ಮತ್ತೆ ತಿಳಿಸಿ ಹೇಳಿ ಮಹಿಳೆಗೂ ಬದುಕಲು ಅವಕಾಶವನ್ನು ಕಲ್ಪಿಸಿಕೊಡಬೇಕೆಂದರೆ ಅದಕ್ಕೆ ಜನತೆಯ ವಿಶ್ವಾಸಕ್ಕೆ ಪಾತ್ರರಾದ ಮಹಿಳೆಯರೂ ಬೇಕು; ಕಾನೂನನ್ನು ರೂಪಿಸುವಲ್ಲಿ ಪ್ರತಿನಿಧಿಗಳಾಗುವ ಶಕ್ತಿಯುಳ್ಳ ಮಹಿಳೆಯರೂ ಬೇಕು. ಜನತೆಗೆ ಹಿಡಿಯುವಂತೆ ತಿಳಿಸಿ ಹೇಳುವದು ಹಾಗೂ ಕಾಯ್ದುಕೊಳ್ಳುವದು ಒಂದು ಭಾಗ ; ಅದಕ್ಕೆ ಪೂರಕವಾಗಿ ಕಾನೂನಿನ ಸಹಾಯ ದೊರೆಯುವಂತೆ ನೋಡಿಕೊಳ್ಳುವದು ಇನ್ನೊಂದು ಭಾಗ. ೧೯೫೬ರಲ್ಲಿಯ ಮಾತು—ಮಗಳಿಗೂ ತಂದೆಯ ಆಸ್ತಿಯಲ್ಲಿ ಪಾಲು ದೊರೆಯಬೇಕು ಎಂದು ಕಾನೂನಿನಲ್ಲಿಯ ಸೌಕರ್ಯವನ್ನು ಒದಗಿಸಿದಾಗ ಪರಂಪರಾಪ್ರಿಯರನೇಕರು ಈ ಮಾತಿಗೆ ವಿರೋಧ ಮಾಡಲು ಮಹಿಳೆಯರನ್ನೇ ಸಂಸತ್ತಿನ ಒಳಗೂ ಹೊರಗೂ ನಿಲ್ಲಿಸಿದರು. ಇದರ ಮಹತ್ವವನ್ನರಿತ ಹಲವು ಸದಸ್ಯೆಯರು ಸದಸ್ಯೆಯರೆಲ್ಲರ ಮನೆಗಳಿಗೆ ಹೋಗಿ ಎಂದೂ ಬಾಯಿ ತೆಗೆಯದಿದ್ದವರನ್ನು ಈ ಸಂದರ್ಭದಲ್ಲಿ ಬಾಯಿತೆಗೆಯುವಂತೆ ಮಾಡಿದರು. ಸದಸ್ಯೆಯರೆಲ್ಲ ಶಿಷ್ಟಮಂಡಳದಲ್ಲಿ ಹೋಗಿ ಪ್ರಧಾನಮಂತ್ರಿಗಳನ್ನು ಕಂಡು ಆರ್ಥಿಕ ಸಹಾಯವಿಲ್ಲದೆ ತೊಳಲಾಡುವ ಕನ್ಯೆಗೆ ಮಹಿಳೆಗೆ ಆರ್ಥಿಕ ನೆಲೆ ಬೇಕೆಂದು ಬಿನ್ನವಿಸಿಕೊಂಡರು. ಹಿಂದೂ ಕಾನೂನಿನಲ್ಲಿ ಇದೊಂದು ಕ್ರಾಂತಿಕಾರಕ ಮಾರ್ಪಾಡಾಗಿ ಪರಿಣಮಿಸಿತು. ಯಾವ ಸಾಮಾಜಿಕ ಕಾನೂನೇ ಆದರೂ ಮಹಿಳೆಯರ ಪ್ರತಿಕ್ರಿಯೆ ಆದಕ್ಕೆ ಮುಖ್ಯವಾಗಿ ಬೇಕು. ವಿಚಾರವಿವೇಕಗಳುಳ್ಳ ಸಂಸತ್ತಿನ ಸದಸ್ಯೆಯಾದರೆ ತನ ಜನತೆಯ ತೊಂದರೆಗಳನ್ನು ಸಾಮಾಜಿಕ ಅನಿಷ್ಟಗಳನ್ನು ಹಿರಿಯ ಪ್ರಾತಿನಿಧಿಕ ಸಂಸ್ಥೆಯಾದ ಸಂಸತ್ತಿನೆದುರು ಇಟ್ಟು ದೇಶದ ಪ್ರತಿನಿಧಿಗಳಲ್ಲಿ ಒಂದು ಅಭಿಪ್ರಾಯ ರೂಪುಗೊಳ್ಳುವಂತೆ ಮಾಡಬಲ್ಲಳು.

ಈಗ ಕೆಲವು ದಿನಗಳ ಹಿಂದೆ ಹೀಗೇ ಒಂದು ಸಂದರ್ಭ ಬಂತು; ಉತ್ತರಾಧಿಕಾರಿ ಕಾನೂನಿನಲ್ಲಿ ವಿಧವೆಗೆ ಆಸ್ತಿಯಬಗ್ಗೆ ಪೂರ್ಣ ಅಧಿಕಾರವಿದೆ. ಆಕೆ ಅದನ್ನು ಒತ್ತಿ ಹಾಕಬಲ್ಲಳು;ಮಾರಬಲ್ಲಳು. ಆದರೆ ಅವಳಿಗೆ ಏನೇನೋ ಹೇಳಿ ಮಾರಿಸುವ ಏರ್ಪಾಟನ್ನೂ ಮಾಡುವ ಹಲವು ಮಹನೀಯರು ಅವಳ ಬಳಿಗೆ ಬರಬಹುದು. ಅಂತಹ ಸಂದರ್ಭದಲ್ಲಿ ತಿಳಿಯದೆ ಅವಳು ಆಸ್ತಿಯನ್ನು ಮಾರಿದ್ದಾದರೆ, ಆಸ್ತಿದೊರೆತ ಎರಡು ವರ್ಷಗಳವರೆಗೆ ಆಕೆಗೆ ಆ ವ್ಯವಹಾರವನ್ನು ರದ್ದುಗೊಳಿಸುವ ಅಧಿಕಾರವಿರಬೇಕು ಎಂಬ ತಿದ್ದುಪಡಿಯೊಂದು ಸಂಸತ್ತಿನ ಎದುರ ಬಂತು. ಆಸ್ತಿಪಾಸ್ತಿಗಳ ವ್ಯವಹಾರವನ್ನು ಎಂದೂ ನೋಡದೆಯಿದ್ದ ವಿಧವೆ ಒಮ್ಮೆಲೆ ಆಸ್ತಿಗೆ ಒಡತಿಯಾದರೆ, ಹೀಗೆ ಮೋಸಹೋಗುವ ಸಂಭವವೂ ಇದೆಯಾದ್ದರಿಂದ ಈ ತಿದ್ದುಪಡಿಯ ಅವಶ್ಯಕತೆ ಕಂಡು ಬಂತು. ಅದನ್ನು ಕುರಿತು ಮಾತನಾಡುತ್ತಿದ್ದಾಗ, ಮನು ಯಾಜ್ಞವಲ್ಕ್ಯಸ್ಮೃತಿಗಳ ಆಧಾರದಿಂದ ಕೆಲವು ಮಾತುಗಳನ್ನು ಹೇಳಿದೆ. ಹಲವು ಸ್ಮೃತಿಕಾರರು ಹಾಗೂ ತರುವಾಯದ ಟೀಕಾಕಾರರು ಸ್ತ್ರೀಗೆ ಆರ್ಥಿಕ ಸಾಮಾಜಿಕ ಸ್ಥಾನವನ್ನೇನೂ ಕೊಡದೆ ಅನ್ಯಾಯವೆಸಗಿದ್ದಾರೆ, ಎಂದೆ; ಕೂಡಲೆ ಕೆಲವು ಸದಸ್ಯರು ಕೂಗಿದರು, ನಾವು ಹಾಗೆ ಮಾಡಿಲ್ಲ, ತುಂಬ ಉದಾರಿಗಳಾಗಿದ್ದೇವೆ,' ಎಂದು. ಸದಸ್ಯರು ಹೀಗೆ ಅನ್ನುವ ಸ್ಥಿತಿಗೆ ಬಂದಿದ್ದಾರಲ್ಲ ಅದೇ ಸಂತೋಷದ ವಿಷಯ ಎಂದುಕೊಂಡೆ.

## ಸಂಸತ್ಸದಸ್ಯೆ ಏನು ಮಾಡಬಲ್ಲಳು ?

ಸಾಮಾಜಿಕ ಸುರಕ್ಷಿತತೆ, ಹಾಗೂ ಸೌಕರ್ಯಗಳನ್ನು ಕುರಿತು ಕೇಂದ್ರಸರಕಾರದಲ್ಲಿ ಒಂದು ಪ್ರತ್ಯೇಕ ಮಂತ್ರಿ ಶಾಖೆಯೇ ಏರ್ಪಾಟಾಗಿದೆ. ಭಿನ್ನ ಭಿನ್ನ ರಾಜ್ಯಗಳಲ್ಲಿ ಸಮಾಜ ಕಲ್ಯಾಣವು ಸಾಮಾಜಿಕ ಅನಿಷ್ಟಗಳನ್ನು ಹೋಗಲಾಡಿಸಲು ಹೆಣಗಾಡುತ್ತಿದೆ. ದಾರಿತಪ್ಪಿದ ಮಕ್ಕಳು ಮಹಿಳೆಯರು ಹಾಗೂ ಅಂಗವಿಕಲರಾದ ಮಕ್ಕಳು ಮಹಿಳೆಯರಿಗೆ ಯಾವ ತರದ ಅನುಕೂಲತೆಗಳಿವೆ ? ಸಂಸತ್ತಿನ ಸದಸ್ಯೆಯರೆಲ್ಲ ಒಕ್ಕೊರಲಿನಿಂದ ಮಾತನಾಡಿದರೆ, ಈ ಪ್ರಶ್ನೆಗಳತ್ತ ನೋಡುವ ಸರಕಾರದ ನೀತಿಯೇ ಬದಲಾಗಬಹುದಾಗಿದೆ. ದಾರಿತಪ್ಪಿದ ಮಹಿಳೆಯರಿಗಾಗಿ ಈಗ ಪ್ರತ್ಯೇಕ ವಸತಿಗೃಹಗಳೂ, ಶಿಕ್ಷಣದ ಏರ್ಪಾಟೂ ಇದೆ. ಇವುಗಳ ಬಗ್ಗೆ ಜನತೆಯಲ್ಲಿ ಸದಭಿಪ್ರಾಯವನ್ನುಂಟು ಮಾಡುವ ಕಾರ್ಯವನ್ನೂ ಸಂಸತ್ತಿನ ಸದಸ್ಯೆ ಬಹುಮಟ್ಟಿಗೆ ಮಾಡಬಲ್ಲಳು.

ವ್ಯತ್ಯಾಸಹೊಂದುತ್ತಿರುವ ಸಾಮಾಜಿಕ ಆರ್ಥಿಕ ಮೂಲ್ಯಗಳನ್ನು ಸಂಸತ್ತು ಗಣನೆಗೆ ತಾರದೇ ಯಾವುದೇ ಕಾನೂನನ್ನು ಮಾಡುವದೂ ಸಾಧ್ಯವಿಲ್ಲ. ಯಾವುದೇ ಶಾಖೆಯ ಕಾನೂನು ಈ ಮೂಲ್ಯಗಳನ್ನು ಮರೆತರೆ, ಸಂಸತ್ತಿನ ಸದಸ್ಯರು ಅವುಗಳನ್ನು ನೆನಪುಮಾಡಿಕೊಡಲು ಇದ್ದೇ ಇದ್ದಾರೆ.

ಹಿಂದುಳಿದ ವರ್ಗಗಳ ಬಗೆಗೆ ವರದಿಯನ್ನಿತ್ತ ಕಾಕಾ ಕಾಲೇಲಕರ ಸಮಿತಿಯು, ಮಹಿಳೆಯರೆಲ್ಲ ಸುಮಾರಾಗಿ ಹಿಂದುಳಿದ ವರ್ಗಗಳಿಗೆ ಸೇರಿದವರೆಂದೆಣಿಸಬಹುದಾಗಿದೆ ಎಂದು ಉಲ್ಲೇಖಿಸಿದೆ. ಸಾಕ್ಷರತೆಯ ಪ್ರಚಾರ, ಆರ್ಥಿಕ ಸ್ವಾವಲಂಬನ, ನಾಡಿನ ಆಗುಹೋಗುವಿಕೆಯಲ್ಲಿ ಅವರ ಭಾಗ ಇವುಗಳನ್ನು ನೋಡಿದರೆ, ಅವರು ಹಿಂದುಳಿದಿರುವದು ನಿಜವೆ. ಅವರಲ್ಲಿ ಸಂಘಟನೆಯಾದರೆ, ಹಾಗೂ ಆ ಸಂಘಟನೆಯ ಮೂಲಕ, ಕಾನೂನಿನಿಂದ ದೊರೆತ ಸೌಕರ್ಯಗಳನ್ನು ಉಪಯೋಗಿಸಿಕೊಳ್ಳಲು ಯತ್ನಿಸಿದರೂ ಎಷ್ಟೋ ಸಾಮಾಜಿಕ ಅನಿಷ್ಟಗಳ ನಿವಾರಣೆಯಾದೀತು ! ಯಾವುದೇ ಸಭೆಯಲ್ಲಿ, ಕಾರ್ಯಕಾರೀ ಸಮಿತಿಯಲ್ಲಿ, ಗಂಭೀರ ಸ್ವಭಾವದ ಮಹಿಳೆ ಒಬ್ಬಳಿದ್ದರೂ ಸಭೆ ಚೆನ್ನಾಗಿ ನಡೆಯುತ್ತದೆ. ಅವಳ ಉಪಸ್ಥಿತಿಯೇ ಇನ್ನುಳಿದವರನ್ನು ಗಂಭೀರವಾಗಿ ನಡೆಯಲು ಪ್ರೇರೇಪಿಸುತ್ತದೆ. ಪಂಚಾಯತಿಯಿಂದ ಎಲ್ಲ ಸಂಸ್ಥೆಗಳಲ್ಲೂ ಮಹಿಳೆಯರಿಗೆ ಪ್ರಾತಿನಿಧ್ಯ ಕೆಲಮಟ್ಟಿಗೆ ಇದೆ ಎಂಬುದು ನಿಜವಾದರೂ ಸಮಾಜವು ಮನ್ನಣೆ ಕೊಡದ ಯಾವಳೋ ಒಬ್ಬ ಮಹಿಳೆಯನ್ನು ಪ್ರತಿನಿಧಿಯೆಂದು ಸಭೆಯಲ್ಲಿ ತಂದರೆ, ಸಭೆಯ ಗೌರವಕ್ಕೇ ತೊಂದರೆಯಾಗಬಹುದಾಗಿದೆ. ಅದರ ಬಗ್ಗೆ ಜನತೆಯ ವಿಶ್ವಾಸ ಉಳಿಯದೆ ಹೋಗಬಹುದು. ಗೌರವ ಪಡೆಯದ ಮಹಿಳೆಯನ್ನೇ ತಂದು ಸಮಾಜವು ಗೌರವಿಸುವಂತೆ ಒಳ್ಳೆ ವಾತಾವರಣವನ್ನು ನಿರ್ಮಿಸಬಲ್ಲೆವೆಂಬ ಶಕ್ತಿ ಎಷ್ಟು ಜನಕ್ಕಿದೆ ? ಪರಿಣಾಮವಾಗಿ ಇನ್ನುಳಿದ ಯಾವ ಹೆಣ್ಣುಮಕ್ಕಳೂ ಪ್ರತಿನಿಧಿಯ ಆ ಸ್ಥಾನಕ್ಕೆ ಹೋಗಲು ಬಯಸುವದಿಲ್ಲ. ಹಳ್ಳಿಗಳಲ್ಲಿ ಪ್ರತಿನಿಧಿ ಸಂಸ್ಥೆಗಳ ಬಗ್ಗೆ ಗೌರವ ಅಗೌರವದ ಭಾವನೆ ಒಮ್ಮೆ ಮೂಡಿತೆಂದರೆ ಅದನ್ನು ಕಿತ್ತಿ ಎಸೆಯುವದು ತುಂಬ ಕಠಿಣವಾಗುತ್ತದೆ. ಸಾಮಾಜಿಕ ತಪ್ಪು ಮೂಲ್ಯಗಳನ್ನು ಸುಸಂಸ್ಕೃತ

ಮಹಿಳೆ ತಾನೇ ಮುಂದುವರಿದು ಕಿತ್ತಿ ಚೆಲ್ಲಲು ಪ್ರಯತ್ನಿಸಬೇಕು. ಈ ಕಾರ್ಯ ಪ್ರಾರಂಭ ವಂತೂ ಆಗಬೇಕು. ಅದು ಮಹಿಳೆಯರಿಂದಲೇ ಸಾಧ್ಯ ಎಂಬ ಮಾತೂ ಅಷ್ಟೇ ಸತ್ಯ!

ಸಂಸತ್ತಿನ ಸದಸ್ಯೆಯಾಗುವ ಮೊದಲಿನ ಮಾತು. ಕಲ್ಯಾಣಕೇಂದ್ರದ ಕಟ್ಟಡದ ಬಗ್ಗೆ ವಿಚಾರ ಮಾಡಲು ಹಳ್ಳಿಯ ಕೆಲವು ಪ್ರಮುಖರ ಸಭೆ ಕರೆದಿದ್ದೆ. ಮಾತನಾಡುತ್ತಿದ್ದಂತೆಯೇ ಒಬ್ಬನು ನನ್ನನ್ನು ನಾನು ಅಂದಂತೆಯೇ ಅಂದು ಅನುಕರಿಸುತ್ತಿದ್ದನು. ಮಗುವಾಗಿದ್ದರೆ ಅಣಕಿಸುತ್ತದೆಯೆನ್ನುತ್ತಿದ್ದೆ. ನನ್ನ ಪಕ್ಕದಲ್ಲಿ ಕುಳಿತ ಇನ್ನೊಬ್ಬ ಹಿರಿಯರನ್ನು ಯಾರವರು, ಎಂದು ಕೇಳಿದೆ. ತಕ್ಷಣ ಆ ಹಿರಿಯರು ಅವನನ್ನು ಕರೆದೊಯ್ದು ಹೊರಗೆ ಬಿಟ್ಟುಬಂದರು, ಅಂದಿನಿಂದ ಜನರೇ ಜಾಗ್ರತೆ ವಹಿಸಿ ಮೀಟಿಂಗಿಗೆ ಬರಬೇಕಾದರೆ ಕುಡಿಯುವದನ್ನು ನಿಲ್ಲಿಸಿದರು. ಅಂತಹ ಘಟನೆ ಆ ಬಳಿಕ ಸಂಭವಿಸಲಿಲ್ಲ!

ಶ್ರಮಜೀವಿ ಮಹಿಳೆಯರು, ಮಧ್ಯಮ ವರ್ಗದ ಮಹಿಳೆಯರು ಸಂಘಟಿತರಾದರೆ ಸಾಮಾಜಿಕ ಆರ್ಥಿಕ ಅನ್ಯಾಯಗಳನ್ನು ದೂರಮಾಡುವಲ್ಲಿ ಯಶಸ್ಸು ದೊರೆತೇ ದೊರೆಯುವದು. ಅವರಲ್ಲಿ ಹುದುಗಿದ ಅಂಧಶ್ರದ್ಧೆಗಳು ದೂರವಾಗಬೇಕಾದುದು ಮೊದಲ ಮಾತು! ಅನಿಷ್ಟವಾದುದು ಮಾಯವಾದರೆ ಇಷ್ಟವಾದುದಕ್ಕೆ ಸ್ಥಲವನ್ನು ಒದಗಿಸಿಕೊಡಬಹುದು.



### ಜನರ ಸಹಕಾರ ಬೇಕು

ಪಂಚಾಯತಿಯಲ್ಲಿಯೂ ವಿಚಾರ ಮಾಡುವ ಶಕ್ತಿಯುಳ್ಳ ಒಬ್ಬ ಮಹಿಳೆ ಪ್ರತಿನಿಧಿಯಾದರೆ, ಆಡಳಿತದ ಶಕ್ತಿಯನ್ನೂ ಅರಿತು, ತನ್ನ ಸ್ಥಾನಬಲದಿಂದಲೂ ಜನತೆಯಲ್ಲಿ ಹುದುಗಿದ ಸಾಮಾಜಿಕ ಅನ್ಯಾಯಗಳನ್ನು ದೂರಗೊಳಿಸಲು ಆಕೆ ಸಮರ್ಥಳಾಗುತ್ತಾಳೆ. ಜನತೆಯ ವಿಶ್ವಾಸಕ್ಕೂ ಕಾರಣಳಾದ ಸಮಾಜಸೇವಕಿ ಅವಳಾಗಿ ಕೊನೆಗೆ ಆಡಳಿತ ತಂತ್ರದಲ್ಲಿ ಪ್ರತಿನಿಧಿಯಾದರೆ ಅದಕ್ಕೆ ಹೆಚ್ಚಿನ ಗೌರವವಿದೆ. ಹೀಗೆಯೇ ಹಿಂದೆ ಒಂದು ಘಟನೆ ನಡೆಯಿತು. ಹರಿಜನ ಮಹಿಳೆಯೊಬ್ಬಳು ಬಾವಿಯಿಂದ ಕುಡಿಯುವ ನೀರನ್ನು ಎಳೆದುಕೊಳ್ಳುವ ಸಮಾರಂಭವೊಂದು ಏರ್ಪಟ್ಟಿತು. ಅಸ್ಪೃಶ್ಯತೆಯನ್ನು ದೂರ ಮಾಡುವದೇ ಅದರ ಉದ್ದೇಶವಾಗಿತ್ತು. ಹರಿಜನ ಕುಟುಂಬಗಳ ಹಿರಿಯಳೊಬ್ಬಳ ಬಳಿ ಹೋಗಿ, ಕೊಡ ಹಗ್ಗ ಸಹಿತವಾಗಿ ಒಬ್ಬ ಹೆಣ್ಣುಮಗಳನ್ನು ಕಳಿಸೆಂದು ಆಕೆಯನ್ನು ಕೇಳಿಕೊಂಡೆ. ಆಕೆ ಮೊದಲು ಈ ಕಾರ್ಯಕ್ಕೆ ಒಪ್ಪಲಿಲ್ಲ. ಏನಾದರೂ ಪಾಪ ಬಂದರೆ ಅದೆಲ್ಲ ಅವಳ ಕುಲದ ಮೇಲೇಕೆ?—ಎಂಬುದೇ ಅವಳ ವಾದವಾಗಿತ್ತು. ಕೊನೆಗೂ ಬಹಳ ಆಗ್ರಹ ಮಾಡಿದ ಮೇಲೆ ತಲೆ ತುಂಬ ಸೆರಗು ಹೊದಿಸಿ ಒಬ್ಬ ಮಹಿಳೆಯನ್ನು ಕಳಿಸಿಕೊಟ್ಟಳು. ನೀರು ಎಳೆದು ಆದ ಮೇಲೆ ಎಲ್ಲ ಅಧಿಕಾರಿಗಳೂ ಹೊರಟು ಹೋದ ಮೇಲೆ ಆ ಮುದುಕಿ ನನ್ನನ್ನು ಕರೆದು ಹೇಳಿದಳು, "ನಾನು ಒಬ್ಬಳನ್ನು ಕಳಿಸಿಕೊಟ್ಟಿದ್ದೆನಲ್ಲ ಅವಳು ಹರಿಜನ ಯುವತಿಯೆಂದು ತಿಳಿದಿದ್ದೀರಾ? ಆಕೆ ತಳವಾರ ಹೆಣ್ಣುಮಗಳು. ಅರ್ಧ ಗಂಟೆ ಬಂದು ಹೋಗುವ ಅಧಿಕಾರಿಗಳ ಕಣ್ಣಲ್ಲಿ ಮಣ್ಣು ಹಾಕುವದು ಎಷ್ಟೊತ್ತಿನ ಮಾತು?" ನಾನು ಅವಳ ಮಾತು ಕೇಳಿ ಅವಾಕ್ಕಾದೆ.

ಅಸ್ಪೃಶ್ಯತೆ ಒಂದು ಸಾಮಾಜಿಕ ಅನಿಷ್ಟವೆಂಬುದನ್ನರಿತ ಸಮಾಜಸೇವಕಿ ಸಂಸತ್ತಿನ ಸದಸ್ಯೆಯೂ ಆಗಿದ್ದರೆ ಆ ಅನಿಷ್ಟನಿವಾರಣೆಗೆ, ಹರಿಜನ ಮಕ್ಕಳು ಹಾಗೂ ಮಹಿಳೆಯರ ಉನ್ನತಿಗಾಗಿ ಅವಳು ನಿಜವಾದ ಪ್ರಯತ್ನವನ್ನು ಮಾಡಬಲ್ಲಳು. ತುರ್ತು ಪರಿಸ್ಥಿತಿಯಲ್ಲಿ, ಎಲ್ಲ ಖಾತೆಗಳಲ್ಲಿಯೂ ವೆಚ್ಚವನ್ನು ಕಡಿಮೆ ಮಾಡಬೇಕಾದ ಪ್ರಸಂಗ ಬಂದಾಗ, ಮೊದಲು ಕಡಿತಕ್ಕೆ ಒಳಗಾದದ್ದು ಮಹಿಳೆಯರ ಹಾಗೂ ಮಕ್ಕಳ ಶಿಕ್ಷಣ ಸಮಾಜಕಲ್ಯಾಣದ ಚಟುವಟಿಕೆಗಳು. ಸರಕಾರವು ಪೂರ್ಣ ಹಣವನ್ನು ಮಂಜೂರ ಮಾಡಿರುವಾಗಲೇ ಇಂತಹ ಪರಿಸ್ಥಿತಿಯಿರುವಾಗ, ಹಣವನ್ನೇ ಮಂಜೂರು ಮಾಡದಿದ್ದರೆ ಇನ್ನೇನು ಗತಿಯಾಗಬಹುದು? ನಾವು ನಾಲ್ಕಾರು ಜನ ಸದಸ್ಯೆಯರು ಈ ವಿಷಯವನ್ನು ಒತ್ತಿ ಹೇಳಿದಾಗ, ಪರಿಸ್ಥಿತಿ ಕೆಲಮಟ್ಟಿಗೆ ಹಿಡಿತದಲ್ಲಿ ಉಳಿಯಿತು ಎನ್ನಬಹುದು.

ಸಂಸತ್ತಿನ ಸದಸ್ಯೆಯೂ ಜನತೆಯ ಸಾಮಾಜಿಕ ಜೀವನ ನಾಡಿಯನ್ನರಿತ ಒಬ್ಬ ಸಮಾಜಸೇವಕಿ. ಹೀಗೆಯೇ ಒಂದು ಸಂದರ್ಭದಲ್ಲಿ ಹುಡಿಗೆಯನ್ನು ದೇವರಿಗೆ ಬಿಡುವ ಸಂಬಂಧವಾಗಿ, ಬಿಡುವ ಸಂಪ್ರದಾಯವುಳ್ಳವರ ಮಧ್ಯದಲ್ಲಿಯೇ ಸಂಭಾಷಣೆ ನಡೆಯಿತು. "ಹುಡುಗಿ ಅಸ್ವಸ್ಥಳಾಗಿ ಅನಾರೋಗ್ಯದಿಂದ ಬಳಲುತ್ತಿದ್ದಾಗ ದೇವರಿಗೆ ಹರಕೆ ಕಟ್ಟಿದ್ದು", ಎಂದು ಆಕೆಯ ಪಾಲಕರಂದರು. ಕೊನೆಗೆ ಹುಡಿಗೆಯ ಪರಿಸ್ಥಿತಿಯೇನಾಗುತ್ತಿದೆಯೆಂದು ಗೊತ್ತಿದ್ದೂ ಹಗಲು ಕಂಡ ಬಾವಿಯಲ್ಲಿ ಜನ ಬೀಳುತ್ತಿದ್ದಾರಲ್ಲ ಎನಿಸಿತು. ಹಾಗೆ ಅವಳು ಬೀಳಬೇಕೆಂದು ಅಪೇಕ್ಷೆಪಟ್ಟವರೂ ಕೆಲವು ಜನ ಸಮಾಜದಲ್ಲಿ ಇಲ್ಲದೆಯಿಲ್ಲ. ಆದರೆ ಈ ಅಂಥ ಪರಂಪರೆಯಿಂದ ಪಾರಾಗಬೇಕೆನ್ನುವ ಪಾಲಕರಿಗೆ, ಅವರನ್ನು ಪಾರುಗೊಳಿಸಬೇಕೆನ್ನುವ ಸಮಾಜ ಸೇವಕ–ಸೇವಕಿಯರಿಗೆ, ಇಂತಹ ಅನೈತಿಕ ಸಂಪ್ರದಾಯಗಳನ್ನು ಪ್ರತಿಬಂಧಿಸುವ ಕಾನೂನೂ ಸಹಾಯಕವಾಗಿ ಬಂದಿದೆ.

ಸಾಮಾಜಿಕ ಅನಿಷ್ಟಗಳನ್ನು, ಸಂಸತ್ತಿನಲ್ಲಿ ಪ್ರತಿನಿಧಿಯಾದ ಸದಸ್ಯೆ, ಸಂಸತ್ತಿನ ಎದುರು ಇಟ್ಟು ಸರಕಾರವು ಸಹಾನುಭೂತಿಯಿಂದ ಆ ಪ್ರಶ್ನೆಯನ್ನು ಬಿಡಿಸಬೇಕೆಂದು ಕೇಳಿಕೊಳ್ಳುತ್ತಾಳೆ. ಆ ಕಾರ್ಯಕ್ಕೆ ಕಾನೂನಿನ ಅವಶ್ಯಕತೆಯಿದ್ದರೆ ಅದನ್ನು ತರಲು ಯತ್ನಿಸುತ್ತಾಳೆ. ಸ್ಥಾನಬಲದಿಂದ, ಒಳ್ಳೆಯ ಸಾಮಾಜಿಕ ಶಿಕ್ಷಣದ ಕಾರ್ಯವನ್ನೂ ಆಕೆ ಕೈಕೊಳ್ಳಬಲ್ಲಳು. ಸಮಾಜದ ದುರ್ಬಲ ಅಂಗಗಳೆಂದು ಅನಿಸಿಕೊಂಡ ಹಿಂದುಳಿದವರ್ಗಗಳು, ಬಹುಸಂಖ್ಯಾಕ ಮಹಿಳೆಯರು ಸಾಮಾಜಿಕ ಶಿಕ್ಷಣದಿಂದ ಸಾಮಾಜಿಕ ಪ್ರಜ್ಞೆಯನ್ನು ಪಡೆದರೆ, ಈ ಅನಿಷ್ಟಗಳಿಗೆ ಅವಕಾಶವೇ ಉಳಿಯದು!

# ಕನ್ನಡದಲ್ಲಿ ನಿಬಂಧ ಪ್ರಬಂಧ

**ಪ್ರೊ. ಜಿ. ಡಿ. ನಾಡಕರ್ಣಿ**
ಧಾರವಾಡ

ಪ್ರಬಂಧವೆಂದರೇನು ? ಅದು ಗದ್ಯಕಾವ್ಯದ ಪ್ರಕಾರವೊಂದು—ಚಿಕ್ಕದಾದ, ಚೊಕ್ಕಾದ ಬರವಣಿಗೆ. ಇದರಲ್ಲಿ ಸಾಮಾನ್ಯವಾಗಿ ಎರಡು ಪ್ರಕಾರಗಳು ಎದ್ದು ಕಾಣುವುದುಂಟು : ಒಂದು ವಿಷಯಪ್ರಧಾನವಾದ, ವಿಚಾರಾತ್ಮಕವಾದ, ವಿಮರ್ಶಾತ್ಮಕವಾದ ಗದ್ಯಲೇಖನ ; ಇನ್ನೊಂದು ಬರೆಹಗಾರನ ವ್ಯಕ್ತಿನಿಷ್ಠವಾದ, ಭಾವನಾತ್ಮಕವಾದ ಗದ್ಯದ ಬರಹ. ಇದರಲ್ಲಿ ಮೊದಲನೆಯದನ್ನು ಪ್ರಬಂಧವೆಂದೂ ಎರಡನೆಯದನ್ನು ನಿಬಂಧವೆಂದೂ ಕರೆಯಬಹುದು. ಈ ಎರಡನೆಯದನ್ನು ಆತ್ಮೀಯ ನಿಬಂಧ, ಲಘುನಿಬಂಧ, ಲಲಿತನಿಬಂಧ, ಹರಟೆ ಇತ್ಯಾದಿಯಾಗಿ ಕರೆಯುವುದೂ ಉಂಟು.

ಪ್ರಬಂಧದ ದೃಷ್ಟಿ ಗಂಭೀರ, ರೀತಿ ವಸ್ತುನಿಷ್ಠ, ಉದ್ದೇಶವು ವಿಚಾರಪ್ರಚಾರ. ಪ್ರಬಂಧಕಾರನಿಗೆ ತನ್ನ ಪ್ರಬಂಧದ ವಿಷಯದ ಬಗ್ಗೆ ಸಂಪೂರ್ಣ ಜ್ಞಾನವಿರಬೇಕು. ವಿಷಯ ಪ್ರತಿಪಾದನೆಯಲ್ಲಿ ಸುಸ್ಪಷ್ಟತೆ, ಅಸಂದಿಗ್ಧತೆ, ನಿಷ್ಕೃಷ್ಟತೆ ಅವಶ್ಯ. ಪ್ರಬಂಧಕಾರನ ಶೈಲಿಯಲ್ಲಿ ಈ ಗುಣಗಳ ಜೊತೆಗೆ ಶೈಲಿಯ ಕಲಾವಂತಿಕೆ ಮತ್ತು ಮಾತಿನ ಚಮತ್ಕಾರ ಕಂಡುಬರಬಹುದಾದರೂ ಪ್ರಬಂಧಗಳಲ್ಲಿ ರಸಲೀಲೆಯಿಲ್ಲ. ಹಿರಿಯ ವಿಮರ್ಶಕರಾದ ಶ್ರೀ ಗೋಕಾಕರು ಮಾರ್ಮಿಕವಾಗಿ ಹೇಳಿದಂತೆ—"ಪ್ರಬಂಧಕಾರನು 'ನೂತನಬ್ರಹ್ಮ'ನಲ್ಲ ; ಆತನು ಪ್ರಪಂಚದ ಭಾಷ್ಯಕಾರ, ಮಲ್ಲಿನಾಥ ಇಲ್ಲವೆ ಸಂಗ್ರಾಹಕ."

ಒಬ್ಬ ವಿಮರ್ಶಕರು ಹೇಳಿದಂತೆ— "ಕನ್ನಡ ಸಾಹಿತ್ಯದಲ್ಲಿ ಹೆಸರಾಂತ ಸಾಹಿತಿಗಳು ಈ ಸಾಹಿತ್ಯ ಪ್ರಭೇದಕ್ಕೆ ತಮ್ಮ ಕಾಣಿಕೆಯನ್ನು ಸಲ್ಲಿಸಿದ್ದಾರೆ." ಕನ್ನಡದಲ್ಲಿ ನಿಬಂಧವು ಲೇಖಕರ ವ್ಯಕ್ತಿತ್ವ, ದೃಷ್ಟಿಕೋನ, ಶೈಲಿ— ಇವುಗಳಲ್ಲಿಯ ಭಿನ್ನತೆಯ ಮೂಲಕ ನಾನಾರೂಪವನ್ನು ಪಡೆದಿದೆ, ಪಡೆಯುತ್ತಲಿದೆ ಎಂಬ ಮಾತು ನಿಜವಾಗಿಯೂ ಸಂತೋಷವುಂಟುಮಾಡುವಂತಹದು. ತೀರ ಗಂಭೀರವಾದ ವಿಷಯದಿಂದ ಹಿಡಿದು ನಿತ್ಯಜೀವನದ ಅತ್ಯಂತ ಸಾಮಾನ್ಯವಾದ ವಿಷಯದವರೆಗೂ ಇಂದಿನ ಕನ್ನಡ ನಿಬಂಧದ ವಸ್ತು ಪ್ರಪಂಚದ ಹರಹು ಇದೆ. ಇಂದಿನ ಕನ್ನಡ ನಿಬಂಧಗಳ ಅವಲೋಕನವೆಂದರೆ, ಬಗೆಬಗೆಯ ಫಲ-ಪುಷ್ಪಗಳನ್ನು ಹೊತ್ತು ನಿಂತ ವಿವಿಧ ತರು-ಲತೆಗಳಿಂದ ನಿಬಿಡವಾದ ಲಾಲಬಾಗ್‌ದಂಥ ತೋಟದಲ್ಲಿ ವಿಹರಿಸಿದಂತೆ ಅನುಭವವಾಗುತ್ತದೆ ಎಂದು ಹೇಳಿದರೆ ಅತಿಶಯೋಕ್ತಿಯಾಗಲಿಕ್ಕಿಲ್ಲ.

## ವಿಮರ್ಶಾತ್ಮಕ ನಿಬಂಧಗಳು

ಇಂಥ ನಿಬಂಧ ಪ್ರಪಂಚದಲ್ಲಿ ಒಂದೆಡೆಗೆ ವಿಚಾರಾತ್ಮಕವೂ, ಅನುಭವಪೂರ್ಣವೂ ಆದ ಶ್ರೀ. ಡಿ. ವಿ. ಗುಂಡಪ್ಪನವರ "ಸಂಸ್ಕೃತಿಯ ರಂಗ," ಅಥವಾ ಡಾ. ರಂ. ಶ್ರೀ. ಮುಗಳಿಯವರ "ಕಟುಸತ್ಯ" ಅಥವಾ ಶ್ರೀ ಡಿ. ಎಲ್. ಎನ್. ಅವರ "ವ್ಯಾಸಂಗದ ಹವ್ಯಾಸ"ದಂತಹ ನಿಬಂಧಗಳಿವೆ. ಶ್ರೀ ಡಿ. ವ್ಹಿ. ಜಿ ಯವರ "ಜೀವನ ಸೌಂದರ್ಯ ಮತ್ತು ಸಾಹಿತ್ಯ" ದಂತಹ ಗ್ರಂಥಗಳಲ್ಲಿ ಬರುವ ನಿಬಂಧಗಳು ಯಾವ ಭಾಷೆ-ಸಾಹಿತ್ಯಕ್ಕಾದರೂ ಹೆಮ್ಮೆಯ ಲೇಖನಗಳಾಗಿವೆ. ಪ್ರೌಢವಾದ, ಸೂಕ್ಷ್ಮವಾದ ವಿಷಯಗಳನ್ನು ಹೇಗೆ ರಸವತ್ತಾಗಿ, ಆಕರ್ಷಕವಾಗಿ ಬರೆಯಬೇಕೆನ್ನುವುದಕ್ಕೆ ಒಂದು ಮಾದರಿಯಾಗಿವೆ ಶ್ರೀ ಡಿ. ವಿ. ಜಿ. ಯವರ ಲೇಖನಗಳು. ಅದೇ ರೀತಿಯಲ್ಲಿ ಶ್ರೀ. ಎಸ್. ವ್ಹಿ. ರಂಗಣ್ಣನವರ ಶೈಲಿ, ರುಚಿ, ಕನ್ನಡದ ಮಹಾಕವಿಗಳ ಬಗೆಗೆ ಬರೆದ ವಿಮರ್ಶಾತ್ಮಕ ನಿಬಂಧಗಳಲ್ಲೆಲ್ಲ ಇದೇ ರಸಿಕತೆ, ಆತ್ಮೀಯತೆ, ಸೊಗಸುಗಳು ಕಂಡು ಬರುತ್ತವೆ.

ವ್ಯಕ್ತಿಚಿತ್ರಗಳನ್ನು ಕೊಡುವ ನಿಬಂಧಗಳ ಮಾದರಿಗೆ ಎತ್ತಿದ ಕೈ ಯಾಗಿದ್ದಾರೆ ಸಿದ್ದವ್ವನಹಳ್ಳಿ ಕೃಷ್ಣಶರ್ಮರು. ಅವರ "ವರ್ಧಾಯಾತ್ರೆ," "ದೀಪಮಾಲೆ," "ಕನ್ನಡದ ಕಿಡಿಗಳು", "ಪರ್ಣಕುಟಿ" ಈ ಗ್ರಂಥಗಳಲ್ಲಿಯ ಅವರ ಶೈಲಿಗೆ ಮಾರು ಹೋಗದ ಕನ್ನಡಿಗರಾರು ? ಸಿದ್ದವ್ವನಹಳ್ಳಿಯವರ ಲೇಖನಿಗೆ ಪ್ರತಿಭಾವಂತ ಚಿತ್ರಕಾರನ ಕುಂಚದ ಶಕ್ತಿ ಇದೆಯೆಂದರೆ ಅತಿಶಯೋಕ್ತಿಯಲ್ಲ. ಅವರು ಚಿತ್ರಿಸಿದ ವ್ಯಕ್ತಿಗಳು ಅಜರಾಮರ, ಕನ್ನಡ ಶೈಲಿಕಾರರ ಬಳಗದಲ್ಲಿ ಶ್ರೀ ಸಿದ್ದವ್ವನಹಳ್ಳಿಯವರಿಗೆ ಮೇಲ್ಮಟ್ಟದ ಸ್ಥಾನವಿದೆ. ಇನ್ನೊಂದು ರೀತಿಯಿಂದ ವ್ಯಕ್ತಿಚಿತ್ರಗಳನ್ನು ಆಕರ್ಷಕವಾಗಿ ಬರೆದವರೆಂದರೆ ದಿವಂಗತ ದ.ಬಾ. ಕುಲಕರ್ಣಿಯವರು. "ನಾನು ಕಂಡ ಗೌರಮ್ಮನವರು" ಎಂಬ ಅವರ ನಿಬಂಧ ಸಂಗ್ರಹ ಚಿರಸ್ಮರಣೀಯವಾಗಿದೆ.

ಶುದ್ಧ ವಿಡಂಬನೆಗೆ ಉತ್ತಮ ಉದಾಹರಣೆಯೆಂದರೆ "ಕಡಲುತೀರದ ಭಾರ್ಗವ" ರೆಂದು ಹೆಸರಾದ ಶ್ರೀ. ಶಿವರಾಮ ಕಾರಂತರ ಲೇಖನಗಳು. ಅವರ "ಮೈಲಿಕಲ್ಲಿನೊಡನೆ ಮಾತುಕತೆಗಳು" ನಿಜವಾಗಿಯೂ ವಿಡಂಬನೆಯ ದಾರಿಯಲ್ಲಿಯ ಮೊದಮೊದಲಿನ ಮೈಲಿಕಲ್ಲಾಗಿದೆ ಎನ್ನಬಹುದು. ಜೀವನವನ್ನು ಸೂಕ್ಷ್ಮವಾಗಿಯೂ, ತೀಕ್ಷ್ಣವಾಗಿಯೂ ನೋಡುವ ದೃಷ್ಟಿ, ನಿರೂಪಣೆಯಲ್ಲಿಯ ನಿರ್ಭೀತಿ ಇವುಗಳ ಜೊತೆಗೆ ಸಹಜವಾದ ಹಾಸ್ಯ—ಇವುಗಳ ಮೂಲಕ "ಗ್ನಾನ"ದ ನಿಬಂಧಗಳಿಗೇ ಆಗಲಿ "ಮೈಲಿಕಲ್ಲಿನೊಡನೆ ಮಾತುಕತೆಗಳು" ಎಂಬಲ್ಲಿಯ ನಿಬಂಧಗಳಿಗೇ ಆಗಲಿ ಕನ್ನಡಸಾಹಿತ್ಯದಲ್ಲಿ ಒಂದು ಅಪೂರ್ವವಾದ ಸ್ಥಾನವಿದೆ. ಮಂಗಳೂರಿನ ಬೀದಿಯೊಂದರಲ್ಲಿ ಶ್ರೀ ಕಾರಂತರು ಒಂದುದಿನ ಮುಂಜಾನೆ ನಡೆಯುತ್ತಿರುವಾಗ ಮಿ॥ ಡುಸ್ತುಬಿನ್‌ರ ಭೆಟ್ಟಿ ಆಯಿತಂತೆ. ಆ ದುಸ್ತುಬಿನ್ ತನ್ನ ಆತ್ಮಚರಿತೆಯನ್ನು ಎಂದರೆ ದುಃಖಪರಂಪರೆಯನ್ನೆಲ್ಲ ಲೇಖಕರಿಗೆ ಹೇಳಿದನಂತೆ. ಆ ದುಸ್ತುಬಿನ್ ಮತ್ತಾರೂ ಅಲ್ಲ—ಬೀದಿಯ ಬದಿಯ dust-bin ಆ ನಿಬಂಧದಲ್ಲಿ dust-bin ಕೂಡ ಹೊರಲಾರದ ಸಮಾಜದ ಕೊಳೆ ಕೊಳಚೆಯನ್ನೆಲ್ಲ ಬಯಲಿಗೆ ಎಳೆದಿದ್ದಾರೆ ಶ್ರೀ ಕಾರಂತರು.

## ಲಘು ನಿಬಂಧಗಳು

ಇನ್ನು ಲಘುವಾದ ಹಾಸ್ಯವನ್ನು ನಿರೂಪಿಸುವುದೇ ಮುಖ್ಯಗುರಿಯಾಗಿಟ್ಟುಕೊಂಡ ಕೆಲವು ಲಘುನಿಬಂಧಗಳನ್ನು ಪರಿಶೀಲಿಸೋಣ. ಇಲ್ಲಿಯ ವಿಷಯವೂ ಲಘುವಾದದ್ದು ; ನೋಡುವ ದೃಷ್ಟಿ, ವಿನೋದದ್ದು ; ಶೈಲಿಯಲ್ಲಿ ಹಾಸ್ಯ ಹಾಸು-ಹೊಕ್ಕಾಗಿ ಕಂಡುಬರುತ್ತದೆ. ಈ ಬಗೆಯ ನಿಬಂಧಗಳಲ್ಲಿ ಶ್ರೀ ಎನ್. ಎಸ್. ಗದಗಕರ ಅವರ "ಜೋಡು" ಎಂಬುದನ್ನೂ ರಾ. ಕು. (ಶ್ರೀ ಆರ್. ವ್ಹಿ. ಕುಲಕರ್ಣಿ) ಅವರ "ಪಾದತ್ರಾಣ" ಎಂಬುದನ್ನೂ ಹೋಲಿಸಬಹುದು. ನಿಬಂಧವಿಷಯ ಚಪ್ಪಲಿಯಂತಹ ಕ್ಷುಲ್ಲಕ ವಿಷಯವಾಗಿದ್ದರೂ ಇಬ್ಬರು ನಿಬಂಧಕಾರರ ದೃಷ್ಟಿವಿಶೇಷದ ಮೂಲಕ ನಿತ್ಯವೂ ಕಾಲಲೊದೆಸಿಕೊಳ್ಳುವ ಪದಾರ್ಥವು ರಸನಿರ್ಮಾಣದ ಮೂಲಕ ಶಿರಸಾಮಾನ್ಯವಾಗಿದೆ! ಶ್ರೀ ಗದಗಕರರು ಜೋಡಿನ ಪೌರಾಣಿಕ ಪಾವಿತ್ರ್ಯವನ್ನು ವಿವರಿಸುತ್ತ, ಭರತನು ರಾಮನಿಂದ ಪಾದುಕೆಗಳನ್ನು ಪಡೆದು ಅವುಗಳ ಮೂಲಕ ರಾಮರಾಜ್ಯವನ್ನು ತರಲಿಲ್ಲವೇ ?—ಎಂದು ಕೇಳಿದ್ದಾರೆ. ರಾ. ಕು. ಅವರು "ಪಾದತ್ರಾಣ"ದ

ಕನ್ನಡದಲ್ಲಿ ನಿಬಂಧವು ಲೇಖಕರ ವ್ಯಕ್ತಿತ್ವ, ದೃಷ್ಟಿಕೋನ, ಶೈಲಿ—ಇವುಗಳಲ್ಲಿಯ ಭಿನ್ನತೆಯ ಮೂಲಕ ನಾನಾರೂಪವನ್ನು ಪಡೆದಿದೆ; ಪಡೆಯುತ್ತಿದೆ. ತೀರ ಗಂಭೀರ ವಿಷಯದಿಂದ ನಿತ್ಯಜೀವನದ ಅತ್ಯಂತ ಸಾಮಾನ್ಯ ವಿಷಯದವರೆಗೂ ಇಂದಿನ ಕನ್ನಡ ನಿಬಂಧದ ವಸ್ತುಪ್ರಪಂಚದ ಹರಹು ಇದೆ. ಅದರ ಒಂದು ಕಿರುನೋಟವನ್ನು ಲೇಖಕರು ಇಲ್ಲಿ ಒದಗಿಸಿದ್ದಾರೆ. . . . . .

ಮಹಿಮೆಯನ್ನು ವಿವರಿಸುತ್ತ ಪಾದರಕ್ಷೆಗಳಿಗೆ "ತನ್ನವರೆಂಬ ಮೋಹವಿಲ್ಲ ; ಹೆರವರೆಂಬ ಭೇದ ವಿಲ್ಲ. ಬಂದವರ ಕಾಲಿಗೆ ಬಿದ್ದು ಅವರೊಡನೆ ಓಡಿಹೋಗುವ ವಿಶ್ವಾಸಘಾತುಕ ಪ್ರವೃತ್ತಿ ಅದರಲ್ಲಿ ಹೇರಳವಾಗಿದೆ" ಎಂದಿದ್ದಾರೆ. ಬಹುಶಃ ಕೊಡೆಯ ನಂತರದ ಅನಧಿಕೃತವಾಗಿ "ಮಾಲ್ಕಿ" ಬದಲಾಗುವ ವಸ್ತುವೆಂಥದರೆ ಈ ಚಪ್ಪಲಿ ಅಥವಾ ಪಾದರಕ್ಷೆ ಎಂದು ತೋರುತ್ತದೆ. ಕೊಡೆ ಹಸ್ತಾಂತರ ಹೊಂದಿದರೆ ಪಾದರಕ್ಷೆ "ಪಾದಾಂತರ" ಹೊಂದುತ್ತದೆ. ಶ್ರೀ ಎನ್ಕೆ ಕುಲಕರ್ಣಿಯವರು "ಕಣ್ಮರೆಯಾದ ಕಾಲ್ಮರಿ" ಎಂಬ ನಿಬಂಧದಲ್ಲಿ ಕಾಲ್ಮರಿಯ ಹಿರಿಮೆಯನ್ನು ತುಂಬಾ ವಿನೋದಾತ್ಮಕವಾಗಿ ಬಣ್ಣಿಸಿದ್ದಾರೆ. ಇಂಥ ನಿಬಂಧಗಳನ್ನು ಓದುವಾಗ ಇಂಗ್ಲಿಷ್ ಪ್ರಬಂಧಕಾರರ "Umbrella Morals" ನಿಬಂಧ ನೆನಪಾಗುತ್ತದೆ.

ಇನ್ನೊಂದು ಇಂಥದೇ ಲಘುವಾದ. ಆದರೆ ಮಹತ್ವದ ನಾಗರಿಕನ ನಿತ್ಯದ ಸಮಸ್ಯೆ ಎಂದರೆ "ದಾಡಿಯ ಸಮಸ್ಯೆ". ಶ್ರೀ. ಎನ್ಕೆಯವರು ಈ ಸಮಸ್ಯೆಯ ಸಮಗ್ರಸ್ವರೂಪವನ್ನು ತಮ್ಮ "ದಾಡಿಯ ಸಮಸ್ಯೆ" ಎಂಬ ನಿಬಂಧದಲ್ಲಿ ನಿರೂಪಿಸಿದ್ದರೆ. ಶ್ರೀ. ರಾ. ಕು. ಅವರು ಅದೇ, ವಿಷಯವನ್ನು "ಆಯುಷ್ಯವರ್ಮ" ಎಂಬ ಹೆಸರಿನಲ್ಲಿ ವಿವೇಚಿಸಿದ್ದಾರೆ. ಆಂಗ್ಲ ಪ್ರಬಂಧಕಾರರನ್ನು ಈ ವಿಷಯ ಆಕರ್ಷಿಸಿದೆ. "A Sermon on Shaving" ಎಂಬ ನಿಬಂಧದಲ್ಲಿ ಮಾರ್ಮಿಕವಾಗಿ ಹೇಳಿದಂತೆ— "Shave daily or do not shave at all" ಎಂಬುದೇ ವ್ಯಾವಹಾರಿಕ ಸೂತ್ರವಾಗಿರಬೇಕು. ಶ್ರೀ. ಎನ್ಕೆ ಕುಲಕರ್ಣಿಯವರು ಈ ಮಹಾ ಸಮಸ್ಯೆಯನ್ನು ಕೂಲಂಕಷವಾಗಿ ಅಭ್ಯಸಿಸಿ ಕವೀಂದ್ರ ರವೀಂದ್ರರು, ಬರ್ನಾರ್ಡ ಶಾ, ಪಂಚಮಜಾರ್ಜರು, ೭ ನೇ ಎಡ್ವರ್ಡರೂ ಏಕೆ ಮಹಾಪುರುಷರಾದರೆಂದರೆ ಅವರು ದಾಡಿಯ ನಿರ್ಮೂಲನದ ಗೊಡವೆಗೆ ಹೋಗದೆ ಅವನ್ನು ಸ್ವೇಚ್ಛೆಯಾಗಿ ಬೆಳೆಯಗೊಟ್ಟರು ಎಂಬ ಸಿದ್ಧಾಂತಕ್ಕೆ ಬಂದಿದ್ದಾರೆ. ಈ ಸಮಸ್ಯೆ ನಿತ್ಯದ ಸಮಸ್ಯೆ— "ಸಂಭವಾಮಿ ಯುಗೇ ಯುಗೇ" ಎಂದು ಪರಮಾತ್ಮನು ನುಡಿದರೆ ದಾಡಿ ಹೇಳುತ್ತದೆ— "ಸಂಭವಾಮಿ ದಿನೇ ದಿನೇ" ಎಂದು. ಹೀಗೆ ರಾ. ಕು. ಅವರು ತಮ್ಮ ಸುಂದರವಾದ "ಆಯುಷ್ಯವರ್ಮ" ಎಂಬ ನಿಬಂಧದಲ್ಲಿ ಈ ಸಮಸ್ಯೆಯ ಬಗ್ಗೆ ಗಂಭೀರವಾಗಿ ಪ್ರತಿಪಾದಿಸಿದ್ದಾರೆ. ಇದೇ ವಿಷಯವನ್ನು ಇನ್ನೊಂದು ರೀತಿಯಿಂದ ನೋಡಿ ಶ್ರೀ "ಎಚ್ಚೆಸ್ಕೆ"ಯವರು "ಗಡ್ಡದ ಹಿರಿಮೆ" ಯನ್ನು ಬಹು ರಮ್ಯವಾಗಿ ಕೊಂಡಾಡಿದ್ದಾರೆ.

## ಕೆಲ ವಿಶೇಷ ಕಾಣಿಕೆಗಳು

ವಿದ್ವಾಂಸರೆಂದೂ ಹಿರಿಯ ವಿಮರ್ಶಕರೆಂದೂ ಖ್ಯಾತಿವೆತ್ತ ಶ್ರೀ ತೀ. ನಂ. ಶ್ರೀಕಂಠಯ್ಯನವರು ಇತ್ತೀಚೆಗೆ "ನಂಟರು" ಎಂಬ ತಮ್ಮ ಲಘು ನಿಬಂಧಗಳ ಸಂಗ್ರಹವನ್ನು ಪ್ರಕಟಿಸಿದ್ದಾರೆ. ಅದರಲ್ಲಿ ಶ್ರೀಕಂಠಯ್ಯನವರ ಹಾಸ್ಯದೃಷ್ಟಿ, ನಿರೂಪಣೆಯ ಲಘುಬಗೆ ಚೆನ್ನಾಗಿ ವ್ಯಕ್ತವಾಗಿವೆ. ಆ ನಿಬಂಧಗಳಲ್ಲಿ "ತಗುಣೆ" ಎಂಬುದನ್ನು ಸ್ವಲ್ಪ ಪರಿಶೀಲಿಸಬಹುದು. ಕೊಲ್ಲುವುದಕ್ಕೆಂದು ಹಾಕಿದ ಡಿ.ಡಿ.ಟಿ.ಯನ್ನೇ ಕುಡಿದು ಕೊಬ್ಬುವ ಸೊಳ್ಳೆಗಳ ಒಡನಾಡಿ ಈ ತಗುಣೆ. ಸೊಳ್ಳೆಗಳು ಸಂಗೀತವನ್ನು ಹೇಳಿಕೊಂಡಾದರೂ ಕಚ್ಚುತ್ತವೆ ; ಕ್ಲುಪ್ತ ಕಾಲಗಳಲ್ಲಿ ದಾಳಿಯಿಡುತ್ತವೆ. ಆದರೆ ತಗುಣೆಗೆ ಯಾವ ನಿರ್ಬಂಧವೂ ಇಲ್ಲ. ತಗುಣೆಯ ಅಜೇಯತೆಯನ್ನು ಹಾಸ್ಯಮಯವಾಗಿ ಬಣ್ಣಿಸುತ್ತ ಲೇಖಕರು—"ಯಾವ ವಾರಣಮಾರಣ ಕ್ರಿಯೆಗಳಿಗೆ ಜಗ್ಗದ ಗಟ್ಟಿಪಿಂಡ ತಗುಣೆ. ಅದು ರಕ್ತಬೀಜಾಸುರನ ಸಂತತಿ—ಒಂದು ಕೆಳಕ್ಕೆ ಬಿದ್ದರೆ ಅದರ ಜಾಗದಲ್ಲಿ ಹತ್ತು ಉದ್ಭವಿಸುತ್ತವೆ" ಎನ್ನುತ್ತಾರೆ. ಅವರದೇ ಇನ್ನೊಂದು ಅವಿಸ್ಮರಣೀಯ ನಿಬಂಧವೆಂದರೆ "ನೆಗಡಿ" ಎಂಬುದು. ಸಣ್ಣದಾದರೂ ತುಂಬ ತೊಂದರೆಕೊಡುವ ಈ ಸರ್ವಸಾಮಾನ್ಯ ರೋಗದ ತೊಂದರೆಗಳನ್ನೆಲ್ಲ ಹಾಸ್ಯಮಯವಾಗಿ ಬಣ್ಣಿಸಿ, ಆಮೇಲೆ ಈ ನೆಗಡಿಯನ್ನು ನಿವಾರಿಸುವ ತಮ್ಮ ಪ್ರಯತ್ನಗಳೆಲ್ಲ ಹೇಗೆ ವಿಫಲವಾಡುವು ಎಂಬುದನ್ನು ಅಷ್ಟೇ ವಿನೋದಮಯವಾಗಿ ನಿರೂಪಿಸಿದ್ದಾರೆ. ಕೊನೆಗೆ ಇದರ ನಿವಾರಣೋಪಾಯದ ಬಗ್ಗೆ ಲೇಖಕರು ಈ ಅನಿವಾರ್ಯ ನಿರ್ಣಯಕ್ಕೆ ಬಂದಿದ್ದಾರೆ. "ನೆಗಡಿಗೆ ಚಿಕಿತ್ಸೆ ಮಾಡಿದರೆ ಒಂದು ವಾರದಲ್ಲಿ ಗುಣವಾಗುತ್ತದೆ. ಹಾಗೆಯೇ ಬಿಟ್ಟರೆ ಏಳು ದಿನ ಬೇಕಾಗುತ್ತದೆ!"

ಶ್ರೀ. ಎ. ಎಸ್. ಮೂರ್ತಿರಾಯರು ಲಘುನಿಬಂಧ ಪ್ರಪಂಚದಲ್ಲಿ ತಮ್ಮ ಹೆಸರನ್ನು ಅಜರಾಮರವಾಗಿ ಮಾಡಿದ್ದಾರೆ. "ಹಗಲುಗನಸುಗಳು" ಎಂಬ ಅವರ ನಿಬಂಧ ಸಂಗ್ರಹದಲ್ಲಿಯ ಲಘುನಿಬಂಧಗಳ ಸೊಗಸನ್ನು ಅರಿಯದ ಯಾವ ಕನ್ನಡ ರಸಿಕನಿದ್ದಾನೆ ? ಅವರ "ಗಾಡಿಯ ಪ್ರಯಾಣ" ನಿಬಂಧದ ಅನುಭವ ನಿರೂಪಣೆ, ಕಾವ್ಯಮಯವಾದ ಶೈಲಿ ಇವುಗಳನ್ನು ಅನುಭವಿಸಿಯೇ ತಿಳಿಯಬೇಕು. ಮೂರ್ತಿರಾಯರ ನಿಬಂಧಗಳಲ್ಲಿ. Lamb, Hazlitt ಇವರ ನಿಬಂಧಗಳನ್ನು ಸರಿಗಟ್ಟುವ ಯೋಗ್ಯತೆ ಇದೆ ಎಂದು ಹೇಳಿದರೆ ಖಂಡಿತವಾಗಿ ಅತಿಶಯೋಕ್ತಿಯಲ್ಲ. ಅವರ "ಮಿನುಗು-ಮಿಂಚು" ಎಂಬ ಇನ್ನೊಂದು ನಿಬಂಧಸಂಗ್ರಹದಲ್ಲಿಯ "ಬೇಡದ ಅತಿಥಿಗಳು" ಎಂಬ ಲಘುನಿಬಂಧವು ಇಂದಿನ ನಾಗರಿಕತೆಯ ಗುಣದೋಷಗಳನ್ನು ಹಾಸ್ಯಮಯವಾಗಿ ಚಿತ್ರಿಸುತ್ತದೆ. "ಅತಿಥಿದೇವೋ ಭವ" ಎಂಬ ನಾಡಿನಲ್ಲಿ ಇಂದು ಬೇಡದ ಅತಿಥಿಗಳು ಅನೇಕರಾಗಿದ್ದಾರೆ. ಇದಕ್ಕೆ ಏರುತ್ತಿರುವ ಬೆಲೆಗಳು, ಮಧ್ಯಮವರ್ಗದ ಆರ್ಥಿಕ ಮುಗ್ಗಟ್ಟು ಇವೆಲ್ಲ ಕಾರಣವಾಗಿವೆ ಎಂದು ವಿವರಿಸುತ್ತ ಕೊನೆಗೆ ಬೇಡದ ಅತಿಥಿಗಳಿಗೆ ಹೀಗೆ ಆಮಂತ್ರಣ ಕೊಡಬಹುದೆಂದು ಸೂಚನೆಯನ್ನಿತ್ತಿದ್ದಾರೆ:— "ಖಂಡಿತ ಬನ್ನಿ. ನಮ್ಮ ಮನೆಯಿರುವುದೇನೋ ಬೆಂಗಳೂರಿನ ಒಂದು ಕೊನೆಯಲ್ಲಿ, ಬಸ್ಸುಗಳ ಅನುಕೂಲ ಅಷ್ಟಾಗಿ ಇಲ್ಲ, ನಿಮಗಿರುವ ನೂರೆಂಟು ಕೆಲಸಗಳಲ್ಲಿ ಬರುವುದಕ್ಕೆ ಸಾಧ್ಯವಾಗುತ್ತದೆಯೋ, ಇಲ್ಲವೋ ಕಾಣೆ. ಆದರೂ ನೀವು ಬರುವುದಾದರೆ ನನಗೆ ಸತ್ಯವಾಗಿಯೂ ಸಂತೋಷ,"

ಶ್ರೀ. ವಿ. ಸೀತಾರಾಮಯ್ಯನವರು ಅನೇಕ ಸಾಹಿತ್ಯರೂಪಗಳಿಗೆ ತಮ್ಮ ಕಾಣಿಕೆಯನ್ನಿತ್ತಂತೆ ಲಘುನಿಬಂಧವನ್ನೂ ಅವರು ಕಡೆಗಣಿಸಿಲ್ಲ. ''ಮಳೆ''ಯ ಬಗ್ಗೆ ಅವರು ಬರೆದ ನಿಬಂಧ ನಿಜವಾಗಿಯೂ ತುಂಬಾ ಸರಸವಾಗಿದೆ, ಹೃದ್ಯವಾಗಿದೆ. ಮಳೆಯ ನಾನಾಪ್ರಕಾರಗಳು, ಅದರ ಪರಿಣಾಮ, ಅದರ ಸುಖ-ದುಃಖ—ಎಲ್ಲವನ್ನೂ ಸರಸವಾಗಿ ವಿ. ಸೀ. ಯವರು ಬಣ್ಣಿಸಿದ್ದಾರೆ. ಮಳೆ

ಗಾಲದ ದಿನಗಳಲ್ಲಿ "ಕೊಡೆ, ಮಳೆಯಾಗಿ ಕೈಯಲ್ಲಿ ತೆಗೆದುಕೊಂಡು ಹೋದ ದಿನವಂತೂ ಖಂಡಿತ ಮಳೆ ಬರುವುದೇ ಇಲ್ಲ" ಎಂಬ ಮಾತು ಸನಾತನ ಸತ್ಯವಾಗಿದೆ ವಿ.ಸೀ. ಯವರ ಇನ್ನೊಂದು ಸುಪ್ರಸಿದ್ಧ ಹರಟೆಯೆಂದರೆ— "ಮೈಸೂರು ರುಮಾಲು." ಇದರಲ್ಲಿ ಲೇಖಕರು ಹೇಳುತ್ತಾರೆ– "ಚೆನ್ನಾಗಿ ರುಮಾಲನ್ನು ಕಟ್ಟಿದವರನ್ನು ಕಂಡರೆ ಎಲ್ಲರೂ ಬನ್ನಿ ಎಂದೆನ್ನುತ್ತಾರೆ. ಯಾವ ಅಂಗಡಿಯಲ್ಲೇ ಆಗಲಿ, ಬ್ಯಾಂಕಿನಲ್ಲಾಗಲಿ ಸಾಲ ಹುಟ್ಟುತ್ತದೆ. ಸಾಲ ತೀರಿಸದಿದ್ದರೂ ಪರವಾಯಿಲ್ಲ; ಈ ರುಮಾಲು ನಂಬಿಕೆ ಉಳಿಸುತ್ತದೆ. ಕೊನೆಗೆ ಟಿಕೆಟ್ ಕಲೆಕ್ಟರರು ನಿಮ್ಮ ಕೂಡ ನಿಮ್ಮ ಗೊಡವೆಗೆ ಬಾರದೆ, ನೀವು ಮೂರನೇ ಕ್ಲಾಸಿನ ಟಿಕೆಟ್ ಪಡೆದುಕೊಂಡು ಮೊದಲನೆಯ ಕ್ಲಾಸ್ ಗಾಡಿಯಲ್ಲಿ ಮಲಗಿ ನಿದ್ರೆ ಮಾಡುತ್ತಾ ಪ್ರಯಾಣ ಮಾಡಿದರೂ ನಿಮಗೆ ತೊಂದರೆ ಕೊಡದೆ ಹೊರಟು ಹೋಗುತ್ತಾರೆ."

## ಹಾಸ್ಯ ಪ್ರಬಂಧಗಳು

ವರಕವಿಗಳಾದ ಶ್ರೀ. ಬೇಂದ್ರೆಯವರು ಹರಟೆಮಲ್ಲರಾದಾಗ ಅವರ ತಿಳಿಹಾಸ್ಯದ ರೀತಿ– ನೀತಿಯ ಪರಿಚಯ ನಮಗಾಗುತ್ತದೆ. ಅವರ ಹಾಸ್ಯ ಪ್ರಬಂಧಗಳಲ್ಲಿ ಹೊಸ ಹೊಸ ದೃಷ್ಟಿಕೋನಗಳೂ —ಮಾನವ ಸ್ವಭಾವದ ಲೋಪ ದೋಷಗಳೂ ಸಹೃದಯತೆಯಿಂದ ಅಭಿವ್ಯಕ್ತಿಯನ್ನು ಪಡೆದಿವೆ. ಅವರ ನಗೆಯು ನಕ್ಕು ನಗೆಸುವ ಬಗೆಯದು. "ಸಾವಿನ ಕೂಡ ಸರಸ" ಎಂಬ ಅವರ ಹರಟೆಯಲ್ಲಿ ಅವರು ತಾವೊಬ್ಬ ಆಜನ್ಮರೋಗಿಯೆಂದು ಕಲ್ಪಿಸಿಕೊಂಡು ಹೀಗೆ ರೋಗಿಯಾಗಿ ನರಳುವುದಕ್ಕಿಂತ ಆತ್ಮಹತ್ಯೆ ಮಾಡಿಕೊಳ್ಳುವುದೇ ಮೇಲೆಂದು ನಿಶ್ಚಯಿಸಿ ಆತ್ಮಹತ್ಯೆಯ ಅನೇಕ ಪ್ರಯೋಗಗಳನ್ನು ನಡೆಸಿದರು. ಉಸಿರು ಬಲವಾಗಿ ಎಳೆದಾಡಿ ನೋಡಿದರು; ಆದರೆ ಅದರಿಂದ ಪ್ರಾಣಾಯಾಮವಾಗಿ, ಪ್ರಾಣ ಹೋಗುವ ಬದಲು ಆಯುಷ್ಯ ಹೆಚ್ಚಾಗುವ ಲಕ್ಷಣ ಕಂಡುಬಂದವು. ಉರುಲು ಹಾಕಿಕೊಳ್ಳುವ ಪ್ರಯತ್ನ, ಗುಂಡು ಹಾಕಿಕೊಳ್ಳುವ ಪ್ರಯತ್ನ, ವಿಷಪ್ರಯೋಗ, ಬಾವಿಯಲ್ಲಿ ಹಾರಿಕೊಳ್ಳುವುದು— ಎಲ್ಲಾ ವಿಚಾರಮಾಡಿಯಾಯಿತು. ಕೊನೆಗೆ ಆದ ಚಮತ್ಕಾರವೇನಂದರೆ ರೋಗವೆಲ್ಲ ಮಾಯವಾಗಿ ಪ್ರಕೃತಿ ಸುಧಾರಿಸಿತು. ಆದ್ದರಿಂದ ಕೊನೆಗೆ ಲೇಖಕರು ಹೇಳುತ್ತಾರೆ— "ಸಾವೂ, ನಾನೂ ಗೆಳೆಯರು; ಒಬ್ಬರ ದ್ವೇಷ ಒಬ್ಬರಿಗಿಲ್ಲ. ಕೆಲವರ ಸರಸ ವಿರಸವಾಗುವುದು; ನನ್ನ ಸರಸ ಸರಸತರವಾಯಿತು" – ಎಂದು. ಶ್ರೀ ಬೇಂದ್ರೆಯವರ "ಸಾವಿನ ಕೂಡ ಸರಸ" ನಿಬಂಧವು ನಿಜವಾಗಿಯೂ ಸರಸತಮವಾಗಿದೆ.

ಇದೇ ಬಗೆಯ ವಿಷಯವನ್ನಿಟ್ಟುಕೊಂಡು ಖ್ಯಾತ ಸಾಹಿತಿಗಳಾದ ಶ್ರೀ. ಅ. ನ. ಕೃಷ್ಣರಾಯರು "ಆತ್ಮಹತ್ಯಾಯೋಗ" ಎಂಬ ನಿಬಂಧ ಬರೆದಿದ್ದಾರೆ. ಅದೇ ರೀತಿ ಶ್ರೀರಂಗರು ಜೀವಿಸಿರುವಾಗಲೇ ಸತ್ತು "ಸ್ವಂತ ಶ್ರಾದ್ಧ"ವನ್ನು ಮಾಡಿಕೊಂಡು ಬಿಟ್ಟಿದ್ದಾರೆ—ಎಂದರೆ "ಸ್ವಂತ ಶ್ರಾದ್ಧ" ಎಂಬ ಸೊಗಸಾದ ನಿಬಂಧ ರಚಿಸಿದ್ದಾರೆ. ಅದರಲ್ಲಿ ಅವರು ತಮ್ಮನ್ನೇ ತಾವು ಕಾಣುವ ಪ್ರಯತ್ನ ಮಾಡಿದ್ದಾರೆ, ಯಶಸ್ವಿಯೂ ಆಗಿದ್ದಾರೆ.

ಕನ್ನಡದ ಹಿರಿಯ ಲೇಖಕರಾದ ಶ್ರೀ ಮಾಸ್ತಿಯವರ "ಶಾಂತಿ" ಎಂಬ ನಿಬಂಧದಲ್ಲಿಯೂ, ಶ್ರೀ ವಿ. ಕೃ. ಗೋಕಾಕರ "ಕೋಗಿಲೆ" ಎಂಬ ನಿಬಂಧದಲ್ಲಿಯೂ, ಡಾ. ರಂ. ಶ್ರೀ. ಮುಗಳಿಯವರ "ನಾದುರಸ್ತ" ಎಂಬ ಹರಟೆಯಲ್ಲಿಯೂ ಭಿನ್ನ ಭಿನ್ನ ರೀತಿಯ ದೃಷ್ಟಿಕೋನ, ಶೈಲಿವೈವಿಧ್ಯ, ರಸಲೀಲೆಗಳನ್ನು ಕಾಣುತ್ತೇವೆ.

ಮಾನವಸಹಜವಾದ ದೌರ್ಬಲ್ಯ, ಲೋಪ ದೋಷಗಳನ್ನು ಸೂಕ್ಷ್ಮವಾಗಿ ನಿರೀಕ್ಷಿಸಿ, ಅವುಗಳ ಯಥಾರ್ಥವಾದ ಚಿತ್ರವನ್ನು ಹಾಸ್ಯಮಯವಾಗಿ ಕೊಡುವುದೂ ಕೆಲ ಲಘುನಿಬಂಧಕಾರರ ರೀತಿಯಲ್ಲಿ ಕಂಡುಬರುತ್ತದೆ. ಇಂಥ ನಿಬಂಧಕಾರರಲ್ಲಿ ಲಾಂಗೂಲಾಚಾರ್ಯರು, ಬೀಚಿ, ನಾ. ಕಸ್ತೂರಿ, ರಾ. ಶ್ರೀ, ನಾಡಿಗೇರ ಮೊದಲಾದವರು ಅಗ್ರಗಣ್ಯರಾಗಿದ್ದಾರೆ. ಬೀಚಿಯವರು ಸೃಷ್ಟಿಸಿದ ತಿಂಮನ ವಿಚಿತ್ರ ಅನುಭವಗಳು ಲೋಕದ ಡಾಂಭಿಕತನ, ಒಣ ಹೆಮ್ಮೆ, ಪ್ರತಿಷ್ಠಾಪ್ರಿಯತೆ ಮೊದಲಾದ ಅಸಂಖ್ಯ ದೌರ್ಬಲ್ಯಗಳಿಗೆ ಹಿಡಿದ ಕನ್ನಡಿಯಾಗಿವೆ. ನಾ. ಕಸ್ತೂರಿಯವರ ಹಾಸ್ಯಪ್ರಬಂಧಗಳು ನಗಿಸುತ್ತಲೆ ಚುಚ್ಚುತ್ತವೆ. "ಡೊಂಕುಬಾಲ" ಎಂಬ ಸಂಗ್ರಹದಲ್ಲಿಯ ಅವರ ಒಂದು ನಿಬಂಧ— "ಹೀಗೂ ಒಬ್ಬರು!" ಎಂಬುದರಲ್ಲಿ ಪ್ರತಿಯೊಂದಕ್ಕೂ ಸಂದೇಹವೆತ್ತುವ ಒಬ್ಬ ವ್ಯಕ್ತಿಯ ಚಿತ್ರವನ್ನು ಓದಿದವರಾರೂ ಮರೆಯದಂತೆ ಚಿತ್ರಿಸಿದ್ದಾರೆ. ಅದೇ ಸಂಗ್ರಹದಲ್ಲಿಯ—"ನಾಯಿಗಳಿವೆ. ಎಚ್ಚರಿಕೆ" ಎಂಬ ನಿಬಂಧದಲ್ಲಿ ಯಾವ ಪ್ರಸಂಗದಲ್ಲಿಯೂ ಸೋಲನ್ನೊಪ್ಪದ ವಿಮಾ ಏಜೆಂಟನೊಬ್ಬನ ಚಿತ್ರವನ್ನು ಕೊಟ್ಟಿದ್ದಾರೆ.

ಹೀಗೆ ಕನ್ನಡದಲ್ಲಿ ನಿಬಂಧ ರೂಪವು ಅನೇಕ ಮುಖವಾಗಿ ಬೆಳೆದಿದೆ, ಬೆಳೆಯುತ್ತಲಿದೆ. ಈ ಸಾಹಿತ್ಯರೂಪವು ಯಶಸ್ವಿಯಾಗಲು ನಿಬಂಧಕಾರರಲ್ಲಿ ಜೀವನಾನುಭವ, ಆ ಅನುಭವವನ್ನು ಸಾಹಿತ್ಯವಾಗಿಸುವ ಕೌಶಲ್ಯ, ಓದುಗರನ್ನು ಆಕರ್ಷಿಸುವ ವ್ಯಕ್ತಿತ್ವ, ನಿರೂಪಣೆಯಲ್ಲಿಯ ಸಹಜ ರಮ್ಯತೆ ಮೊದಲಾದ ಗುಣಗಳು ಅತ್ಯವಶ್ಯವಾಗಿವೆ. ಇಂಥ ವೈಶಿಷ್ಟ್ಯಗಳನ್ನು ಮೈಗೂಡಿಸಿಕೊಂಡು ನಮ್ಮ ನಿಬಂಧಕಾರರು ಬರೆಯುವ ನಿಬಂಧಗಳು ಇಂಗ್ಲಿಷ್ ಪ್ರಬಂಧಗಳ ಸರಿಜೋಡಿಗೆ ಬರಲಿ, ಅವುಗಳನ್ನು ಮೀರುವ ಸತ್ತ್ವವನ್ನು ಪಡೆಯಲಿ ಎಂದು ಹಾರೈಸಬಹುದೆ?

ooooooooooooooooooooooo



ಮಾತಿನ ಭರಾಟಿಯಲ್ಲಿ ಗೊಳ್ಳನೆ ನಗು ಬಂದಾಗ

ಪಾಂಡಪ್ಪನಂಥ ಪ್ರೋಸ್ಪಮನ್‌ನಿಗೆ ಇನ್ನೂ ಗಟ್ಟಿಮುಟ್ಟಾಗಿರುವ ವ್ಯಕ್ತಿಗೆ ಇಷ್ಟು ಬೇಗ ಪೆನ್ಶನ್ ಹೇಗಾಯಿತು ಎಂದೇ ಆ ಊರವರಿಗೆ ಸಂಶಯ. ಅದು ಏನಾದರೂ ತಪ್ಪಿದ್ದಲ್ಲ ಎಂದಾಗ 'ನ ಭೂತೋ ನ ಭವಿಷ್ಯತಿ' ತೆರದಿ ಅವನಿಗೆ ಸತ್ಕಾರ ನಡೆಸಿಯೇ ಬಿಟ್ಟರು ಆ ಊರವರು. ಆದರೆ ಪಾಂಡಪ್ಪನಿಗೆ ಮಾತ್ರ ತಾನು ಪೆನ್ಶನ್ ಪಡೆದವ ಎಂದು ಅನಿಸುವದಿಲ್ಲ. ವ್ಯಕ್ತಿಪ್ರಧಾನವಾದ ಈ ಕತೆ ಕುತೂಹಲಕಾರಿಯೂ ಆಗಿದೆ.

# ಪಾಂಡಪ್ಪನಿಗೆ ಪೆನ್‌ಶನ್ ಆಯಿತು

ಪಾಂಡಪ್ಪನಿಗೆ ಪೆನ್‌ಶನ್ ಆದ ವಾರ್ತೆ ಸಂಯುಕ್ತ ಕರ್ನಾಟಕದಲ್ಲಿ ಬಂದಿಲ್ಲ. ಹುಡುಕಿ ನೋಡುವ ಗೋಜಿಗೆ ಹೋಗಬೇಡಿರಿ. ಅನ್ಯ ಯಾವ ಸಣ್ಣ—ದೊಡ್ಡ ಪತ್ರಿಕೆಗಳಲ್ಲೂ ಇದು ಪ್ರಕಟವಾಗಿಲ್ಲ. ಸರಕಾರೀ ಗ್ಯಾಝಿಟ್ಟಿನಲ್ಲೂ ಬಂದಿಲ್ಲ. ಆದರೆ ಸರಕಾರೀ ಹುಕುಂ ಮಾತ್ರ ಬಂದಿದೆ. ಅದೂ ಅಂಚೆಯುವೆಚ್ಚವಿಲ್ಲದೆ. ಅಂಚೆ ಖಾತೆಯು ಟಪಾಲು ಚೀಲದಲ್ಲಿ- ಬಂಧಿಸ್ಥವಾದ ಲಖೋಟಿಯಲ್ಲಿ ಮಾತ್ರ ಬಂದದ್ದು ನಿಜ.

ಗೋವಿಂದ ಮಾಸ್ತರರು ನಿತ್ಯದಂತೆ ಟಪಾಲು ಒಡೆದು ನೋಡುತ್ತಿದ್ದಾಗ, ಈ ನ ಭೂತೋ ನ ಭವಿಷ್ಯತಿ ವಾರ್ತೆ, ಅವರ ಕಂಣಿಗೆ ಬಿದ್ದು, ಅವರಿಗೇ ಬವಳಿ ಬರುವಂತಾಯಿತು. ಪಾಂಡಪ್ಪನಿಗೆ ಪೆನ್‌ಶನ್ ಆಯಿತೆಂದರೇನು ? ಅಂಚೆಯ ಖಾತೆಯಲ್ಲಿ ಏನೋ ಗದ್ದಲವಾಗಿದೆ. ಛೇ ಹೀಗಾಗುವದು ಅಶಕ್ಯ. ಪಾಂಡಪ್ಪ ಇನ್ನೂ ಅಗಸೆಯ ಮುಂದಿನ ಬೋರ್ಗಲ್ಲಿನಂತೆ ಗಟ್ಟಿಮುಟ್ಟಾಗಿದ್ದಾನೆ. ಐವತ್ತೈದು ವರುಷವಾದರೇನಾಯಿತು? ಬೇಡ—ಅರುವತ್ತಾಗಿರಬೇಕು! ಹಾಂ... ಮೂವತ್ತು ವರ್ಷದ ಸರ್ವೀಸ ಆಯಿತೆಂದೇ ? ಅದೂ ಅಲ್ಲ. ಏನೋ ಗದ್ದಲ... ಏನೋ ತಿಪಲು... ಇಲ್ಲಿ ಏನೋ ಯಾರದೋ... ಅದೇಕೆ, ಅಂಚೆಯ ಖಾತೆಯಲ್ಲಿಯೇ ಏನೋ ತಪ್ಪಾಗಿದೆ...

"ಪಾಂಡೂ..." ಗೋವಿಂದಮಾಸ್ತರರು ಅನುಮಾನಿಸುತ್ತ ಏನೋ ಹೇಳಬೇಕೆಂದು ಪಾಂಡಪ್ಪ ನಾಮೋಚ್ಚರಣೆ ಮಾಡಿದರು.

"ಗೋವಿಂದ ಮಾಸ್ತರ್, ಇಕಾ, ನಾ ಬಟವಡೇಕ್ಕ ಹೊಂಟೆ. ಹತ್ತ ಬಡದು ಹೋತು"

ಹೆಗಲಿಗೆ ಟಪಾಲು ಚೀಲವೇರಿಸಿ. ಕೈಯಲ್ಲಿ ಅಂಚೆಯ ಕಾರ್ಡು—ಪಾಕೀಟುಗಳ ಕಟ್ಟನ್ನು ಹಿಡಿದುಕೊಂಡು, ಉತ್ತರಿಸುತ್ತಿದ್ದಂತೆಯೇ, ಪಾಂಡಪ್ಪ ಪೋಸ್ಟಆಫೀಸಿನ ತಲೆಬಾಗಿಲನ್ನು ದಾಟಿ ಬೀದಿಗಿಳಿದು ಬಿಟ್ಟ. ಗೋವಿಂದ ಮಾಸ್ತರರು ಅವನು ಹೋದ ದಿಕ್ಕನ್ನು ನೋಡುತ್ತ ಶೂನ್ಯ ಮನಸ್ಥಿತಿಯಲ್ಲಿ, ಪೆನ್‌ಶನ್ ಹುಕುಮಿನ ಆ ಅರ್ಜಹಾಳೆಯನ್ನು ಕೈಯಲ್ಲಿ ಹಿಡಿದುಕೊಂಡು ಶಿಲಾಪ್ರತಿಮೆಯಂತೆ ಕುಳಿತುಬಿಟ್ಟರು. ಗೋವಿಂದಮಾಸ್ತರರ ಕಸಿವಿಸಿ ಗಂಟಲವರೆಗೂಬಂದು ಗದ್ದಲ ಮಾಡತೊಡಗಿತು. ಧೋತರ ಚುಂಗಿನಿಂದ ದಳದಳ ಸುರಿಯುವ ಕಂಣೀರನ್ನು ಒರಸಿಕೊಂಡರು ತಮ್ಮ ಮಗ ಶ್ಯಾಮನನ್ನು ಕೂಗಿ ಕರೆದು—

"ಇದ್ನೋಡು ಶ್ಯಾಮಾ, ಈಗಿಂದೀಗs ಗೌಡರ ಮನೀಗೆ ಹೋಗಿ ಹೇಳಿ ಬಾ. ಪಾಂಡಪ್ಪಗ ಪೇನ್‌ಶನ್ ಆದ ಹುಕುಂ ಬಂದsದಂತ. ಹಾಂಗs ಚಾವಡೀಮ್ಯಾಲ ಹಾದು ಕುಲಕರ್ಣಿ ರಂಗಂಣಗೂ ಸುದ್ದೀ ಮುಟ್ಟಿಸು. ನಿಂಗಪ್ಪಮಾಸ್ತರು-ಗಣಪ್ಪ ಮಾಸ್ತರು, ಮನ್ಯಾಗನs ಇರಬೇಕು. ಅವರಿಗೂ ತಿಳಿಸು. ಏನಂತ ಹೇಳತೀ. ? ಪಾಂಡಪ್ಪಗ ಪೇನಶನ್ ಆತಂತs... ಇದೇ ಈಗ ಹುಕುಂ ಬಂದsದಂತ! ತಿಳೀತಿಲ್ಲೋ ? "

ಎಂದು ಎರಡೆರಡು ಸಾರೆ ಬಜಾಯಿಸಿ ಹೇಳಿದರು.

ಭಕ್ಕರಿಗೆ ಹಿಟ್ಟು ನಾದುತ್ತಿದ್ದ ಗೋವಿಂದ ಮಾಸ್ತರರ ಯಜಮಾನತಿ ಹಿಟ್ಟಿನ ಕೈಯಿಂದಲೇ ಅಡುಗೆಯಮನೆಯಿಂದ ಧಾವಿಸಿ ಬಂದು.

"ಏನಾತಂದರಿ ? ಪಾಂಡಪ್ಪಗ ಪೇನಶನ್ ಆತs ? ಎಂದಿನಿಂದ ? ಇದೇನ ಸುದ್ದಿ ಹೇಳಿದಿರಿ ಮುಂಜಾನೀ ಕ್ಯಾಲೇ? ಖರೇನೋ ಸುಳ್ಳೋ ನೆಟ್ಟಗ ನೋಡರಿ. ಮತ್ತೇನರs ಇದ್ದೀದ್ದೀತಾದೀತು. ಅಧ್ಯಾಂಗ ಇಷ್ಟ ಲಗೂನ ಪೇನ್‌ಶನ ಆದೀತು?"

ಯಜಮಾನರ ಮುಂದ ಯಕ್ಷಪ್ರಶ್ನೆ ಮಾಲಿಕೆಯನ್ನೇ ಒಡ್ಡಿದರು.

"ನನಗೂ ಅದs ಸಂಶಯಾ ? ಆದರೇನು ಮ್ಯಾಲಿಂದ ಹುಕುಂ ಬಂದದ್ದೇನು ಸುಳ್ಳೇನು ? ಚಕ್ಕ ಬರದ ಬಂದsದ. "

ಗೋವಿಂದಮಾಸ್ತರರು ಹುಕುಂ ಬಂದ ನಿಚ್ಚಳ ಆಧಾರ ತೋರಿಸಿದರು.

ಕಾರ್ಡುಖರೀದಿಗೆಂದು ಬಂದ ಗಾಣಿಗರ ಗಂಗಪ್ಪ. ಗಂಡ-ಹೆಂಡಿರ ಮಾತು ಕೇಳುತ್ತ ನಿಂತವ ಕಾರ್ಡುಖರೀದಿಯ ವಿಚಾರವನ್ನೇ ಮರೆತು, "ಪಾಂಡವ ಪ್ರತಾಪ"ದ ವರ್ಣನೆಗೆ ಮೊದಲು ಮಾಡಿದ.

ಗಾಣಿಗರ ಗಂಗಪ್ಪ ಕಾರ್ಡುಖರೀದಿಯನ್ನು ಬಿಟ್ಟು ನಡೆದ. ಅವನು ತಲೆಬಾಗಿಲನ್ನು ದಾಟಿರಲಿಲ್ಲ--ಗೌಡರು ಕುಲಕರ್ಣಿ ರಂಗಣ್ಣ-ನಿಂಗಪ್ಪ-ಗಣಪ್ಪಮಾಸ್ತರರು ಒಟ್ಟಾಗಿಯೇ ಬಂದರು. ಒಂದೇ ಉಸುರಿನಲ್ಲಿ—

''ಗೋವಿಂದಮಾಸ್ತsರ, ಏನು ಸುದ್ದೀ ಹೇಳಿ ಕಳಿಸಿದ್ರ್ಯಪಾ, ಬೆಳಗ ಹರಿಯೂದ್ರಾಗ. ಛೇ... ಛೇ... ಛೇ... ಛೇ... ಅನ್ಯಾಯರೆಪಾ ಇದು.''

ದುಃಖವನ್ನು ವ್ಯಕ್ತಪಡಿಸಿದರು, ಎಪ್ಪತ್ತರ ಸನಿಯಕ್ಕೆ ಬಂದ ಗೌಡರು, ಚಕ್ಕಳ-ಮುಕ್ಕಳಿ ಹಾಕಿ ಕುಳಿತುಕೊಳ್ಳುತ್ತ-

"ನನ್ನ ಹಯಾತ್ಯಾಗ ಪಾಂಡಪ್ಪಗ ಪೇನಶನ್ ಆದೀತಂತ ಅನಿಸಿರಲಿಲ್ಲ ತಗೀರಿ. ಏನ ಸಾಲಾಸ ಮನಸ್ಯಾ. ಥೇಟ ಧರ್ಮರಾಜಾ."

ಪಾಂಡಪ್ಪನ ತಾರೀಫಿಗೆ ಮೊದಲು ಮಾಡಿದರು.

''ಧರ್ಮರಾಜನಂಥಾವಗೂ ನರಕದರ್ಶನ ತಪ್ಪಲಿಲ್ಲಂತ ಕೇಳಿರಿಲ್ಲೋ ಪುರಾಣದಾಗ, ಹಾಂಗ ಏನ್ರ್ಯಪಾ ಈ ಪೇನಶನ್ ಅಂದರ.''

ನವಕರಿಯಲ್ಲಿಯ ಅನುಭವ—ಪುರಾಣದ ಅರೆಗಚ್ಚಿಜ್ಞಾನವನ್ನು ಹೂಣಿಸಿ ಬಾಣಪ್ರಯೋಗ ಮಾಡಿದರು, ಗಣಪ್ಪಮಾಸ್ತರರು.

"ಶಿವ ಶಿವ ಶಿವ ಶಿವ ಶಂಭೋ."

ಮಾತನಾಡಿ ಪ್ರಸಂಗ ಗಾಂಭೀರ್ಯವನ್ನು ಕಲಕಬಾರದೆಂದು ಪೋಕ್ತ ವಿಚಾರದಿಂದ, ಕೇವಲ ಶಿವನಾಮೋಚ್ಚರಣೆಯ ಜಾಗಟೆ ಬಾರಿಸಿದರು ಲಿಂಗಪ್ಪ ಮಾಸ್ತರರು. ಕುಲಕರ್ಣಿ ರಂಗಂಣ ಮೌನ ಮುರಿದು ಮಾತನಾಡಿದ—

''ಗೌಡರs-ಮಾಸ್ತsರ, ಪಾಂಡಪ್ಪನ ವಯಸ್ಸ ಆದ ದಾಖಲೇ ಸರಕಾರದ ಕಡೇ ಇರಲಿಕ್ಕೇ ಬೇಕು. ಅಂತನೇ ನೌಕರೀ ಅವಧೀ ಮುಗದ ಮ್ಯಾಲs ಪೇನಶನ್ ಹುಕುಂ ಹೊರಡಸ್ಯಾರs. ಹೀಂಗ್ಯಾಕಂತ ಕೇಳಲಿಕ್ಕೆ ನಾವು ಎಷ್ಟರವರು? ಹೌದಂತಿರೋ—ಅಲ್ಲಅಂತೀರೋ ನನ್ನ ಮಾತು ಇದ ನೋಡಿರಿ. ಪಾಂಡಪ್ಪಾ, ಏಕೋ ಭಾವನಾದಿಂದ, ಮೂವತ್ತುವರ್ಷ ಚಾಕರೀ ಮಾಡಿದಾ ಪಗಾರೀ ಚಾಕರೀ ಚಾಕರದಾರರು ಎಷ್ಟು ಜನಾ ಇಲ್ಲಾ. ಆದರs ಪಾಂಡಪ್ಪನಂಥವರು ಸಾವಿರಕ್ಕ ಒಬ್ಬರು. ಅದೇನೂ ಇಲ್ಲಾs, ಈಗ, ಪಾಂಡಪ್ಪಗ ಈ ಊರಾವರ ವತೀಯಿಂದ ಸಾರ್ವಜನಿಕ ಸನ್ಮಾನ ಆಗಲಿಕ್ಕೇ ಬೇಕು. ತಲೀಮ್ಯಾಲಿನ ಮಾಸ ಹಾರಿರೂದಿಲ್ಲಾ-ಅಂಥಾ ಚೋಟಿ ಹುಡುಗಾ ಮಾಮಲೇದಾರಂತ ಬಂದರs, ಪಾನ-ಸುಪಾರಿ ಮಾಡತೇವಂತs. ಅಂವದು-ನಮ್ಮದು

---

ರಾಮಚಂದ್ರ ಕೊಟ್ಟಲಗಿ, ಧಾರವಾಡ.



ನಾತೇನರs, ನಾಕದಿನದ್ದು ಇರತ್ಸದ. ಇದು ಮೂವತ್ತುವರ್ಷದ ಋಣಾನುಬಂಧಾ. ಪಾಂಡ-ಪ್ಪನ ಸನ್ಮಾನ ಆಗಲಿಕ್ಕೇ ಬೇಕು. ಊರವರೆಲ್ಲಾ ಕೂಡಿ ಅಹೇರ ಕೊಡಲಿಕ್ಕೇಬೇಕು. ಏನಂತೀರಿ ನನ್ನ ಸೂಚನಾಕ್ಕ.''

''ಅಂ...ಹಾಂ...ಯಂಥಾ ಭಂಗಾರದಂಥಾ ಮಾತ ಹೇಳಿದಿ ರಂಗಂಣಾ. ತೆಲೀ ಅನಬೇಕು ನಿಂದs. ಇಕಾ, ನಾನs ಛೇರ್ಮನ್ನಾ ನನ್ನ ಚಂದಾ ಯಾಡ್ಡ ಅಂಕೀ ಇಪ್ಪತ್ತೈದಂತ ಬರೀ. ಕಾಸ ಹಡೀ ಮಂತ್ರೀಗೋಳ ಬಂದರs ಘುಕsಟ ರೊಕ್ಕಾ ಬಡೀತೇವಂತ. ಇವಾ ಅಂತೂ ನಮ್ಮ ಮನಸ್ಯಾ. ನಮ್ಮ ಚಾಕರೀನs ಮೂವತ್ತ ವರ್ಷದಿಂದ ಇಮಾಸಿಲಿಂದ ಮಾಡ್ಯಾನಂದ್ರ ಈಟೂ ಬ್ಯಾಡೇನು? ಮನೀಗೆ. ಒಂದು ರೂಪಾಯಿಥಾಂಗ ಪಟ್ಟೀ ಹಾಕಿದರೂ ತೆಲಿಬಡದ ಹೊಕ್ಕೈತಿ. ಮಾಸ್ತರ, ಹ್ಯಾಂಗೂ ಆಯಿತ್ವಾರ ದಿನಾ ಸಾಲಿಗಿ ಸೂಟೀ ಇರತೈತಿ- ಹುಡಗರ್ನ ಹಿಡೀರಿ. ಉರಾನ ಮಂದಿನ್ನೂ ಕೂಡಿಸರಿ. ರಾಮೇಶ್ವರ ಗುಡೀ ಮುಂದೆ ಮಸ್ತ ಹಂದರಾ ಹಾಕಸರಿ. ಹರ್‍ಯಾಗಿ-ನಿಂದ ಬಾಜಾ ಬಜಂತ್ರಿ ಸುರೂ ಇರಬೇಕು ನೋಡರಿ. ಹ್ಯಾಂಗೂ ಬಾಗವಾನರ ಬುಡ್ಡ್ಯಾನ ಗಾಡೀ ಐತಿ. ಸಭಾ ಮುಗದ ಮ್ಯಾಲs. ಪಾಂಡಪ್ಪನ ಮೆರವಣಗೀನೂ ತಗದ ಬಿಡೂಣು ಮತ್ತ ಈ ಸುದ್ದೀ ಕೇಳಿ, ಶಾರದವರು ದಂಗ ಬಡಿದಿರಬೇಕು, ಹಾಂಗ ಉತ್ಸಾಹ ಮಾಡೂಣು ಮನ-ಸ್ಯಾಗ ಪೇನ್‌ಶನ್ ಬಂದರ ಹೀಂಗ ಬರಬೇಕು ಅನ್ನೂದ್ನ ತೋರಸೂಣು.''

ಗೌಡರ ಮಾತು ಇನ್ನೂ ಮುಗಿದಿರಲಿಲ್ಲ.

''ಎಲಾs ಇವನs ಎಷ್ಟ ಹುಡಕಿದೆ ಗೌಡರs ನಿಮ್ಮನ್ನ ಉರತುಂಬೇ. ಇತ್ತಗೋರಿ ನಿಮ್ಮ ಕಾಗದಾ. ನಿಮ್ಮ ಹೆಸರಿನ ಕಾಗದಾ...ನಿಮ್ಮ ಕೈಯಾಗನs ಕೋಡೂದು-ಹೌಂಡತಿರೋ ಅಲ್ಲಂ-ತಿರೋ. ಹುಕುಂ ನಿಮ್ಮದು ಹಾಂಗೇ ಆಗೇದ.''

ಗೌಡರಿಗೆ ಕಾಗದ ಕೊಡುತ್ತ ಪಾಂಡಪ್ಪ ಹೇಳಿದ.

''ಮೂವತ್ತ ವರ್ಷ ಪಾಲಿಸಿದಿ ಮಗನ. ಚಾಚೂ ತಪ್ಪದs, ಪಾಂಡೂ ನಿನಗ ಪೆನ್‌ಶೀನ ಆತು. ನಾನೂ ಎಲ್ಲಾರಿಗೂ ತಿಳಿಸಿ ಬಿಡತೀನಿ. ಇನ್ನ ಪತ್ರಾ ಬರೀಬ್ಯಾಡರೀ ಅಂತs. ನನ್ನ ಕಾಗದಾ ನನಗೇ ಮುಟ್ಯಾವು ಅನ್ನೂ ಭರೋಸ ಇಲ್ಲ ನನಗ.''

ಗೌಡರು ಪತ್ರವ್ಯವಹಾರದ ಸಂನ್ಯಾಸ ಸ್ವೀಕರಿಸುವ ಆವಿರ್ಭಾವದಿಂದ ನುಡಿದರು.

''ಗಾಣಿಗ್ಯಾರ ಗಂಗಪ್ಪಾ ದಾರ್‍ಯಾಗನs ಕೂಡಿದ್ದಾ. ನನಗ ಪೇನಶನ್ ಆದ ಹುಕುಂ ಬಂದ್ಯದಂತ ಅವನೇ ಹೇಳಿದಾ. ಕಡೀ ಸೇವಾ ಇನ್ನ ಹತ್ತದಿನಾನೊ-ಹದನ್ನೈದುದಿನಾನೋ ಯಾರಿಗ್ಗೊತ್ತು? ಇರೂತನಕಾ ಅಲಗರ್ಜಿತನಾ ಆಗಬಾರದು. ನಿಮ್ಮ ಕಂಣ ಇದರಾನs ನವಕರೀ ಆತು. ಇಲ್ಲೇ ಸರ್ವೀಸ ಆತು. ನೀವೆಲ್ಲಾ ನನ್ನವರೂ ಅಂತs ನಾಕು ತಪ್ಪತಡೀ ಆಗಿದ್ದರ ನುಂಗಿಕೊಂಡು ಹೋದರಿ. ಇಲ್ಲೇ ಪೇನಶನ್ನೂ ಆತು. ಆತಲ್ಲಾs ಇನ್ನ ಚಾವಡೀಕಟ್ಟಿಗೆ ಬಿನ್ ಪಗಾರೀ ಹಜರೀ ಹಾಕಲಿಕ್ಕೆ ಮೋಕಳೀಕ ಆದೆ. ಇಲ್ಲೇ ಬರಬರತs ಮನೀಮ್ಯಾಲ ಹಾದ ಬಂದೆ. ನನ್ನ ಹೇಣತಿಗೆ ಪೇನಶನ್ ಆದ ಸುದ್ದೀ ತಿಳಿಸಿದೆ. ಅಗದೀ ಖುಷೀಲೇ ಹೇಳಿದ್ಲೇನರಿ. ''ಠೀಕಾತು. ಇನ್ನ ಪಡಸಾಲ್ಯಾಗಿನ ಜಾಗಾ ಸ್ವಚ್ಛ ಮಾಡತೀನಿ, ಬೈಠಕ ಹಾಕಲಿಕ್ಕೆ; ನಿಮ್ಮ ಮುಂದ ನಾನು ನನ್ನ ಮುಂದ ನೀವು, ಈರಣ್ಣನ ಮುಂದ ಬೀರಣ್ಣನ ಹಾಂಗs, ಮೂರೂ ಹೊತ್ತೂ ಕೂಡೂಣು. ಮೂವತ್ತು ವರ್ಷದ ಕಾಳಾಪಾಣೀ ಮುಗೀತು.''

''ಖರೇ ಹೇಳ್ಯಾಳ ಪಾಂಡೂ ನಿನ್ನ ಹೆಣತಿ. ಇನ್ ಹೊಸ ಸಂಸಾರ ಸುರೂ ಮಾಡು. ಹ್ಯಾಂಗೂ ನಿನ್ನ ಮೆರವಣಿಗಿ ತಗ್ಯಾವ್ರs ಇದ್ದೇವಿ. ಮದವೀ ಮೆರವಣಿಗೀನs ತಗಿಯೂಣು, ಗಂಡ್ಯಾs-ಹೆಣತಿನ್ನ ಕುಂಡರಸಿ. ಇದ ಬಲೇ ನೆಪ್ಪ ಮಾಡಿಕೊಟ್ಟಳು ನೋಡು ನಿನ್ನ ಹೆಣತಿ- ನಮಗ ಮರ್ತsಹೋಗಿತ್ತು ನಿನ್ನ ಹೇಣತೀ ಮಾತಾ. ನಡೀರಿ ಮಂಡಳೀ, ಮತ್ಯಾವ ಅನಮಾನಾ, ಇನ್ನ ಕೆಲಸಕ್ಕ ಹತ್ತೂಣು.''

× × × ×

ತಪ್ತಕಾಂಚನ ವರ್ಣ. ಮುಖದ ಮೇಲೆ ಹತ್ತೆಂಟು ಮೈಲಿಯ ಕಲೆ. ಆರು ಫೂಟು ಎತ್ತರ. ಒಂದು-ಒಂದೂ ಕಾಲು ಫೂಟು ಅಗಲ. ಅಷ್ಟೇ ಬೀಸು. ಬಿರುಸಾದ ಆಳು ಪಾಂಡುರಂಗ ಮಧ್ವ ಕುಲಕರ್ಣಿ, ಮೂವತ್ತು ವರುಷಗಳ

ಹಿಂದೆ, ಅಂಚೆಯ ಖಾತೆಯ ರೆಕಾರ್ಡಿನಲ್ಲಿ ಅವತರಿಸಿದ್ದ. ಪಾಂಡುರಂಗ ಮಧ್ವ ನಾಮ ಸರಕಾರಿ ರೆಕಾರ್ಡಿಗೆ ಭೂಷಣ. ಊರಲ್ಲೆಲ್ಲ ಅವನು ಪಾಂಡಪ್ಪನೆಂದೇ ಚಿರಪರಿಚಿತ. ಪಾಂಡಪ್ಪನ ಅಪ್ಪ. ಮಧ್ವ ನರಹರಿ ಕುಲಕರ್ಣಿ ರನರ್ ಎಂದು ಅಂಚೆಯ ಖಾತೆಯಲ್ಲಿ ಹತ್ತೂರು ಅಲೆದು ಟಪಾಲು ಹಂಚುವಾಗಲೇ ಒಂದುದಿನ "ಟಕ್" ಎಂದಿದ್ದ. ಆ ಟಪಾಲು ಚೀಲ ಭೂಪತಿತವಾದರೆ ತನ್ನ ಪಿತಾಜಿಯ ತಲೆ ಸಹಸ್ರ ಹೋಳಾದೀತೆಂಬ ಭೀತಿಯಿಂದಲೋ ಏನೋ. ಪಾಂಡಪ್ಪ, ಪಿತೃವಾಕ್ಯ ಪರಿಪಾಲನಾರ್ಥವಾಗಿ ಅದನ್ನು ಶಿರಸಾವಂದ್ಯನಾಗಿ ಎತ್ತಿಕೊಂಡ. ಅವನೇನಾದರೂ ಅನ್ಯಮನಸ್ಕನಾಗಿದ್ದರೆ, ಮಧ್ವನರಹರಿಗೆ ಕಾಕಪಿಂಡವಾಗದೆ, ಜಲಪಿಂಡಮಾಡುವ ದುರ್ಧರ ಪ್ರಸಂಗ ಬರಬಹುದಾಗಿತ್ತು. ಪಾಂಡುರಂಗ ಮಧ್ವನಿಗೆ ಅಂಚೆ ಖಾತೆಯಲ್ಲಿ ಕಾಯಂ ನವಕರಿ ಆಯಿತು. ಮಧ್ವನರಹರಿಗೆ ಸದ್ಗತಿಯಾಯಿತು.

ಮಧ್ವನರಹರಿ ಇನ್ನೂ ಹಯಾತನಿದ್ದಾಗ, ಅಂದರೆ--ಘನ ಎಡ್ವರ್ಡ ಬಾದಶಹರ ಸೇವೆಯಲ್ಲಿದ್ದಾಗ ಪಾಂಡಪ್ಪನ ಕಿವಿಯಲ್ಲಿ ಡಾಣಾಡಂಗುರವಾಗಿ ಗಾಯತ್ರಿಮಂತ್ರ ಊದುತ್ತಿದ್ದ—"ಪಾಂಡ್ಯಾ, ನಿನಗ ಒಂದ ಮಾತು ಹೇಳಿ ಇಟ್ಟಿರತೇನಿ ಏನಪಾ ಅಂದ್ರs, ಇಂಥಾ ಜವಾಬ್ದಾರೀ ಕೆಲಸಾ ಮಾಡೂದಕ್ಕ ಸಾಚಾತನಾ ಬೇಕಾಗತದ. ಯಾರ ಸಾವು-ಯಾರ ಜೀವಾ, ಈ ಚೀಲದಾಗ ಇರತಾಂವ ಅಂಬೂದರ ಕಲ್ಪನಾ ನಮಗ ಇರsತದ ಖರೇ. ಆದರೂ ಮನಸ್ಸಾ ನಿರ್ಲಿಪ್ತ ಭಾವನಾದಿಂದ ಇರಬೇಕು. ಕೈಯಾಗ ಟಪಾಲ ಚೀಲ ಅದs ಅಂದ್ರೇನು?-- ರಾಜ್ಯ ಮುಣಗಸಬಹುದು— ರಾಜ್ಯ ತೇಲಸಬಹುದು ಸಾವಿರ ಮಂಧಿ ಚೆಂಡಿಕಿ ನಮ್ಮ ಕೈಯಾಗ ಇರತಾವ. ಆದರs, ಒಂದ ಮಾತ ಹೇಳಿರತೇನಿ, ಏನಂದರs--ಚೆಂಡಕಿ ಕೈಯಾಗ ಅವs ಅಂತ ಜಗ್ಗ್ಯಾಡಬಾರದು."

ಆಗ ಇನ್ನೂ ಒಂದು-ಎರಡು ದುಡ್ಡಿನ-ತೀರ ಸಣ ಅಳತೆಯ ಕಾರ್ಡು ವಾರಕ್ಕೆ ಎಂಟೋ--ಹತ್ತೊ ನಮ್ಮೂರಿಗೆ ಬರುತ್ತಿರಬೇಕು. ಆದರೂ ಮಧ್ವ ನರಹರಿ ಘನ ಎಡ್ವರ್ಡ ಬಾದಶಹರ ಚರಣ ಸೇವಕ, ರಾಜ್ಯಗಳನ್ನೇ ಬುಡಮೇಲು ಮಾಡುವ ಆವಿರ್ಭಾವದಿಂದ, ಸುಪುತ್ರ ಪಾಂಡಪ್ಪನಿಗೆ ಕೈ ಸಾಚಾತನದ ಬಗ್ಗೆ ಸೂಕ್ಷ್ಮ ಸಲಹೆ ನೀಡುತ್ತಿದ್ದ. ಮಧ್ವನರಹರಿಯ ಏಕಮೇವಾದ್ವಿತೀಯ ಪುತ್ರ--ನಮ್ಮ ಪಾಂಡುರಂಗ ಮಧ್ವ, ಈ ಉಪದೇಶ ಕಾಷಾಯ ಕುಡಿದು ಕುಡಿದು ಸಾಚಾಪ್ರೂಫ ಆಗಿದ್ದನೆಂದರೆ ಅಚ್ಚರಿ ಏನಲ್ಲ. ಅವನು ಬಹಳ ಜನಕ್ಕೆ ತನ್ನ ಸಾಚಾ ಮಾದರಿಯನ್ನು ತೋರಿಸಿದ್ದಾನೆ. ನಾನೇ ಅದರ ಪ್ರತಾಪವನ್ನು ಅನುಭೋಗಿಸಿದ್ದೇನೆ.

ಒಮ್ಮೆ ದಾರಿಯಲ್ಲಿ ಹೋಗುತ್ತಿದ್ದಾಗ, ಪಾಂಡಪ್ಪ, ಅಂಚೆಯನ್ನು ಹಂಚುತ್ತ ಹೊರಟಿದ್ದವ, ನನ್ನನ್ನು ನೋಡಿ--

"ರಾಯರ, ನಿಮ್ಮ ಹೆಸರಲೇ ಒಂದ ಟಪಾಲದ--ಹಿಡೀರಿ"

ಎಂದ. ಆ ಟಪಾಲು ಬೇರೆ ಏನೂ ಇರದೆ-ಯಾವುದೋ ಒಂದು ಕಿಗ್ಗಳೆ ಮಾಸಿಕದ ಪ್ರತಿಯಾಗಿತ್ತು. ಅದನ್ನು ದೂರದಿಂದಲೇ ನೋಡಿ ತಾಡಿಸಿದ್ದ ನನಗೆ, ಈ ಕುಗ್ರಾಮ ಪತ್ರಿಕೆಯ ಮಾತಿಗೆ ಬಾರದ ಹೆಣವನ್ನು ಹೊತ್ತುಕೊಂಡು ಊರ ತುಂಬ ಯಾರು ಅಲೆದಾರು ಎಂಬ ವಿಚಾರ ಬಂದು, "ಪಾಂಡಪ್ಪಾ, ಟಪಾಲ ಕೊಡೂದು ಮನ್ಯಾಗ.ಹೀಂಗ ರಸ್ತೇದಾಗ ತರಬಿ ಕೊಟ್ಟರ ಹ್ಯಾಂಗನೋಡು" ಎಂದಿದ್ದೆ.

"ಠೀಕ ಅದs ರಾಯರs. ಮನ್ಯಾಗನs ಕೊಡತೀನಿ, ಆತರಾ," ಎಂದು ಪಾಂಡಪ್ಪ ಉತ್ತರಿಸಿದ್ದ.

ಆದರೆ ಈ ಮಾತು ಮರೆತುಹೋಗಿ ಬಹಳ ದಿನಗಳಾಗಿದ್ದವು. ಒಮ್ಮೆ ನನಗೆ ಅಗತ್ಯದ ಮ. ಆ. ಬರಬೇಕಾಗಿತ್ತು. ಅಂದಿನ ಟಪಾಲಿನಲ್ಲಿ ಬಂದದ್ದೂ ಗೊತ್ತಿತ್ತು. ಪಾಂಡಪ್ಪ, ನಿತ್ಯ ನೇಮದಂತೆ ದಾರಿಯಲ್ಲಿ ಕೂಡಿದ.

"ಪಾಂಡಪ್ಪಾ, ನಂದೊಂದು ಮನಿಯಾರ್ಡರ ಬರಬೇಕಾಗಿತ್ತು. ಬಂದsದಂತೆ. ಕೊಡತೀ ಏನು?" ಎಂದು ಕೇಳಿದೆ.

"ರಾಯರs, ಟಪಾಲು ಮನ್ಯಾಗನ ಕೊಡೂದಂತ ತಮ್ಮದೇ ಹುಕುಂ ಆಗೇದ. ರಸ್ತೇದಾಗ ಕೊಟ್ಟರ ಹ್ಯಾಂಗ ನೋಡರಿ."

ನಾನು ಒಗೆದಿದ್ದ ರಬ್ಬರಿನ ಚೆಂಡು ಅಷ್ಟೇ ಜೋರಿನಿಂದ ತಿರುಗಿ ಬಂದಿತ್ತು. ನಾನು ಉತ್ತರಿಸುವ ಪೂರ್ವದಲ್ಲಿಯೇ ಪಾಂಡಪ್ಪ ಫರ್ಲಾಂಗು ಮುಂದೆ ಹೋಗಿದ್ದ.

ಪಾಂಡಪ್ಪ. ಇಂಚು-ಫೂಟು ಹಚ್ಚಿ ಕಾಯದೇಶೀರ ಇದ್ದದ್ದು ಸುಳ್ಳಲ್ಲ.

ಅವನ ಸರಕಾರೀ ಕಾಮಗಿರಿಯ ಯಂತ್ರ ಮೊದಲಾಗುವದು ಬೆಳಗಿನ ಎಂಟು ಗಂಟೆಗೆ. ಆದರೆ ಅವನು ಈ ಯಂತ್ರಾಗಾರಕ್ಕೆ ಅಂಚೆಯ ಮನೆಗೆ ಬರುವದು-ಬಂದೇ ತೀರುವದು. ಠಾಕೋಠಾಕ ಏಳೂವರೆಗಂಟೆಗೆ. ಅವನು ಮನೆಯಿಂದ ಹೊರಬಿದ್ದು ಬರುವಾಗ ನೀವು ಅವನನ್ನು ಕಾಣುವದು "ಬಿನ್‌ಸರಕಾರೀ" ಡ್ರೆಸ್ಸಿನ ಪಾಂಗಿನಲ್ಲಿ ಅಂದರೆ ಹತ್ತು ಮೊಳದ ಡಬ್ಬಣಕಾಟೀ ಧೋತರ ಬಿಳಿಯ ಶರ್ಟ-ಕಿಗ್ಗಳ ಚಿಕ್ಕಿನ ಚೌಕಡಿ ಕೋಟು- ಈ ವಸ್ತ್ರ—ವಸನ-ವಿನ್ಯಾಸದಲ್ಲಿ ಬಂದ ಪಾಂಡಪ್ಪ, ಅಂಚೆಯ ಮನೆಯನ್ನು ಪ್ರವೇಶಿಸುವದೇ ತಡ, ಸರಕಾರೀ ಡಿರೇಸದಲ್ಲಿ ಪರಕಾಯ ಪ್ರವೇಶ ಮಾಡುತ್ತಾನೆ. ಅಂದರೆ-ಆ ಚಿಕ್ಕಿನ ಕೋಟು-ಕರಿಯ ಟೊಪ್ಪಿಗೆ ಇಳಿಸುತ್ತಾನೆ. ಮೂಲೆಯಲ್ಲಿಯ ಗೂಟದ ಮೇಲೆ ಅವನ್ನು ವಿಶ್ರಾಂತಿಸಲು ಬಿಡುತ್ತಾನೆ. ಅಲ್ಲಿಯೇ ಮಾಡದಲ್ಲಿ ಓರಣವಾಗಿ ಮಡಿಚಿಟ್ಟ ಖಾಕಿಯ ಚೊಣ-ಖಾಕಿಯ ಕೋಟಿನ ಚಿಲಖತ್ತನ್ನು ಏರಿಸಿಕೊಳ್ಳುತ್ತಾನೆ. ಖಾಕಿಯ ರುಮಾಲು ಅವನಿಗೆ ಶಿರೋಭೂಷಣವಾಗಿ ವಿರಾಜಮಾನವಾಗುತ್ತದೆ. ಸಾದಾ-ಸೀದಾ ಪಾಂಡಪ್ಪ ಏಕದಮ್ ಕಾಯ ಪಲ್ಲಟವಾಗಿ ಪಾಂಡುರಂಗ ಮಧ್ವ ಕುಲಕರ್ಣಿ. ಘನ ಪಂಚಮಜಾರ್ಜ ಬಾದಶಹರ ವಿನಮ್ರ ಸೇವಕ ಸದರಿನಲ್ಲಿ ಅವತರಿಸುತ್ತಾನೆ. ಈ ಅವತಾರಧಾರಣೆ ಆಯಿತೋ-

ಪಾಂಡುರಂಗ ಮಧ್ವನು ಮೊದಲು ಮಾಡುವ ಮಹತ್ಕಾರ್ಯವೆಂದರೆ ಅಂಚೆಯ ಮನೆಯ ಸಾಫಸೂಫೀ ಹಾಸಿದ ಜಮಖಾನೆಯನ್ನು ಚಟಚಟನೆ ಜಾಡಿಸಿ, ಮಾಡಗೋಡೆಯ ಧೂಳು ಹೊಡೆದು ಗಾಳಿ ಹುಡೆ ಎದ್ದರೆ, ನೀರಿನ ಚಮುಕು ಹಾಕಿ, ಅಂಚೆಯಮನೆಯ ಸಂಮಾರ್ಜನೆ ಬಗೆಹರಿಸುತ್ತಾನೆ. ಅಂಚೆಯ ಶಿಕ್ಕಾ-ರಬ್ಬರ ಪ್ಯಾಡ್ನು ಮುಂದಿಟ್ಟುಕೊಂಡು, ತಿಥಿ ತಾರೀಖು ಬದಲಿಸುತ್ತಾನೆ. ಶೀಲ್ ಮಾಡಲು ಉಪಯೋಗಿಸುವ ಚಿಮಣಿಯ ಬುಡ್ಡಿಯಲ್ಲಿ ಎಂಣೆಯು ಭರಪೂರ ಇದ್ದುದರ ಖಾತ್ರೀ ಮಾಡಿಕೊಳ್ಳಲು. ಅದನ್ನು ಕಿವಿಯ ಹತ್ತರ ಒಯ್ದು ಅಲ್ಲಾಡಿಸಿ, ಅದು O. K. ಎಂದು ಉತ್ತರಿಸಿದ ಪತ್ತೆಯಾಗಿ ಅದನ್ನು ಅದರ ಸ್ವಸ್ಥಾನದಲ್ಲಿ ಮಡಗಿಸುತ್ತಾನೆ. ತೂಕದ ತಕ್ಕಡಿಯ ಮೇಲೆ ವಾತ್ಸಲ್ಯದಿಂದ ಕೈಯಾಡಿಸುತ್ತಾನೆ. ಇಷ್ಟಾದ ಮೇಲೆ ತದೇಕಚಿತ್ತನಾಗಿ-ತದೇಕನೋಟಕನಾಗಿ ಸ್ಟೇಶನ್ನಿನಿಂದ ಟಪಾಲು ತರುವ ರನ್ನರನ ದಾರಿ ಕಾಯುತ್ತ ಕೂಡುತ್ತಾನೆ.

ಮೊದಮೊದಲು ಈ ರೀವಿಯಲ್ಲಿ ಕೂಡುವದು ಪಾಂಡಪ್ಪನಿಗೆ ಎಡಎಡಚು ಹೋಯಿತು .ಇತ್ತೀಚೆ ಸರಕಾರದವರು ಪೋಸ್ಟಮನ್ನರಿಗೆ ಪ್ಯಾಂಟು ಕೊಟ್ಟರು. ಅವನ್ನು ಹಾಕಿಕೊಳ್ಳಲೇಬೇಕೆಂಬ ಕಡ್ಡಾಯ ಸರಕಾರದ ಕಾಕರಲಿಪಿಯಲ್ಲಿ ಇದ್ದಿರಬೇಕು: ನಿಜ. ಆದರೆ ಹಾಕಿಕೊಳ್ಳದಿದ್ದರೆ ನಮ್ಮ ಕುಗ್ರಾಮ ಗ್ರಾಮದಲ್ಲಿ ಯಾವ ಪಿ. ಎಮ್. ಜಿ. ಯೂ ಅವತಾರ ಮಾಡಿ ನಿಯಮಪಾಲನೆ ಮಾಡದಿದ್ದುದಕ್ಕೆ ಪಾಂಡಪ್ಪನಿಗೆ ಛಾತಿ ವಿಧಿಸುತ್ತಿರಲಿಲ್ಲ. ಆದರೆ ಪಾಂಡಪ್ಪ ಅದನ್ನು ಕಡೆಗಣಿಸಲಿಲ್ಲ. ಕಾರಣ ಸರಕಾರಿ ಹುಕುಮು ಆ ರೀತಿಯಾಗಿತ್ತಲ್ಲ. ಸರಕಾರೀ ಡ್ಯೂಟಿಯ ಮೇಲೆ ಇದ್ದಾಗ ಸಮವಸ್ತ್ರದಲ್ಲಿ ಇರಬೇಕೆಂದು. ಪಾಂಡಪ್ಪ ನಿಯಮವನ್ನು ಉಲ್ಲಂಘಿಸುವದು, ಬ್ರಹ್ಮ ತನ್ನ ಬರೆಹವನ್ನು ತಿದ್ದುವದು, ಎಂದಾದರೂ ಶಕ್ಯವಾದೀತೇ ?

"ಪಾಂಡೂ, ಯಾಕ ಸಂಕಟಾ ಬಟ್ಟು ಆ ಚೊಣಾ ಹಾಕೋತಿ? ಇಲ್ಲಾರು ಬಂದು ತಪಾಸ ಮಾಡಾವ್ರಿದ್ದಾರ ನಿನ್ನ ಡ್ರೆಸ್ಸು?"

ಗೋವಿಂದಮಾಸ್ತರರು ಕೇಳಿದ್ದಕ್ಕೆ, ಪಾಂಡಪ್ಪ ಹಜರ್ ಜವಾಬೀ ಉತ್ತರ ಒಪ್ಪಿಸಿದ್ದ.

"ಮಾಸ್ತರ್ ಡ್ರೆಸ್ ಕೊಡೂ ಮುಂದ, ನನ್ನ ಕಡಿಂದ ಲೇಖೀ ತಗೊಂಡೀರಿ ಇದನ್ನು ಬರೋಬರಿ-ತಪ್ಪದs ಉಪಯೋಗಿಸಬೇಕಂತs. ಕಾಯದೆ ಮಾಡವರs ಅದನ್ನ ಮುರಿಬಾರದು. ಹುಕುಂ ಅಂದ್ರs ಆತು. ಅದರ ಪಾಲನಾ ಆಗಲಿಕ್ಕೇ ಬೇಕು. ಚಾಚೂ ತಪ್ಪಾಂಗಿಲ್ಲ ಅದರಾಗ. ಬ್ಯಾಡಂತ ಆರ್ಡರ ಕೊಡಿರಿ. ಇಕಾ, ಬಿಟ್ಟೆ ನಿಮ್ಮ ಚೊಣ್ಣಾ"

ಇಂಥ ನಮ್ಮ ಪಾಂಡಪ್ಪನಿಗೆ ನವಕರಿಯಾದ ಮೂವತ್ತು ವರ್ಷದ ನಂತರ, ನವಕರಿಯ ಅವಧಿ ಮುಗಿದು, ಪೇನಶನ್ ಫಾಜೆಗಟ್ಟಿಗೆ ಮುಟ್ಟಿದ ವಾರ್ತೆ ಬಂದಿತ್ತು. ವಾರ್ತೆ ಸಾದಾ ಸೀದಾ ಇತ್ತು. ಕಾಯದೇಶೀರ ರೀತಿಯಿಂದ ಅದು ರಾಸ್ತಾ ಇತ್ತು. ಆ ಬಗ್ಗೆ ಇನ್ನು ಪಿಂಚಣಿಧಾರಕನಾಗುವ ಪಾಂಡಪ್ಪನಿಗೂ ಕಳವಳವಿರಲಿಲ್ಲ. ಅವನ ಅರ್ಥೇಚ-ಕಾಮೇಚ ಅರ್ಧಾಂಗ ರುಕ್ಮಿಣಿ ಬಾಯಿಗೂ ಹಳಹಳಿಕೆಯಾಗಿರಲಿಲ್ಲ. ಅದರ ತಿಪಲೇ ಅವರ ತಲೆಗೆ ಹತ್ತಿರಲಿಲ್ಲ. ಅದರೆ ತಪಲಾ ತಲೆ ತಿನ್ನತೊಡಗಿತ್ತು, ವ್ಹಿಲೇಜ ಪೋಸ್ಟಮಾಸ್ಟರ ಜನರಲ್‌ರಾದ ಗೋವಿಂದಮಾಸ್ತರರಿಗೆ ಗ್ರಾಮಪಂಚಾನನರಾದ ಗೌಡ-ಕುಲಕರ್ಣಿ ಆದಿ

ಗಳಿಗೆ, ಕಾರ್ಡು ಖರೀದಿಗೆ ಬಂದು, ಈ ದುರ್ವಾರ್ತೆಯನ್ನು ಕೇಳಿ, ಖರೀದಿಯನ್ನೇ ರದ್ದು ಪಡಿಸಿದ ಗಾಣಿಗರ ಗಂಗಪ್ಪ.

ಆದರೆ ಪಾಂಡಪ್ಪನ ಹಾಗೂ ಊರವರ ನಾತೆ ಕೇವಲ ಹತ್ತು ದಿನಗಳ ವೃದ್ಧಿ-ಸೂತಕದ ಬಾಬಿನಲ್ಲಿ ಜಮಾ ಆಗುವಂಥದಲ್ಲ. ಪಾಂಡಪ್ಪನ ತಂದೆ ಮಧ್ವ ನರಹರಿ ಇಪ್ಪತ್ತು ವರ್ಷ, ಖುದ್ದ ಪಾಂಡುರಂಗ ಮಧ್ವ ಮೂವತ್ತು ವರುಷ, ನಮ್ಮೂರಿನ ಜೀವನದಲ್ಲಿ ಹಾಲುಜೇನಾಗಿ ಬೆರೆತಿದ್ದರು. ಹಾಸುಹೊಕ್ಕಾಗಿ ನೆಯ್ದಿದ್ದರು. ಗೌಡರ ಮನೆಯಲ್ಲಿ ಭಾಟಗಿ ಇರಲಿ ಹಿರೇಮಠದಲ್ಲಿ ಶ್ರಾವಣಮಾಸದ ಪುರಾಣ ಸಾಂಗವಾಗುತ್ತಿರಲಿ. ಪೀರನ ದರ್ಗಾದಲ್ಲಿ ಉರುಸಿನ ಊದು ಲೋಬಾ ಪರಿಮಳ ದರವಳಿಸಲಿ, ಇಲ್ಲ ಗಾಣಿಗರ ಗಂಗಪ್ಪನ ಅಪ್ಪನು ಚಿ. ಈಶ್ವರನಿಗೆ ತನ್ನ ಕೈಲಾಸ ಪ್ರಯಾಣದ ಬಾತಮಿಯನ್ನು ರವಾನಿಸಲಿ. ಅಲ್ಲಿ ಪಾಂಡಪ್ಪನ ಹಜರೀ ಬೀಳದೆ ಕಾರ್ಯ ಸಾಂಗವಾಗುತ್ತಲೇ ಇರಲಿಲ್ಲ. ಬಸವಂಣನ ಜಾತ್ರೆಯಲ್ಲಿ ತೇರಿನ ಹಗ್ಗಕ್ಕೆ ಕೈ ಹಚ್ಚುವ ಮೊದಲ ಮಾನ ಪಾಂಡಪ್ಪನದು. ವಿಠೋಬನ ಪಲ್ಲಕ್ಕಿಯು ಗ್ರಾಮಪ್ರದಕ್ಷಿಣಿಗೆ ಹೊರಟರೆ ಅದಕ್ಕೆ ಹೆಗಲು ಕೊಡುವ ಪ್ರಥಮ ಸನ್ಮಾನ ಪಾಂಡಪ್ಪನದು. ಅವನ 'ಗ್ಯಾನಬಾ-ತುಕಾರಾಮ'ದ ಗರ್ಜನೆ ದುಮುದುಮಿಸಿದ ನಂತರ ಪಲ್ಲಕ್ಕಿ ಹೊರಡಲು ಲಾಯಿನ್ ಕ್ಲಿಯರ ಸಿಗುತ್ತಿತ್ತು.

ಪಾಂಡಪ್ಪನಿಗೆ ಭರಜರಿಯಾಗಿಯೇ ಸತ್ಕಾರವಾಯಿತು. ಭರಜರಿ ಅಂದರೆ, ಒಂದು ಸಭೆ ನಾಕಾರು ಜನರ ಭಾಷಣ-ಒಂದು ಹಾರ ಸಮರ್ಪಣ ಅಷ್ಟೇ ಎಂದು ಭಾವಿಸಬೇಡಿರಿ. ಹತ್ತು ಮೊಳದ ತಲಮ್ ಜೋಡಿ-ಕೋಟಗೆಂದು ಒಂದು ವೂಲನ್ ಪೀಸು-ಬದಾಮಿ ಬಂಣದಜರದಂಚಿನ ರುಮಾಲು, ಪಾಂಡಪ್ಪನಿಗೆ. ಇಳಕಲ್ಲ ಶೀರೆ-ಗುಳೇದಗುಡ್ಡದ ಖಣ ಪಾಂಡಪ್ಪನ ಶ್ರೀಮತಿ ರುಕ್ಮಿಣಿಬಾಯಿಗೆ, ಊರವರು ಸಭೆ ನೆರೆಸಿ ಆಹೇರ ಮಾಡಿದರು. ರಾಮೇಶ್ವರ ಗುಡಿಯಲ್ಲಿ ಗೌಡರ ಘನಅಧ್ಯಕ್ಷತೆಯಲ್ಲಿ "ಭೋ ಭೋ ಪಂಚಮಜಾರ್ಜ ಭೂವರಾ" ಧಾಟಿಯಲ್ಲಿ ಜನಗಣಮನ ಸ್ವಾಗತಗೀತೆಯಾದ ನಂತರ, ಗೋವಿಂದ ಮಾಸ್ತರರು ಗಣಪ್ಪ-ಲಿಂಗಪ್ಪ ಮಾಸ್ತರರು-ಖುದ್ದ ಗೌಡರು, ಬಾಯಿಗೆ ಬಂದ ಭಾಷೆಯಲ್ಲಿ ಪಾಂಡಪ್ಪನ ಗುಣಗಾನ ಮಾಡಿದರು. ಗುಡಿಯ ಹೊರಗೆ ಕಟ್ಟೆಯ ಮೇಲೆ ಮಂಡಿಸಿ, ರಾಜಾಪಾಚ್ಛಾ ಕರಡಿ-ಮಜಲು ಬಾರಿಸಿದರು. ರಾಮೇಶ್ವರನ ಪೂಜೆ ಅರ್ಚನೆಯ ಜೊತೆಗೆ ಸನಾದಿ-ಸಂಬಾಳದ ದುಯ್ಯಮ ಉದ್ಯಮ ಜೋಡಿಸಿಕೊಂಡ ಪೂಜಾರಿ ಯಮನಪ್ಪನು ಅಷ್ಟರಲ್ಲೇ ಸಮಯ-ಸಾಧಿಸಿ, ಒಂದು ಸಲ ಹೊರಗೆ ಹೋಗಿ, ರಾಗಧಾರಿಯಲ್ಲಿ "ಮೇರೆ ಮೌಲಾ ಬುಲಾಲೇ" ಬಾರಿಸಿ ಬಂದ. ತಮ್ಮ ಮಗಳ ಅರಿಷಿಣದ ಹೊತ್ತಿಗೂ ಗೌಡರು ಅಷ್ಟು ಸಿಂಗಾರಾಗಿರಲಿಕ್ಕಿಲ್ಲ-ಆದರೆ ಅಂದು ಮಾತ್ರ, ಕರಮ್ ಕಾಟೀ ಧೋತರ-ಅಲ್ಪಾಕಿನ ಕೋಟು-ಬೆರಳಳತೆಯ ಜರದಂಚಿನ ಹೆಡಿಗೆ ಮುಂಡಾಸದ ವಸ್ತ್ರವಿನ್ಯಾಸದಲ್ಲಿ ಘನ ಗಂಭೀರವಾಗಿ ಮೆರೆದರು. "ಅಧ್ಯಕ್ಷ ಈ ನಾತೇಯಿಂದ" ಸತ್ಕಾರ ಸಭೆಯ ದರಬಾರವನ್ನು ಭರಜರಿಯಾಗಿ ನಡೆಸಿಕೊಂಡು ಹೋದರು.

ಸಭೆಯು ಮುಕ್ತಾಯವಾದ ನಂತರ, ಹೊರಟ ಮೆರವಣಿಗೆ, ಕರಡಿ ಮಜಲಿನ ಸವಾದ್ಯ ಗತ್ತಿನ ಕೂಡ, ನಿಧಾನವಾಗಿ ಗ್ರಾಮಪ್ರದಕ್ಷಿಣೆ ಹಾಕಿ ಗ್ರಾಮದೇವತೆಗಳ ದರ್ಶನ ಪಡೆದುಕೊಂಡು, ಪಾಂಡಪ್ಪನ ಮನೆಯ ಹತ್ತಿರ ಬಂದು ವಿಸರ್ಜನೆಯಾದಾಗ ರಾತ್ರಿಯ ಹತ್ತು ಬಾರಿಸಿರಬೇಕು.

ಪಾಂಡಪ್ಪನಿಗೆ ಪೆನಶನ್ ಆದ ಸುದ್ದಿ- ಆ ಪ್ರಯುಕ್ತ ನಡೆದ ಸತ್ಕಾರ ಸಮಾರಂಭದ ಕತೆ ನಡೆದು ಹೋಗಿ ಹಾಗೆ ಕೇಳಿದರೆ ಬಹಳ ದಿನಗಳಾಗಿ ಹೋಗಿವೆ. ಅದರ ನೆನಪೂ ಮಸಕಾಗುತ್ತ ಬಂದಿತು. ಆದರೆ ಆ ನೆನಪಿನ ಮೇಲಿನ ಚಕಳಿಯನ್ನು ಮೊನ್ನೆ ಮೊನ್ನೆ ಅಚಾನಕವಾಗಿ ಪಾಂಡಪ್ಪನೇ ಹಾರಿಸಿದ.

ಪಾಂಡಪ್ಪ, ಮೊನ್ನೆ ಭೆಟ್ಟಿಯಾದಾಗ, ಈ ಸತ್ಕಾರದ ನೆನಪು ಬಂದು ಕಂಣು ತೇವು ಮಾಡಿಕೊಂಡು ನನಗೆ ಅರಿಯದ ಒಂದು ಕತೆಯನ್ನೂ ಹೇಳಿದ. ಈ ಕತೆಯು ಕೊನೆಯು ಬಾಲಾಗಸಿ, ಅವನೇ ಮಾಡಿದ ಗೌಪ್ಯ ಸ್ಫೋಟನ.

ಸತ್ಕಾರದ ಉತ್ಸವ ಮುಗಿದ ರಾತ್ರಿ, ಪಾಂಡಪ್ಪ—ರುಕ್ಮಿಣಿಬಾಯಿ ದಾಂಪತ್ಯ, ಬೆಳಗಿನ ಮೊದಲ ಕೋಳಿಕೂಗುವ ವರೆಗೂ ಎಚ್ಚರಿದ್ದು, ಹತ್ತಿಪ್ಪತ್ತು ಸಲ, ತೇವವಾದ ಕಣ್ಣನ್ನು ಧೋತರ ಚುಂಗಿನಿಂದ-ಸೀರೆಯ ಸೆರಗಿನಿಂದ ನೆನೆಸಿ, ಊರವರು ಮಾಡಿದ ಸತ್ಕಾರದ ಪುರೋಚಿಯನ್ನು ವಾಚಿಸಿತು. ಮಾತಿನಲ್ಲಿ ಇಬ್ಬರಿಗೂ ನಿದ್ದೆಯ ಧ್ಯಾಸ ಹಾರಿತು. ಕೋಳಿಕೂಗಿತು, ಇನ್ನೇನು ಮಲಗುವದು, ಕೂತಲ್ಲಿಯೇ ಒಂದಿಷ್ಟು ಅಡ್ಡಾಗಿ ಎದ್ದರಾಯಿತೆಂದು, ಹಾಸಿಗೆ ಬಿಡಿಸದೆ ಹಾಸಿಗೆಯ ಸುರುಳಿಗೆ ವಾಲಿ ಇಬ್ಬರೂ ಅಡ್ಡಾದರು.

ರಾತ್ರಿಯೆಲ್ಲ ಜಾಗರಣೆಯಾಗಿತ್ತೆಂದೋ—ಅಥವಾ ಬೆಳಗಿನಲ್ಲಿ ಬೇಗನೆ ಏಳುವ ಧಾವತಿ ಇನ್ನು ತಪ್ಪಿತೆಂದೋ ಏನೋ-ರುಕ್ಮಿಣಿಬಾಯಿ ಮಲಗಿದ ನಾಕೈದು ನಿಮಿಷದಲ್ಲಿ ಗುರು ಗುರು ನಿದ್ದೆ ಮಾಡಹತ್ತಿದಳು. ಆದರೆ ಪಾಂಡಪ್ಪನಿಗೆ ಮಾತ್ರ ಜಪ್ಪೆಂದರೂ ಜಂಪು ಹತ್ತದಾಯಿತು. ಬೆಳಗಿನಿಂದ ಸಂಜೆಯ ವರೆಗೆ ನಡೆದ ಸತ್ಕಾರದ ಗಡಿಬಿಡಿ-ಅದರಲ್ಲಿ ತಾನು ಉತ್ಸವಮೂರ್ತಿಯಾದದ್ದು-ಅದರ ಹಿಂದಿನ ಮೂವತ್ತು—ನಾಲ್ವತ್ತು ವರುಷದ ದೀರ್ಘಜೀವನದ ಕತೆ, ಚಿತ್ರ ಮಾಲೆಯಾಗಿ ಕಂಣೆದುರು ಕಟ್ಟಿತು.

ಪಾಂಡಪ್ಪನ ಮುಂಜಿವೆಯಲ್ಲಿ, ಮಧ್ವನರಹರಿ, ಒಂದೇ ಸಲ ಏಕಾಂತವಾಗಿ ಗಾಯತ್ರಿ ಮಂತ್ರವನ್ನು ಉಸುರಿದ್ದ. ಆ ನಂತರ ಅವನು ಏಕಾಂತವಾಗಿ—ಲೋಕಾಂತವಾಗಿ ಹೇಳಿದ್ದು ಹಾಡಿದ್ದು ಕೇವಲ ಅಂಚೆಯ ಖಾತೆಯ ಮಹತಿ! ವ್ಹಿ. ಪಿ. ಎಮ್. ಓ. ಎನ್. ಪಿ. ಆರ್. ಪೀ. ಎಮ- ಜಿ ಓ. ಎಚ್. ಎಮ್. ಎಸ್ ಇತ್ಯಾದಿ ಸಾಂಕೇತಿಕ ಶಬ್ದ ಮಣಿದರ್ಪಣದಲ್ಲಿ ಅವನು ಪಾಂಡಪ್ಪನಿಗೆ ವಿಶ್ವರೂಪ ದರ್ಶನ ಘಟಿಸಿ ತೋರಿಸಿದ್ದ. ಪಾಂಡಪ್ಪನೂ ಕೂಡ ಅದನ್ನೇ ಅನನ್ಯ ಭಾವದಿಂದ ಈ ಮೂವತ್ತು ವರುಷ ತಾರಕಮಂತ್ರವನ್ನಾಗಿ ಮಾಡಿಕೊಂಡಿದ್ದ. ಅವನ ಜೀವ ಈ ಅಂಚೆಯ ಸ್ರಪಂಚದಲ್ಲಿ ಹುರಿಗೊಂಡಷ್ಟು, ಕೈಹಿಡಿದ ಸಹಧರ್ಮಿಣಿಯ ಕೂಡ ಏಕರಸವಾಗಿರಲಿಲ್ಲ. ಮಧ್ವನರಹರಿಯ ಕಾಲದಿಂದ ಅವನ ಪಿಂಡ, ಅಂಚೆಯಖಾತೆಯ ಸಂಬಳದಿಂದ ಪೋಷಿತವಾಗಿತ್ತು ಮೈ-ಮನದ ಮಾನ ಮಾಬಾಪ ಸರಕಾರದವರು ಕೊಡುತ್ತಿದ್ದ ಸಂಬಳ-ಸಮವಸ್ತ್ರದಿಂದ ಸುರಕ್ಷಿತವಾಗಿತ್ತು. ಇಡೀ ಊರಲ್ಲಿ ಒಬ್ಬನೇ ಒಬ್ಬ ಕೇಂದ್ರ ಸರಕಾರದ ಪ್ರತಿನಿಧಿ. ೧೯೩೭ರಲ್ಲಿ ಅನೇಕ ಪ್ರಾಂತಗಳಲ್ಲಿ ಕಾಂಗ್ರೆಸ್ ಸರಕಾರಗಳು ಅಧಿಕಾರಕ್ಕೆ ಬಂದಾಗ ಎಲ್ಲರೂ ಪಾಂಡಪ್ಪನನ್ನು ಕುರಿತು—

"ಪಾಂಡೂ, ಗಾಂಧೀ ಮಹಾರಾಜನ ರಾಜ್ಯ ಬಂತು. ನಿಮ್ಮ ಜಾರ್ಜ ಬಾದಶಾಗ ಇನ್ನು ಗುಳೇ ಕಿತ್ತಬೇಕಾಗತದ." ಎಂದು ಚಿರಡಿಗೆ ತರಿಸುತ್ತಿದ್ದರು.

ಆದರೆ ಪಾಂಡಪ್ಪ ಕಿಂಚಿತ್ತೂ ವಿಚಲಿತನಾಗದೆ-

"ಹಾಂ... ಹಾಂ... ಠಾಂವಿಕ್ಯ ಗಾಂಧೀ ರಾಜ್ಯ ನಿಮಗ. ನಾವು ಸೆಂಟರದ ನೌಕರದಾರರು. ನಮಗೇನು ಯಾರದೂ ದರಜ ಇಲ್ಲಾ. ಗಾಂಧೀ ಏನು? ಜಾರ್ಜ ಬಾದಶಾ ಏನು? ಜುಟ್ಟ ಯಾರ ಕೈಯಾಗ ಅವ ಹೇಳರಿ? ಪಿ. ಎಮ್. ಜೀ. ಕೈಯಾಗ. ನಿಮಗ ಸ್ವರಾಜ್ಯ ಬಂಧ ಕಾಗದಾನೇ ನಮ್ಮ ಪೀ. ಎಮ್. ಜೀ. ಗಡಪ್, ಮಾಡಿದ ನಂದರs ಏನ ಮಾಡಾವ್ರು? ತಮಾಟಿಗೋಳರ್‍ಯಾ. ಟಪಾಲಖಾತೇ ಅಂದರs ಚಿತ್ರಗುಪ್ತನ ಖಾತೆ ಇದ್ದಾಂಗ. ಯಮಗ ಸುದ್ದೇ ಆ ಖಾತೇಕ್ಕ ಕೈ ಹಚ್ಚೂದು ಶಕ್ಯ ಇಲ್ಲಾ-ತಿಳಿತೇನು?"

ಎಂದು ಪಾಂಡಪ್ಪ ತಿರುಗುಪ್ಪ ಕೊಟ್ಟಿದ್ದ.

ಮಧ್ವ ನರಹರಿಯು ಹಯಾತನಿದ್ದಾಗಲೇ ಅವನು ಮುಲ್ಕೀ ಪರೀಕ್ಷೆ ಪಾಸಾಗಿದ್ದ. ಆಗಲೇ ಎಲ್ಲರೂ ಹೇಳಿದ್ದರು ಲೋ. ಬೋ. ಶಾಖೆಯಲ್ಲಿ ಶಿಕ್ಷಕ ಜಾಗಕ್ಕೆ ಅರ್ಜಿಹಾಕು ನಿಶ್ಚಿತವಾಗಿ ನವಕರಿ ಸಿಗುತ್ತದೆ ಎಂದು. ನಾಕು ತಿಂಗಳಿಗೊಮ್ಮೆ ಪರ್ವಣಿಯಂತೆ ಬರುವ ಸಂಬಳ—ಎಡಚಿ—ಬೆಡಚಿ ಬರುವ ಇನಸ್ಪೆಕ್ಟರರ ಸರಬರಾಯಿ—ನೀರಿಲ್ಲದ ಊರಿಗೆ ಬದಲಿ—ಲೋ. ಬೋ. ಸದಸ್ಯರ ಕಾಲ್ಬೆಂಡಾಗಿ ಒದ್ದಲ್ಲಿ ಹೋಗಿ ಬೀಳುವ ಸಂಕಟ ಯಾರು ಹೇಳಿದ್ದರು ಇದೆಲ್ಲ ಉಪದ್ವ್ಯಾಪ? ಅಂಚೆಯ ಖಾತೆಯಲ್ಲಿ ಅಂದರೆ ತಿಂಗಳ ತಿಂಗಳ ಸಂಬಳ ಐದನೇ ತಾರೀಖಿನೊಳಗಾಗಿ ಚುಕ್ತಾ ಮೇಲೆ ವರ್ಷಕ್ಕೊಮ್ಮೆ ಚಿಲಖತ್ತಿನಂತಹ ಸಮವಸ್ತ್ರ ಮುಂಜಾನೆ ಎರಡು ತಾಸು ಸಂಜೆಗೆ ಒಂದು ತಾಸು ಅಡ್ಡಾಡುತ್ತ ಟಪಾಲು ಹಂಚಿದರೂ ಕರ್ತವ್ಯ ಮಾಡಿ ಮುಗಿಸಿದ ಫಲ ಪದರಲ್ಲಿ ಬೀಳುತ್ತದೆ. ಮೇಲೆ ಯಾರ ಮರ್ಜಿಯನ್ನು ಸಂಪಾದಿಸುವ ಯಾರು ಯಾರಿಗೊ ರಾಮ ರಾಮ ಹಾಕುವ ಕಿರಿಕಿರಿ ಇಲ್ಲ. ರಾಜಾ ಚಾಕರಿ ಎಂದು ಮುಂದಾಲೋಚನೆ ಮಾಡಿ ಇದಕ್ಕೇ ಅಂಟಿಕೊಂಡುಬಿಟ್ಟ

ಪಾಂಡಪ್ಪನ ಲೆಕ್ಕದಿಂದ ಇದೇನು ಸಾಮಾನ್ಯ ಸಾಧನೆಯಾಗಿರಲಿಲ್ಲ. ಮಧ್ವನರಹರಿಯ ಸ್ಮರಣೆ ತನ್ನ ಮೂವತ್ತು ವರ್ಷದ ಸೇವಾ ತಪಸ್ಸು ಪಾಂಡಪ್ಪನಲ್ಲಿ ಜಾಗರಿಸಹತ್ತಿದವು ಪರಶುರಾಮನ ಪಿತೃವಾತ್ಸಲ್ಯದ ಸ್ಮರಣೆಗೆ ಕಾವೇರಿದಂತೆ, ಪಾಂಡಪ್ಪನಲ್ಲಿಯೂ ಅಂಚೆಖಾತೆಯಲ್ಲಿಯ ತಪಸ್ಸಿನ ಸ್ಮರಣೆಯಿಂದ ಎಸರುಕ್ಕ ತೊಡಗಿತು ಪಾಂಡಪ್ಪ, ಬೊಗಸೆಯಲ್ಲಿ ನೀರೆತ್ತಿ, ಪಿ. ಎಮ್, ಜಿ ಯ ಹೆಸರನ್ನು ನೆನೆಸಿಕೊಂಡಿದ್ದರೆ, ಕದಾಚಿತ್ ಅವನ ಚುಲಕಜಲಕ್ಕೆ ಕುದಿಬರುವ ಸಂಭವವಿತ್ತು

× × ×

ಅಂಗಳದಲ್ಲಿ ಗುಬ್ಬಿಗಳ ಚಿಲಪಿಲಾಟ ನಡೆದಿತ್ತು ಒಂದೆರಡು ಕಾಗೆಗಳ ಕಾಕಾರವ ಕೇಳಿ ಬಂತು ಪಾಂಡಪ್ಪ, ತಟ್ಟನೆ ಜಾಗರಕ್ಕೆ ತಿರುಗಿದವರಂತೆ ಸಟ್ಟನೆ ಎದ್ದು ನಿಂತು—

"ಎಲಾ ಬೆಳಗಹರದು ಹಳೀ ಮಾತಾತು ಇನ್ನಾ ನಂದೇನೂ ಬಗೀನs ಹರದಿಲ್ಲಲಾ" ಎಂದು ತನ್ನಷ್ಟಕ್ಕೆ ತಾನೇ ಅಂದುಕೊಂಡು, ಯಾವುದೋ ತಂದ್ರಿಯ "ನಶಾ" ದಲ್ಲಿಯೇ ಪ್ರಾತರ್ವಿಧಿ ಮುಗಿಸಿದ ಒಲೆ ಹೊತ್ತಿಸಿ, ಚಹಕ್ಕೆ ಎಸರಿಟ್ಟು, ಹಂಡೆಯನ್ನು ಮೊಗೆಮೊಗೆದೇ ನಾಕು ತಂಬಿಗೆಯ ನೀರನ್ನು ತಲೆಯ ಮೇಲೆ ಸುರುವಿಕೊಂಡು ಸ್ನಾನದ ಶಾಸ್ತ್ರ ಬಗೆಹರಿಸಿದ ಗೀರು ಗಂಧದ ಗೀಟನ್ನು ಹಣೆಗೆಳೆದುಕೊಂಡು ನಿತ್ಯನೇಮದಂತೆ ದೇವರಿಗೆ ದಂಡವತ್ ಪ್ರಣಾಮ ಹಾಕಿದ ಎರಡು ಕಪ್ಪಿನಷ್ಟು ಚಹವನ್ನು ಇಳಿಸಿ ತನ್ನ ಪಾಲಿನದನ್ನು ಕುಡಿದು, ಪತ್ನೀ ಭಾಗವನ್ನು ಒಲೆಯ ಮುಂದೆ ಮುಚ್ಚಿಗಿಸಿಟ್ಟ. ರುಕ್ಮಿಣಿಬಾಯಿ ಇನ್ನೂ ನಿದ್ದೆಯ ಮಡಲಲ್ಲಿ ನಿಶ್ಚಿಂತವಾಗಿ ಗೊರಕೆ ಹೊಡೆಯುತ್ತಿದ್ದಳು. ಪಾಂಡಪ್ಪನಿಗೆ ಮಾತ್ರ ಅವಸರವೇ ಬೆನ್ನು ಹತ್ತಿದಂತಾಗಿತ್ತು ಗಡಿಬಿಡಿಯಿಂದ ಮನೆಬಾಗಿಲನ್ನು ಮುಂದೆ ಮಾಡಿ, ಬೀದಿಗಿಳಿದು ಅಂಚೆಯ ಮನೆಯ ದಾರಿಹಿಡಿದ

ಆಗಲೇ ಏಳೂವರೆ ಗಂಟೆಯಾಗಿತ್ತು.

ಪಾಂಡಪ್ಪ, ಅಂಚೆ ಮನೆಯಿದ್ದ, ಗೋವಿಂದ ಮಾಸ್ತರರ ಬಿಡಾರದ ಬಾಗಿಲಲ್ಲಿ ಬಂದಾಗ, ಗೋವಿಂದಮಾಸ್ತರರ ಹೆಂಡತಿ ಹೊಸ್ತಿಲಿನ ಸಾರಣಿ—ಕಾರಣಿ ಮುಗಿಸಿ ರಂಗವಲ್ಲಿ ಇಟ್ಟಿದ್ದರು. ಬಾಗಿಲ ಮುಂದೆ ಶಗಣಿಯ ನೀರಿನ ಥಳಿ ಹೊಡೆದಿದ್ದರು. ಮಣ್ಣಿನ ಗಂಧವನ್ನು ಹೀರಿದ ನೀರಿನ ವಾಸನೆ ಇನ್ನೂ ಗಮಗಮಿಸುತ್ತಿತ್ತು. ಪಾಂಡಪ್ಪ, ಒಳಗೆ ಬಂದವನೇ, ಪಡಸಾಲೆ ಗೂಡಿಸಿದ. ಜಮಖಾನೆಯನ್ನು ಝಾಡಿಸಿ ಓರಣವಾಗಿ ಹಾಸಿದ. ತನ್ನ ನೇಹಮಿಯ ವಸ್ತ್ರ-ಭೂಷಣವಿಳಿಸಿ ಖಾಕಿಯ ಕೋಟು—ಮುಂಡಾಸದಲ್ಲಿ ಅಲಂಕೃತನಾದ. ತಕ್ಕಡಿ—ಶಿಕ್ಕಾ ಒರೆಸಿ ಚಕಚಕಿಸುವಂತೆ ಮಾಡಿದ. ಎಲ್ಲಾ ಆಲ್-ಬೆಲ್ ಆದದ್ದರ ಖಾತ್ರಿ ಮಾಡಿಕೊಂಡು ಸ್ಟೇಶನ್ನಿನಿಂದ ಬರುವ ರನ್ನರನ ದಾರಿಕಾಯುತ್ತ ತದೇಕ ಚಿತ್ತನಾಗಿ ಖುಷಿಪೋಜಿನಲ್ಲಿ ಕುಳಿತ.

ಎಂಟು ಬಾರಿಸಲು ಹತ್ತು ನಿಮಿಷದ ಅವಧಿ ಇರಬೇಕು. ನಡುಮನೆಯಿಂದ ಪಡಸಾಲೆಗೆ ಬರುತ್ತ ಗೋವಿಂದ ಮಾಸ್ತರರು, ಪಾಂಡಪ್ಪನ ಕಡೆಗೆ ನೋಡಿಯೂ ನೋಡದಂತೆ ಮಾಡಿ—

"ಯಾಕ ಪಾಂಡೂ ಇಂದ ಲಗೂನs ಬಂದಿ?"

ಏನೋ ಮಾತಾಡಿಸಬೇಕೆಂದು ಆಡಿದರು.

"ಮಾಸ್ತರ್, ಎಂಟು ಬಡೀಲಕ್ಕೆ ಬಂತು ಇನ್ನಾ ಲಗೂನs ಅಂತೀರೆಲಾ?"

ಪಾಂಡಪ್ಪನ ಹಜರ್ ಜವಾಬಿ ಉತ್ತರ ತುಟಿಯಿಂದ ಮಿಂಚುತ್ತಿರುವಂತೆ, ತಲೆಬಾಗಿಲಲ್ಲಿ, ಕಿರುಗಡ್ಡದ ಒಂದು ಕುಳ್ಳನ್ನ ವ್ಯಕ್ತಿ ಪ್ರಕಟವಾಗಿ—

"ಸಲಾಮ್, ಮಾಸ್ತರಸಾಬ್, ಸಲಾಮ್ ಪಾಂಡೂ ಅಣ್ಣಾ" ಎನ್ನುತ್ತ ಕುರ್ನೀಸಾತು ಮಾಡಿತು. ಏಕಕಾಲಕ್ಕೆ ಗೋವಿಂದ ಮಾಸ್ತರರ - ಪಾಂಡಪ್ಪನ ದೃಷ್ಟಾದೃಷ್ಟಿಯಾಯಿತು ಅಸಹಾಯ ಸಂಕಟ ಇಬ್ಬರ ದೃಷ್ಟಿಯಲ್ಲೂ ಮಡುವುಗಟ್ಟಿತ್ತು. ಪಾಂಡಪ್ಪನೇ ಸಾವರಿಸಿಕೊಂಡು "ಗೋವಿಂದಮಾಸ್ತರ ನನ್ನ ಚಾಕರಿ ನಿನ್ನೇಮುಗೀತು ಅನ್ನೂದರದು ಧ್ಯಾಸಹಾರಿತ್ತು-ನೋಡಿರಿ. ಮೂವತ್ತ ವರ್ಷದಿಂದ ಮೈಯುಂಡ ಚಟಾ ಯಾವ ಮಾಯದಲೇನೋ ಮತ್ತ ಇಲ್ಲಿಗೆ ಕರತಂದು ಬಿಟ್ಟಿತ್ತು ನೋಡಿರಿ ಬರ್‍ರಿ ಸಾಬರs, ಇಕಾ, ನಿಮ್ಮ ಡ್ರೆಸ್ ತಕೋರಿ ಇದರ ಖುಣಾ ಕಡೀತಿನ್ನs." ಎಂದು ಹೇಳುತ್ತಿದ್ದಂತೆ ಪಾಂಡಪ್ಪ ತನ್ನ ಸರಕಾರೀ ಗಣವೇಷವನ್ನು ಇಳಿಸಿ ನಾಗರಿಕ ವೇಷದಲ್ಲಿ ಅವತರಿಸಿದ. ಮುನ್ನಾದಿನವೇ ಬಂದು ಹಜರ್ ಆದ ತನ್ನ ರಿಲೀವ್ಹರನಿಗೆ ಡ್ರೆಸ್ಸು ಒಪ್ಪಿಸಿದ

"ಹೋಗತೀನಿ ಗೋವಿಂದ ಮಾಸ್ತರs. ಯಾಕೋ ಮಳಮಳ ಅನಸಲಿಕ್ಕೆ ಹತ್ತೇದ"

ಇಷ್ಟು ನುಡಿದವನೇ ನಿಧಾನವಾಗಿ ಅಂಚೆಯ ಮನೆಯ ಮೆಟ್ಟಿಲುಗಳನ್ನು ಇಳಿದು ಅವನತಮುಖನಾಗಿ ಮನೆಯ ದಾರಿಹಿಡಿದ ಮೂವತ್ತು ವರುಷದ ಅವಧಿಯಲ್ಲಿ ಪಾಂಡಪ್ಪ ಅಧೋವದನನಾಗಿ - ನಿರ್ಜೀವನಂತಾಗಿ ನಡೆದಿದ್ದನ್ನು ಆ ದಾರಿ ಇಂದೇ ಮೊದಲ ಸಲ ಕಾಣುತ್ತಿತ್ತು

ಲಘು ಪ್ರಬಂಧ

# ಭಾವ ಚಿತ್ರ

ಇಟಗಿ ರಾಘವೇಂದ್ರ
ಧಾರವಾಡ

ರಾಮಾಯಣದ ಕಥೆ ಯಾರಿಗೆ ಗೊತ್ತಿಲ್ಲ? ಯುವರಾಜನಾಗಬೇಕಾದ ರಾಮಚಂದ್ರ ನಾರುಡಿಯುಟ್ಟು ಸಂನ್ಯಾಸಿಯಾಗುತ್ತಾನೆ— ತಾಯಿ ಕೈಕೆಯಿಯ ಕೃಪೆಯಿಂದ! ಸೋದರಮಾವನಲ್ಲಿದ್ದ ಭರತ ಅಯೋಧ್ಯೆಗೆಬಂದು ಕಂಡದ್ದೇನು? ತಂದೆಯ ಮರಣದಿಂದ, ಅಣ್ಣನ ವನವಾಸದಿಂದ ನಿಸ್ತೇಜವಾದ 'ಶೂನ್ಯನಗರ'ವನ್ನು! ತಾಯಿಯ ಅವಿವೇಕವನ್ನು ಕಂಡು ನೊಂದ ಭರತ, ತಾಯಿ ಮಾಡಿದ ಅಪರಾಧವನ್ನು ತಿದ್ದುವುದಕ್ಕಾಗಿ ರಾಮನನ್ನು ಹುಡುಕಿಕೊಂಡು ಹೊರಡುತ್ತಾನೆ. ಚಿತ್ರಕೂಟದಲ್ಲಿ ಅಣ್ಣನನ್ನು ಸಂಧಿಸಿ ಮರಳಿ ರಾಜ್ಯ ಕೈಕೊಳ್ಳಬೇಕೆಂದು ಕೇಳುತ್ತಾನೆ. ಸತ್ಯಸಂಧ ರಾಮಚಂದ್ರ ಒಪ್ಪದೇ ಹೋಗಲು ಕೊನೆಗೆ 'ಅಣ್ಣ— ನಿನ್ನ ಪಾದುಕೆಗಳನ್ನು ಕೊಡು. ಅವುಗಳನ್ನು ಸಿಂಹಾಸನದ ಮೇಲಿಟ್ಟು ನಿನ್ನ ಹೆಸರಿನಲ್ಲಿ ರಾಜ್ಯವಾಳುತ್ತೇನೆ.' ಎಂದು ಬೇಡುತ್ತಾನೆ—' ಹೀಗೆ ಕಥೆ ಮುಂದುವರಿಯುತ್ತದೆ. ಈಗಿನ ಹಾಗೆ ಆಗಲೂ 'ಭಾವಚಿತ್ರ'ಗಳ ವ್ಯವಸ್ಥೆ ಇದ್ದಿದ್ದರೆ— ಬಹುಶಃ ಭರತ ರಾಮನ ಭಾವಚಿತ್ರವನ್ನೇ ತಂದು, ರಾಜ್ಯವಾಳುತ್ತಿದ್ದನೋ ಏನೋ!

ಇಂದು ಫೋಟೋ, ಭಾವಚಿತ್ರ ನಮ್ಮ ಜೀವನದಲ್ಲಿ ಹಾಸುಹೊಕ್ಕಾಗಿ ವ್ಯಾಪಿಸಿದೆ. ಫೋಟೋ ತೆಗೆಯುವದು ಒಂದು ವಿಶಿಷ್ಟ ಕಲೆಯಾದರೆ, ಫೋಟೋ ತೆಗೆಸಿಕೊಳ್ಳುವುದು, Pose ಕೊಡುವುದು ತಂತ್ರಾಭಿಜ್ಞತೆಯ ಸಂಕೇತವಾಗಿದೆ. ಹಾಗೆ ನೋಡಿದರೆ,ಭಾವಚಿತ್ರವೇ ಒಂದು ಸಂಕೇತ. ವ್ಯಕ್ತಿಯ ವ್ಯಕ್ತಿತ್ವ ಅವನ ಮುಖಮುದ್ರೆಯಲ್ಲಿ ಅವನ ಅಭಿರುಚಿ, ಆಸಕ್ತಿ ಸ್ಪಷ್ಟವಾಗುತ್ತವೆ. ಒಬ್ಬರನ್ನು ತೀರ ಸಹಜವಾದ ಭಂಗಿಯಲ್ಲಿ ತೆಗೆದ ಅವರ ಭಾವಚಿತ್ರವನ್ನು ಅಭ್ಯಾಸಮಾಡಿ, ಅವರ ಹಿಂದುಮುಂದುಗಳನ್ನು ಬರೆಯಬಹುದು ಎನ್ನುತ್ತಾನೆ ಉತ್ತಮ ಭಾವಚಿತ್ರಕಾರ. (ಫೋಟೋಗ್ರಾಫರ್) ಭಕ್ತ,ಸರ್ವಲೋಕಗಳೂ ಸಾಲದವ್ಯಾಪ್ತಿಯುಳ್ಳ ಪರಮಾತ್ಮನನ್ನು ತನ್ನ ಇಷ್ಟಗಲ ಹೃದಯದಲ್ಲಿ ಹಿಡಿದಿಟ್ಟುಕೊಳ್ಳುವಂತೆ ಸಂಕ್ಷೇಪವಾಗಿ ಸಂಪೂರ್ಣ ವ್ಯಕ್ತಿಚರಿತ್ರೆಯನ್ನು ಭಾವಚಿತ್ರದಲ್ಲಿ ಹಿಡಿದು ತೋರಿಸಬಹುದಾಗಿದೆ. ಬಿಂಬ, ಪ್ರತಿಬಿಂಬಗಳ ಈ ಗುಟ್ಟು ಮಾನವನ ಸಾಧನೆಗಳಲ್ಲಿ ಒಂದಾಗಿದೆ. ಭಾವಚಿತ್ರಗ್ರಹಣ(ಫೋಟೋಗ್ರಾಫಿ) ಒಂದು ಹುಚ್ಚು ಎನ್ನಬೇಕು. ಇದರ ಹುಚ್ಚು ಅನೇಕ ಪ್ರಕಾರವಾಗಿವೆ. ಕೆಲವರಿಗೆ ಕೇವಲ ಮನುಷ್ಯ ಮುಖಗಳ ಹುಚ್ಚು ಇದ್ದರೆ, ಮತ್ತೆ ಕೆಲವರಿಗೆ ಪ್ರಾಣಿಗಳ ಚಿತ್ರಗ್ರಹಣದ ಹುಚ್ಚು ಇರುತ್ತದೆ ಕಾಡುಮೃಗಗಳ ಸಹಜ ವಿಲಾಸವನ್ನು ಚಿತ್ರದಲ್ಲಿ ಹಿಡಿದಿಡಬೇಕೆಂದು ಯೋಚಿಸಿ, ಜೀವಮಾನವನ್ನೇ ತಾಳ್ಮೆಯಿಂದ ನಿರೀಕ್ಷಣೆಯಲ್ಲಿ ಕಳೆದವರು ಒಂದು ಕುಲವಾದರೆ, ಅದಕ್ಕಾಗಿ ಪ್ರಾಣವನ್ನು ಅಪಾಯಕ್ಕೊಡ್ಡಿ ಸಾಹಸ ಮೆರೆದವರು ಇನ್ನೊಂದು ಕುಲ.

ನೀವು ಎಂದಾದರೂ ಭಾವಚಿತ್ರ ತೆಗೆಸಿಕೊಂಡಿರಬೇಕು ಅಲ್ಲವೆ? ಆದರೆ ಮೊದಲ ಸಲ ತೆಗೆಸಿಕೊಂಡ ಫೋಟೋದ ಉತ್ಸಾಹ ಚಿರಸ್ಮರಣೀಯವಾಗಿರುತ್ತದೆ. ನಾನು ಚಿಕ್ಕವನಿದ್ದಾಗ, ಹೈಸ್ಕೂಲ ಮೂರನೆಯ ಫಾರಮ್‌ನಲ್ಲಿ ಓದುತ್ತಿರುವಾಗ, ಮೊದಲ ಫೋಟೋ ತೆಗೆಸಿಕೊಂಡೆ. ಅಂದರೆ ಸಮಯ ಹಾಗೆ ಬಂತು ಅನ್ನಿ, 'ಸ್ಕೂಲಡೇ'ನೂ ಆಯ್ತು, ಸಮಾರಾಂಗಣಕ್ಕೆತೆರಳುವ ವೀರಯೋಧರಂತೆ ಫೈನಲ್ ಪರೀಕ್ಷೆಗಳಿಗೆ ಹೋಗುವ ಮೆಟ್ರಿಕ್ ವಿದ್ಯಾರ್ಥಿಗಳಿಗೆ ಬೀಳ್ಕೊಡಿಕೆಯೂ ಆಯ್ತು ಅಂತ ಒಂದು ಗ್ರುಪ್‌ಫೋಟೊ ಏರ್ಪಡಿಸಿದ್ದರು, ನಮ್ಮ ಸ್ಕೂಲಿನಲ್ಲಿ- ನ್ಯಾಯವಾಗಿ ನನಗೆ ಅಲ್ಲಿ ಅಧಿಕಾರ ಇರಲಿಲ್ಲ ಅನ್ನಿ. ಆದರೆ ಒಬ್ಬಿಬ್ಬ ಮೇಷ್ಟ್ರುಗಳ ಕೈ ಕಾದು ಆ ಗ್ರುಪ್ಪಿನಲ್ಲಿ ಇರುವ ಹಾಗೆ ಏರ್ಪಡಿಸಿಕೊಂಡೆ— ಎಲ್ಲೋ ಹಿಂದೆ— ಬೆಂಚಿನಮೇಲೆ ನಿಂತು ಹೆದರಿದ ಮುಖ ಒಂದರ್ಧ ಅಂಡಂಗಿ, ಸೊಟ್ಟಟೋಪಿ, ಇಷ್ಟು ಮಾತ್ರ ಕಾಣುತ್ತವೆ ಅದರಲ್ಲಿ. ಆವಾಗಿನ ನನ್ನ ಸಂಭ್ರಮ ಹೇಳತೀರದು. ಬಿಡುವಿನಲ್ಲಿ ನನ್ನ ಹಳ್ಳಿಗೆ ಹೋದಾಗ ಈ ಸಂಭ್ರಮವನ್ನು ಬಣ್ಣಿಸಿದ್ದೂ ಬಣ್ಣಿಸಿದ್ದೆ.

ಮೊನ್ನೆ ಬಿಡುವಿನಲ್ಲಿ, ಅಲ್ಲಿಗೆ ಹೋದಾಗ ಅಲ್ಲಿಯ ಹೆಡ್‌ಮೇಷ್ಟ್ರರ ಆಫೀಸ್‌ರೂಮಿನ

ಭಾವಚಿತ್ರ ಮಾಡದ ಕೆಲಸವೇ ಇಲ್ಲ. ವಿಶೇಷತಃ ಕುರೂಪಿಗಳಿಗೆ ಅದೊಂದು ವರದಾನವಿದ್ದಂತೆ—ತಮ್ಮ ರೂಪವನ್ನು ಮರೆಮಾಜಿ ತೋರಿಸಲು. ಕನ್ಯಾಪಿತೃಗಳಂತೂ ಇದನ್ನು ಒಂದು ಒಳ್ಳೇ ಸಾಧನವಾಗಿ ಬಳಸುತ್ತಾರೆ. ಆದರೆ ಕೆಲವರ ಜೀವನದಲ್ಲಿ ಅದು ಮಹತ್ವದ ಪಾತ್ರವನ್ನುನಿರ್ವಹಿಸುತ್ತಿದೆ. ಲೇಖಕರ ಸ್ವಾನುಭವದ ಈ ವಿವರಣೆಯನ್ನು ನೀವು ನೋಡಬೇಕು.



ಗೋಡೆಗೆ ನೇತಾಡುತ್ತಿರುವ ಆ ಫೋಟೋ ನೋಡಿದೆ. ಸಿನೇಮಾ ಸುರಳಿಯಂತೆ ಆ ದಿನಗಳ ನೆನಪುಗಳು ಸಾಲಿಟ್ಟು ಕವಾಯಿತು ಮಾಡುತ್ತ ನಡೆದುವು ಕಣ್ಣಮುಂದೆ. ಆಗ ಮೇಷ್ಟ್ರು ಆಗಿದ್ದವರು ಈಗ ಹೆಡ್ ಮೇಷ್ಟ್ರು ಅಲ್ಲಿ— ಮೈಮರೆತು ನಿಂತು ಆ ಫೋಟೋ ನೋಡುತ್ತಿದ್ದ ನನ್ನನ್ನು ಕುರಿತು ನೀನೆಲ್ಲಿದ್ದಿ ಕಂಡುಹಿಡಿ— ನೋಡೋಣ! ಎಂದು ನಗೆಯಾಡಿದರು. ಕಂಡು ಹಿಡಿಯಲು ಒಂದು ಕ್ಷಣ ತಕ್ಕೊಂಡರೂ ಅದನ್ನು ಕಂಡುಕೊಂಡಾಗ ಆದ ಆನಂದ ಹೇಳತೀರದು. ಆ ಒಂದು ಭಾವಚಿತ್ರ, ನನ್ನ ಹೈಸ್ಕೂಲ ದಿನಗಳನ್ನೆಲ್ಲ ಮರಳಿಸಿ ಆಗಿನ ವಾತಾವರಣವನ್ನೆಲ್ಲ ಮತ್ತೆ ಅನುಭವಿಸುವಂತೆ ಮಾಡಿತು.

ಎರಡನೆಯ ಫೋಟೋ ತೆಗೆಸಿದ್ದು— ಆಯ್‌ಡೆಂಟಿಫಿಕೇಶನ ಕಾರ್ಡಿಗೋಸುಗ, ಮೆಟ್ರಿಕ್ ಪರೀಕ್ಷೆಗೆ ಹಿಂದಿನ ಗ್ರುಪ್ಪಿನಲ್ಲಿ ಕಳ್ಳನಂತೆ— ನುಗ್ಗಿ ಕೃತಾರ್ಥನಾಗಿದ್ದರೆ ಇಲ್ಲಿ ನಾನೇ ರಾಜನೆಂಬ— ಉತ್ಸಾಹದಲ್ಲಿ ತೆಗೆಸಿದ್ದು. ಆದರೂ ಅದೇನೋ ಗಾಬರಿ? ಆತುರ—ಅಂತೂ ರೆಪ್ಪೆ ಬಡದೇ ಇದ್ದೆ— "ಥುತ್" ಎಂದು ಫೋಟೋಗ್ರಾಫರ್, ಮತ್ತೊಮ್ಮೆ ನಿಲ್ಲಿಸಿ "ರೆಡಿ" ಎಂದ. 'yes' ಎಂದು ಬಿಟ್ಟಿದ್ದೆ ಬಾಯಿ ತಪ್ಪಿ. ಅವನೂ ಕ್ಲಿಕ್ ಮಾಡಿಯೆ ಬಿಟ್ಟಿದ್ದ—ಬಿದ್ದ ಫೋಟೋ ಹೇಗಿತ್ತು ಗೊತ್ತೇ?—ಅಣಕಿಸಲು ತೆರೆದ ಅರೆ ಬಾಯಿ, ವಿವರ್ಣಮುಖ. ಆದರೆ ಮತ್ತೊಮ್ಮೆ ಏನೂ ಅವನು ತೆಗೆಯಲಿಲ್ಲ. ಆ ಫೋಟೋ ಇನ್ನೂ ನಮ್ಮ ಬಳಿ ಇದೆ. ನನ್ನ ಹೆಂಡತಿ, ಈಗ ಮೂರು ವರ್ಷದ ನನ್ನ ಪುಟ್ಟನನ್ನು ಹೆದರಿಸಲು, ಅದನ್ನು ಆಗಾಗ ಉಪಯೋಗಿಸುತ್ತಾಳೆ.

ಮೂರನೆಯ ಪೋಟೋ, "ಗ್ರ್ಯಾಜುಯೇಟ್" ಆಗಿ ಜೀವನಾದ್ಯಂತ 'ಕೋಲು ಮುರಿಯಲಿಲ್ಲ ಹಾವು ಸಾಯಲಿಲ್ಲ' ಎಂಬ ಜಾತಿಯ ಕ್ಲಾರ್ಕು ಜೀವನದ ಯಥಾರ್ಥ ಕಠೋರತೆಯ ಕಲ್ಪನೆ ಕೂಡ ಇರದೆ-ಏನೋ ಅಕಬರನಹಾಗೆ, ಇಲ್ಲವೇ— ನೆಪೋಲಿಯನ್ನನ ಹಾಗೆ ಅದೇಕೆ ಕನ್ನಡನಾಡಿನ ವಿದ್ಯಾರಣ್ಯರಹಾಗೆ, ಮಹಾಸಾಮ್ರಾಜ್ಯವೊಂದನ್ನು ಕಟ್ಟುವ ಧೀಮಂತತೆಯನ್ನು ಪಡೆದೆ ಎನ್ನಿಸಿಕೊಳ್ಳಲು 'ಸ್ನಾತಕ' ಪದವೀದಾನ ಸಮಾರಂಭದಲ್ಲಿ, ಭಾಗವಹಿಸಿದ ಮೇಲೆ, ಭಾಡಿಗೆಯ ಗೌನು ಧರಿಸಿ, ಗಳಿಸಿದ ಪದವಿಯ ಕಾಗದದ ಸುರಳಿಯನ್ನು ದರ್ಪದಿಂದ ಕೈಯಲ್ಲಿ ಹಿಡಿದು ಶ್ರೀ ಮದ್ಗಾಂಭೀರ್ಯತಾಳಿ, ಭವಿಷ್ಯತ್ತಿನ ಲೆಕ್ಕ-ಹಾಕುತ್ತ ಈ ಆಡಂಬರದ-ವೇಷದಲ್ಲಿ, ಬೇರೆ ಒಳ್ಳೆಯ ಸ್ಟುಡಿಯೋ ಖಾಲಿ ಇರದೇ ಯಾವದೋ ಮೂಲೆಯಲ್ಲಿರುವ ಸ್ಟುಡಿಯೋ— ಒಂದನ್ನು ಹೊಕ್ಕು ಬೆಳಕುಸಾಲದ ಸ್ಥಿತಿಯಲ್ಲಿ ಗಡಬಿಡಿಯಲ್ಲಿ ತೆಗೆಸಿದ್ದು. ಇಡಿಯ ದಿನದ ಆಯಾಸವೇ ಮೂರ್ತಿಮತ್ತಾಗಿ ಎದ್ದು ಕಾಣುತ್ತದೆ. ಈ ಪೋಟೋ, ನನ್ನ ಹೆಂಡತಿಗಿಂತ ನನ್ನ ತಾಯಿಗೇ ಇಷ್ಟ. '' ಮಗ ಬಿ. ಎ. ಪಾಸು ಮಾಡಿದ್ದಾನೆ ಎಂಬುದಕ್ಕೆ ಜೀವಂತ-ಸಾಕ್ಷಿ! ಎಂದು ಹೆಮ್ಮೆಯಿಂದ ಹೇಳುತ್ತಾಳೆ'' ಆವೊಂದು ಸಾಕ್ಷಿಯೊಂದು ಬಿಟ್ಟರೆ, ಬೇರೆ ಯಾವ ಸಾಕ್ಷಿಯೂ ಆಕೆಗೆ ಸಿಗದು, ನನಗೂ ಸಿಗದು, ಅಂದರೆ ಬಿ. ಎ. ಆದವನೂ—ಆಗದವನೂ ಮಾಡುವ ಧಂದೆ—ಒಂದೆ-ಸರಕಾರೀ ನೌಕರಿ, ಕಾರಕೂನ್ ಇಂಥ ವಿದ್ಯಾವಂತಿಕೆಯಿಂದ ಸ್ವಂತಕ್ಕೂ, ಜನಕ್ಕೂ ಸಮಾಜಕ್ಕೂ ಸಹಾಯ ಆಗದಿದ್ದರೂ ಸರ್ಕಾರಕ್ಕೆ ಒಂದು ಲಾಭವಿದೆ. 'ಲಿಟರೇಟ್' (ವಿದ್ಯಾವಂತ)— ಜಂಗುಳಿ ಶೇಕಡಾ ಇವನಿಂದ ಇಷ್ಟಾದರೂ ಹೆಚ್ಚಳಿಕ್ಕೆ ಆಯಿತಲ್ಲ— ಅದೇ ಆ ಲಾಭ. ಪದವೀ ಸ್ವೀಕಾರ ಸಂದರ್ಭದಲ್ಲಿ ಸಂಭ್ರಮದಿಂದ ತೆಗಿಸಿದ ನನ್ನ ಭಾವಚಿತ್ರ ಮೂರನೆಯದು ನನ್ನ ತಾಯಿಗೆ ಮಾತ್ರ ಆಪ್ಯಾಯಮಾನವಾದದ್ದು.

ನಾಲ್ಕನೆಯದು ಒಂದನ್ನು ವಿವರಿಸಿ ನನ್ನ ಭಾವಚಿತ್ರ ಕಥಾಲಾಪವನ್ನು ಮುಗಿಸ್ತೇನೆ. ಇದು ನನ್ನ ಈ ಕ್ಲಾರ್ಕುಜೀವನದಲ್ಲಿ ಬಹು ಮಹತ್ವದ್ದು ಎಂದು ಹೇಳಬೇಕು. ತೂಕ ತಪ್ಪಿದಾಗಲೆಲ್ಲ, ಇದು ಬ್ಯಾಲನ್ಸರ ಆಗಿ ಬಂದು ಈ ಬಡ ಜೀವನವನ್ನು ಬದುಕಿಸಿದೆ, ವಿಗಸದ ಪ್ಲೇಗಿನಿಂದ ಉಳಿಸಿದೆ. ನನ್ನ 'ಶೋ'— ನೋಡಲು ಬಲು ಲಕ್ಷಣವಂತೆ. ಮನಸ್ಸು ನಿಜವಾಗಿಯೂ ಬೇಸಿಗೆಯಲ್ಲಿ ಆಯಸ್ಕ್ರೀಂ. ಚಳಿಗಾಲದಲ್ಲಿ 'ಇರಾಣೀ ಟೀ' ಅಷ್ಟು ಹಿತ. ಆದರೆ ಸ್ವಲ್ಪ ಮುಂಗೋಪಿ ಅಷ್ಟೇ. ಬಿ. ಎ. ಪಾಸು ಮಾಡಿದ 'ಮಾರಾಯ್ರು' ಮಾಮಲೇದಾರ ಆಗಿದ್ದಾರು ಎಂದು ಯೋಚಿಸಿದ್ದ ಆದರ್ಶ ಆಕೆಯದು. ಆಕೆಯ ದುರ್ದೈವ ನಾನು ಕ್ಲಾರ್ಕು ಆಗಿದ್ದೇನೆ. ಅವಳ ಘನವಾದ ಆದರ್ಶಕ್ಕೆ ಬಲವಾದ ಆಘಾತ ಇದು. ಆ ಕಾಲದಲ್ಲಿ ಬಿ. ಎ. ಓದಿದ ಗಂಡು ಕ್ಲಾರ್ಕು ಅಂದರೇನು, ಎಂದು ಈ ನಡುವಯಸ್ಸಿನಲ್ಲಿಯೂ ಆಕೆಗೆ ಅರ್ಥನಾಗಿಲ್ಲ, ಇದು 'ಪ್ರಜಾತಂತ್ರ' ಅಂತ ಹೇಳಿದರೆ, ಆಕೆ ನಂಬುವುದೇ ಇಲ್ಲ.

ಭಾವಚಿತ್ರಕ್ಕೂ ಈ ಪ್ರವರಕ್ಕೂ ಏನು ಸಂಬಂಧ ಎಂದು ಬೇಸರಪಡಬೇಡಿ— ಇರುವ ರಹಸ್ಯ ಇದೆ. ಹೇಳಿದೆನಲ್ಲ-ಆಕೆ ಸ್ವಲ್ಪ ಮುಂಗೋಪಿ ಅಂತ, ಶೀಘ್ರಕೋಪಿಯೂ ಹೌದು. ಅದು ಆಗಾಗ ನಾಲ್ಕಾರು ಮಕ್ಕಳ ನಮ್ಮ ಸಂಸಾರದಲ್ಲಿ ಹೊಗೆಯಾಡುತ್ತಿರುತ್ತದೆ— ನೀರೊಲೆಗೆ ಮಳೆಗಾಲದಲ್ಲಿ ಹಸಿ ಸೌದಿ ಹಾಕಿದಂತೆ! ಹೊರಗೆ ಹೋಗುವ ಹಾಗಿಲ್ಲ...ಹಾಗಾಗಿಬಿಡುತ್ತದೆ. ಆಗ, ಕಣ್ಮರೆಯಾದ ಸೂರ್ಯ ಮೋಡಗಳನ್ನೆಲ್ಲ ಚದುರಿಸಿ, ತೊಳತೊಳಗುವಂತೆ, ಮನೆಯನ್ನು ನಗನಗಿಸಲು ಈ ಫೋಟೊ ಸಹಾಯ ಮಾಡುತ್ತದೆ. ಈ ಫೋಟೋದಲ್ಲಿ ಅಂಥಾದ್ದೆನಂದರೆ— ಇದು ನಮ್ಮಿಬ್ಬರ ಮದುವೆಯಲ್ಲಿ ತೆಗೆದ ಭಾವಚಿತ್ರ, ವಸ್ತ್ರಾಲಂಕೃತರಾಗಿ, ನವದಂಪತಿಗಳಾಗಿ ನಿಂತ 'ಫೋಟೊ', ಲಜ್ಜೆಯಿಂದ ನಸುಬಾಗಿದ್ದರೂ, ಹೃದಯಾಂತರಾಳದಲ್ಲಿಯ ಆಕೆಯ ಆನಂದ, ಉತ್ಸಾಹ. ಆ ಬಾಲಕಪೋಲಗಳಲ್ಲಿ ಈಗಲೂ ಎದ್ದು ಕಾಣುತ್ತವೆ. ತನ್ನ ಚೆಲ್ವಿಕೆಯಲ್ಲಿ ಹೆಮ್ಮೆ ಇರುವ ಈ ಮುಂಗೋಪಿಗೆ ಆ ಫೋಟೋ ಬಲು ಮೆಚ್ಚು. ಬಂದವರಿಗೆಲ್ಲ ಅದನ್ನು ತೋರಿಸಿ 'ನೀವಡ ಚಂದನದ ಬೊಂಬೆಯಂತಿದೀರಲ್ರೀ ಇಲ್ಲಿ ಎಂದು ಅವರು ಹೊಗಳಿದಾಗ ಅವಳಿಗಾಗುವ ಸಂತೋಷ ಹೇಳಲಾಸಲ್ಲ. ಒಮ್ಮೆ ಈ ರಹಸ್ಯವನ್ನು ಅರಿತು ಹೊಗೆಯೆದ್ದ ಸಮಯದಲ್ಲಿ ಪ್ರಯೋಗಿಸಿದೆ— ನಿರ್ಲಕ್ಷ್ಯದಿಂದ ಮೈಮರೆತವನಂತೆ ಈ ಫೋಟೋವನ್ನೇ ದಿಟ್ಟಿಸುತ್ತ ನಿಂತೆ, ಇದನ್ನು ಅವಳೂ ನೋಡಿರಬೇಕು. ಎದ್ದ ಹೊಗೆ ಶಾಂತವಾಯಿತು. ಮುಂದೆ ಹೊಗೆ ಎದ್ದಾಗಲೆಲ್ಲ ಇದನ್ನು ಪೆನ್ಸಿಲಿನ ಔಷಧದಂತೆ ಮಾಡಿಕೊಂಡೆ. ಅದು ಈಗ ರೂಢವಾಗಿಬಿಟ್ಟಿದೆ. ಇದಲ್ಲದೆ ಇನ್ನೂ ಎಷ್ಟೋ ಭಾವಚಿತ್ರ ಇವೆ. 'ಅಲ್ಬಂ' ಬೇರೆ ಮಾಡಿಬಿಟ್ಟಿವೆ ಮಕ್ಕಳು. ನಾನು ಮನೆಯಲ್ಲಿ ಇಲ್ಲದಾಗ ಬಂದ ನನ್ನ ಸ್ನೇಹಿತರ ಮುಂದೆ, ಈ ಅಲ್ಬಂ ಇಡಿಸುತ್ತಾಳೆ ನನ್ನ ಶೋ—'ಹಿರಿಯರ ಆಟಿಕೆಯೆಂದು ಅದಕ್ಕೆ ನಮ್ಮ ಹುಡುಗರೆಲ್ಲ ಹಾಸ್ಯಮಾಡುತ್ತಾರೆ.' ಉದಾಹರಣೆಗೆಂದು ನಾಲ್ಕು ಭಾವಚಿತ್ರ ಹೇಳಿದೆ.

ಭಾವಚಿತ್ರಗಳಲ್ಲಿಯ ಹುಡುಗಿಯರ ಸೊಗಸಿಗೆ ಚೆಲುವಿಗೆ ಎಷ್ಟು ಗಂಡುಗಳು ಮೋಸಹೋಗಿಲ್ಲ. touch up ಮಾಡಿಸಿಬಿಟ್ಟು, ತಮಗಿಲ್ಲದುದನ್ನು, ಆದರೆ ತಾವು ಬಯಸಿದ್ದನ್ನು ತಮ್ಮ ಭಾವಚಿತ್ರದಲ್ಲಿ ಕಾಣುವ ಚಪಲ ಕೆಲವರಿಗೆ, ಕಡ್ಡಿಯ ಪೈಲವಾನಂತಿರುವವನ ಗೆಳೆಯನಿಗೆ ದಪ್ಪ ಕನ್ನಡಕ ಇವೆ. ಮನೆಯಲ್ಲಿ ಹೋಗಿ ಅವನ ಫೋಟೋ ನೋಡಿದರೆ; ಜೈಹಿಂದ್ ಸೆಲ್ಯೂಟ್ ಸ್ವೀಕರಿಸುವ ನೇತಾಜಿಯ ಅಪರಾವತಾರ. ಇನ್ನು ಕೆಲವರು ತಂದೆಗಳಿದ್ದಾರೆ. ತಮ್ಮ ಪುತ್ರಿಯರ Touched up ಫೋಟೋ ಇಟ್ಟುಕೊಂಡು ವರಗಳ ಬೇಟೆಯಾಡುತ್ತಿರುತ್ತಾರೆ. ಇಂಥ ಒಂದು ಬಲೆಗೆಬಿದ್ದ ನನ್ನ ಗೆಳೆಯ ಈಗ ಫೋಟೋ ಎಂದರೆ ಭ್ರಮೆ. ಪ್ರತ್ಯಕ್ಷ ಕಂಡರೂ ಪ್ರಮಾಣಿಸಿ, ಸ್ವತಃ ನೋಡಿ ಎಂಬ ನಿರ್ಧಾರಕ್ಕೆ ಬಂದಿದ್ದಾನೆ.

ಇವರೊಬ್ಬರೇ ಏಕೆ, ಫೊಟೋಗ್ರಾಫರ ಎಂದು ಎಲ್ಲರೂ ಹೆದರಬೇಕಾಗುವದು ಸಹಜವೇ. ಕ್ಷೌರಿಕನ ಕೈಯಲ್ಲಿ ತಲೆಯೊಪ್ಪಿಸಿದಾಗ, ಅವನ ಚೇಷ್ಟೆಗಳನ್ನೆಲ್ಲ ಸಹಿಸುತ್ತ, ಅಶೋಕವನದ ಸೀತೆಯಂತೆ, ಅವನತಮುಖಿಯಾಗಿ, ತೆಪ್ಪಗಿರುವುದು ಜಾಣತನವಾದರೂ ಎಷ್ಟು ಕಷ್ಟವೋ,ಅಷ್ಟೇ ಕಷ್ಟ ಈ ಫೊಟೋಗ್ರಾಫರ್— ಜೊತೆ ಏಗುವುದು! ಎಲ್ಲ ಜೋಡಿಸಿ ಕರಿಬಟ್ಟೆಯ ಮುಸುಕಿನಲ್ಲಿ, ಮಾಯಾವಿದನಂತೆ ಕೆಲಕಾಲ ಹೊಕ್ಕು, ಮತ್ತೆ ಹೊರಬಂದು ಮತ್ತೆ ಏನೇನೋ ಸರಿಪಡಿಸಿ,"ರೆಡಿ" ಎನ್ನುತ್ತಾನೆ ಅಷ್ಟೆ. ನಾವು 'ರೆಡಿ'ಯಾಗಿರುತ್ತೇವೆ. ಅವನು ಮಾತ್ರ ತಾನು 'ರೆಡಿ' ಆಗಿರುವುದಿಲ್ಲ.

'ಓ ನೀವು ಹೀಗೆ, ಹಾ ಅಲ್ಲ ಹಾಗೆ, Right ಎನ್ನುತ್ತಾನೆ ಈ ಆಟದಲ್ಲಿ ಬೆಕ್ಕಿನ ಕೈಯಲ್ಲಿ ಇಲಿ ಸಿಗುವ ಹಾಗೆ, ನಾವು ಸುಸ್ತಾಗಿ ಕೊನೆಗೆ ಇವನಿಗೂ ಇವನ ಫೋಟೋಗ್ರಾಫಿಗೂ ಬೆಂಕಿ ಬಿತ್ತು ಎನ್ನುವ ಸ್ಥಿತಿಯಲ್ಲಿದ್ದಾಗ 'ರೆಡಿ' ಎಂದು ಕ್ಲಿಕ್ ಮಾಡಿ ಬಿಡುತ್ತಾನೆ. ಪ್ರಾರಂಭದ ನಮ್ಮ ಉಲ್ಲಾಸವೆಲ್ಲ ಉಡುಗಿದ ಮೇಲೆ. ಇವನು ತೆಗೆದ ಫೋಟೋ ಸರಿಯಾಗಿ ಬಂದರೆಷ್ಟು! ಬಿಟ್ಟರೆಷ್ಟು!!



ಅವರಿಬ್ಬರೂ ನೆರೆಹೊರೆಯವರು, ಪರಸ್ಪರ ಸುಖಿ ಎಂದೇ ಭಾವಿಸಿದ್ದರು. ಆದರೆ ಇಬ್ಬರೂ ತಪ್ಪಿದ್ದರು. ಅದು ಹೇಗೆ ಎಂಬುದನ್ನು ತಿಳಿಯಬಯಸುವಿರಾದರೆ ಈ ಕಥೆಯನ್ನು ನೀವು ಓದಬೇಕು.

ಸಣ್ಣ ಕಥೆ

# "ನೀವೂ ಒಬ್ಬರೇ?"

ಶ್ರೀಮತಿ ಶಾಂತಾದೇವಿ ಕಣವಿ

ಸ್ನಾನ ಮಾಡಿ ಇನ್ನೊಮ್ಮೆ ಚಹ ಕುಡಿಯಬೇಕೆಂದು ಅಡಿಗೆಯ ಮನೆಗೆ ಹೋಗಲು ಕೋಣೆಯ ಬಾಗಿಲು ತೆರೆದು ಹೊರಗೆ ಬಂದ ವಿಶ್ವನಾಥ.

೦ ೦ ೦ ೦

ಕೋಣೆಯ ಬಾಗಿಲು ತೆರೆದ ಚಂದ್ರಕಾಂತ ಮುಂದಿನ ವರಾಂಡಕ್ಕೆ ಬಂದ. ರಾತ್ರಿಯೆಲ್ಲ ಮಳೆ ಬೀಳುತ್ತಿದ್ದುದರಿಂದ ನೆಲವೆಲ್ಲ ಹಸಿಯಾಗಿತ್ತು. ಹವೆಯೂ ತಂಪಾಗಿತ್ತು. ಬೆಚ್ಚಗಿನ ರಗ್ಗು ಹೊದ್ದು ಮಲಗಿದ್ದವನಿಗೆ ಹೊರಗಿನ ಗಾಳಿಯಿಂದ ಮೈಯಲ್ಲಿ ನಡುಕವುಂಟಾಯಿತು. ಹಾಗೆಯೇ ಬಾಗಿ ಮುಂದಿನ ಅಂಗಳ ನೋಡಿದ.

ಅಲ್ಲಿ ತುಲಸೀಕಟ್ಟೆಯ ಮೇಲೆ ಪೂಜಾ ಸಾಮುಗ್ರಿಗಳನ್ನೆಲ್ಲ ಇಟ್ಟುಕೊಂಡು ಭಕ್ತಿಯಿಂದ ತುಲಸಿಯನ್ನು ಪೂಜಿಸುತ್ತಿದ್ದಾಳೆ ವಿಶ್ವನಾಥನ ಹೆಂಡತಿ ಕುಸುಮಾ. ಇಷ್ಟೊಂದು ನಸುಕಿನಲ್ಲಿಯೇ ಎದ್ದು ಸ್ನಾನಮಾಡಿ ಮಡಿಯುಟ್ಟಿದ್ದಾಳೆ. ವಯಸ್ಸು ಸುಮಾರು ತನ್ನ ಸಾಧನಾಳಷ್ಟೇ ಇರಬಹುದು. ಆದರೆ ವಯಸ್ಸಿಗೆ ಮೀರಿದ ಗಾಂಭೀರ್ಯವಿದೆ ಮುಖದಲ್ಲಿ. ಹೆಚ್ಚು ಮಾತುಕತೆ ಇಲ್ಲ, ಸ್ವಚ್ಛಂದ ನಗುವಿಲ್ಲ. ತಾನು ನೆರೆಮನೆಗೆ ಬಂದು ಇಷ್ಟು ದಿನವಾದರೂ ಅವಳು ಜೋರಾಗಿ ಮಾತನಾಡಿದ್ದು ನಕ್ಕದ್ದು ಕೇಳಿಯೇ ಇಲ್ಲ. ಗಂಡ-ಹೆಂಡಿರು ಕೂಡಿ ಹೊರಗೆ ಹೋಗುವದೇ ಕಡಿಮೆ. ಎಲ್ಲೋ ಅಪರೂಪಕ್ಕೆ. ದಿನವೂ ಅವಳಾಯಿತು ಮನೆಗೆಲಸವಾಯಿತು. ಮತ್ತೆ ಎರಡು ಮಕ್ಕಳ ಲಾಲನೆ-ಪಾಲನೆ ಬೇರೆ.

ವಿಶ್ವನಾಥ ಬಹಳ ಕೋಪಿಷ್ಠನೆಂದು ಕಾಣುತ್ತದೆ. ತನಗೆ ಆಗುವ ಸೇವೆ ಸತ್ಕಾರಗಳಿಗೆ ಸ್ವಲ್ಪವೂ ಲೋಪಬರಬಾರದು. ಮನೆಯಲ್ಲಿ ಆಗಾಗ ಅವನದೇ ಆರ್ಭಟ ಕೇಳಿಬರುತ್ತದೆ. ಅವನ ಜಬರ್ದಸ್ತು ನೋಡಿದರೆ ಪಾಪ ಅವಳಿಗೆ ಉಸಿರೆತ್ತಲು ಬಿಡುವದೇ ಇಲ್ಲ ಅನಿಸುತ್ತದೆ. ಮಕ್ಕಳು ಅತ್ತರೆ ಗದ್ದಲ ಮಾಡಿದರೆ ತನಗೆ ಎಷ್ಟು ಕೆಲಸಗಳಿದ್ದರೂ ಆಯಾಸವಾಗುತ್ತಿದ್ದರೂ ಮಕ್ಕಳನ್ನು ಶಾಂತವಾಗಿ ಅವಳೇ ಸಮಾಧಾನ ಮಾಡುತ್ತಾಳೆ.

ಇವನಿಗೂ ಹೆಂಡತಿಯ ಸೌಂದರ್ಯ-ಶೃಂಗಾರ ನಕ್ಕು ನಲಿದಾಡುವದು ಕೂಡಿ ಅಡ್ಡಾಡುವದು ಯಾವುದೂ ಬೇಡವೆಂದು ಕಾಣುತ್ತದೆ. ಅವಳೂ ಸಂಪ್ರದಾಯಸ್ಥರ ಮನೆಯವಳೆಂದು ಸಾಧನಾ ಹೇಳುತ್ತಿದ್ದಳು. ಅದಕ್ಕೇ ಈ ತುಲಸೀ-ಪೂಜೆ, ಮಡಿ-ಹುಡಿ ಎಲ್ಲಾ... ಎಂದು ವಿಚಾರಿಸುತ್ತಿದ್ದ ಚಂದ್ರಕಾಂತ. ಪ್ರದಕ್ಷಿಣೆ ಮುಗಿಸಿ ಇನ್ನೊಮ್ಮೆ ನಮಸ್ಕರಿಸಿಸುತ್ತಿದ್ದಂತೆಯೇ ಒಳಗಿನಿಂದ 'ಕುಸುಮಾ' ಎನ್ನುವ ಗಂಡನ ಕರೆ ಕೇಳಿದ ಕುಸುಮಾ ಪೂಜಾ—ಸಾಮುಗ್ರಿಗಳನ್ನೆತ್ತಿಕೊಂಡು ಅವಸರದಿಂದ ಒಳಗೆ ನಡೆದಳು.

"ಸಾಧನಾ ಏ ಸಾಧನಾss"

"ಯಾಕ್ರಿ? ಏನ ಕೆಲಸದ ?"

"ಕೆಲಸ ಏನೂ ಇಲ್ಲಾ, ಆದರ ಇವತ್ತ ಸಂಜಿಮುಂದ ಪ್ರಭಾಕರರಾಯರ ಮನೀಗೆ ಹೋಗೂದದ. ನೆನಪದsನೋ ಇಲ್ಲೋ ಅಂತ ಕೇಳಿದೆ."

"ಇವತ್ತ ನಾನು ಎಲ್ಲಿಗ್ಯೂ ಹೊರಗ ಬರೂದಿಲ್ಲ."

"ಯಾಕ?"

"ಯಾಕೇನು ? ನನಗ ಇವತ್ತ ಹೊರಗ ಹೋಗೂ ಹಾಂಗ ಅನಿಸಿಲ್ಲ. ನಾ ಮನ್ಯಾಗ ಇರತೀನಿ."

"ಇವತ್ತ ನಾಲ್ಕೂವರೀಗೆ ನಾವಿಬ್ಬರೂ ನಿಮ್ಮ ಮನೀಗೆ ಬರತೀವಿ ಅಂತ ಅವರಿಗೆ ನಿನ್ನೆ ಹೇಳಿದ್ನೆಲ್ಲ ನಾನು."

"ನಿಮಗ ಯಾರ ಹೇಳಿದ್ರು ಹಾಂಗ ಹೇಳ್ರಿss ಅಂತ? ನಾವಿಬ್ರೂ ಬರ್ತೀವಿ ಅಂತ ಯಾಕ ಹೇಳಿದಿರಿ ? ನನ್ನ ಕೇಳಿದ್ರೇನು ಹೋಗೂಣೇನೂ ಅಂತ ? ನಾ ಏನ ಬರೂದಿಲ್ಲ ನೋಡ್ರಿ. ಅವರ ಮನೀಗೆ ಇವತ್ತ, ನೀವು ಒಬ್ಬರs ಹೋಗ್ರಿದ್ದರ ಹೋಗ್ರಿ. ನಾನು ಶಕುಂತಲಾನ ಕೂಡ ಅಡ್ಡ್ಯಾಡಲಿಕ್ಕೆ ಹೋಗ್ತೀನಿ."

"ಹೊರಗ ಹೋಗೂ ಮನಸ್ಸಿಲ್ಲ ಅಂತೀದಿ, ಮತ್ತ ಶಕುಂತಲಾನ ಕೂಡ ಅಡ್ಡ್ಯಾಡಲಿಕ್ಕೆ ಹೋಗ್ತೀನಿ ಅಂತೀದಿ. ಯಾಕ ? ನನ್ನ ಕೂಡ ಇವತ್ತ ಅವರ ಮನೀಗೆ ಬರಲಿಕ್ಕೇ ಬೇಕು ನೀನು."

"ನಾ ಬರೂದಿಲ್ಲಾ ಅಂದರ ಬರೂದಿಲ್ಲ. ನನಗ ಮನಸ್ಸಿಲ್ಲದ ಕಡೆ ಬರಲಿಕ್ಕೇ ಬೇಕು ಅಂತ ಒತ್ತಾಯ ಯಾಕ ಮಾಡ್ತೀರಿ ನೀವು?'

ಸಾಧನಾಳ ಧ್ವನಿ ತಾರಸ್ವರಕ್ಕೇರಿತ್ತು; ಮುಂದೆ ಅವಳ ಗಂಡ ಚಂದ್ರಕಾಂತನ ಧ್ವನಿ ಕೇಳಿಸಲೇ ಇಲ್ಲ.

ತಲ್ಲೀನನಾಗಿ ಓದಲು ಕುಳಿತಿದ್ದ ವಿಶ್ವನಾಥನ ಅಭ್ಯಾಸಕ್ಕೆ ನೆರೆಮನೆಯ ಗಂಡಹೆಂಡಿರ ವಾಗ್ವಾದದಿಂದ ಭಂಗ ಬಂದಿತ್ತು. ಈಗ ನಡೆಯುವದು ಇಂದೇ ಹೊಸ ಮಾತೇನಲ್ಲ; ನಿತ್ಯವೂ ಇದ್ದದ್ದೇ. ತನ್ನ ಅಭ್ಯಾಸದ ಕೋಣೆಯಲ್ಲಿ ಕುಳಿತು ದಿನಕ್ಕೊಮ್ಮೆಯಾದರೂ ಅವರ ಜಗಳ... ಅಲ್ಲಲ್ಲ... ಸಂಭಾಷಣೆ ಕೇಳುವದು ವಿಶ್ವನಾಥನ ದಿನಚರಿಯ ಒಂದು ಭಾಗವಾಗಿತ್ತು.

ಗಂಡ ಹೇಳಿದ ಒಂದು ಮಾತಿಗೂ 'ಹೂಂ' ಎನ್ನುವದಿಲ್ಲ ಆ ಸಾಧನಾ. ಎಲ್ಲದಕ್ಕೂ ವಿರೋಧವೇ. ಮನೆಗೆಲಸ ಮಾಡಿಕೊಂಡು ಮನೆಯಲ್ಲಿರುವದೆಂದರೆ ಅವಳಿಗೆ ಬೇಡ. ದಿನಕ್ಕೊಂದು ಚಂದದ ಸೀರೆಯುಟ್ಟು, ತರತರದ ಮುಡಿ ಕಟ್ಟಿ ಗಂಡನೊಡನೆ ಹೊರಗೆ ಹೋಗುವದು ಬೇಕು. ಹೋದಲ್ಲಿಯೇ ಹೊಟ್ಟೆತುಂಬ ಉಪಹಾರಮಾಡಿ ಬಂದರೆ ತೀರಿತು. ಮನೆಗೆ ಬಂದ ಮೇಲೆ ಅಡಿಗೆ ಮನೆಗೆ ಕಾಲಿಡುವದೂ ತಪ್ಪುತ್ತದೆ ಎಂದು ಅವಳ ಎಣಿಕೆ. ಗಂಡ ಏನು ಮಾಡಿದರೂ ತನ್ನ ಅನುಮತಿಯಿಂದಲೇ ಮಾಡಬೇಕು ಎನ್ನುವ ಹಟ ಅವಳದು. ಆ ಚಂದ್ರಕಾಂತನಿಗಾದರೂ ಹೆಂಡತಿಯ ಮಾತಿಗೆ ಕಿವಿಗೊಡದಿರುವದು ಸಾಧ್ಯವೇ ಇಲ್ಲ. ಇಂದು ನಾನು ಅಡಿಗೆ ಮಾಡಲಾರೆ ಎಂದು ಅವಳೆಂದರೆ ಸಾಕು ಜ್ಞಾನಾವಳಿಯಿಂದ ಎರಡು ತಾಟು ತರಿಸಿದನೇ! ಅವಳನ್ನು ಸಿಟ್ಟಿಗೆಬ್ಬಿಸುವದೂ, ವಾದ ಹಾಕುವದೂ ಅವನಿಗೂ ಬಹಳ ಪ್ರೀತಿ ಎಂದು ಕಾಣುತ್ತದೆ. ಒಂದೊಂದು ದಿನ ಅವಳು ಸುಮ್ಮನಿದ್ದರೂ ತಾನೇ ಮುಂದಾಗಿ ಜಗಳ ತೆಗೆಯುತ್ತಾನೆ. ತಮ್ಮಿಬ್ಬರ ಮನೆಗಳ ನಡುವೆ ಒಂದೇ ಗೋಡೆ. ಆದ್ದರಿಂದ ಅವನ ಮನೆಯ ಮಾತೆಲ್ಲ ತನ್ನ ಕಿವಿಯ ಮೇಲೆ.

ಅಬ್ಬಾ ! ಅವನ ಸಾಧನಾ ಎಷ್ಟುದ್ದ ನಾಲಿಗೆ ಹರಿಬಿಡುತ್ತಾಳೆ. ಎಷ್ಟು ತಿರುಗಿ ಉತ್ತರ ಕೊಡುತ್ತಾಳೆ! ಅವನಿಗೆ ಅವಳು ಹೇಳಿದ ಹಾಗೆ ನನಗೇನಾದರೂ ನನ್ನ ಕುಸುಮಾ ತಿರುಗಿ ಉತ್ತರ ಹೇಳಿದ್ದರೆ ಅವಳನ್ನು ಹೀಗೇ ಜಜ್ಜಿ ಬಿಡುತ್ತಿದ್ದೆ ಎಂದುಕೊಳ್ಳುತ್ತ ವಿಶ್ವನಾಥ ಕೈಯಲ್ಲಿಯ ಪುಸ್ತಕವನ್ನು ಮೇಜಿನ ಮೇಲೆ ದೊಪ್ಪನೆ ಚೆಲ್ಲಿ ಕೈಗಡಿಯಾರ ನೋಡಿಕೊಂಡ.

"ಏನ್ರೀ" ಸಾಧನಾಳ ಮೃದುವಾದ ಕರೆ ಕೇಳಿಥ ಚಂದ್ರಕಾಂತನೂ ಒಳಗೆ ನಡೆದ.

೦ ೦ ೦ ೦

ರಾತ್ರಿ ಗಂಟೆ ಎರಡಾದರೂ ನಿದ್ರೆ ಬಾರದೆ ಹಾಸಿಗೆಯ ಮೇಲೆ ಹೊರಳುತ್ತಿದ್ದ ವಿಶ್ವನಾಥ ಸಣ್ಣ ಧ್ವನಿಯಲ್ಲಿ "ಕುಸುಮಾ" ಎಂದ. ಪಕ್ಕದ ಮಂಚದ ಮೇಲೆ ಮಲಗಿದ್ದ ಕುಸುಮಾಳಿಂದ ಉತ್ತರ ಬರಲಿಲ್ಲ. ಈ ಸಲ ಸ್ವಲ್ಪ ಜೋರಾಗಿ "ಕುಸುಮಾಽಽ" ಎಂದ

"ಓಂ್ಞ ಯಾಕ?" ಎಂದಳು ಕುಸುಮಾ ನಿದ್ದೆ ಗಣ್ಣಿನಲ್ಲಿ

"ನಿದ್ದಿ ಬಂದಽದೇನು? ಏನಿಲ್ಲಾ ಮಲಗಿಕೋ" ಎಂದ ವಿಶ್ವನಾಥ ನಿರುತ್ಸಾಹದಿಂದ.

ಸರಿ; ಕುಸುಮಾ ಮಗ್ಗಲು ಹೊರಳಿದಳು ಕೊಂಚ ಹೊತ್ತಿನಲ್ಲಿಯೇ ಅವಳ ಸರಾಗವಾದ ಉಸಿರಾಟ ಕೇಳಿ ಬಂದಿತು. ವಿಶ್ವನಾಥನ ಜೀವ ಚಡಪಡಿಸಿತು.

'ನನಗ್ಯಾಕ ಹೀಂಗಾಗ್ತದ ಏನಾಗ್ತದನೋ ತಿಳೀವೊಲ್ಲದು ಏನೋ ಮನಸ್ಸಿಗೆ ಒಂದು ಥರಾ ಅನಸ್ತದ; ನಿದ್ದೀನೂ ಬರಲೊಲ್ಲದು. ಒಮ್ಮೆಲೆ ಕಳವಳ, ನಿರಾಶೆ ಎಲ್ಲಾ ಹುಟ್ಟಿ ಹೊರಚಲ್ಲಿ ದಾಂಗ ಆಗಲಿಕ್ಕೆ ಹತ್ತೇದ ಮುಂಜಾನೆ ಎಷ್ಟ ಆರಾಮ ಇದ್ದೆ. ಈಗೆಽರೆ ಆರಾಮ ಇದ್ದೀನಿ. ತಲಿ ನೋವು' ಹೊಟ್ಟೆನೋವು, ನೆಗಡಿ, ಕೆಮ್ಮು ಥೆ ಥೆ ಒಂದೂ ಇಲ್ಲ ನೋವು ಆದದ್ದು ಮೈಗಲ್ಲ ನನ್ನ ಮನಸ್ಸಿಗೆ ಅಂತ ಕಾಣಸ್ತದ. ಸಂಜೀ ಮುಂದ ವಾಕಿಂಗ್ ಹೋಗಿ ಬರೂಮುಂದ ದಾರಿಯೊಳಗ ಚಂದ್ರಕಾಂತ-ಸಾಧನಾ ಭೆಟ್ಟಿ ಯಾದರು. ಆವಾಗಿಂದ ಹಿಂಗಾಗಲಿಕ್ಕೆ ಹತ್ತೇದ ಏನ ಕಾರಣ ಇರಬೇಕು?

ಸಂಜೆಯ ಶೋ ಮತ್ತೆ ತೆರೆಯ ಮೇಲೆ ಮೂಡತೊಡಗಿತು, ಆ ಮಧ್ಯರಾತ್ರಿಯಲ್ಲಿ...

ಸಾಧನಾ ತಿಳಿ ಗುಲಾಬಿ ಹೂವಿರುವ ಬಿಳಿ ನೈಲಾನ್ ಸೀರೆ, ಹಸಿರು ಚೋಳಿ ತೊಟ್ಟಿದ್ದಾಳೆ. ಕೂದಲುಗಳನ್ನು ಎತ್ತರಿಸಿ ಕಟ್ಟಿ ತುರುಬಿಗೆ ಮಲ್ಲಿಗೆ ಮಾಲೆ ಮುಡಿದಿದ್ದಾಳೆ. ಗಂಡನೊಡನೆ ಏನೋ ಮಾತನಾಡಿ ನಕ್ಕ ನಗೆ ಅವಳ ಮುಖದ ಮೇಲೆ ಇನ್ನೂ ಇದೆ. ತನ್ನನ್ನು ದಾಟಿ ಅವರು ಮುಂದಕ್ಕೆ ಹೋಗುವಾಗ ಚಂದ್ರಕಾಂತ 'ನಮಸ್ಕಾರ' ಎನ್ನು ವಂತೆ ಕೈ ಎತ್ತಿದ. ತಾನೂ ಕೈಯೆತ್ತಿದ. ನಾಲ್ಕು ಹೆಜ್ಜೆ ಮುಂದೆ ನಡೆದ ಮೇಲೆ ತನಗೆ ಏಕೋ ಇನ್ನೊಮ್ಮೆ ಆ ಜೋಡಿಯನ್ನು ನೋಡಬೇಕೆನ್ನಿಸಿ ಹೊರಳಿ ನೋಡಿದ. ಅವರಿಬ್ಬರ ಬದಲು ಆ ಸ್ಥಾನದಲ್ಲಿ ತಾನು ಕುಸುಮಾ ನಡೆದಂತೆ ಮನ-ದಲ್ಲೇ ಚಿತ್ರಿಸಿಕೊಂಡ. ಆಗಿನಿಂದ ಹೀಗೆಽಽ...

ವಿಶ್ವನಾಥನ ವಿಚಾರಸರಣಿ ಕುಸುಮೆಯ ಹಿಂದೆ ಓಡಿತು. ತನ್ನ ಕುಸುಮಾ ರೂಪದಲ್ಲೇನೂ ಕಡಿಮೆ ಇಲ್ಲ ಸಾಧನಾಳಿಗೆ. ಅವಳ ವಿಶಾಲವಾದ ಕಣ್ಣು ನೀಳವಾದ ಮೂಗು ನೋಡಿಯೇ ತಾನು ಅವಳನ್ನು ಮೆಚ್ಚಿ ಮದುವೆಯಾದದ್ದು. ಆದರೆ ಮದುವೆಯಾಗಿ ತನ್ನ ಮನೆಗೆ ಬಂದ ಮೇಲೆಯೇ ಇವಳು ಒಳ್ಳೆಯ ಗೃಹಿಣಿಯಾಗುವವಳೇ ಹೊರತು ತನ್ನ ರಸಿಕತೆಗೆ ಸರಿಯಾಗಿ ಒಳ್ಳೆಯ ಗೆಳತಿಯಾಗಲಾರಳು ಎಂದು ತನಗೆ ತಿಳಿದದ್ದು.

ಹೊಸದಾಗಿ ಮದುವೆಯಾಗಿ ಬಂದಾಗ ಒತ್ತಾಯದಿಂದ ಇವಳನ್ನು ಸಿನಿಮಾಕ್ಕೊ ವಾಕಿಂಗಿಗೊ ಕರೆದುಕೊಂಡು ಹೋದದ್ದು ತನಗಿನ್ನೂ ನೆನಪಿನಲ್ಲಿದೆ. ತನ್ನ ಧುಲುಮೆಗೆ ಹಿಂದೀ ಪ್ರೇಮ ಕತೆಗಳನ್ನೂ ಇಂಗ್ಲೀಷ ಚಿತ್ರಗಳನ್ನೂ ಒಂದೆರಡು ಸಲ ನೋಡಿದ ಕುಸುಮಾ ಅವುಗಳನ್ನು ಸೇರದೆ ಆಮೇಲೆಲ್ಲಾ ತನಗೆ ತಲೆನೋವೆಂದೂ, ಮನೆಯಲ್ಲಿ ಕೆಲಸವಿದೆಯೆಂದೂ ಏನೇನೋ ನೆವ ಹೇಳಿ ಸಿನೆಮಾ ತಪ್ಪಿಸಿಬಿಡುತ್ತಿದ್ದಳು.

ಆ ಮೇಲೆ ಬಯಕೆ, ಬಸಿರು, ಬಾಣಂತಿತನ,



ಕೈಮಗು, ಎಂದು / ಇದರಲ್ಲಿಯೇ ಅವಳ ವೇಳೆ ಕಳೆಯುತ್ತಿದ್ದದ್ದು, ಇಬ್ಬರೂ ಕೂಡಿ ಹೊರಗೆ ಹೋಗುವದೆಂದರೆ ಎಂದಾದರೊಮ್ಮೆ ಪೇಟೆಗೆ, ಇಲ್ಲವೆ ಇದ್ದೂರಲ್ಲಿಯ ಮದುವೆ, ಮುಂಜಿ, ಹುಟ್ಟಿದ ಹಬ್ಬ ಮುಂತಾದ ಸಮಾರಂಭಗಳಿಗೆ ಮಾತ್ರ ಅದಕ್ಕೇ ತಾನು ಓದು, ಗೆಳೆಯರು, ವಾಕಿಂಗ್ ಎಂದು ಸಾಧ್ಯವಿದ್ದಷ್ಟು ಮನೆಯ ಹೊರಗೇ ಕಾಲ ಕಳೆಯುತ್ತಿದ್ದದ್ದು.

ಮನೆಗೆಲಸಗಳಲ್ಲಿ ಮಾತ್ರ ಬಹಳ ದಕ್ಷಳು ಕುಸುಮಾ. ಅಡಿಗೆ ತಿಂಡಿ-ತಿನಿಸು ಎಲ್ಲವನ್ನೂ ಬಹಳ ಚೆನ್ನಾಗಿ ಮಾಡುವಳು. ಯಾವ ವಿಷ-ಯಕ್ಕೂ ಕಾಡುವದಿಲ್ಲ, ಬೇಡುವದಿಲ್ಲ. ತಾನು ತಂದುಕೊಟ್ಟ ಬಟ್ಟೆ-ಬರೆಗಳಲ್ಲಿ ತೃಪ್ತಿ ಅವಳಿಗೆ. ಆದರೆ ಹೆಚ್ಚಿನ ಫ್ಯಾಶನ್ನಿನ ಪತ್ತಲ ತಂದರೆ ಮಾತ್ರ ಅದನ್ನು ಉಡಲಾರಳು. ತಾನು ದಿಲ್ಲಿಗೆ ಹೋದಾಗ ಅವಳಿಗೆ ನವೀನ ಮಾದರಿಯ ಸೆರಗು ಅಂಚುಗಳಿಲ್ಲದ ಸೀರೆಯೊಂದನ್ನು ತಂದಿದ್ದ. ಆದರೆ ಅದನ್ನಾಕೆ ಉಡದೆ ತನ್ನ ಶಾಲೆಗೆ ಹೋಗುವ ತಂಗಿಗೆ ಕೊಟ್ಟುಬಿಟ್ಟಿದ್ದಳು. ಆ ಮೇಲೆ ತಾನು ಅಂಥ ಸೀರೆಯನ್ನು ಅವಳಿಗೆ ತರುವ ಗೋಜಿಗೇ ಹೋಗಿರಲಿಲ್ಲ.

ಸಿಟ್ಟಿನಲ್ಲಿ ಎದ್ದು ತನ್ನ ಮಂಚ ಬಿಟ್ಟು ಕುಸು-ಮಾಳ ಮಂಚಕ್ಕೆ ಹೋಗಿ ಮಲಗಿದ ವಿಶ್ವನಾಥ.

೦ ೦ ೦ ೦

ತನ್ನ ಮಂಚಕ್ಕೆ ಹೋಗಿ ಉರುಳಿದ ಚಂದ್ರಕಾಂತ ಉಸ್ ಎಂದು ನಿಟ್ಟುಸಿರು ಬಿಟ್ಟ. ನಿದ್ರೆ ಇಲ್ಲದೆ ಅವನ ತಲೆ ನೋಯುತ್ತಿತ್ತು. ಭಾರವಾಗುತ್ತಿತ್ತು. ಉಸಿರಾಟ ವೇಗವಾಗಿತ್ತು. ಕಣ್ಣುಗಳೆರಡೂ ಉರಿಯುತ್ತಿದ್ದವು ಜ್ವರ ಬಂದಿದೆಯೇನೊ ಎಂದು ಎನ್ನಿಸಿತವನಿಗೆ. ಹಣೆಯಮೇಲೆ ಕೈಯಾಡಿಸಿಕೊಂಡ. ಅವನ ಮನಸ್ಸು ಸಾಧನಾ-ಳೆಡೆಗೆ ಹೊರಳಿತು.

ಹಣೆಗೆ ಅಮೃತಾಂಜನ ಹಚ್ಚಿ ಮೃದುವಾಗಿ ತಿಕ್ಕಿ ಸಾಧನಾ ತನ್ನ ಆರೈಕೆ ಮಾಡಿದ್ದರೆ ಎಷ್ಟು ಚೆನ್ನಾಗಿತ್ತು ! ಎನ್ನಿಸಿತು ಅವನಿಗೆ. ಮೆಲ್ಲಗೆ "ಸಾಧನಾ" ಎಂದ. ಮಾರುತ್ತರ ಬರಲೇ ಇಲ್ಲ. ಓಹ್! ಅವಳನ್ನು ಈಗ ಕರೆದರೂ ಉಪಯೋಗವಿಲ್ಲ. ಅವಳು ಈಗ ಏಳುವದಿಲ್ಲ ಎದ್ದರೂ ತಲೆ ಒತ್ತು ಎಂದರೆ ಮಂಚದ ಮೇಲೆಯೇ ತೂಕಡಿಸುವವಳೇ ಅವಳು. ಸಾಧನಾ ತನ್ನ ಯಾವ ಉಪಚಾರವನ್ನೂ ಮಾಡಲಾರಳು. ಹೆಚ್ಚು ತೊಂದರೆಯನ್ನೇ ಕೊಡುವವಳು.

ಮತ್ತೆ ಈಗ ತನಗೆ ತಲೆನೋವು ಬಂದದ್ದೂ ಅವಳಿಂದಲೇ. ಇಂದು ಸಂಜೆ ಪ್ರಭಾಕರರಾಯರ ಮನೆಗೆ ಹೋಗೋಣವೆಂದು ಎಷ್ಟು ಹೇಳಿದರೂ ಒಪ್ಪಲಿಲ್ಲ, ಒಲ್ಲೆ ಎಂದು ಒಲ್ಲೆ ಎಂದುಬಿಟ್ಟಳು. ಒಂದೇ ಹಟ ಅವಳದು ಹೆಚ್ಚು ಕಡಿಮೆ ಸಿಟ್ಟು ಮಾಡಿದರೆ ಊಟ ತಿಂಡಿ ಬಿಟ್ಟು ಮುಸುಕು ಹಾಕಿ ಮಲಗಿಬಿಡುವಳು ಇನ್ನೆಂದೂ ಅನ್ನುವದಿಲ್ಲ ಏಳು ಅನ್ನುವವರೆಗೂ ಹಾಸಿಗೆ ಬಿಟ್ಟು ಸರಿಯಲಾರಳು ಬಹಳ ಹಟಮಾರಿ ತವರುಮನೆಯಲ್ಲಿ ಮುದ್ದಿನ ಮಗಳು. ಮನೆಯಲ್ಲಿ ಎಲ್ಲರೂ ಇವಳ ಹಟ ನಡೆಸಿಕೊಟ್ಟವರೇ. ಇವಳ ವಿದ್ಯೆ, ರೂಪ, ಮಧುರಕಂಠಕ್ಕೆ ತಾನು ಮೆಚ್ಚಿ ಮದುವೆಯಾದೆ ಇವಳನ್ನು. ಆದರೆ ಇವಳ ಹಟಮಾರಿತನ ತನಗೆ ತಿಳಿದದ್ದು ತನ್ನ ಮನೆಗೆ ಕರೆತಂದ ಮೇಲೆಯೇ.

ಅಡಿಗೆ, ಕೆಲಸ, ಹೆಣಿಕೆ, ಹಾಡು ಎಲ್ಲವನ್ನೂ ಬಲ್ಲಳು. ಆದರೆ ತನ್ನ ಮನಸ್ಸಿಗೆ ತಿಳಿದರೆ ಮಾತ್ರ ಮಾಡುವವಳು. ಇಲ್ಲದಿದ್ದರೇ ಇಲ್ಲವೇ ಇಲ್ಲ. ಮನೆಯ ಒಳಗಿನ ಹೊರಗಿನ ಎಲ್ಲ ವಿಷಯಕ್ಕೂ ಮೊದಲು ಅವಳ ಒಪ್ಪಿಗೆ ಬೇಕು. ಇಂದು ಹಟ ಮಾಡಿ ಪ್ರಭಾಕರರಾಯರ ಮನೆಗೆ ಹೋಗುವ

ವನನ್ನು ಬಿಡಿಸಿ ವಾಕಿಂಗಿಗೆ ಹೋಗೋಣವೆಂದಳು. ದಾರಿಯಲ್ಲಿ ವಿಶ್ವನಾಥ ಭೆಟ್ಟಿಯಾದ. ಎಷ್ಟೋಂದು ಪೀವಿಯಿಂದ ಹೊರಟಿದ್ದನವ, ಮನೆಯ ಕಡೆಗೆ. ತನಗೇಕೋ ಇಂದು ಅವನನ್ನು ನೋಡಿ ಸಂಕೋಚ ವಾಯಿತು. ಅವನು ಮನೆಗೆ ಬರುವದರಲ್ಲಿ ಅವನ ಕುಸುಮಾ ಕೈಕಾಲು ತೊಳೆಯಲು ನೀರು ಕೊಟ್ಟು ಬಿಸಿಯಾಗಿದ್ದ ತಿನಸು ಚಹಾ ಕೊಡು ತ್ತಾಳೆ. ರಾತ್ರಿ ಮತ್ತೆ ಅವನ ಪ್ರೀತಿಯ ಪಲ್ಯ, ಚಟ್ನಿಗಳನ್ನು ಮಾಡಿ ಊಟಕ್ಕೆ ನೀಡುತ್ತಾಳೆ. ಅವನು ತಿಂದುಂಡು ಆಫೀಸಿಗೆ ಹೋಗುತ್ತ, ಗೆಳೆಯರೊಡನೆ ಹರಟೆ, ವಾಕಿಂಗ್ ಮಾಡುತ್ತ ಸುಖವಾಗಿದ್ದಾನೆ.

ತನ್ನ ಸಾಧನಾ ಇಂದು ತನ್ನೊಡನೆ ವಾಕಿಂಗ್ ಎಂದು ಹೊರಟವಳು, ದಾರಿಯಲ್ಲಿ ಏನು ತಿಳಿಯಿತೋ 'ಓ ಕೌನಥೀ' ಸಿನಿಮಾಕ್ಕೆ ಹೋಗೋಣ ವೆಂದಳು. "ಬೇಡ ಅದು ಹೆದರಿಸುವ ಸಿನಿಮಾ, ನಿನ್ನಂಥಾ ಗರ್ಭಿಣಿ ಸ್ತ್ರೀಯರು ನೋಡಬಾರದು" ಎಂದರೆ ಕೇಳಲಿಲ್ಲ; ನಕ್ಕು ನನ್ನ ಮಾತು ಹಾರಿಸಿ ಬಿಟ್ಟಳು ಸಿನಿಮಾ ಮುಗಿದ ಮೇಲೆ ಮನೆಗೆ ಹೋಗಿ ಅಡಿಗೆ ಮಾಡಲು ಬೇಸರ. ಇಲ್ಲೇ ಹೋಟೆಲ್‌ದಲ್ಲಿ ಏನಾದರೂ ತಿಂದು ಹೋಗೋಣವೆಂದಳು. ಸರಿ ಅದೂ ಆಯಿತು. ಅಷ್ಟರಲ್ಲಿ ಬಸ್ಸೂ ತಪ್ಪಿಹೋಯಿತು. ಟಾಂಗಾಕ್ಕೆ ಎರಡೂ ರೂಪಾಯಿ ದಂಡ ಬಡಿದು ಬಂದು ಮನೆ ಸೇರಿದ್ದಾಯಿತು. ಇಂದು ಅವಳ ಹಟದಿಂದಾಗಿ ಏಳೆಂಟು ರೂಪಾಯಿ ಕೈಬಿಟ್ಟವು. ಅದರ ಚಿಂತೆಯೇ ಇಲ್ಲ ಅವಳಿಗೆ

ಪ್ರಭಾಕರರಾಯರ ಮನೆಗೆ ಹೋಗದ್ದಕ್ಕೆ ತಾನು ನಾಳೆ ಏನಾದರೂ ಸುಳ್ಳು ಕಾರಣ ಹೇಳ ಬೇಕು ಅವರಿಗೆ ಅದೇ ವಿಚಾರದಲ್ಲಿದ್ದ ತನ್ನನ್ನು ಸಂಜೆ ವಿಶ್ವನಾಥ ನೋಡಿದಾಗ ಅವನ ಮುಖದಲ್ಲಿ ನಗುವಿತ್ತು. ಯಾವಾಗಲೂ ಹೆಂಡತಿಯ ಬೆನ್ನುಹತ್ತಿ ತಿರುಗುವವನೆಂದು ತನ್ನನ್ನು ನೋಡಿ ನಗುತ್ತಿರಬಹುದು ಅವನು.

ಹೀಗಾಗಿ ಸಿನೆಮಾದಲ್ಲೂ ತನಗೆ ಆಸಕ್ತಿ ಇರ ಲಿಲ್ಲ. ಮನೆಗೆ ಬಂದ ಮೇಲೆ ದಣಿವಾಗಿ ಇನ್ನೇನು ಮಲಗಬೇಕೆಂದು ಲೈಟು ಆರಿಸಿದಾಗ ಸಾಧನಾ ಗಾಬರಿಯಾಗಿ ಸಿನೆಮಾದಲ್ಲಿಯ ದೃಶ್ಯ ನೆನಪಾಗಿ ತನಗೆ ಹೆದರಿಕೆಯಾಗುತ್ತದೆ, ಕತ್ತಲು ಮಾಡ ಬೇಡಿರಿ ನಿದ್ರೆ ಬರಲಾರದು ಎಂದಳು. ಅವಳ ಭಯ ಕಡಿಮೆ ಮಾಡುವದಕ್ಕೆ ಇಷ್ಟು ಹೊತ್ತು ಲೈಟು ಹಚ್ಚಿ ಕೂತು ಓದಿದ್ದಾಯಿತು. ಅವಳಿ ಗೇನೋ ನಿದ್ರೆ ಬಂದಿತು; ಆದರೆ ತನಗೆ...

ಸಾಧನಾ ಒಮ್ಮೆಲೇ ಆಸ್ಪತ್ರೆ... ತೊಟ್ಟಿಲು ಎಂದು ಏನೇನೋ ಬಡಬಡಿಸಿದಳು. ಅಂಥ ಸ್ಥಿತಿ ಯಲ್ಲೂ ಚಂದ್ರಕಾಂತನಿಗೆ ನಗೆ ಬಂದಿತು. 'ಹುಚ್ಚುಹುಡಿಗಿ' ಎಂದುಕೊಂಡ ಮರುಕ್ಷಣದಲ್ಲಿ ಪಕ್ಕಕ್ಕೆ ಹೊರಳಿ 'ಹಾಽಽ' ಎಂದು ಸಾಧನಾ ನರ ಳಿದಳು.

೨

ಬಾಗಿಲ ವರೆಗೆ ಬಂದು ಕುಸುಮೆಯನ್ನು ಕಳಿಸಿ ಒಳಗೆ ಬಂದ ಸಾಧನಾ ನಿದ್ರೆಯಿಂದ ಎಚ್ಚತ್ತು ಅಳುತ್ತಿದ್ದ ಚೇತನಾಳನ್ನು ಎತ್ತಿ ಕೊಂಡು ಮತ್ತೆ ತೊಡೆಯ ಮೇಲೆ ಹಾಕಿ ತಟ್ಟ ತೊಡಗಿದಳು ...

ಹೊಸತಾಗಿ ತಾನು ಲಗ್ನವಾಗಿ ಬಂದಾಗ ತನ್ನ ನೆರೆಮನೆಯ ಕುಸುಮಾ ಹೇಗಿದ್ದಳು? ಈಗ ಹೇಗಾಗಿದ್ದಾಳೆ!! ಗುರುತೂ ಸಿಗದು. ಅವಳು ದಿನವೂ ಉಡುತ್ತಿದ್ದ ಅಂಚು- ಸೆರಗು ಇದ್ದ ಪತ್ತಲ, ಕಟ್ಟುವ ತುರುಬು, ದೊಡ್ಡ ಕುಂಕುಮ, ಅವಳ ನಿತ್ಯ ತುಳಸೀ-ಪೂಜೆ ಎಲ್ಲವೂ ಅವಳೊಬ್ಬ ಸಂಪ್ರದಾಯಸ್ಥರ ಮನೆಯವಳು ಎನ್ನುವದನ್ನು ತೋರಿಸುತ್ತಿದ್ದವು. ಗಂಡನೊಡನೆ ವಾಕಿಂಗ್, ಸಿನಿಮಾಕ್ಕೆ ಹೋಗುವದೂ, ಮನೆಗೆ ಬಂದ ಗಂಡನ ಸ್ನೇಹಿತರೊಡನೆ ಮಾತನಾಡು ವದೂ, ಯಾವದೂ ಇಲ್ಲ. ಅಷ್ಟೇ ಏಕೆ ಅವಳು ಜೋರಾಗಿ ನಕ್ಕದ್ದೂ ಕೂಡ ತಾನು ಕೇಳಿರಲಿಲ್ಲ. ನಮ್ಮ ಒಕ್ಕಲಗಿತ್ತಿಯ ಮುಂದೆ "ಸಾಧನಾಬಾಯಿ ಭಾಳ ಬಡಿವಾರದಾಕಿ. ಆಕೀಗೆ ಮನೀಕೆಲಸ ಅಂದರs ಬ್ಯಾಡಾ" ಎಂದು ಅವಳು ಅಂದದ್ದು ತನಗೆ ತಿಳಿದ ಮೇಲೆ ತಾನು ಅವಳೊಡನೆ ಮಾತನ್ನೆ ಆಡಿರಲಿಲ್ಲ. ಮುಂದೆ ನನ್ನ ಶಾರದಾ, ಅವಳ ಮಗಳು ಶಶೀ ಕೂಡಿ ಆಡಲಿಕ್ಕೆ ಹತ್ತಿದ ಮೇಲೆ ನಮ್ಮ ಮಾತು ಸುರು ಆದವು.

ಅಂಥಾ ಕುಸುಮಾ ಈ ಹತ್ತು ವರ್ಷದೊಳಗೆ ಎಷ್ಟು ಬದಲಾಯಿಸಿದ್ದಾಳೆ! ನಂಬಲಿಕ್ಕೆ ಸಾಧ್ಯವಿಲ್ಲ ಈಗ ವನಿತಾಮಂಡಳದ ಮೆಂಬರ್ ಆಗಿದ್ದಾಳೆ. ಈ ವರ್ಷದಿಂದ ಕಾರ್ಯಕಾರೀ ಮಂಡಲ ದೊಳಗೂ ಇದ್ದಾಳಂತೆ. ಮೀಟಿಂಗು, ಭಾಷಣ, ಮನೋರಂಜನ ಕಾರ್ಯಕ್ರಮ, ಪ್ರದರ್ಶನ ಎಂದು ತಿಂಗಳಲ್ಲಿ ಮೂರು ನಾಲ್ಕು ಸಲ ಹೊರಗೆ ಹೋಗುತ್ತಾಳೆ. ವಾರಕ್ಕೊಮ್ಮೆ ಸಿನಿಮಾಕ್ಕೂ ಹೋಗುತಾಳೆ "ಈ ಸಾರೆ ಮೇ ತಿಂಗಳದಾಗ ಮೈಸೂರು ಬೆಂಗಳೂರು ನೋಡಲಿಕ್ಕೆ ಹೋಗ ಬೇಕು ಅಂತ ಮಾಡೇವಿ. ನಮ್ಮ ಯಜಮಾನ್ರೂ ಹೂಂ ಅಂದಾರ" ಎಂದು ಮೊನ್ನೆ ಹೇಳುತ್ತಿದ್ದಳು ಕುಸುಮಾ.

ಇಂದು ಬಹಳ ಸಿಂಗಾರಾಗಿ ಬಂದು "ನೀವೂ ಮಂಡಳದ ಮೆಂಬರ್ ಆಗೀರಿ. ಆದ್ರ ಒಂದು ದಿನಾನೂ ಬರೂದಿಲ್ಲ, ಇವತ್ತರೇ ಬರ್ರಿ ಅಮೆರಿಕಾಕ್ಕೆ ಹೋಗಿ ಬಂದ ಅತಿಥಿಗಳು ಭಾಷಣ ಮಾಡ್ತಾರ. ಲಗೂನ ಏಳರ ಬಸ್ಸಿಗೆ ಬಂದ ಬಿಡೂಣಂತ" ಎಂದು ಕೇಳಿದಳು. ನನಗೂ ಮನೆ ಯೊಳಗಿದ್ದು ಬೇಸರ ಬಂದಿತ್ತು. ಅವಳ ಜೊತೆಗೆ ಹೋಗಿ ಬರಬೇಕು ಎಂದೂ ಅನಿಸಿದ್ದಿತು ಆದರೆ ಚೇತನಾ......

ಮಗುವಿನ ಹಣೆಯ ಮೇಲೆ ಕೈಯಾಡಿಸಿದಳು ಸಾಧನಾ. ಏಕೋ ಮೈ ಬಿಸಿಯಾದಂತಿತ್ತು ನಿದ್ರೆಯ ಜೊಂಪಿನಲ್ಲಿದ್ದ ಮಗುವನ್ನು ಬೆಚ್ಚಗೆ ಮಲಗಿಸಿ, ರಗ್ಗು ಹೊದಿಸಿ, ನೀಲಗಿರಿ ಎಣ್ಣೆ ತಂದು ಹಣೆ, ಎದೆ ಕುತ್ತಿಗೆಗಳಿಗೆ ಸವರಿದಳು. ತಾನು ಕುಸುಮೆಯ ಜೊತೆಗೆ ಹೋಗದಿದ್ದುದೆ ಒಳ್ಳೆಯದಾಯಿತು ಎಂದು ಸಮಾಧಾನದ ಉಸಿರು ಬಿಟ್ಟಳು

○ ○ ○ ○

ಚಪ್ಪಲಿ ಮೆಟ್ಟಿ, ಕೊಡೆ ಹಿಡಿದು ಹೊರಗೆ ಬಂದು ಗೇಟು ತೆರೆದು ಬಸ್‌ಸ್ಟಾಪಿನೆಡೆಗೆ ನಡೆದಳು ಕುಸುಮಾ. ಒಬ್ಬಂಟಿಗಳಾಗಿ ನಡೆದ ಅವಳಿಗೆ ಬೇಸರ ಬಂದಿತು. ಸಾಧನಾ ತನ್ನ ಜೊತೆಗೆ ಬಂದಿದ್ದರೆ ಎಷ್ಟು ಚೆನ್ನಾಗಿತ್ತು ಎನ್ನಿಸಿತವಳಿಗೆ. ಕಣ್ಣು ಕೈ ಗಡಿಯಾರದೆಡೆಗೆ ಓಡಿತು. ನಾಲ್ಕೂಮುಕ್ಕಾ ಲಾಗಿತ್ತು. ಇನ್ನು ಐದು ನಿಮಿಷಗಳಿವೆ ಬಸ್ಸು ಬರುವದಕ್ಕೆ ಎಂದುಕೊಂಡು ತನ್ನ ಬದಿಗೆ ನಿಂತ ದಂಪತಿಗಳ ಕಡೆಗೆ ದೃಷ್ಟಿ ಹೊರ ಳಿಸಿದಳು. ಅವರು ನವದಂಪತಿಗಳೆಂದು ಊಹಿಸಿದ ಳಾಕೆ. ಕೈಯಲ್ಲಿಯ ಹಸಿರು ಬಳೆ, ಹೊಸದಾಗಿ ಹಾಕಿದ್ದ ಮಾಂಗಲ್ಯ, ಕಾಲುಂಗುರ, ಇವೆಲ್ಲಾ ಅವಳಿನ್ನೂ ಹೊಸ ಮದುವಣಗಿತ್ತಿ ಎಂಬುದನ್ನು

ತೋರಿಸುತ್ತಿದ್ದವು. ಗಂಡ ಅವಳ ಮುಖವನ್ನೇ ನೋಡುತ್ತ ನಸುನಗುತ್ತ ಏನೋ ಮಾತನಾಡಿಸುತ್ತಿದ್ದ. ಅವಳು ನಾಚಿಕೆಯಿಂದ ತಲೆ ತಗ್ಗಿಸಿಕೊಂಡು ಸಾವಕಾಶವಾಗಿ ಉತ್ತರ ಕೊಡುತ್ತಿದ್ದಳು. ಮುಗ್ಧೆ ಸಂಕೋಚದಿಂದ ತಲೆ ಎತ್ತಿ ಗಂಡನನ್ನೂ ನೋಡಲಾರದವಳಾಗಿದ್ದಳು. ಅವಳನ್ನು ನೋಡಿ ಕುಸುಮೆಗೆ ನಗು ಬಂದಿತು. ಒಂದು ಕಾಲಕ್ಕೆ ತಾನೂ ಅವಳಂತೆಯೇ...

ಹೊಸತಾಗಿ ನಾನು ಮದುವೆಯಾಗಿ ಬಂದಾಗ ವಿಶ್ವನಾಥ ಬಹಳ ಉತ್ಸಾಹದಿಂದ ನನ್ನನ್ನು ವಾಕಿಂಗಿಗೆ, ಸಿನಿಮಾಕ್ಕೆ ಕರೆದೊಯ್ಯಲು ಪ್ರಯತ್ನಿಸುತ್ತಿದ್ದ. ಮೊದ ಮೊದಲು ಅವನ ಒತ್ತಾಯಕ್ಕೆ ನಾನೂ ಹೋದವಳು ಹೊರಗೆ ಹೋದರೂ ಏನೋ ಒಂದು ತರಹದ ಹೆದರಿಕೆ, ಸಂಕೋಚ ನನ್ನನ್ನು ಆವರಿಸಿದಂತಾಗಿ ಮನಸ್ಸಿಗೆ ಸ್ವಸ್ಥವೆನಿಸುತ್ತಿರಲೇ ಇಲ್ಲ. ಸಂಪ್ರದಾಯಸ್ಥರ ಮನೆಯಲ್ಲಿ ಬೆಳೆದ ನನ್ನಂಥವಳಿಗೆ ಅದೆಲ್ಲಾ ಹೇಗೆ ಸೇರಬೇಕು? ಅವರೊಡನೆ-ಅದೂ ಮನೆಯಲ್ಲಿ ಮಾತ್ರ-ಗಂಟಲು ಸಡಿಲು ಬಿಟ್ಟು ಮಾತನಾಡುತ್ತಿದ್ದೆ. ಬೇರೆ ಯಾರಾದರೂ ಗಂಡಸರು ಬಂದರೆ ಮಾತನಾಡಲು ನನಗೆ ತಿಳಿಯುತ್ತಿರಲೇ ಇಲ್ಲ. ಒಂದು ಸಲವಂತೂ ಅವರು ಹೊರಗೆ ಹೋದಾಗ ಅವರ ಗೆಳೆಯ ಶಂಕರ ಬಂದಿದ್ದರು. ಅವರು ಮನೆಯಲಿಲ್ಲವೆಂದು ಹೇಗೊ ಗಟ್ಟಿ ಧೈರ್ಯ ಮಾಡಿ ಹೇಳಿ ಅವರನ್ನು ಕಳಿಸಿದೆ. ಆಮೇಲೆ ಇವರು ಬಂದ ಮೇಲೆ ಶಂಕರ ಅವರು ಬಂದಿದ್ದ ಸುದ್ದಿ ಹೇಳಿದೆ, ಅಬ್ಬಾ ಎಷ್ಟು ಸಿಟ್ಟಿಗೆದ್ದಿದ್ದರವರು ಅಂದು.

ಆದರೂ ಬೇಗ ಅವರ ಇಚ್ಛೆಯಂತೆಯೇ ನಡೆಯುವುದು ನನ್ನಿಂದ ಆಗಲಿಲ್ಲ. ತನ್ನ ಮಡಿಯನ್ನೂ, ತುಳಸೀಪೂಜೆಯನ್ನು ನೋಡಿ ಅವರು ಹಾಸ್ಯ ಮಾಡಿ ನಗುತ್ತಿದ್ದರೂ ಅವುಗಳನ್ನು ಬಿಟ್ಟರೆ ತಪ್ಪು ಮಾಡಿದಂತೆ ಎಂದು ನನ್ನ ಭಾವನೆಯಾಗಿತ್ತು. ಆದರೆ ಆ ಭಾವನೆ ತಪ್ಪು ಎನ್ನುವದನ್ನು ತಾಯಿ ತೋರಿಸಿಕೊಟ್ಟಳು. ಎರಡನೆಯ ಮಗ ವಿಜಯನ ಬಾಣಂತಿತನ ಮುಗಿಸಿಕೊಂಡು ಬಂದ ಮೇಲೆ ಅವರು ಬಹಳ ಬದಲಾದಂತೆ ಎನ್ನಿಸಿತು ನನಗೆ. ಮೊದಲಿನ ಹಾಗೆ ನಗುವಿರಲಿಲ್ಲ, ಮಾತು ಹೆಚ್ಚಾಗಿ ಆಡುತ್ತಿರಲಿಲ್ಲ. ಕೆಲಸದಲ್ಲಿ ಸ್ವಲ್ಪ ಹೆಚ್ಚು ಕಡಿಮೆಯಾದರೆ ಸಾಕು ಸಿಟ್ಟಿಗೇಳುವದು, ಒದರಾಡುವದೂ ಮಾಡುತ್ತಿದ್ದರು. ಹೆಚ್ಚು ಹೊತ್ತು ಮನೆಯ ಹೊರಗೇ ಇರುತ್ತಿದ್ದರು. ಇದನ್ನೆಲ್ಲ ನೋಡಿ ನನ್ನ ಮನಸ್ಸಿಗೆ ಕಸಿವಿಸಿ ಆಯಿತು. ಯಾರ ಮುಂದೆ ಹೇಳಬೇಕು? ಮೈಯಲ್ಲಿ ಆರಾಮ ಇಲ್ಲವೆಂದು ಕಾರಣ ಹೇಳಿ ತಾಯಿಯನ್ನು ಕರೆಸಿಕೊಂಡೆ. ಅವಳ ಮುಂದೆ ಎಲ್ಲವನ್ನೂ ಹೇಳಿ ಅತ್ತು ಬಿಟ್ಟೆ. ಅದಕ್ಕೆ ಅವಳು ಬೇಗನೇ ಅವರ ಅಸಮಾಧಾನದ ಕಾರಣ ಕಂಡುಹಿಡಿದು ನನಗೆ ದಾರಿ ತೋರಿಸಿಕೊಟ್ಟಳು. "ನೀನು ಮೊದಲಿನ ಹಾಂಗs ಇರಬೇಕು ಅನ್ನೂ ಮಾತು ಮರೆತ ಬಿಡು. ನಿನ್ನ ಗಂಡಗ ನೀ ಹ್ಯಾಂಗ ಇದ್ದರ ಸೇರತದ ಅನ್ನೂದು ತಿಳಕೊಂಡು ಅದರಂಗ ನಡಿ. ಅಂದರ ಮನಸ್ಸಿಗೆ ಸಂತೋಷ ಆಗಿ ತಾವs ಸಿಟ್ಟು—ಸೆಡವು ಎಲ್ಲಾ ಬಿಡತಾರ" ಎಂದು ಹೇಳಿದ ಅವಳ ಮಾತನ್ನು ಅಕ್ಷರಶಃ ಪಾಲಿಸಿದೆ. ಅದರ ಫಲವೇ ಹೀಗಾಗಿರುವದು ನಾನು... ಎನ್ನುತ್ತ ತನ್ನ ನೈಲಾನ್ ಸೀರೆಯ ನೀರಿಗೆಗಳನ್ನು ಸರಿಪಡಿಸಿಕೊಂಡು, ವ್ಯಾನಿಟಿ ಬ್ಯಾಗನ್ನು ಮತ್ತೊಂದು ಕೈಗೆ ಬದಲಾಯಿಸಿ, ಕೈಗಡಿಯಾರವನ್ನು ಮತ್ತೊಮ್ಮೆ ನೋಡಿದಳು ಕುಸುಮಾ.

ಬಸ್ಸು ಬರುವ ಹೊತ್ತಾಗಿತ್ತು. ಅಷ್ಟರಲ್ಲಿ ವನಿತಾಮಂಡಳದ ಕಾರ್ಯದರ್ಶಿನಿ ಇಂದುಮತಿ ಅವಸರದಿಂದ ಅವಳ ಹತ್ತಿರ ಬಂದು,

"ಯಾಕ್ರೀ, ಸಾಧನಾಬಾಯಿ ಇವತ್ತೂ ಬರಲಿಲ್ಲೇನು?" ಎಂದಳು.

"ಇಲ್ರೀ, ಕರೀಲಿಕ್ಕೆ ಹೋಗಿದ್ದೆ ಅವರ ಮನೀಗೆ. ಆದರೆ ಯಾಕೋ, ಒಲ್ಲೆ ಅಂದರು. ಮೊದಲ ಹುರುಪಿಲೆ ಹೊರಗ ಹೋಗೂದು ಮಾಡೂದು ಎಷ್ಟ ಮಾಡತಿದ್ದರು. ಇತ್ತೀಚೆಗೆ ಎಲ್ಲಾ ಬಿಟ್ಟ ಬಿಟ್ಟಾರ. ಮನೀ, ಮಕ್ಕಳು, ಕೆಲಸಾ, ಅಂತ ಮನ್ಯಾಗs ಇರತಾರ"

"ಹಾಂಗ್ಯಾಕ ಬದಲ ಆದರು? ಏನಾರ ಕಾರಣ ಇರಬೇಕೇನು?"

"ಇರಬೇಕು ಏನರೇ. ಆದರ ನಮಗ್ಯಾಂಗ ಗೊತ್ತಾಗಬೇಕು? ನನಗನಸ್ತದ ಅವರ ದೊಡ್ಡ ಹುಡುಗಿ ಶಾರದಾ ಹುಟ್ಟಿದ ಮ್ಯಾಲೆ ಮತ್ತೆರಡು ಹುಡುಗರಾಗಿದ್ದವು. ಅವೆರಡೂ ತೀರಿಕೊಂಡವು. ಅದನ್ನs ಮನಸ್ಸಿಗೆ ಹಚಿಗೊಂಡಾರೋ ಏನೋ. ಮಕ್ಕಳೂ ಅಂದರ ಸಾಕು, ಅಷ್ಟ ಹಚಿಗೊಂಡಾರ ಈಗ ಚೇತನಾ ಹುಟ್ಟಿದ ಮ್ಯಾಲೆ ಅವರ ಮನಸ್ಸಿನ ದುಃಖ ಎಷ್ಟೋ ಕಡಿಮಿ ಆದಂಗ ಕಾಣ್ತದ ಆದರೂ ಮನೀ ಬಿಟ್ಟು ಹೊರಗs ಬರಲಿಕ್ಕೆ ಒಲ್ಲರು..."

ಬಸ್ಸಿನ ಹಾರ್ನಿನ ಸಪ್ಪಳಕ್ಕೆ ಕಟ್ಟಾದ ಮಾತುಕತೆಯನ್ನು ಅಲ್ಲಿಯೆ ಬಿಟ್ಟು ಇಬ್ಬರೂ ಗೆಳತಿಯರು ಬಸ್ಸನ್ನೇರಿದರು.

೦ ೦ ೦

"ಸಾಧನಾss" ಬಟ್ಟೆ ಬದಲಾಯಿಸುತ್ತ ಚಂದ್ರಕಾಂತ ಕೂಗಿದ. ಅಡಿಗೆಯ ಮನೆಯಲ್ಲಿದ್ದ ಸಾಧನಾಳಿಗೆ ಸ್ಟೋವಿನ ಸಪ್ಪಳದಲ್ಲಿ ಗಂಡನ ಕರೆ ಕೇಳಲಿಲ್ಲ. ಬಚ್ಚಲು ಮನೆಗೆ ಬಂದ ಚಂದ್ರಕಾಂತ,

"ಏs ಸಾಧನಾ ಏನ್ಮಾಡ್ತಿದ್ದೀ. ಎಷ್ಟ ಕರೀತಿನಿ ಕೇಳಸೋದಿಲ್ಲೇನು?" ಎಂದ.

"ಇಲ್ರೀ ಸ್ಟೋದ ಸಪ್ಪಳದಾಗ ನೀವು ಮನೀಯೊಳಗ ಬಂದದ್ದೂ ಗೊತ್ತಿಲ್ಲ. ಕರೆದದ್ದೂ ಕೇಳಿಸಿಲ್ಲ" ಎಂದಳು ಸಾಧನಾ ಉಳ್ಳೇಗಡ್ಡಿ ಹೆಚ್ಚುತ್ತ.

"ಹೂ ಅದೆಲ್ಲಾ ಆತು. ವಾಕಿಂಗಿಗೆ ಹೋಗೂಣು ತಯಾರಾಗಿನ್ನ. ಈಗs ಆರು ಹೊಡೆದು ಹೋತು."

"ಆರು ಹೊಡೀತೇನು ಆಗಲೇ! ಇನ್ನ ನಾ ವಾಕಿಂಗಿಗೆ ಬರೂದಿಲ್ರಿ. ಶಾರದಾ ಈಗ ಸಾಲಿಯಿಂದ ಬರ್ತಾಳ. ಇವತ್ತ ದೋಸೆ ಮಾಡಿ ಕೊಡ್ತೀನಿ ಅಂತ ಆಕೀಗೆ ಆಶಾ ಹಚ್ಚೀನಿ. ಈಗ ಅದs ತಯಾರಿಯೊಳಗೆ ಇದ್ದೀನಿ. ಇವತ್ತ ನಾ ಬರಲಿಕ್ಕೆ ಆಗೂದಿಲ್ಲ. ನೀವs ಹೋಗಿ ಬರ್ರಿ."

"ಎಲ್ಲಾ ತಯಾರಾಗೇದ. ಇನ್ನ ಬೇಯಿಸೂದ ಅಷ್ಟs ಅಲ್ಲಾ? ಲಗೂ ಲಗೂನ ಹಾಕಿ ಬಿಡು. ಶಾರದಾಗೂ ಕೊಟ್ಟು ನಾವೂ ತಿಂದು ಹೋಗೂಣಂತ ವಾಕಿಂಗಿಗೆ."

"ಇವತ್ತ ಮಧ್ಯಾಹ್ನದಿಂದ ಚೇತನಾ ಮೆತ್ತಗಾಗ್ಯಾಳ. ನೆಗಡಿ ಹೆಚ್ಚಾಗೇದ. ಗಾಳ್ಯಾಗ ಹ್ಯಾಂಗ ಕರಕೊಂಡು ಹೋಗೊದು. ಆಕೀ ಸಲುವಾಗಿ ನಾ ಮನಿಯೊಳಗs ಇರಬೇಕಲ್ಲ."

''ಈಗ ಮಲಕೊಂಡಾಳೆಲ್ಲ. ನಿದ್ದಿ ಹತ್ತೇದ. ಶಾರದಾ ನೋಡ್ತಿರ್ತಾಳ. ಚೇತನಾನ್ನೂ ಮನ್ಯಾಗs ಬಿಟ್ಟು ಹೋಗೋಣು.''

''ಛೆ ಛೇ ನಾ ಒಲ್ರಿ. ಪಾಪ ಶಾರದಾ ಹತ್ತು ವರುಷದ ಹುಡುಗಿ. ಆದ್ರೂ ನನಗ ಇನ್ನೂ ಸಣ್ಣಾಕೀನs ಆಕಿ. ಅಕೀ ಕೈಯಾಗ ಕೂಸಿನ್ನ ಕೊಟ್ಟು ಮನಿ ನೋಡಲಿಕ್ಕೆ ಆಕೀನ್ನ ಬಿಟ್ಟು ನಾವು ಅಡ್ಡಾಡಲಿಕ್ಕೆ ಹೋಗೂದು ನನಗ ಸೇರೂದಿಲ್ಲ ನೋಡ್ರಿ ಆಕೀನೂ ಸಾಲಿಂದ ಬಂದಿರ್ತಾಳ ದಣಿದು. ಆಟಾಆಡ್ಲಿ. ಓದಿಕೊಳ್ಳಿ. ನಾ ಮನ್ಯಾಗs ಇರ್ತೀನಿ, ನೀವ ಹೋಗಿ ಬರ್ರಿ,"

"ಹೂಂ ಛಲೋ ಆತು ನಾವಿಬ್ರೂ ಕೂಡಿ ತಿರಗ್ಯಾಡಲಿಕ್ಕೆ ಹೋಗದ ಎಷ್ಟು ದಿನ ಆತು ಅಂತ ಕರದರs ನೀ ದಿನಾ ಒಂದು ನೆವಾ ಹೇಳ್ತೀದಿ. ಶಾರದಾ ಹುಟ್ಟೂದಕಿಂತ ಮೊದಲs ನಾವು ಅಡ್ಡ್ಯಾಡಿದ್ದು, ಮಾಡಿದ್ದು ಎಲ್ಲಾ. ಈಗ ಅದೆಲ್ಲಾ ಕನಸೇನೋ ಅಂತ ಅನಸ್ಲಿಕ್ಕೆ ಹತ್ತೇದ ನನಗ'' ಚಂದ್ರಕಾಂತನ ಧ್ವನಿಯಿಂದ ಬೇಸರ ಹಣಿಕಿಕ್ಕಿತು.

''ದಿನಾಲೂ ತಿರುಗಾಡಲಿಕ್ಕೆ ಹೋಗಲಿಕ್ಕೆ ನಾವೇನು ಸಣ್ಣವರ? ಇನ್ನೂ ಹೊಸತಾಗಿ ಮದುವಿ ಆದವರ? ಅಳಿಯು ಬರೂ ದಿವಸಾದವು ಇನ್ನರೇ ಬಿಡ್ರಿ ನಿಮ್ಮ ಹುಡುಗತನಾ" ಎಂದು ನಗುತ್ತಾ ಸಾಧನಾ ಬಿಸಿ ಬಿಸಿ ದೋಸೆಯೊಡನೆ ಬೆಣ್ಣೆಯನ್ನಿಟ್ಟು ಪ್ಲೇಟನ್ನು ಅವನ ಮುಂದೆ ಇಟ್ಟಳು.

ತಿಂದು ಮುಗಿಸಿದ ಮೇಲೆ ಚಂದ್ರಕಾಂತ ಬಟ್ಟೆ ಬದಲಾಯಿಸಿ, ಚಪ್ಪಲಿ ಮೆಟ್ಟಿ, ಹೊರಗೆ ಬಂದು ಬಾಗಿಲು ಮುಚ್ಚಿಕೊಂಡ.

೦ ೦ ೦ ೦

ಹೊರಗಿನಿಂದ ಜೋರಾಗಿ ಬಾಗಿಲನ್ನು ನೂಕಿದ ವಿಶ್ವನಾಥ. ಅದು ತನ್ನಷ್ಟಕ್ಕೇ ತೆರೆದುಕೊಂಡಿತು ನಡುಮನೆಯಲ್ಲಿ ಕಿರಿಯ ಮಗ ಅರುಣ ಅಳುವದು ಕೇಳುತ್ತಿತ್ತು.

ಬಟ್ಟೆ ಬದಲಾಯಿಸುತ್ತ "ಕುಸುಮಾ" ಎಂದ ಮಾರುತ್ತರ ಬರಲಿಲ್ಲ. ಜೋರಾಗಿ "ಕುಸುಮಾ" ಎಂದ. ಮಗಳು ಶೀಲಾ ಕೈಯಲ್ಲಿ ಆಯೊಡಿನ್ ಬಾಟ್ಲೀ ಹಿಡಿದುಕೊಂಡೇ ಹೊರಗೆ ಬಂದವಳು, ''ಅಪ್ಪಾ ಅವ್ವ ಹೊರಗೆ ಹೋಗ್ಯಾಳ" ಎಂದು ವರದಿ ಮಾಡಿದಳು.

''ಎಲ್ಲಿ?" ಎಂದು ಹುಬ್ಬುಗಂಟಿಕ್ಕಿದ ವಿಶ್ವನಾಥ

''ವನಿತಾಮಂಡಳಕ್ಕ. ನಮ್ಮ ಸಾಲಿ ಐದನೇ ಪಿರಿಯಡ್ಡಿಗೆ ಬಿಟ್ಟಿತು. ನಾ ಮನೀಗೆ ಬಂದ ಮ್ಯಾಲೆ ಅವ್ವ ನನಗ ಹೇಳಿ ಹೋದ್ಲು.''

"ಮತ್ತ ನಿನ್ನೆ ಹೋಗಿದ್ಲಲ್ಲಾ. ಮತ್ಯಾಕ ಇವತ್ತ ಹೋದ್ಲು?'' ಅಸಮಾಧಾನದಿಂದ ''ದಣಿದು ಆಫೀಸಿನಿಂದ ಮನೀಗೆ ಬಂದರ ಮನ್ಯಾಗs ಇರೂದಿಲ್ಲಾ. ಸಮಾಜಸೇವಾ ಮಾಡ್ತಾಳಂತ. ಸಮಾಜ ಸೇವಾ" ಎಂದು ಗೊಣಗುಟ್ಟಿದ.

''ನಿನ್ನೆ ಪಿಕ್‌ನಿಕ್ ಇತ್ತಂತ. ಇವತ್ತ ಯಾರದೊ ಭಾಷಣಾ ಅದs ಅಂತ ಸಂಜೀಗೆ ಲಗೂನs ಬರ್ತೀನಿ ಅಂತ ಹೇಳ್ಯಾಳ.''

''ವಿಜಯ ಸಾಲಿಂದ ಇನ್ನೂ ಬಂದಿಲ್ಲೇನು? ಅರುಣ ಯಾಕ ಅಳಲಿಕ್ಕೆ ಹತ್ಯಾನ? ಸಣ್ಣ ಹುಡುಗನ್ನ ಮನ್ಯಾಗ ಬಿಟ್ಟು, ನಿನ್ನ ಮ್ಯಾಲೆ ಮನೀ ಬಿಟ್ಟು ಈಗ ಹೋಗೂದು ಏನ ಹರಕತ್ತಾಗಿತ್ತೋ ಏನೊ!'' ಎಂದ

''ವಿಜಯ ಸಾಲಿಂದ ಬಂದು ಆಡಲಿಕ್ಕೆ ಹೋಗ್ಯಾನ. ಅರುಣ ಅಂಗಳದಾಗ ಬಿದ್ದಾನ. ಮುಂಡಿಗಾಲ ಕೆತ್ತಿ ರಕ್ತ ಬಂದsದ. ಅವಗ ಆಯಡಿನ್ ಹಚ್ಚಿದೆ. ಅದಕ್ಕ ಅಳ್ತಾನ. ಬಂದ ಮ್ಯಾಲೆ ನಿಮಗ ಚಹಾ ಮಾಡಿಕೊಡು ಅಂದಾಳ ಅವ್ವ, ಮಾಡಿಕೊಡ್ಲೇನು? ತಿನ್ನಲಿಕ್ಕೆ ಹಚ್ಚಿದ ಅವಲಕ್ಕೀನೂ ಅವ'' ಹೆದರುತ್ತ, ತಂದೆಯ ಮುಖ ನೋಡುತ್ತಾ ಹೇಳಿದಳು ಶೀಲಾ.




ಮಗಳು ಚಹಾ ಮಾಡುವವರೆಗೆ ಅರುಣನನ್ನು ಸಮಾಧಾನ ಪಡಿಸಿದ ವಿಶ್ವನಾಥ. ಚಹ ಕುಡಿದು ಅರಿವೆ ಹಾಕಿಕೊಂಡು, "ನಾನು ಹೊರಗ ಹೋಗ್ತೀನಿ ಬಾಗಿಲು ಮುಚ್ಚಿಕೋ" ಎಂದು ಶೀಲಾಗೆ ಹೇಳಿ ಚಪ್ಪಲಿ ಮೆಟ್ಟಿ ಹೊರಗೆ ಬಂದು ಬಾಗಿಲು ಮುಚ್ಚಿಕೊಂಡ.

ತಿರುಗಾಡಲು ಹೊರಟ ಚಂದ್ರಕಾಂತ - ವಿಶ್ವನಾಥ ಮನೆಯ ಮುಂದಿನ ಗೇಟಿನ ಬಳಿ ಭೆಟ್ಟಿಯಾಗಿ ತಡೆದು ನಿಂತರು ನೀವೂ ಒಬ್ಬರೇ 'ನೀವೂ ಒಬ್ಬರೇ' ಎನ್ನುವಂತೆ ಒಬ್ಬರನ್ನೊಬ್ಬರು ದಿಟ್ಟಿಸಿ ನೋಡಿದರು ತಾವಿಬ್ಬರೂ ಸಮಾನದುಃಖಿಗಳು ಎನ್ನುವ ಮಾತನ್ನು ಇಬ್ಬರ ಕಣ್ಣುಗಳೂ ತಮ್ಮಷ್ಟಕ್ಕೇ ಹೇಳಿದವು. ಸ್ನೇಹಹಸ್ತಗಳು ಮುಂಚಾಚಿದವು, ಹೆಣೆದುಕೊಂಡವು. ಗೇಟು ತೆರೆದು ಇಬ್ಬರೂ ಒಂದೇ ದಿಕ್ಕಿಗೆ ಹೆಜ್ಜೆ ಹಾಕಿದರು.

ಜ್ಯೋತಿಷಿ:
**ಶ್ರೀ ಕೃಷ್ಣಶಾಸ್ತ್ರಿ ಭಿಡೆ**
ಭವಿಷ್ಯ ಕಥನ ಕಾರ್ಯಾಲಯ:
ಕಪಿಲೇಶ್ವರ ದೇವಾಲಯದ ಹತ್ತಿರ,
ಮತ್ತೀಕೊಪ್ಪ ಕಟ್ಟಡ,
ಕಪಿಲೇಶ್ವರ ಬೀದಿ, **ಬೆಳಗಾವಿ**

# ವರ್ಷ ಭವಿಷ್ಯ

**ಶಕೆ ೧೮೮೬ ಕಾರ್ತಿಕ ಶುದ್ಧ ಪ್ರತಿಪದೆ ಗುರುವಾರದಿಂದ ಶಕೆ ೧೮೮೭ ಆಶ್ವಿನ ಬಹುಳ ಅಮಾವಾಸ್ಯೆ ರವಿವಾರದವರೆಗೆ— ಅಂದರೆ ೧೯೬೪ ನೆಯ ಇಸವಿಯ ನವೆಂಬರ್ ೫ ರಿಂದ ೧೯೬೫ ಅಕ್ಟೋಬರ್ ೨೪ರವರೆಗೆ ಒಂದು ವರುಷದ ಭವಿಷ್ಯ.**

( ಈ ದಿಪಾವಳಿಯಿಂದ ಮುಂದಿನ ದೀಪಾವಳಿಯ ವರೆಗೆ)

**ಸೂಚನೆ:— ಈ ವರ್ಷ ಭವಿಷ್ಯವು ಸ್ಥೂಲಮಾನದ್ದು. ಅವರವರ ಜನ್ಮಕುಂಡಲಿಯ ಮೇಲಿಂದ ಭವಿಷ್ಯ ಹೇಳಿದರೆ ಮಾತ್ರ ಅದು ಪೂರ್ಣ ಸತ್ಯವಾಗಿ ಪರಿಣಮಿಸುವುದು. ಆದರೂ ಈ ಭವಿಷ್ಯದಿಂದ ಆಯಾ ರಾಶಿಯವರಿಗೆ ಆಗಬಹುದಾದ ದುಷ್ಟ-ಸುಷ್ಟ ಪರಿಣಾಮಗಳ ಕಲ್ಪನೆ ಮಾತ್ರ ನಿಶ್ಚಿತವಾಗಿ ಬರುವುದು. ಜನ್ಮ ರಾಶಿಯಂತೆಯೆ ಜನ್ಮಲಗ್ನದಿಂದಲೂ ಭವಿಷ್ಯ ಹೇಳಿದರೆ ಅದು ಹೆಚ್ಚು ನಿಜವಾದುದ್ದು ಕಂಡುಬಂದಿದೆ.**

## ಮೇಷ

ಈ ರಾಶಿಯ ಜನರಿಗೆ ದೊಡ್ಡ ಅಂದರೆ ಬಹಳ ದಿನಗಳ ಕಾಲ ಹಾಸಿಗೆ ಹಿಡಿಯಬೇಕಾದಂತಹ ವಿಕಾರವುಂಟಾಗುವ ಭೀತಿ ಇಲ್ಲವಾದರೂ ಡಿಸೆಂಬರ್ ೫ ರ ನಂತರ ಅರೆತಲೆ ಶೂಲಿ, ಮೂಲವ್ಯಾಧಿ, ಕಣ್ಣುಬರುವುದು, ಕಾಮಣಿ, ಗೊಬ್ಬರಗಳಂತಹ ವಿಕಾರಗಳ ತೊಂದರೆ ತುಸು ಹೆಚ್ಚುಕಡಿಮೆ ಇದ್ದದ್ದೆ. ಆದರೆ ಇತರ ವಿಷಯಗಳಲ್ಲಿ ಪೂರ್ಣ ಸಮಾಧಾನ ಉಳಿಸುವಂತಹ ವಾತಾವರಣವಿದ್ದು ದೇಹಸುಖಕ್ಕೆ ಅವಶ್ಯವಾದಂತಹ ಬಹಳಷ್ಟು ಘಟನೆಗಳು ಸಂಭವಿಸುವವು. ಹಾಗು ಮಾರ್ಚ ೨೩ ರಿಂದ ಕೌಟುಂಬಿಕ ಉತ್ಕರ್ಷ ಒಳ್ಳೆಯ ರಭಸದಿಂದಾಗತೊಡಗುವುದು.

ಹೆಂಡತಿಯ ಆರೋಗ್ಯ ಕೂಡ ತುಸು ಕಿರಿಕಿರಿಯದಾಗಿಯೇ ಇರುವುದು. ಅಲ್ಲದೆ ಚಿಕ್ಕಪುಟ್ಟ ಕಾರಣಗಳಿಗಾಗಿಯೆ ಅನೇಕ ಸಲ ಉಭಯತರಲ್ಲಿ ವಿರಸವುಂಟಾಗುತ್ತಲೇ ಇರುವುದು; ಆದರೂ ನಿಜವಾಗಿಯೂ ಅಂತರಂಗದಲ್ಲಿ ಪರಸ್ಪರರ ಬಗ್ಗೆ ನಿಷ್ಠೆ ಹಾಗು ಪ್ರೇಮಗಳು ಅಭೇದ್ಯವಾಗಿರುವುದರ ನಿದರ್ಶನಗಳು ಇತರರ ಗಮನಕ್ಕೆ ಬರುವಂತಹ ಘಟನೆಗಳು ಜರಗುವವು. ಈ ರಾಶಿಯ ಅವಿವಾಹಿತರ ವಿವಾಹವಾಗುವದಿದ್ದರೆ ಮಾರ್ಚ್ ೨೩ರ ವರೆಗೆ ನಿಶ್ಚಿತವಾಗಿಯೂ ಆಗುವುದು. ಆದರೆ ಮುಂದೆ ಕೂಡ ವಿಶೇಷ ಕಷ್ಟವಿಲ್ಲದೆ ಆಗುವ ಯೋಗವಿದೆ. ವಧೂವರರು ರೂಪದಲ್ಲಿ ತೀರ ಭಿನ್ನರಾಗಿರುವರಾದರೂ ಆಚಾರ-ವಿಚಾರಗಳಲ್ಲಿ ಒಳ್ಳೆಯ ಮತ್ಯೈಕ್ಯ ಹೊಂದುವಂತಹರಾಗಿರುತ್ತಾರೆ.

ನಿಮ್ಮ ಮಕ್ಕಳಲ್ಲಿ ಯಾರದಾದರೂ ವಿವಾಹ ಮಾಡುವ ಯೋಚನೆಯಿದ್ದರೆ ಅವರ ವಿವಾಹ ಈ ವರ್ಷ ಯಾವಾಗಲೂ ಸುಲಭವಾಗಿ ಕುಳಿತಲ್ಲಿಯೇ ಹೊಂದುವುದು ಮಾತ್ರವಲ್ಲ, ಅಕಸ್ಮಾತ್ ಪೂರ್ವನಿಶ್ಚಿತ ಮುಹೂರ್ತವನ್ನು ಬದಲಿಸಬೇಕಾದ ಪ್ರಸಂಗ ಬಂದರೂ ವಿವಾಹ ಕಾರ್ಯ ಮಾತ್ರ ನಿರ್ವಿಘ್ನವಾಗಿಯೇ ಜರಗುವುದು. ಮಕ್ಕಳ ಆರೋಗ್ಯಕ್ಕೆ ಚಿಕ್ಕಪುಟ್ಟ ಅಪಘಾತಗಳ ಭಯವಿದ್ದರೂ ಅವರ ಉತ್ಕರ್ಷಕ್ಕೆ ಬಹಳ ಉತ್ತಮ ಯೋಗವಿದೆ. ವಿಶೇಷತಃ ಮಾರ್ಚ್ ೨೩ ರ ವರೆಗೆ ಇಲ್ಲವೆ ಅಗಸ್ಟನಿಂದ ಮುಂದಿನ ಅವಧಿಯಲ್ಲಿ ನಿಶ್ಚಿತವಾಗಿಯೂ ಅವರ ಉತ್ಕರ್ಷವಾಗುವುದಲ್ಲದೆ ಅವರಿಂದ ನಿಮಗೆ ಪ್ರತಿಯೊಂದು ರೀತಿಯಲ್ಲೂ ಒಳ್ಳೆಯ ಸುಖ ಮತ್ತು ಅಪೇಕ್ಷಿತ ಸಹಾಯ ಸಿಗುವುದು.

ಉದ್ಯೋಗ-ವ್ಯವಹಾರಸ್ಥರಿಗೆ ಈ ವರ್ಷ ಒಳ್ಳೆಯ ಉನ್ನತಿಕಾರಕ ಹಾಗು ಅಮಿತ ಲಾಭ ಕಾರಕವಾಗಿದೆ. ಯಾಕಂದರೆ ಲಾಭೇಶ ಶನಿ ವರ್ಷವಿಡಿ ತನ್ನ ಸ್ಥಾನದಲ್ಲಿಯೆ ಇರುವನಲ್ಲದೆ ಭಾಗ್ಯೇಶ ಗುರು ಸಹ ಮಾರ್ಚ್ ೨೩ರ ವರೆಗೆ ಪ್ರಥಮನಾಗಿರುವುದರಿಂದ ಭಾಗ್ಯಸ್ಥಾನವನ್ನು, ಅನಂತರ ಜುಲೈ ಮುಗಿಯುವಷ್ಟರಲ್ಲಿಯೆ ಎರಡನೆಯವನಾಗಿರುವುದರಿಂದ ಕರ್ಮಸ್ಥಾನವನ್ನು ಮತ್ತು ಅದರ ನಂತರ ಮೂರನೆಯವನಾಗಿರುವದರಿಂದ ಮತ್ತೆ ಭಾಗ್ಯಸ್ಥಾನ ಹಾಗು ಲಾಭಸ್ಥಾನಗಳನ್ನು ಮತ್ತು ಸಪ್ತಮ ವ್ಯಾಪಾರಸ್ಥಾನವನ್ನು ಪೂರ್ಣದೃಷ್ಟಿಯಿಂದ ನೋಡುತ್ತಿರುವುದರಿಂದ ನೌಕರಿ ಹಾಗು ಉದ್ಯೋಗಗಳೆರಡರಲ್ಲೂ ದೊಡ್ಡ ಪ್ರತಿಷ್ಠೆ ಹಾಗು ಅಪಾರ ಯಶಸ್ಸು, ಮತ್ತು ಎಣಿಕೆಗಿಂತ ಅನೇಕಪಟ್ಟು ಹೆಚ್ಚು ದ್ರವ್ಯ ಲಾಭ ದೊರೆಯುವವು. ನೌಕರದಾರರಿಗೆ ಮಾರ್ಚ್ ೨೧ ರಿಂದ ಜುಲೈ ೩೧ ರ ವರೆಗಿನ ಅವಧಿಯಲ್ಲಿ ಮೇಲಿನ ಗ್ರೇಡು ದೊರೆಯಬಹುದಾಗಿದೆ, ಮತ್ತು ಉದ್ಯೋಗಸ್ಥರಿಗೆ ಮಾರ್ಚ್ ೨೧ ರ ವರೆಗೆ ಹಾಗು ಅಗಸ್ಟನಿಂದ ಮುಂದಿನ ಕಾಲ ವಿಶೇಷ ಲಾಭಕರವಾಗಿದೆ. ನೌಕರದಾರರರಿಗೆ ಬದಲಿಯಾದಲ್ಲಿ ಅದು ಮಾತ್ರ ತೀರ ಪ್ರತಿಕೂಲವಾಗಿರುವ ಸ್ಥಳಕ್ಕೆ. ನೌಕರಿಯಲ್ಲಿ ವರಿಷ್ಠರು ಇಲ್ಲವೆ ಉದ್ಯೋಗದಲ್ಲಿ ಆಶ್ರಯದಾತರು ನಿಮ್ಮ ಬಗ್ಗೆ ಯಾವಾಗಲೂ ಸಂತುಷ್ಟರೇ ಆಗಿರುವರು. ಆದರೆ ಡಿಸೆಂಬರ್ ೫ರಂದು ಬರುವ ಎರಡನೆಯ ರಾಹುವು ಲಾಭದೃಷ್ಟಿಯಿಂದ ಸಂಗ್ರಹವನ್ನು ಮಾತ್ರ ಮಾಡಗೊಡಲಾರನು. ಅಂತೆಯೆ ಅಪೇಕ್ಷಿತ ಮತ್ತು ಅನಪೇಕ್ಷಿತ ವೆಚ್ಚದ ಪ್ರಸಂಗಗಳು ಒಂದಾದಮೇಲೊಂದರಂತೆ ಬರುತ್ತಲೇ ಇರುವವು.

ಈ ಎರಡನೆಯ ರಾಹುವಿನಿಂದಾಗಿಯೇ ನೀವು ನಿಮ್ಮ ಕೈಕೆಳಗಿನವರ ಇಲ್ಲವೆ ಆಶ್ರಿತರ ವಿಷಯದಲ್ಲಿ ಈ ಕ್ಷಣಕ್ಕೆ ಸಂತುಷ್ಟರಾಗಿದ್ದರೆ, ಮರುಕ್ಷಣಕ್ಕೆಯೇ ವಿತುಷ್ಟರಾಗಿರುವಂತಹ ವಿಚಿತ್ರ ರೀತಿಯಲ್ಲಿ ವರ್ತಿಸುವಿರಿ. ಮೊದಲನೆಯ ಹಾಗು ಮೂರನೆಯ ಗುರುವಿನಿಂದ ಪುಣ್ಯಕಾರ್ಯಗಳು ನಡೆಯುವವಲ್ಲದೆ ಅನೇಕ ಕಾರ್ಯಗಳಿಗಾಗಿ ಪ್ರವಾಸವನ್ನು ಕೈಕೊಳ್ಳಬೇಕಾಗಬಹುದು.

ದಾವೆ, ಫಿರ್ಯಾದಿ ಇಲ್ಲವೆ ಸ್ಪರ್ಧೆಗಳಲ್ಲಿ ಎರ

ಡನೆಯ ಗುರುವಿದ್ದಾಗ ತೀರ್ಪು ಹೊರಬಿದ್ದರೆ ನಿಮ್ಮ ವಿರುದ್ಧವಾಗುವ ಭೀತಿಯಿದೆ; ಆದರೆ ಅದೇ ಮೊದಲನೆಯ ಇಲ್ಲವೆ ಮೂರನೆಯ ಗುರುವಿದ್ದಾಗಾದರೆ ನಿಮಗೆ ಅಪೂರ್ವ ಯಶಸ್ಸು ದೊರೆಯುವುದು.

ಈ ರಾಶಿಯ ಗರ್ಭಿಣಿಯರ ಪ್ರಸೂತಿ ಮಾರ್ಚ್ ೨೩ ರ ನಂತರ ಆದರೆ ತುಸು ಕಷ್ಟಕರವಾದರೂ ಪ್ರಾಣಭಯವಿಲ್ಲ. ಎರಡನೆಯ ಗುರುವಿದ್ದಾಗ ಆದರೆ ಕನ್ಯಾ ಹಾಗು ಮೂರನೆಯ ಗುರುವಿದ್ದಾಗ ಆದರೆ ಪುತ್ರಸಂತಾನವಾಗುವ ಯೋಗವಿದೆ.

ಈ ರಾಶಿಯ ವಿದ್ಯಾರ್ಥಿಗಳಲ್ಲಿ ನೂರಕ್ಕೆ ೬೦–೬೫ ರಷ್ಟು ಜನ ಉತ್ತೀರ್ಣರಾಗುವರು; ಆದರೆ ಮಾರ್ಚ್ ೨೧ಕ್ಕೆ ಮೊದಲು ಇಲ್ಲವೆ ಅಗಸ್ಟ್ ೧ರ ನಂತರ ಪರೀಕ್ಷೆಯಾದರೆ ಕ್ಲಾಸ್ ಕೂಡ ಸಿಕ್ಕುವುದೆಂದು ತಿಳಿಯಬೇಕು.

ಒಟ್ಟಿನಮೇಲೆ ಈ ವರುಷ ಬಹುತರ ವಿಷಯಗಳಲ್ಲಿ ಸಮಾಧಾನಕರ, ಉನ್ನತ ಯಶ ಹಾಗು ಲಾಭಕರವಾಗಿದೆಯೆಂಬುದು ನಿಶ್ಚಿತ.

# ವೃಷಭ

ಈ ರಾಶಿಯ ಜನರ ಆರೋಗ್ಯ ಡಿಸೆಂಬರ್ ೫ ರಂದು ಬರುವ ಮೊದಲನೆಯ ರಾಹುವಿನಿಂದಾಗಿ ಚನ್ನಾಗಿ ಉಳಿಯುವುದಿಲ್ಲ, ಮತ್ತು ಅದರಲ್ಲೂ ಮಾರ್ಚ್ ೨೧ ರ ವರೆಗೆ ಇರುವ ಹನ್ನೆರಡನೆಯ ಗುರುವಿನಿಂದಾಗಿ ಇದೇ ಅವಧಿಯಲ್ಲಿ ಅದು ತೀರ ಕೆಡುವ ಸಂಭವವೂ ಇದೆ. ಮುಖರೋಗ, ಗಂಟಲು ಬೇನೆ, ಇಲ್ಲವೆ ಮೂತ್ರಕೋಶದ ದೋಷ ಇರುವವರು ವಿಶೇಷ ಎಚ್ಚರಿಕೆಯಿಂದಿರಬೇಕು. ಅದರಂತೆಯೆ ಫೆಬ್ರುವರಿ ೨೫ ರಿಂದ ಜೂನ್ ೧೮ ರ ವರೆಗಿನ ಅವಧಿಯಲ್ಲಿ ಚತುರ್ಥ ಹಾಗು ದಶಮಸ್ಥಾನಗಳಲ್ಲಾಗುವ ಮಂಗಳ ಮತ್ತು ಶನಿ ಪ್ರತಿದೃಷ್ಟಿಯೋಗವು ಎತ್ತರದ ಮೇಲಿಂದ ಇಲ್ಲವೆ ವಾಹನದಿಂದ ಬೀಳುವ ಭಯವನ್ನು ಸೂಚಿಸುತ್ತದೆ. ಇತರ ವಿಷಯಗಳಲ್ಲಿ ದೇಹಸುಖಕ್ಕೆ ಈ ವರುಷ ಅಷ್ಟೊಂದು ಉತ್ತಮವಾಗಿಲ್ಲವಾದರೂ ಮಾರ್ಚ್ ೨೨ ರಿಂದ ಬರುವ ಮೊದಲನೆಯ ಗುರುವೇ ಮುಂದೆ ಅಗಸ್ಟ್ ೧ ರಿಂದ ಎರಡನೆಯವನಾಗುವುದರಿಂದ ಬಹುತರ ವಿಷಯಗಳಲ್ಲಿ ಕಷ್ಟಸಾಧ್ಯವೆನಿಸುವ ರೀತಿಯಲ್ಲದು ಸಿಗಬಹುದು. ಅಂತೆಯೆ ಪ್ರತಿಯೊಂದು ವಿಷಯದಲ್ಲೂ ಅವಸರಪಡದೆಯೆ ಸಾವಕಾಶವಾಗಿ ಮತ್ತು ಪೂರ್ಣ ವಿಚಾರ ಮಾಡಿ ಮಾಡಿದರೆ ತುಸುವಾದರೂ ಮನಸ್ಸಿನಂತೆಹಾಗು ಯಶೋದಾಯಕವಾಗಬಹುದು.

ಹೆಂಡತಿಯ ಆರೋಗ್ಯ ಕೂಡ ಫೆಬ್ರುವರಿ ೨೫ ರಿಂದ ಜೂನ್ ೧೮ ರ ವರೆಗಿನ ಅವಧಿಯಲ್ಲಿ ಸರಿ ಇರುವದಿಲ್ಲವಾದರೂ ಇತರ ವೇಳೆಯಲ್ಲಿ ಉತ್ತಮವಿರುವುದಲ್ಲದೆ ಒಳ್ಳೆಯ ಸ್ತ್ರೀಸುಖ ಮತ್ತು ಪ್ರಾಪಂಚಿಕಸುಖಗಳು ದೊರೆಯುವವು. ಆದರೆ ನಿಮ್ಮ ನಿಮ್ಮಲ್ಲಿ ಆಗೀಗ ಕ್ಷುಲ್ಲಕ ಕಾರಣಗಳಿಗಾಗಿ ಬಹಳ ಮನಸ್ತಾಪ. ಈ ರಾಶಿಯ ಅವಿವಾಹಿತರಿಗೆ ಮಾರ್ಚ್ ೨೧ ರ ವರೆಗೆ ಬಾಸಿಂಗಬಲವಿಲ್ಲ, ಆದರೆ ಮುಂದೆ ಮಾತ್ರ ಅದು ಇದೆಯೆಂದು ತಿಳಿಯಬೇಕು. ಯಾಕೆಂದರೆ ಅನಂತರ ತೀವ್ರ ವಿವಾಹವಾಗುವ ಯೋಗವಿದೆ. ವಧೂವರರು ರೂಪಲಕ್ಷಣಗಳಿಂದ ಸಮಾನರಾಗಿರುವರಾದರೂ ಸ್ವಭಾವದಲ್ಲಿ ತೀರ ಭಿನ್ನರಾಗಿರುತ್ತಾರೆ.

ನಿಮ್ಮ ಮಕ್ಕಳ ವಿವಾಹವಾಗುವುದಿದ್ದರೆ ಅವರಿಗೆ ಮಾರ್ಚ್ ೨೧ ರಿಂದ ಅಗಸ್ಟ್ ೧ ರ ವರೆಗೆ ಎಷ್ಟು ಬಲವಾದ ವಿವಾಹಯೋಗವಿದೆಯೊ ಇತರ ವೇಳೆಯಲ್ಲಿ ಅದಿಲ್ಲವೆಂಬುದೂ ಅಷ್ಟೇ ನಿಜ. ಸೊಸೆ ಇಲ್ಲವೆ ಅಳಿಯ ಪೂರ್ಣ ಮನಸ್ಸಿಗೊಪ್ಪುವಂತಿರುವರು. ಮಕ್ಕಳ ಉನ್ನತಿಗೆ ಈ ವರುಷ ಮಾರ್ಚ್ ೨೧ ರಿಂದ ಪ್ರಗತಿಕಾರಕ ಯೋಗವಿದ್ದು ಅವರಿಂದ ಯಥೋಚಿತ ಸುಖ, ಸಹಾಯಗಳೂ ಸಿಕ್ಕುವವು.

ಉದ್ಯೋಗ — ವ್ಯವಹಾರಸ್ಥರಲ್ಲಿ ಸ್ವಂತ ಉದ್ಯೋಗವಿರುವವರಿಗೆ ಹತ್ತನೆಯ ಶನಿಯಿಂದಾಗಿ ದಿನದಿನಕ್ಕೆ ಸ್ಥೈರ್ಯ ಹಾಗು ಪ್ರಾವೀಣ್ಯವೃದ್ಧಿಯಾಗುತ್ತ ನಡೆಯುವುದು; ಆದರೆ ಮಾರ್ಚ್ ೨೧ರ ವರೆಗಿರುವ ಹನ್ನೆರಡನೆಯ ಗುರು ಪ್ರತ್ಯಕ್ಷಲಾಭಕ್ಕೆ ತೀರ ಪ್ರತಿಕೂಲನು ಮಾತ್ರವಲ್ಲ, ಪ್ರತಿಯಾಗಿ ಅನೇಕರಿಗೆ ಹೇಗಾದರೂ ಮಾಡಿ ತಮ್ಮ ಉದ್ಯೋಗವನ್ನುಳಿಸಿಕೊಂಡು ಹೋಗಬೇಕಾದರೆ ಸಾಕುಬೇಕಾಗುವುದು. ಆದರೆ ಮುಂದೆ ಮಾರ್ಚ್ ೨೧ ರಿಂದ ಅಗಸ್ಟ್ ೧ ರ ವರೆಗೆ ಗುರು ಮೊದಲನೆಯವನಾಗಿರುವುದರಿಂದ ವ್ಯವಹಾರ ಮತ್ತು ಪ್ರಾಪ್ತಿಗಳೆರಡೂ ಹೆಚ್ಚತೊಡಗುವವು; ಹಾಗು ಅಗಸ್ಟ್ ೧ ರಿಂದ ಅವನ . ಎರಡನೆಯ ಅಂದರೆ ಧನಸ್ಥಾನದಲ್ಲಿ ಬರುವುದರಿಂದ ಈ ಹಿಂದೆ ಅನುಭವಿಸಿದ ಕಷ್ಟ, ಹಾನಿ ಮುಂತಾದುವನ್ನೆಲ್ಲ ಒಂದೂವರೆ ಎರಡು ಪಟ್ಟುಗಳಷ್ಟು ತುಂಬಿಕೊಂಡು ಬರಲು ಸಾಧ್ಯವಾಗುವುದೆಂಬುದರಲ್ಲಿ ಸಂಶಯವಿಲ್ಲ. ಹನ್ನೆರಡನೆಯ ಗುರುವಿನಿಂದಾಗಿ ವರಿಷ್ಠರು ಇಲ್ಲವೆ ಆಶ್ರಯದಾತರು ನಿಮ್ಮ ಬಗ್ಗೆ ಅಸಂತುಷ್ಟರಾಗಿಯೆ ಇರುವವರಾದರೂ ಅವನು ಮೊದಲನೆಯವನಾದೊಡನೆ ಒಮ್ಮೆಲೆ ಅವರಲ್ಲಿ ಬದಲಾವಣೆಯುಂಟಾಗಿ ಎಲ್ಲರೂಸಂತುಷ್ಟರಾಗಿರುವುದು ಕಂಡುಬರದಿರದು. ನೌಕರಿಯಲ್ಲಿ ಮೇಲಿನ ಗ್ರೇಡು ಸಿಕ್ಕು ಬದಲಿಯಾದರು ಕೂಡ ಸೋಯಿ ಸೌಕರ್ಯಗಳ ದೃಷ್ಟಿಯಿಂದ ಆ ಊರು ತೀರ ಕನಿಷ್ಠವಾಗಿರುವುದು. ಗುರು ಎರಡನೆಯವನಾಗಿರುವಾಗ ಸಾಲವಿದ್ದರೆ ಅದು ತೀರುವುದು; ಅದಿರದಿದ್ದರೆ ಸಾಕಷ್ಟು ಸಂಗ್ರಹವಾಗಬಹುದು. ಅವನು ಮೊದಲನೆಯವನಿದ್ದಾಗ ದೂರದ ಪ್ರವಾಸ ಹಾಗು ಪುಣ್ಯಕಾರ್ಯಗಳು ಸಂಭವಿಸುವವು.

ದಾವೆ, ಫಿರ್ಯಾದಿ ಇಲ್ಲವೆ ಸ್ಪರ್ಧೆಗಳಲ್ಲಿ ಮೊದಲನೆಯ ಗುರುವಿನಿಂದಾಗಿ ಯಶಸ್ಸು ಹಾಗು ಅನುಕೂಲತೆಗಳು ದೊರೆಯುವವಾದರೂ ಅವನು ಹನ್ನೆರಡನೆಯ ಹಾಗು ಎರಡನೆಯ ಸ್ಥಾನದಲ್ಲಿದ್ದಾಗ ಪ್ರತಿಪಕ್ಷಿಯ ಜೋರು ಹೆಚ್ಚೇ ಉಳಿಯುವುದು. ಅಲ್ಲದೆ ಈ ಸಲ ಚಿಕ್ಕಪುಟ್ಟ ಶತ್ರುಗಳು ಬಹಳ ಹೆಚ್ಚುವರು.

ಈ ರಾಶಿಯ ಗರ್ಭಿಣಿಯರಿಗೆ ಹನ್ನೆರಡನೆಯ ಗುರುವಿರುವಾಗ ತುಸು ಕಷ್ಟವೆನಿಸಿದರೂ ಅವನು ಮೊದಲನೆಯ ಇಲ್ಲವೆ ಎರಡನೆಯವನಾಗಿರುವಾಗ ಸುಲಭ ಪ್ರಸೂತಿಯ ಯೋಗವಿದೆ. ಎರಡನೆಯ ಗುರುವಿರುವಾಗ ಪ್ರಸೂತಿಯಾದರೆ ಪುತ್ರಸಂತಾನಲಾಭವಿದೆ.

ಈ ರಾಶಿಯ ವಿದ್ಯಾರ್ಥಿಗಳಲ್ಲಿ ಮಾರ್ಚ್ ೨೩ ರ ಮೊದಲೇ ಯಾರ ಪರೀಕ್ಷೆಯಿದೆಯೋ ಅವರ ಯಶಸ್ಸು ನಿಶ್ಚಿತವಲ್ಲ; ಆದರೆ ಅನಂತರ ಪರೀಕ್ಷೆಯಾಗುವವರು ನಿಶ್ಚಿತ ಪಾಸಾಗುವರು ಹಾಗು ಅಗಸ್ಟ್ ನಂತರ ಪರೀಕ್ಷೆಯಾದರೆ ಕ್ಲಾಸ್ ಕೂಡ ದೊರೆಯುವುದು ನಿಶ್ಚಿತ.

ಒಟ್ಟಿನ ಮೇಲೆ ಈ ವರುಷದ ಮೊದಲ ಅರ್ಧಭಾಗ ಎಷ್ಟು ಕಷ್ಟಕರವೆನಿಸುವುದೋ, ಅನಂತರದ ಅರ್ಧಭಾಗ ಅಷ್ಟೇ ಸಮಾಧಾನಕರವೆಂಬುದು ನಿಶ್ಚಿತ.

# ಮಿಥುನ

ಈ ರಾಶಿಯ ಜನರ ಆರೋಗ್ಯ ಹನ್ನೆರಡನೆಯ ಗುರುವಿದ್ದಾಗ ಅಂದರೆ ಮಾರ್ಚ್ ೨೧ ರಿಂದ ಜುಲೈ ೩೧ ರ ವರೆಗಿನ ಅವಧಿಯಲ್ಲಿ ತುಸು ಕಿರಿಕಿರಿಯದಾದರೂ ಇತರ ಸಮಯದಲ್ಲಿ ಅವರು ಒಳ್ಳೆಯ ನಿರೋಗಿಯಾಗಿರುವರು. ಡಿಸೆಂಬರ್ ೫ ರಿಂದ ಬರುವ ಏಳನೆಯ ಕೇತು ಮನಸ್ಸಿನ ಸ್ತಿಮಿತವನ್ನು ಉತ್ತಮವಾಗಿರಿಸುವನಲ್ಲದೆ ದೊಡ್ಡ ದೊಡ್ಡ ಕೆಲಸಗಳನ್ನು ಕಣ್ಣು ಮಿಟುಕಿಸುವುದರಲ್ಲಿಯೆ ಮಾಡಿ ಮುಗಿಸಬಲ್ಲೆನೆಂಬಂತಹ ಆತ್ಮವಿಶ್ವಾಸವನ್ನು ಹುಟ್ಟಿಸುತ್ತಾನೆ. ಜುಲೈ ೩೧ ರಿಂದ ಬರುವ ಮೊದಲನೆಯ ಗುರುವಿನಿಂದಾಗಿ ದೇಹಸುಖಕ್ಕೆ ಅವಶ್ಯವಾದಂತಹ ಸಂಗತಿ ಹಾಗು ವಸ್ತುಗಳು ಒದಗುವವು.

ಡಿಸೆಂಬರ್ ೫ ರ ವರೆಗಿರುವ ಏಳನೆಯ ಕೇತುವಿನಿಂದಾಗಿ ಹೆಂಡತಿಗೆ ಪಿತ್ತವಿಕಾರದ ತೊಂದರೆ ತುಸು ಆಗಬಹುದಾದರೂ ಮುಂದೆ ಮಾತ್ರ ಅವಳ ಆರೋಗ್ಯ ಚನ್ನಾಗಿಯೇ ಇರುವುದು. ಹನ್ನೆರಡನೆಯ ಗುರುವಿದ್ದಾಗ ನಿಮ್ಮ ನಿಮ್ಮಲ್ಲಿ ತಪ್ಪು-ತಿಳುವಳಿಕೆಯಿಂದಾಗಿ ಆಗೀಗ ಕಿಡಿ ಹಾರಿದರು ಕೂಡ ಇತರ ವೇಳೆಯಲ್ಲಿ ಪ್ರೇಮ ಹಾಗು ಏಕಮತ ಉಳಿಯುವವು. ಇನ್ನೂ ಅವಿವಾಹಿತರಾಗಿರುವವರು ಈ ಸಲ ವಿವಾಹವಾಗುವುದಿದ್ದರೆ ಮೊದಲನೆಯ ಹಾಗು ಹನ್ನೊಂದನೆಯ ಗುರುವಿದ್ದಾಗ ಒಳ್ಳೆಯ ಬಾಸಿಂಗಬಲವಿದ್ದು ಅದು ಅನಾಯಾಸ ಹೊಂದುವುದಲ್ಲದೆ ವ್ಯವಸ್ಥಿತ ರೀತಿಯಲ್ಲಿ ಪೂರ್ಣಗೊಳ್ಳುವುದು ಕೂಡ. ವಧೂವರರು ಅನುರೂಪರಾಗಿರುವುದಲ್ಲದೆ ಬಹುಶಃ ಮೊದಲಿನಿಂದಲೂ ಪರಸ್ಪರ ಪರಿಚಿತರೂ ಇರುವರು.

ನಿಮ್ಮ ಮಕ್ಕಳ ವಿವಾಹವಾಗುವುದಿದ್ದರೆ ಅದು ಹನ್ನೊಂದನೆಯ ಗುರುವಿದ್ದಾಗ ಅನಾಯಾಸವಾಗಿ ಹಾಗು ಮೊದಲನೆಯ ಗುರುವಿದ್ದಾಗ ತುಸು ಶ್ರಮದಿಂದ ಸಾಧ್ಯವಾಗುವುದು. ಆದರೆ ಹನ್ನೆರಡನೆಯ ಗುರುವಿದ್ದಾಗ ಎಷ್ಟು ಪ್ರಯತ್ನಿಸಿದರೂ ಅದು ವ್ಯರ್ಥವೇ ಆಗುವುದು. ಸೊಸೆ ಇಲ್ಲವೆ ಅಳಿಯ ರೂಪದಿಂದ ಸಾಮಾನ್ಯರಾಗಿದ್ದರೂ ಸ್ವಭಾವದಿಂದ ಬಹಳ ಉತ್ತಮರಾಗಿರುವರು. ಮಾರ್ಚ್ ೨೧ ರಿಂದ ಜುಲೈ ೩೧ರ ವರೆಗಿರುವ ಹನ್ನೆರಡನೆ ಗುರುವಿನಿಂದಾಗಿ ಹಾಗು ನವೆಂಬರ್ ೧೯ ರ ವರೆಗೆ ಹಾಗು ಅಗಸ್ಟ ೧೩ ರಿಂದ ಸಪ್ಟೆಂಬರ್ ೮ ರ ವರೆಗಿರುವ ನಾಲ್ಕನೆಯ ಶುಕ್ರನಿಂದಾಗಿ ಮಕ್ಕಳಲ್ಲಿ ಕೆಲವರಿಂದ ತುಸು ತೊಂದರೆಯಾಗಬಹುದಾದರೂ ಉಳಿದ ವೇಳೆಯಲ್ಲಿ ಸುಖ, ಸಮಾಧಾನಗಳು ಸಿಗುವವು. ಅಲ್ಲದೆ ಮೊದಲನೆಯ ಗುರುವಿದ್ದಾಗ ಒಬ್ಬಿಬ್ಬರ ಒಳ್ಳೆಯ ಉನ್ನತಿಯೂ ಆಗುವದು.

ಈ ಸಲ ವರುಷವಿಡಿ ಭಾಗ್ಯೇಶ ಶನಿಯು ಭಾಗ್ಯಸ್ಥಾನದಲ್ಲಿಯೇ ಇರುವುದರಿಂದ ಅವನು ನಿಮ್ಮ ಭಾಗ್ಯೋದಯ ಮಾಡಿಯೇ ತೀರುವನು. ಡಿಸೆಂಬರ್ ೫ ರಿಂದ ಬರುವ ಆರನೆಯ ಕೇತು ಇಚ್ಛಿತ ಕಾರ್ಯದಲ್ಲಿ ಬರುವ ಕಷ್ಟ, ಅಡೆತಡೆಗಳು ಹಾಗು ಶತ್ರುಗಳನ್ನು ಪೂರ್ಣ ನಿವಾರಿಸುವನು. ಮಾರ್ಚ್ ೨೧ ರ ವರೆಗಿರುವ ಹನ್ನೊಂದನೆಯ ಹಾಗು ಅಗಸ್ಟ ೧ ರ ನಂತರ ಬರುವ ಮೊದಲನೆಯ ಗುರು ವಿಪುಲ ದ್ರವ್ಯಲಾಭವೀಯುವರು. ಅದರಂತೆಯೆ ಮಹತ್ವದ ಸರಕಾರಿ ಕೆಲಸಗಳನ್ನು ಮೊದಲನೆಯ ಗುರು ಸುಲಭದಲ್ಲಿಯೇ ನಿಮ್ಮ ಮನಸ್ಸಿನಂತೆ ಮಾಡಿಕೊಟ್ಟರೆ, ಹನ್ನೊಂದನೆಯ ಗುರುವಿದ್ದಾಗ ನಿಮಗೆ ದೊಡ್ಡ ಮಿತ್ರರ ಸಹಾಯ ದೊರೆಯುವುದು. ನೌಕರದಾರರಿಗೆ ಡಿಸೆಂಬರ್ ೩೦ ರ ವರೆಗೆ ಇಲ್ಲವೆ ಅಗಸ್ಟ ೧೦ ರಿಂದ ಸಪ್ಟೆಂಬರ್ ೨೩ ರ ವರೆಗಿನ ಅವಧಿಯಲ್ಲಿ ಮೇಲಿನ ಗ್ರೇಡು ನಿಶ್ಚಿತ ಸಿಕ್ಕುವುದು. ಉದ್ಯೋಗಸ್ಥರಿಗೆ ಅವರ ಪಕ್ಕು ಹೆಚ್ಚಾಗುವಂಥ ಯೋಗ ಮೇಲಿಂದಮೇಲೆ ಒದಗಿಬಂದು ಬೇರೂರಲ್ಲಿ ತಮ್ಮ ಉಪಶಾಖೆಗಳನ್ನು ತೆಗೆಯುವಂತಹ ಸುಯೋಗ ಸಹ ಬರಬಹುದು. ಅಲ್ಲದೆ ಬರುವ ಲಾಭದ ಸದ್ವಿನಿಯೋಗವಾಗುವುದಲ್ಲದೆ ಇಚ್ಛಿತ ವಸ್ತುಗಳ ವಿಪುಲ ಸಂಗ್ರಹ ಸಹ ಸಾಧ್ಯವಾಗುವುದು. ಪ್ರವಾಸ ಅಷ್ಟಾಗಿ ಆಗದಿದ್ದರೂ ಬಹಳಷ್ಟು ಧಾರ್ಮಿಕ ಕಾರ್ಯಗಳು ಜರಗುವವು. ಕೇತುವು ೯ನೆಯವನಾದಂದಿನಿಂದಲೂ ಕೈಕೆಳಗಿನವರು ಬಹಳ ಚೆನ್ನಾಗಿ ವರ್ತಿಸುವರು.

ದಾವೆ, ಫಿರ್ಯಾದಿ ಇಲ್ಲವೆ ಸ್ಪರ್ಧೆಗಳಲ್ಲಿ ಬಹಳಷ್ಟು ಪ್ರಸಂಗಗಳಲ್ಲಿ ಆರನೆಯ ಕೇತು ಅಪೂರ್ವ ಯಶಸ್ಸು ತಂದುಕೊಡುವನು. ಆದರೆ ಹನ್ನೆರಡನೆಯ ಗುರುವಿನಲ್ಲಿ ಎಣಿಕೆಗಿಂತ ಹೆಚ್ಚು ವೆಚ್ಚ ಮಾಡಬೇಕಾಗಬಹುದಷ್ಟೆ.

ಈ ರಾಶಿಯ ಗರ್ಭಿಣಿಯರು ಹನ್ನೊಂದನೆಯ ಗುರುವಿದ್ದಾಗ ಎಷ್ಟೂ ಕಷ್ಟವಿಲ್ಲದೆ ಪ್ರಸೂತರಾಗುವರಲ್ಲದೆ ಅವರಲ್ಲಿ ಹೆಚ್ಚಿನವರಿಗೆ ಪುತ್ರಪ್ರಾಪ್ತಿಯ ಆನಂದವೂ ಲಭಿಸುವುದು.

ಈ ರಾಶಿಯ ವಿದ್ಯಾರ್ಥಿಗಳಲ್ಲಿ ಮಾರ್ಚ್ ೨೧ ರ ವರೆಗೆ ಹಾಗು ಅಗಸ್ಟ ೧ರ ನಂತರ ಪರೀಕ್ಷೆಗೆ ಕೂಡುವವರು ಉತ್ತೀರ್ಣರಾಗುವುದು ಮಾತ್ರವಲ್ಲ ಕ್ಲಾಸ್ ಸಹ ದೊರಕಿಸುವರು.

ಒಟ್ಟಿನಮೇಲೆ ನಡುವಿನ ನಾಲ್ಕು ತಿಂಗಳು—ಎಪ್ರಿಲ್‌ನಿಂದ ಜುಲೈವರೆಗೆ—ಬಿಟ್ಟರೆ ಈ ವರುಷವಿಡಿ ಅತ್ಯಂತ ಸುಖಕರ ಹಾಗು ಭಾಗ್ಯೋತ್ಕರ್ಷಕವಾಗಿದೆಂಬುದು ನಿಶ್ಚಿತ.

# ಕರ್ಕ

ಈ ರಾಶಿಯ ಜನರ ಆರೋಗ್ಯ, ಇಡೀ ವರುಷ ಇರುವ ಎಂಟನೆಯ ಶನಿಯಿಂದಾಗಿ ಇರಬೇಕಾದಂತೆ ಇರದೆ ಕಿರುಕಳ ಸ್ವರೂಪದ ವಿಕಾರಗಳಿಂದಾಗಿ ಮೇಲಿಂದ ಮೇಲೆ ಕೆಡಬಹುದು, ಅಲ್ಲದೆ ವಾತದ ತೊಂದರೆಯಿರುವವರಿಗೆ ಮೊದಲಿನಿಂದಲೂ ಕಷ್ಟವಾಗಬಹುದು. ಅದರಲ್ಲೂ ಫೆಬ್ರುವರಿ ೨೫ ರಿಂದ ಜೂನ್ ೧೮ ರ ವರೆಗಿನ ಅವಧಿಯಲ್ಲಾಗುವ ಕ್ಲೇಶ ವಿಶೇಷ ಕಷ್ಟಕರವಾದುದು. ಆದರೂ ಶನಿಯು ಸ್ವಸ್ಥಾನದಲ್ಲಿಯೇ ಇರುವದರಿಂದ ಹಾಗು ರೋಗಸ್ವಾಮಿಯಾದ ಗುರು ಮೊದಲಿನ ಹತ್ತು ತಿಂಗಳು ಹತ್ತು ಹಾಗು ಹನ್ನೊಂದನೆಯವನಾಗಿ ಅನುಕೂಲನಾಗಿರುವುದರಿಂದ ನೂರಕ್ಕೆ ತೊಂಬತ್ತೊಂಬತ್ತುಪಾಲು ಗಂಡಾಂತರದ ಭಯವಿಲ್ಲವೇಯಿಲ್ಲ. ಆದರೂ ಕ್ಲೇಶ ಪರಿಹಾರಾರ್ಥ ಮತ್ತು ಆಯುಷ್ಯವೃದ್ಧಿಗಾಗಿ ೨೩೦೦೦ ಶನೀಶ್ವರಜಪ ಹಾಗು ೧೧೦೦೦ ಮಹಾಮೃತ್ಯುಂಜಯಜಪ ಮಾಡುವುದು ಉತ್ತಮ. ಇತರ ವಿಷಯಗಳಲ್ಲಿ ಉತ್ತಮ ದೇಹಸುಖ ಸಿಕ್ಕುವುದು ಹಾಗು ಕೇತು ಆರ

ನೆಯುವನಾದ ಮೇಲೆ ಡಿಸೆಂಬರ್ ೫ ರ ವರೆಗೆ ಒಂದರಹಿಂದೊಂದರಂತೆ ವಿಶೇಷ ಸಮಾಧಾನದ ಸಂಗತಿಗಳು ಜರುಗುವವು.

ಹೆಂಡತಿಯ ಆರೋಗ್ಯ ಹನ್ನೊಂದನೆಯ ಗುರುವಿದ್ದಾಗ ಅಂದರೆ ಮಾರ್ಚ್ ೨೩ ರಿಂದ ಜುಲೈ ೩೧ರ ವರೆಗೆ ಎಷ್ಟು ಉತ್ತಮವಿರುವುದೊ ಇತರ ವೇಳೆಯಲ್ಲಿ ಅಷ್ಟಿರುವುದಿಲ್ಲ. ಅಲ್ಲದೆ ಅವಳ ಸ್ವಭಾವದಲ್ಲಿ ಕೋಪ ಹಾಗು ಸಿಡುಕು ಹೆಚ್ಚಾಗಿರುವುದು ಕಂಡುಬರುವುದು. ಹನ್ನೆರಡನೆಯ ಗುರುವಿದ್ದಾಗ ಅಂದರೆ ಜುಲೈ ೩೧ ರ ನಂತರದ ಅವಧಿಯಲ್ಲಿ ನಿಮ್ಮ ನಿಮ್ಮಲ್ಲಿ ಮೇಲಿಂದ ಮೇಲೆ ಮನಸ್ತಾಪವಾಗುವುದು. ಅದರಂತೆಯೆ ಈ ರಾಶಿಯ ಅವಿವಾಹಿತರಿಗೆ ಈ ವರುಷ ಅಷ್ಟೊಂದು ಭಾರಿ ಬಾಸಿಂಗ ಬಲವಿಲ್ಲವೆಂದರೂ ನಡೆಯುವುದು. ಆದರೆ ಅದರಲ್ಲಿಯೆ ಕೆಲವರಿಗೆ ಹನ್ನೊಂದನೆಯ ಗುರುವಿರುವಾಗ ಅಂದರೆ ಮಾರ್ಚ್ ೨೩ ರಿಂದ ಜುಲೈ ೩೧ ರ ವರೆಗಿನ ಅವಧಿಯಲ್ಲಿ ವಿವಾಹವಾಗಬಹುದು. ಆದರೆ ವಿವಾಹ ಹೊಂದಬೇಕಾದರೆ ಬಹಳಷ್ಟು ಯಾತಾಯಾತವಾಗುವುದಲ್ಲದೆ ವಿಪರೀತ ವೆಚ್ಚವನ್ನೂ ಸಹನಮಾಡಬೇಕಾಗಬಹುದು.

ನಿಮ್ಮ ಮಕ್ಕಳ ವಿವಾಹ ಈ ವರುಷ ಆಗುವುದಿದ್ದರೆ ಅವರಿಗೆ ಮಾತ್ರ ಜುಲೈ ೩೧ ರ ವರೆಗೆ ಒಳ್ಳೆಯ ಗುರುಬಲವಿರುವುದರಿಂದ ಅನಾಯಾಸ ಹೊಂದುವುದು ಹಾಗು ಅಲ್ಪ ಶ್ರಮದಿಂದಲೇ ಪೂರ್ಣಗೊಳ್ಳುವುದು. ಸೊಸೆ ಇಲ್ಲವೆ ಅಳಿಯ ಮನಸ್ಸಿಗೊಪ್ಪುವಂತಹರೂ ಒಳ್ಳೆಯ ಜಾಣರೂ ಉತ್ತಮ ಭವಿಷ್ಯತ್ತುಳ್ಳವರೂ ಆಗಿರುವರು. ಮಕ್ಕಳಿಂದ ಶಬ್ದಸುಖ ತುಸು ಕಡಿಮೆ ಎನಿಸಿದರೂ ದ್ರವ್ಯಸುಖ ಹಾಗು ಇತರ ಅಪೇಕ್ಷಿತ ಸಹಾಯ ಬಹಳ ಉತ್ತಮ.

ಉದ್ಯೋಗ-ವ್ಯವಹಾರಸ್ಥರಿಗೆ ಈ ವರುಷ, ಹತ್ತು ಹಾಗು ಹನ್ನೊಂದನೆಯ ಗುರುವಿನಿಂದಾಗಿ ಬಹಳ ತೇಜಿಯುದೂ ತುಂಬ ಲಾಭಕರವೂ ಆಗಿದೆ; ಆದರೆ ಹನ್ನೆರಡನೆಯ ಗುರು ಬಂದನಂತರ ನಿರರ್ಥಕ ವೆಚ್ಚಮಾಡಬೇಕಾದಂತಹ ಅನೇಕ ಸಂಗತಿಗಳನ್ನೆದುರಿಸಬೇಕಾಗುವುದು ಹಾಗು ಉದ್ಯೋಗದಲ್ಲಿ ತೀರ ಮಂದಿಯ ಅನುಭವವಾಗುವುದು. ಅದರಂತೆಯೆ ತುಸು ಅಪಕೀರ್ತಿ ಬರುವ ಭಯವೂ ಇದೆ. ಅಂತೆಯೆ ಹನ್ನೆರಡನೆಯ ಗುರುವಿರುವಾಗ ತುಸು ಎಚ್ಚರಿಕೆಯಿಂದಿರಬೇಕು. ಗುಪ್ತಶತ್ರುಗಳು ಬಹಳ ಜನರಾಗುವುದಲ್ಲದೆ ನಿಮ್ಮ ಮೇಲೆ ವಿಪರೀತ ಸಂಕಟಗಳನ್ನು ತಂದೊಡ್ಡುವರು. ಆದರೂ ನಿಮ್ಮ ಪತ್ತು ಹಾಗು ಪ್ರತಿಷ್ಠೆಗಳು ಅಬಾಧಿತವಾಗುಳಿಯುವುದಲ್ಲದೆ ತೇಜಿಯಿಂದ ವಿಪುಲ ಲಾಭವೂ ಆಗುವುದು. ಅಲ್ಲದೆ ಅಷ್ಟಮದಲ್ಲಿರುವ ಸ್ವಗೃಹಿಯಾದ ಶನಿಯಿಂದಾಗಿ ಅನೇಕರಿಗೆ ಗುಪ್ತ ಅಥವಾ ಅನಿರೀಕ್ಷಿತ ಲಾಭ ತುಸುಮಟ್ಟಿಗೆ ಆಗಬಹುದು. ನೌಕರದಾರರಿಗೆ (ಅವರ ಮೂಲಕುಂಡಲಿಯಲ್ಲಿ ಗುರು ಪ್ರಬಲನಾಗಿದ್ದರೆ) ಮೇಲಿನ ಗ್ರೇಡು ನಿಶ್ಚಯವಾಗಿಯೂ ಸಿಕ್ಕುವುದು. ಬದಲಿಯಾದರೆ, ಅದು ಮಾತ್ರ ನಿಮಗೆ ಬೇಡಾದ ಸ್ಥಳಕ್ಕೆಯೆ. ಹೊಸ ಸಂಗ್ರಹವೇನಾಗದಿದ್ದರೂ ಹಳೆಯದಕ್ಕೆ ಕೈ ಹಚ್ಚಬೇಕಾಗಿ ಬರುವುದಿಲ್ಲ. ಹತ್ತನೆಯ ಗುರುವಿನಿಂದಾಗಿ ಯಾವುದೊಂದು ಮಂಗಲಕಾರ್ಯ ಜರುಗುವುದು ಮತ್ತು ನಿಮ್ಮ ಮೇಲೆ ವರಿಷ್ಠರ ಇಲ್ಲವೆ ಆಶ್ರಯದಾತರ ಮರ್ಜಿ ಚನ್ನಾಗಿ ಉಳಿಯುವುದು.

ದಾವೆ, ಫಿರ್ಯಾದಿ ಇಲ್ಲವೆ ಸ್ಪರ್ಧೆಗಳಲ್ಲಿ ಡಿಸೆಂಬರ್ ೫ ರ ವರೆಗೆ ದೊರೆಯುವ ತೀರ್ಪುಗಳಲ್ಲಿ ನಿಮಗೆ ಅಪೂರ್ವ ಯಶಸ್ಸು ದೊರೆಯುವದಲ್ಲದೆ ಪ್ರತಿಪಕ್ಷಿಯ ಪೂರ್ಣ ನಾಶವಾಗುವುದು. ಅನಂತರ ಜುಲೈ ೩೧ ರ ವರೆಗೆ ದೊರೆಯುವ ತೀರ್ಪುಗಳಲ್ಲಿಯೂ ಒಳ್ಳೆಯ ಯಶಸ್ಸು ಸಿಕ್ಕರೂ ಪ್ರತಿಪಕ್ಷಿಯ ಜೋರು ಕಾಯಮವೇ ಉಳಿಯುವುದು. ಆದರೆ ಅನಂತರದ ಕಾಲ ಮಾತ್ರ ನಿಮಗೆ ಅತಿಶಯ ಪ್ರತಿಕೂಲವಿದೆ.

ಈ ರಾಶಿಯ ವಿದ್ಯಾರ್ಥಿಗಳಲ್ಲಿ ಯಾರ ಪರೀಕ್ಷೆ ಡಿಸೆಂಬರ್ ೫ ಕ್ಕಿಂತ ಮೊದಲು ಹಾಗು ಮಾರ್ಚ್ ೨೩ ರಿಂದ ಜುಲೈ ೩೧ ರ ವರೆಗಿನ ಅವಧಿಯಲ್ಲಿ ಆಗುವದೊ ಅವರು ಉತ್ತೀರ್ಣರಾಗುವರು, ಅಲ್ಲದೆ ಜೂನ್ ೧೮ ರಿಂದ ಜುಲೈ ೩೧ ರ ಅವಧಿಯಲ್ಲಿ ಪರೀಕ್ಷೆಯಾದರೆ ಕ್ಲಾಸ್ ಕೂಡ ದೊರೆಯುವುದು.

ಒಟ್ಟಿನಲ್ಲಿ ಈ ವರುಷ ಬಹುತರ ವಿಷಯಗಳು ಕಷ್ಟಸಾಧ್ಯವೆಂಬುದನ್ನು ಲಕ್ಷಿಸಬೇಕು.

## ಸಿಂಹ

ಈ ವರುಷ ಮಂಗಳನು ಈ ರಾಶಿಯಲ್ಲಿ ಮೊದಲು ಡಿಸೆಂಬರ್ ೩೦ ರ ವರೆಗೆ, ಹಾಗು ಅನಂತರ ಅವನು ವಕ್ರನಾಗಿ ಎರಡನೆಯ ಸಲ ಕನ್ಯಾ ರಾಶಿಯಿಂದ ಮತ್ತೆ ನಿಮ್ಮ ರಾಶಿಯನ್ನು ಪ್ರವೇಶಿಸಿ ಜೂನ್ ೧೮ ರ ವರೆಗೆ ಉಳಿಯುವುದರಿಂದ, ಮತ್ತು ಆಗ ಶನಿಯೊಂದಿಗೆ ಅವನ ಪ್ರತಿದೃಷ್ಟಿಯೋಗವೂ ಇರುವುದರಿಂದ ಈ ರಾಶಿಯವರಿಗೆ ಮೇಲಿನ ಎರಡು ಅವಧಿಗಳಲ್ಲಿ ಮೊದಲಿನದರಲ್ಲಿ ಉಷ್ಣವಾತದಿಂದ ಹಾಗು ಎರಡನೆಯದರಲ್ಲಿ ಶಸ್ತ್ರ ಇಲ್ಲವೆ ಅಗ್ನಿಜನ್ಯ ಅಪಘಾತದಿಂದ ಶಾರೀರಕ ಕ್ಲೇಶವುಂಟಾಗುವ ಭೀತಿ ಬಹಳವಿದೆ. ಅಂತೆಯೆ ಅವುಗಳಿಗವಕಾಶವಿರುವಂತಹ ಸ್ಥಳಗಳಲ್ಲಿ ಕೆಲಸಮಾಡುವವರು ತುಂಬ ಎಚ್ಚರದಿಂದಿರಬೇಕು.

ಅದರಂತೆಯೆ ರಾಹು ಹಾಗು ಗುರುಗಳಿಬ್ಬರೂ ಹತ್ತನೆಯವರಾಗಿರುವಾಗ ಅಂದರೆ ವೃಷಭದಲ್ಲಿ ಒಂದೆಡೆಯಿರುವಾಗ ಅಂದರೆ ಮಾರ್ಚ್ ೨೩ ರಿಂದ ಜುಲೈ ೩೧ ರ ಅವಧಿಯಲ್ಲಿ ಅಜೀರ್ಣದಿಂದ ತೊಂದರೆಯಾಗುವ ಸಂಭವವಿದೆ. ಅಂತೆಯೇ ಆಹಾರ ವಿಷಯದಲ್ಲಿ ತೀರ ಸಂಯಮದಿಂದಿರಬೇಕು. ಇತರ ವಿಷಯಗಳಲ್ಲಿ ಈ ವರುಷ ದೇಹಸುಖಕ್ಕೆ ಅತ್ಯಂತ ಸಮಾಧಾನಕರವಿದ್ದು, ವಿಶೇಷತಃ ಒಂಬತ್ತು ಹಾಗು ಹನ್ನೊಂದನೆಯ ಗುರುವಿದ್ದಾಗ ಇದರ ಅನುಭವ ಬರುವದು. ಶನಿ, ಮಂಗಳರ ಪ್ರತಿದೃಷ್ಟಿಯೋಗದ ಕಾಲದಲ್ಲಿ ಹೆಂಡತಿಗೂ ವಾಂತಿ ಇಲ್ಲವೆ ರಕ್ತದ ಒತ್ತಡದ ಮೂಲಕ ತುಸು ತೊಂದರೆಯಾಗಬಹುದು. ಈ ಸಮಯದಲ್ಲಿ ಪರಸ್ಪರರದು ಅಷ್ಟಾಗಿ ಹೊಂದುವುದೂ ಇಲ್ಲ; ಆದರೆ ಇತರ ವೇಳೆಯಲ್ಲಿ ಒಳ್ಳೆಯ ಮತೈಕ್ಯ ಮತ್ತು ಪ್ರೇಮವಿರುವದಲ್ಲದೆ ಹೆಂಡತಿಯ ಆರೋಗ್ಯ ಕೂಡ ಚೆನ್ನಾಗಿ ಉಳಿಯುವುದು. ಈ ರಾಶಿಯ ಅವಿವಾಹಿತರ ವಿವಾಹವಾಗಬೇಕಿದ್ದರೆ ಬಹುಶಃ ಮಾರ್ಚ್ ೨೩ ರ ವರೆಗೆ ಆಗಬಹುದಾಗಿದೆ; ಆದರೆ ಆಗಾಗದಿದ್ದರೆ ಜುಲೈ ೩೧ ರ ನಂತರ ನಿಶ್ಚಿತವಾಗಿ ಹಾಗು ಅಲ್ಪಾಯಾಸದಿಂದ ಆಗುವುದಲ್ಲದೆ ವಧೂವರರ ಜೊತೆಯೂ ಬಹು ಉತ್ತಮವಾಗಿರುವುದು.

ನಿಮ್ಮ ಮಕ್ಕಳ ವಿವಾಹವಾಗುವದಿದ್ದರೆ ಅದಕ್ಕೆ ಮಾರ್ಚ್ ೨೩ ರ ವರೆಗೆ ಉತ್ತಮವಾದರೆ ಜುಲೈ ೩೧ ರ ನಂತರ ಮಧ್ಯಮ ಬಾಸಿಂಗಬಲವಿದ್ದು ಬೀಗರು ನಿಮಗಿಂತ ಹೆಚ್ಚು ಸುಸ್ಥಿತಿಯಲ್ಲಿರುವವರಾಗಿರುವರು. ಸೊಸೆ ಇಲ್ಲವೆ ಅಳಿಯ ರೂಪವಂತರೂ ಜಾಣರೂ ಒಳ್ಳೆಯ ಸುದ್ಯೆವಿಗಳೂ ಆಗಿರುವರು. ಮಕ್ಕಳಲ್ಲಿ ಬಹು ಜನರ—ಅವರವರ ಯೋಗ್ಯತೆಗನುಗುಣವಾಗಿ–ಉತ್ಕರ್ಷವೀಸಲ ಆಗಲಿದೆ, ಹಾಗು ಹತ್ತನೆಯ ಗುರುವಿರುವಾಗ ಒಬ್ಬನಿಂದ ತುಸು ಹೆಚ್ಚು ಕಡಿಮೆ ತೊಂದರೆಯಾದರೂ ಇತರ ವೇಳೆಯಲ್ಲಿ ಒಳ್ಳೆಯ ಸುಖ ಮತ್ತು ಸಹಾಯ ದೊರೆಯುವವು.

ಉದ್ಯೋಗ— ವ್ಯವಹಾರಸ್ಥರಿಗೆ ಈ ವರುಷವೆಲ್ಲ, ಶನಿ ಮತ್ತು ಗುರು ಇಬ್ಬರೂ ಅತ್ಯಂತ ಅನುಕೂಲ ಸ್ಥಾನಗಳಲ್ಲಿರುವುದರಿಂದ, ಒಳ್ಳೆಯ ಭರಭರಾಟೆಯದೇ ಆಗಿರುವುದಲ್ಲದೆ, ನೌಕರದಾರರಿಗಿಂತಲೂ ಹೆಚ್ಚಾಗಿ ಉದ್ಯೋಗಸ್ಥರ ದೈವ ತೆರೆದಂತಿದೆಯೆನ್ನಬೇಕು. ಆದರೆ ಮಾರ್ಚ್ ೨೩ ರಿಂದ ಎಪ್ರಿಲ್ ೯ ರ ವರೆಗಿನ ಅವಧಿಯಲ್ಲಿ ದುರ್ಲಕ್ಷ್ಯ, ಫಾಜಿಲ ಆತ್ಮವಿಶ್ವಾಸ ಇಲ್ಲವೆ ಇತರರಿಂದುಂಟಾಗುವ ಮೋಸದಿಂದಾಗಿ ನಿಮ್ಮ ಮಾಲಿಗೆ ತುಸು ಹಾನಿ ಅಥವಾ ಶ್ರಮದ ವಿಪರೀತ ವಿಪರ್ಯಾಸವಾಗುವ ಸಂಭವವಿದೆ. ಒಂಬತ್ತನೆಯ ಗುರು ಬೌದ್ಧಿಕ ಕಾರ್ಯಗಳಲ್ಲಿ ಕೀರ್ತಿಯನ್ನಿತ್ತರೆ ಹನ್ನೊಂದನೆಯ ಗುರು ಅಮಿತ ಲಾಭವನ್ನು ತಂದುಕೊಡುವನು. ನೌಕರದಾರರಿಗೆ ಡಿಸೆಂಬರ್ ೩೦ರೊಳಗೆ ಅಥವಾ ಎಪ್ರಿಲ್ ೯ ರಿಂದ ಜೂನ್ ೧೮ ರ ವರೆಗಿನ ಅವಧಿಯಲ್ಲಿ ಮೇಲಿನ ಗ್ರೇಡು ನಿಶ್ಚಿತವಾಗಿಯೂ ಸಿಗುವುದಾದರೂ ಬದಲಿಯಾಗಿಯೇ ತೀರುವುದು ಮಾತ್ರವಲ್ಲ ಅದೂ ತೀರ ಅನಾನುಕೂಲವಿರುವ ಸ್ಥಳಕ್ಕೆ. ಅದರಂತೆಯೆ ಮಾರ್ಚ್ ೨೩ ರಿಂದ ಜುಲೈ ೩೧ ರ ವರೆಗಿನ ಅವಧಿಯಲ್ಲಿ ವರಿಷ್ಠರು ಇಲ್ಲವೆ ಆಶ್ರಯದಾತರು ಅಸಂತುಷ್ಟರಾಗಿರುವರೆಂದು ಕಂಡು ಬಂದರೂ ಇತರ ವೇಳೆಯಲ್ಲೆಲ್ಲ ಅವರು ತೀರ ಸಂತುಷ್ಟರೇ ಆಗಿರುವರು. ಉಚ್ಚವಸ್ತುಗಳ ಹಾಗೂ ಮನೆ, ಹೊಲ ಮುಂತಾದ ಆಸ್ತಿಯ ಸಂಗ್ರಹ ಕೂಡ ಚೆನ್ನಾಗಿಯೇ ಆಗುವುದು. ಡಿಸೆಂಬರ್ ೫ ರ ನಂತರದಲ್ಲಿ ಸಂಬಂಧಿಕರಿಂದ ತುಸು ವಿರೋಧ ಬರಬಹುದಾದರೂ ಕೈಕೆಳಗಿನವರು ಪ್ರೇಮ, ವಿಶ್ವಾಸಗಳಿಂದಿರುವರು. ಒಂಬತ್ತನೆಯ ಗುರುವಿನಲ್ಲಿ ಯಾತ್ರೆ ಇಲ್ಲವೆ ದೂರದ ಪ್ರವಾಸ ಒದಗಬಹುದು.

ದಾವೆ, ಫಿರ್ಯಾದಿ ಇಲ್ಲವೆ ಸ್ಪರ್ಧೆಗಳಲ್ಲಿ ಒಂಬತ್ತನೆಯ ಗುರುವಿದ್ದಾಗ ತೀರ್ಪು ದೊರೆತರೆ ಅದ್ಭುತ ಯಶಸ್ಸು ಸಿಗುವುದು ಮಾತ್ರವಲ್ಲ, ಪ್ರತಿಪಕ್ಷಿಯನ್ನು ಪೂರ್ಣ ನಿರ್ನಾಮಮಾಡುವಂತಿರುವದು; ಆದರೆ ಅದೇ ಹತ್ತನೆಯ ಗುರುವಿದ್ದಾಗಾದರೆ ಹೆಸರಿಗೆ ಮಾತ್ರ— ಅಂದರೆ ಬರಿ ಶಾಬ್ದಿಕ ಆಡಂಬರವೇ ಹೆಚ್ಚಾಗಿರುವಂತಹ ಯಶಸ್ಸು ಸಿಕ್ಕುವುದು.

ಈ ರಾಶಿಯ ಗರ್ಭಿಣಿಯರು ಡಿಸೆಂಬರ್ ೫ ರಿಂದ ಮಾರ್ಚ್ ೨೩ ರ ವರೆಗಿನ ಅವಧಿಯಲ್ಲಿ ಇಲ್ಲವೆ ಅಗಸ್ಟ್ ೧೦ ರ ನಂತರ ಪ್ರಸೂತರಾದರೆ ಹೆರಿಗೆ ಅತ್ಯಂತ ಸುಲಭವಾಗುವುದಲ್ಲದೆ ಪುತ್ರಲಾಭವೂ ಆಗುವುದು; ಆದರೆ ಉಳಿದ ಸಮಯದಲ್ಲಾದರೆ ಹೆಣ್ಣು ಮಗುವಾಗುವುದಲ್ಲದೆ ಹೆರಿಗೆ ಕಷ್ಟಕರವೂ ಆಗುವುದು.

ಈ ರಾಶಿಯ ವಿದ್ಯಾರ್ಥಿಗಳ ಪರೀಕ್ಷೆ ಮಾರ್ಚ್ ೨೩ ರ ವರೆಗೆ ಇಲ್ಲವೆ ಜುಲೈ ೩೧ ರ ನಂತರ ಆದರೆ ನಿಶ್ಚಿತವಾಗಿಯೂ ಉತ್ತೀರ್ಣರಾಗುವರು ಮಾತ್ರವಲ್ಲ, ಅಗಸ್ಟ್ ೧೦ ರಿಂದ ಸಪ್ಟೆಂಬರ್ ೨೩ ರ ವರೆಗಿನ ಅವಧಿಯಲ್ಲಾದರೆ ಪ್ರಥಮ, ಇಲ್ಲವಾದರೆ ಕನಿಷ್ಟ ದ್ವಿತೀಯ ಶ್ರೇಣಿಯನ್ನಾದರೂ ಸಂಪಾದಿಸುವರು.

ಒಟ್ಟಿನಲ್ಲಿ ಈ ವರುಷ ಅಲ್ಪ ಕಷ್ಟ ಹಾಗು ತುಂಬ ಸುಖಕರವಾಗಿದೆಯೆಂದು ನಿಶ್ಚಿತವಾಗಿಯೂ ತಿಳಿಯಬೇಕು.

## ಕನ್ಯಾ

ವರ್ಷವಿಡಿ ಇರುವ ಆರನೆಯ ಶನಿಯಿಂದಾಗಿ ಈ ರಾಶಿಯ ಜನರಿಗೆ ದೊಡ್ಡ ಅನಾರೋಗ್ಯವೇನಾಗದಿದ್ದರೂ ಡಿಸೆಂಬರ್ ೫ರ ವರೆಗೆ ಇರುವ ನಾಲ್ಕನೆಯ ಕೇತು ಹಾಗು ಎಂಟನೆಯ ಗುರುವಿನ ಜೊತೆಯು ಅದರ ವಿರುದ್ಧವಾಗಿರುವುದರಿಂದ ಕಿರುಕಳ ಕ್ಲೇಶ ಉಂಟಾಗಬಹುದು. ಆದರೆ ಗುರು ಒಂಬತ್ತನೆಯವನಾದ ನಂತರ, ಅಂದರೆ ಮಾರ್ಚ್ ೨೩ರ ನಂತರ ಉತ್ತಮ ಆರೋಗ್ಯ ಉಳಿಯುವುದು. ಒಂಬತ್ತನೆಯ ಗುರು ಬಂದಂದಿನಿಂದಲೂ ಇತರ ದೇಹಸುಖಕ್ಕೂ ಅನುಕೂಲವೇ ಇದೆ. ಆದರೆ ಈ ವರ್ಷ ಬಹಳ ದಿನ ಹಾಗು ಎರಡುಸಲ, ಅಂದರೆ ಡಿಸೆಂಬರ್ ೩೦ರ ವರೆಗೆ ಹಾಗು ಮತ್ತೆ ಫೆಬ್ರುವರಿ ೨೫ ರಿಂದ ಜೂನ್ ೧೮ರ ವರೆಗೆ ಮಂಗಳ ಹನ್ನೆರಡನೆಯವನಾಗಿರುವುದರಿಂದ ಮನಸ್ಸಿಗೆ ಹೇಸಿಕೆಯೆನಿಸುವಷ್ಟರ ಮಟ್ಟಿಗೆ ಜಗಳ, ತಂಟೆ ಅನೇಕರೊಂದಿಗೆ—ಅದೂ ಕ್ಷುಲ್ಲಕ ವಿಷಯಗಳಿಗಾಗಿ—ಆಗುವ ಭಯವಿದೆ.

ಹೆಂಡತಿಯ ಆರೋಗ್ಯ ಜುಲೈ ೩೧ ರಿಂದ ಸಪ್ಟೆಂಬರ್ ೨೩ರ ವರೆಗಿನ ಅವಧಿಯಲ್ಲಿ ಮಾತ್ರ ತುಸು ಕೆಡುವ ಸಂಭವವಿದೆಯಾದರೂ ಇತರ ವೇಳೆಯಲ್ಲಿ ಅದು ಚನ್ನಾಗಿರುವುದು ಮಾತ್ರವಲ್ಲ, ಮಾರ್ಚ್ ೨೩ರ ನಂತರ ನಿಮ್ಮಿಬ್ಬರಲ್ಲೂ ಮತ್ತೈಕ್ಯ ಹಾಗು ಪ್ರೇಮ ಉತ್ತಮವಾಗಿಯೇ ಇರುವವು. ಅದರಂತೆಯೆ ಈ ರಾಶಿಯ ಅವಿವಾಹಿತರಿಗೆ ಮಾರ್ಚ್ ೨೩ ರಿಂದ ಜುಲೈ ೩೧ರ ವರೆಗೆ ಉತ್ತಮ ಬಾಸಿಂಗಬಲವಿದ್ದು ಕನಸುಮನಸಿನಲ್ಲಿ ಸಹ ಇಲ್ಲದವರೊಂದಿಗೆ ವಿವಾಹಸಂಬಂಧ ಬೆಳೆಯುವುದು. ಆದರೆ ವಧೂವರರು ಬುದ್ಧಿಮತ್ತೆಯಲ್ಲಿ ಸಮಾನರಾದರೂ ನೋಡಲು ಇಜ್ಜೋಡಿಯೆನಿಸುವರು.

ನಿಮ್ಮ ಮಕ್ಕಳ ವಿವಾಹ ಮಾಡುವುದಿದ್ದರೆ ಅದಕ್ಕೆ ಒಂಬತ್ತನೆಯ ಗುರುವಿದ್ದಾಗ ವಿಶೇಷ ಅನುಕೂಲವಿದೆ. ಅಂದರೆ ವಿಶೇಷ ವೆಚ್ಚ ಹಾಗು ತೊಂದರೆಗಳಿಲ್ಲದೆಯೆ ಆಗುವುದು. ಸೊಸೆ ಇಲ್ಲವೆ ಅಳಿಯ ದೊಡ್ಡ ಮನಸ್ಸಿನವರೂ ಒಳ್ಳೆಯ ಸುದ್ಧಿಯೂ ಆಗಿರುವರು. ಆದರೆ ನೋಡಲು ಮಾತ್ರ ಅಷ್ಟೊಂದು ಸುರೂಪಿಯಾಗಿರಲಿಕ್ಕಿಲ್ಲ. ಒಂಬತ್ತನೆಯ ಗುರುವಿನಲ್ಲಿಯೆ ನಿಮ್ಮ ಮಕ್ಕಳಲ್ಲಿ ಕೆಲವರ ಭಾಗ್ಯೋದಯವೂ ಆಗಬಹುದು. ಆದರೆ ಫೆಬ್ರುವರಿ ೨೫ರಿಂದ ಎಪ್ರಿಲ್ ೯ರ ವರೆಗಿನ ಅವಧಿಯಲ್ಲಿ ಅವರಲ್ಲೊಬ್ಬನು ತೀರ ನಿಮ್ಮ ಮನಸ್ಸಿನ ವಿರುದ್ಧ ವರ್ತಿಸಿ ಅತಿ ಕಷ್ಟವೀಯಬಹುದಾದರೂ ಉಳಿದ ವೇಳೆಯಲ್ಲಿ ಅವನೊಂದಿಗೆಯೂ ಚನ್ನಾಗಿರುವುದು. ಒಬ್ಬನಿಗೆ ಜಾಗತಿಕವೆನಿಸುವಂತಹ ಕೀರ್ತಿಯು ದೊರೆಯಬಹುದಾಗಿದೆ.

ಉದ್ಯೋಗ-ವ್ಯವಹಾರಸ್ಥರಿಗೆ ಈ ವರುಷ ಒಂಬತ್ತನೆಯ ಗುರು ಬಂದಂದಿನಿಂದಲೂ ಬಹಳ ಪ್ರಗತಿ, ಒಳ್ಳೆಯ ಲೌಕಿಕ ಪ್ರತಿಷ್ಠೆ ಹಾಗು ಪತ್ನಿನಲ್ಲಿ ಪೆಚ್ಚಳ ಮತ್ತು ವಿಪುಲ ದ್ರವ್ಯಲಾಭ ನಿಸ್ಸಂಶಯವಾಗಿಯೂ ದೊರೆಯುವವು. ಅಲ್ಲದೆ ಎಂಟನೆಯ ಗುರುವಿದ್ದಾಗ ಸಹ ವಾರಸಾ ಹಕ್ಕು ನಿರ್ಣಯವಾಗುವುದರಿಂದ ದೊಡ್ಡ ಆಸ್ತಿ ದೊರೆಯಬಹುದು, ಇಲ್ಲವೆ ಲಾಟರಿ, ಸಟ್ಟಾ, ಕ್ರಾಸ್‌ವರ್ಡ್, ಪ್ರೈಜ್‌ಬಾಂಡ್ ಮುಂತಾದ ಯಾವುದೋದರಲ್ಲಿ ಬಹು ದೊಡ್ಡ ಮೊತ್ತದ ಬಹುಮಾನ ದೊರೆಯಬಹುದು. ಇಲ್ಲವೆ ಇಂಥದೇ ಅಲ್ಪಶ್ರಮದ್ದಾದ ಬೇರಾವ ನಿಮಿತ್ತದಿಂದಾರೂ ಗುಪ್ತ ಅಥವಾ ಆಕಸ್ಮಿಕ ಧನಲಾಭವಾಗುವ ಯೋಗವೂ ಇದೆ. ಉದ್ಯೋಗಸ್ಥರಿಗೆ ಮೂರನೆಯ ಕೇತು ಬಂದಾಗಿನಿಂದಲೂ ಅಂದರೆ ಡಿಸೆಂಬರ್ ೫ ರಿಂದಲೇ ವ್ಯವಹಾರದಲ್ಲಿ ತೇಜಿ ವಾತಾವರಣವೇ ಕಂಡುಬರುವುದು. ಹಾಗು ಒಂಬತ್ತನೆಯ ಗುರು ಬಂದ ನಂತರವಂತೂ ಲಾಭದ ಪ್ರಮಾಣ ದಿನದಿನಕ್ಕೆ ಹೆಚ್ಚುತ್ತಲೇ ಹೋಗುವುದು. ನೌಕರದಾರರಿಗೆ ಹತ್ತನೆಯ ಗುರುವಿದ್ದಾಗ - ಅಂದರೆ ಜುಲೈ ೩೧ರ ನಂತರ, ಅದರಲ್ಲೂ ಸಪ್ಟೆಂಬರ್ ೨೦ ರಿಂದ ಅಕ್ಟೋಬರ್ ೯ ರ ವರೆಗಿನ ಅವಧಿಯಲ್ಲಿ ಮೇಲಿನ ಗ್ರೇಡು ನಿಶ್ಚಿತವಾಗಿಯೂ ಸಿಕ್ಕುವುದು. ಹಾಗು ಬದಲಿಯಾದರೆ ಅದು ಬಹುದಿನಗಳಿಂದಲೇ ನೀವು ಇಚ್ಛಿಪಟ್ಟಿದ್ದ ಸ್ಥಳಕ್ಕೆಯೆ ಆಗುವುದು. ವರಿಷ

ಇಲ್ಲವೆ ಆಶ್ರಯದಾತರು ಜೂನ್ ೧೮ರ ವರೆಗೆ ಒಮ್ಮೆ ಕಣ್ಣಾಗಿದ್ದರೆ ಒಮ್ಮೆ ತಲೆ ಕಾಯಿಸಿಕೊಂಡಿರುವರು. ಆದರೆ ಅನಂತರ ಮಾತ್ರ ಒಳ್ಳೆಯ ಸಂತುಷ್ಟರಾಗಿರುವರು. ನವೆಂಬರ್ ೧೯ ರಿಂದ ಡಿಸೆಂಬರ್ ೧೩, ಇಲ್ಲವೆ ಜನೆವರಿ ೩೧ ರಿಂದ ಫೆಬ್ರುವರಿ ೨೬, ಅಥವಾ ಸಪ್ಟೆಂಬರ್ ೮ ರಿಂದ ಅಕ್ಟೋಬರ್ ೪ರ ವರೆಗಿನ ಅವಧಿಯಲ್ಲಿ ಅನೇಕ ಸಾಮಾನ್ಯ ಇಲ್ಲವೆ ಉಚ್ಚ ವಸ್ತುಗಳನ್ನು ಸಂಗ್ರಹಿಸಲು ಅನೇಕರಿಗೆ ಸಾಧ್ಯವಾಗುವುದು. ಮೂರನೆಯ ಕೇತು ಹಾಗು ಒಂಬತ್ತನೆಯ ಗುರು ಇರುವಾಗ, ಅಂದರೆ ಮಾರ್ಚ್ ೨೩ ರಿಂದ ಜುಲೈ ೩೧ರ ವರೆಗಿನ ಅವಧಿಯಲ್ಲಿ ಎಂಥ ನೀಗಲಾರದಂಥದೆನಿಸುವ ಸಾಹಸ ಮಾಡಿದರೂ ಅದರಲ್ಲಿ ಒಳ್ಳೆಯ ಯಶ ಸಿಕ್ಕುವುದು. ಒಂಬತ್ತನೆಯ ಗುರುವಿದ್ದಾಗ ದೊಡ್ಡ ಧಾರ್ಮಿಕಕಾರ್ಯವೊಂದು ಜರುಗುವುದು. ಒಳ್ಳೆಯ ಮಿತ್ರಸುಖ ದೊರೆಯುವುದಾದರೂ ಅಣ್ಣತಮ್ಮಂದಿರೊಂದಿಗೆ ವಿರಸ. ಎಂಟನೆಯ ಗುರುವಿದ್ದಾಗ ಅನೇಕ ಶುಭಸೂಚಕ ಸ್ವಪ್ನಗಳು ಬೀಳುವದಾದರೆ ಒಂಬತ್ತನೆಯ ರಾಹು ಹಾಗು ಎಂಟನೆಯ ಗುರುವಿರುವ ಕಾಲ ಅಂದರೆ ಡಿಸೆಂಬರ್ ೫ ರಿಂದ ಮಾರ್ಚ್ ೨೩ರ ವರೆಗಿನ ಕಾಲವು ನಿಮ್ಮ ಹಿರಿಯ ಇಲ್ಲವೆ ಪೂಜ್ಯ ಜನಕ್ಕೆ ತುಂಬ ಕ್ಲೇಶಕರವಾಗಿದೆ.

ದಾವೆ, ಫಿರ್ಯಾದಿ ಇಲ್ಲವೆ ಸ್ಪರ್ಧೆಗಳಲ್ಲಿ ಡಿಸೆಂಬರ ೩೦ರ ವರೆಗೆ ಇಲ್ಲವೆ ಫೆಬ್ರುವರಿ ೨೫ ರಿಂದ ಜೂನ್ ೧೮ರ ವರೆಗಿನ ಅವಧಿಯಲ್ಲಿ ದೊರೆಯುವ ತೀರ್ಪುಗಳು ನಿಮ್ಮ ವಿರುದ್ಧವಾದರೆ ಇತರ ವೇಳೆಯಲ್ಲಿ ಅಪೂರ್ವ ಯಶಸ್ಸು ಹಾಗು ಪ್ರತಿಪಕ್ಷಿಗಳಲ್ಲಿ ಅನೇಕರ ಪೂರ್ಣ ನಿರ್ನಾಮ.

ಈ ರಾಶಿಯ ಗರ್ಭಿಣಿಯರು ಎಂಟನೆಯ ಗುರುವಿದ್ದಾಗ ಪ್ರಸೂತರಾದರೆ ಕಷ್ಟ ಬಹಳವಾದರೂ ಪುತ್ರಲಾಭವಾಗುವುದು. ಒಂಬತ್ತನೆಯ ಗುರುವಿದ್ದಾಗಾದರೆ ಕಷ್ಟ ತೀರ ಕಡಿಮೆಯಾದರೂ ಮಗು ಹೆಣ್ಣಾಗುವುದು; ಹಾಗು ಹತ್ತನೆಯ ಗುರುವಿದ್ದಾಗಾದರೆ ಕಷ್ಟ ಮಧ್ಯಮ, ಮತ್ತು ಅನೇಕರಿಗೆ ಅವಳಿ ಮಕ್ಕಳಾಗುವ ಸಂಭವವಿದೆ.

ಈ ರಾಶಿಯ ವಿದ್ಯಾರ್ಥಿಗಳ ಪರೀಕ್ಷೆ ಎಂಟನೆ ಗುರುವಿದ್ದಾಗ, ಅಂದರೆ ಮಾರ್ಚ್ ೨೩ರ ವರೆಗೆ ಆದರೆ ಯಶಸ್ಸಿನ ಬಗ್ಗೆ ಬಹಳ ಸಂಶಯವಿದೆ. ಆದರೆ ಅನಂತರವಾದರೆ ಉತ್ತೀರ್ಣರಾಗುವರು ಮಾತ್ರವಲ್ಲ, ಒಂಬತ್ತನೆಯ ಗುರುವಿದ್ದಾಗ, ಅಂದರೆ ಮಾರ್ಚ್ ೨೩ ರಿಂದ ಜುಲೈ ೩೧ರ ವರೆಗಿನ ಅವಧಿಯ ವರೆಗಾದರೆ ಅನೇಕರಿಗೆ ಕ್ಲಾಸ್ ಕೂಡ ಸಿಕ್ಕುವುದು.

ಒಟ್ಟಿನಲ್ಲಿ ಈ ವರ್ಷ ಬುದ್ಧಿಗೆ ಬೇಸರ ತರಿಸುವಂಥದೂ ಪ್ರಾಪಂಚಿಕಸುಖಕ್ಕೆ ಮಧ್ಯಮವೂ ಇಷ್ಟಕಾರ್ಯಕ್ಕಾಗಿ ವಿರೋಧಿ ಸ್ಥಿತಿಯೊಂದಿಗೆ ಹೋರಾಡಲು ಹಚ್ಚುವಂತಹದಾದರೂ ಉದ್ಯೋಗ ವ್ಯವಹಾರಗಳಲ್ಲಿ ಕೊನೆಕೊನೆಗೆ ತುಂಬ ಯಶಸ್ಸು ಹಾಗು ಲಾಭಗಳನ್ನು ಕೊಡುವುದು ನಿಶ್ಚಿತವೆಂದು ತಿಳಿಯಬೇಕು.

# ತುಲಾ

ಈ ರಾಶಿಯ ಜನರ ಆರೋಗ್ಯ ಡಿಸೆಂಬರ್ ೫ರ ವರೆಗೆ ಎಷ್ಟು ಉತ್ತಮವಾಗಿರುವುದೋ ಆ ದಿನದಿಂದ ಮುಂದೆ ಎಂಟನೆಯ ರಾಹುವಿನಿಂದಾಗಿ ಅಷ್ಟು ಸರಿಯಾಗಿರಲಾರದು. ಅದರಲ್ಲೂ ಮಾರ್ಚ್ ೨೩ರಿಂದ ಜುಲೈ ೩೧ ರ ವರೆಗೆ ಗುರು ಕೂಡ ಎಂಟನೆಯವನೇ ಆಗಿದ್ದಾನೆ. ಈ ಅವಧಿಯಲ್ಲಿ ಹೆಚ್ಚು ಜಪ್ಪಿಸಿಕೊಂಡಿರಬೇಕು. ವಾತವಿಕಾರ, ಮೂತ್ರ-ಕೋಶ ವಿಕಾರ ಹಾಗೂ ಮಧುಮೇಹ ಇರುವವರಿಗೆ ತುಸು ಹೆಚ್ಚು ತೊಂದರೆಯಾಗಬಹುದು. ಆದರೆ ಮೂಲ ಆಯುಷ್ಯಕಾರಕನಾದ ಶನಿಯು ಐದನೆಯ ಇಲ್ಲವೆ ಪ್ರಥಮ ತ್ರಿಕೋಣದಲ್ಲಿ ಮತ್ತು ಸ್ವಕ್ಷೇತ್ರದಲ್ಲಿ ಇರುವದರಿಂದ ಗಂಡಾಂತರ ಮಾತ್ರ ಎಷ್ಟೂ ಇಲ್ಲ. ಕ್ಲೇಶಪರಿಹಾರಾರ್ಥ ೧೮೦೦೦ ರಾಹುಜಪ, ೧೯೦೦೦ ಗುರುಜಪ ಹಾಗು ೧೧೦೦೦ ಮಹಾಮೃತ್ಯುಂಜಯಜಪ ಅವಶ್ಯ ಮಾಡಬೇಕು. ಅಂದರೆ ಆಗಲಿರುವ ಕ್ಲೇಶ ಸೌಮ್ಯಸ್ವರೂಪದ್ದಾಗಬಹುದು. ಇತರ ದೇಹಸುಖಕ್ಕೂ ಈ ವರುಷ ಸಾಮಾನ್ಯತಃ ಚನ್ನಾಗಿಯೇ ಇದ್ದು, ಅದರಲ್ಲಿಯೆ ಡಿಸೆಂಬರ್ ೩೦ರವರೆಗೆ ಹಾಗೂ ಅಗಸ್ಟ ೮ರ ನಂತರ ಬಹಳ ಉತ್ತಮವಾಗಿರುವುದು.

ಹೆಂಡತಿಯ ಆರೋಗ್ಯ ಒಟ್ಟಿನಲ್ಲಿ ಉತ್ತಮವೇ ಇರುವುದಾದರೂ ಡಿಸೆಂಬರ್ ೩೦ರಿಂದ ಫೆಬ್ರುವರಿ ೨೫ ರ ವರೆಗಿನ ಅವಧಿಯಲ್ಲಿ ಅದು ತುಸು ಕಿರಿಕಿರಿಯದಾಗಿರುವುದಷ್ಟೆ. ಆದರೆ ಅವಳೊಡನೆ ಪ್ರತಿಯೊಂದು ವಿಷಯದಲ್ಲೂ ನಿಮ್ಮದು ತುಸು ಹೆಚ್ಚುಕಡಿಮೆ ತಪ್ಪು ತಿಳುವಳಿಕೆಯೆ ಉಂಟಾಗುವುದರಿಂದ ಪರಸ್ಪರರ ಬಗ್ಗೆ ಹಿಂದಿನಷ್ಟು ಹೃದಯ ತಿಳಿಯಾಗಿರುವುದಿಲ್ಲ. ಇತರ ವಿಷಯಗಳಲ್ಲಿ ಪ್ರಾಪಂಚಿಕಸುಖಕ್ಕೆ ಡಿಸೆಂಬರ್ ೩೦ ರಿಂದ ಫೆಬ್ರುವರಿ ೨೫ ಹಾಗೂ ಜೂನ್ ೧೮ ರಿಂದ ಅಗಸ್ಟ್ ೧೦ರ ವರೆಗಿನ ಅವಧಿಯನ್ನುಳಿದು ಇತರ ಕಾಲವೆಲ್ಲ ತುಂಬ ಉತ್ತಮವಿದೆ. ಈ ರಾಶಿಯ ಅವಿವಾಹಿತರು ವಿವಾಹವಾಗುವುದಿದ್ದರೆ ಮಾರ್ಚ್ ೨೩ ರ ವರೆಗೆ ಬಹಳ ಉತ್ತಮ ಹಾಗು ಜುಲೈ ೩೧ರ ನಂತರ ಮಧ್ಯಮ ಬಾಸಿಂಗಬಲವಿದೆ. ವಧುವಿಗೆ ವರ ಇಲ್ಲವೆ ವರನಿಗೆ ವಧು ಬುದ್ಧಿಮತ್ತೆಯಲ್ಲಿ ಹಾಗೂ ಸ್ವಭಾವದಿಂದ ಬಹಳ ಉತ್ತಮ-ಶ್ರೇಣಿಯವರು ದೊರೆಯುತ್ತಾರೆ ಹಾಗು ಉಜ್ವಲ ಸುದೈವಿಗಳೂ ಆಗಿರುತ್ತಾರೆ.

ನಿಮ್ಮ ಮಕ್ಕಳ ವಿವಾಹವಾಗುವುದಿದ್ದರೆ ಅವರಿಗೆ ಮಾರ್ಚ್ ೨೩ ರ ವರೆಗೆ ಮಧ್ಯಮವಾದರೆ ಜುಲೈ ೩೧ರ ನಂತರ ಬಹಳ ಉತ್ತಮ ಬಾಸಿಂಗಬಲವಿದೆ. ಅಳಿಯ ಇಲ್ಲವೆ ಸೊಸೆ ಸ್ವಭಾವದಿಂದ ತೀರ ಹಟಮಾರಿಯಾಗಿರುವರಲ್ಲದೆ ಅತ್ಯಂತ ದುರ್ಲಭ ವಸ್ತುಗಳನ್ನು ಪಡೆಯುವ ಮಹತ್ವಾ-ಕಾಂಕ್ಷೆಯಾಗಿರುವುದರಿಂದ ಮೊದಮೊದಲು ಕೆಲ ದಿನ ಅವರೊಂದಿಗೆ ಹೇಗೆ ವರ್ತಿಸಬೇಕೆಂಬುದೇ ಕಠಿಣ ಸಮಸ್ಯೆಯಾಗುತ್ತದೆ. ಮಕ್ಕಳಲ್ಲಿ ಪ್ರತಿಯೊಬ್ಬರಿಗೂ ಈ ವರುಷ ಉತ್ಕರ್ಷಕಾರಕವಿದ್ದು ಒಬ್ಬಿಬ್ಬರದಂತೂ ಎಲ್ಲರಿಗೂ ಆಶ್ಚರ್ಯವೆನಿಸುವಷ್ಟು ಉನ್ನತಿಯಾಗಲಿದೆ. ಆದರೆ ಅವರೆಲ್ಲರೊಡನೆಯೂ ನಿಮಗೆ ಕೂಡಿ ನಡೆಯುವುದು ಅಷ್ಟಕ್ಕಷ್ಟೆ.

ಈ ರಾಶಿಯ ಉದ್ಯೋಗ-ವ್ಯವಹಾರಸ್ಥರಿಗೆ ಎಂಟನೆಯ ಗುರುವಿದ್ದಾಗ ಅಂದರೆ ಮಾರ್ಚ್ ೨೩ ರಿಂದ ಜುಲೈ ೩೧ರ ವರೆಗಿನ ಅವಧಿಯನ್ನುಳಿದು ಇತರ ಸಮಯದಲ್ಲೆಲ್ಲ ಒಳ್ಳೆಯ ತೇಜಿಯೇ ಇರುವುದು; ಹಾಗೂ ಮಂಗಳ ಹನ್ನೊಂದನೆಯವನಾಗಿರುವಾಗ ಅಂದರೆ ಡಿಸೆಂಬರ್ ೩೦ ರ ವರೆಗೆ ಹಾಗು ಫೆಬ್ರುವರಿ ೨೫ ರಿಂದ ಜೂನ್ ೧೮ರ ವರೆಗಿನ ಕಾಲದಲ್ಲಿ ಭಾವೀ ಭಾಗ್ಯಕ್ಕೆ ಪೋಷಕವೆನಿಸುವಂಥ ಅನೇಕ ಮಹತ್ವದ ಘಟನೆಗಳು ಸಂಭವಿಸುವವು. ಮತ್ತು ಅವುಗಳ ನಿಜವಾದ ಪರಿಣಾಮ ಜುಲೈ ೩೧ರಂದು ಬರುವ ಒಂಬತ್ತನೆಯ ಗುರುವಿದ್ದಾಗ ನಿಸ್ಸಂಶಯವಾಗಿಯೂ ಕಂಡು ಬರುವುದು. ಉದ್ಯೋಗಸ್ಥರಿಗೆ ನವೆಂಬರ್ ೨೪ ರಿಂದ ಡಿಸೆಂಬರ್ ೨೧, ಜನೆವರಿ ೬ ರಿಂದ ೨೯, ಸಪ್ಟೆಂಬರ್ ೨ ರಿಂದ ೨೦ ಹಾಗೂ ಅಕ್ಟೋಬರ್ ೯ ರ ನಂತರದ ಕಾಲದಲ್ಲೆಲ್ಲ ಉತ್ತಮ ದ್ರವ್ಯ-ಲಾಭವಾಗುವುದು. ನೌಕರದಾರರಿಗೆ ಏಳನೆಯ

ಗುರುವಿದ್ದಾಗ ಮೇಲಿನ ಗ್ರೇಡು ಸಿಕ್ಕುವುದು; ಆದರೆ ಒಂದು ವೇಳೆ ತಪ್ಪಿ ಯಾರಾದರೊಬ್ಬರಿಗೆ ಆಗ ಸಿಗದಿದ್ದರೆ ಮುಂದೆ ಒಂಬತ್ತನೆಯ ಗುರುವಿದ್ದಾಗ ನಿಶ್ಚಿತವಾಗಿಯೂ ಸಿಕ್ಕುವುದು. ಆದರೆ ಎಂಟನೆಯ ರಾಹುವಿದ್ದಾಗ ಬದಲಿಯಾದರೆ ಅದು ತೀರ ಅನಾನುಕೂಲ ಸ್ಥಳಕ್ಕೆ. ಈ ಗ್ರಹ ಎಂಟನೆಯವನಿರುವಾಗ ಮೇಲಿನವರು ಇಲ್ಲವೆ ಆಶ್ರಯದಾತರು ಅಷ್ಟೊಂದು ಸಂತುಷ್ಟರಾಗಿರಲಾರರು; ಹಾಗು ಅದರಂತೆಯೆ ಭಯಪ್ರದ ಮತ್ತು ಅಸಹ್ಯವಾದ ಕನಸುಗಳು ಬೀಳುವವು. ಕೆಲವರಲ್ಲಿ ಭೂತಬಾಧೆಯ ಅನೇಕ ಪ್ರಕಾರಗಳು ಕಂಡು ಬರುವ ಸಂಭವವಿದೆ. ಆದರೆ ಗುರು ಒಂಬತ್ತನೆಯವನಾದ ನಂತರ ಇವೆಲ್ಲವುಗಳ ತೀವ್ರತೆ ಬಹಳ ಕಡಿಮೆಯಾಗುವುದು ಮಾತ್ರವಲ್ಲ, ಅನೇಕ ಧಾರ್ಮಿಕ, ಮಂಗಲ, ಇಲ್ಲವೆ ಪುಣ್ಯಪ್ರದ ಕಾರ್ಯಗಳು ಜರುಗುವವು. ಹಲವರಿಗೆ ಅತಿದೂರದ ಯಾತ್ರೆ ಇಲ್ಲವೆ ಬೇರೆ ಕಾರಣಕ್ಕಾಗಿ ಅಂತಹ ಪ್ರವಾಸವನ್ನು, ಬಹುಶಃ ವಿಮಾನ ಮಾರ್ಗವಾಗಿ, ಕೈಕೊಳ್ಳಬೇಕಾಗಬಹುದು. ಇಷ್ಟ ಕಾರ್ಯಗಳಲ್ಲಿ ಅಣ್ಣತಮ್ಮಂದಿರು ಬಹಳಷ್ಟು ಅಡೆತಡೆಗಳನ್ನು ತಂದೊಡ್ಡಬಹುದಾದರೂ ಅವನ್ನು ನಿವಾರಿಸಿ ಕಾರ್ಯ ಪೂರ್ತಿಗೊಳ್ಳಲು ಮಿತ್ರರು ಮನಃಪೂರ್ವಕ ನೆರವಾಗುವರು.

ಧಾವೆ, ಫಿರ್ಯಾದಿ ಹಾಗು ಇತರ ಸ್ಪರ್ಧೆಯ ಕೆಲಸಗಳಲ್ಲಿ ಗುರು ಹಾಗು ರಾಹುಗಳಿಬ್ಬರೂ ಏಕಕಾಲಕ್ಕೆ ಎಂಟನೆಯವರಿರುವಾಗ ಅಂದರೆ ಮಾರ್ಚ್ ೨೩ರಿಂದ ಜುಲೈ ೩೧ ರ ವರೆಗಿನ ಅವಧಿಯಲ್ಲಿ ತೀರ್ಪು ದೊರೆತರೆ ತೀರ ನಿಮ್ಮ ವಿರುದ್ಧವಾಗುವುದಾದರೂ ಡಿಸೆಂಬರ್ ೫ ರ ವರೆಗೆ ಈ ಕಾರ್ಯಗಳಲ್ಲಿ ತುಂಬ ಯಶಸ್ಸು ದೊರೆಯುವುದು; ಹಾಗು ಉಳಿದ ಸಮಯದಲ್ಲಾದರೆ ನೀವು ಯಶಸ್ವಿಯಾದರೂ ಪ್ರತಿಪಕ್ಷಿಗಳಿಗೆ ಮುಂದೆ ಹೋಗಲು ಅದರಲ್ಲಿ ಅವಕಾಶವಿರುವುದು.

ಈ ರಾಶಿಯ ಗರ್ಭಿಣಿಯರು ಗುರು ಹಾಗು ರಾಹುಗಳಿಬ್ಬರೂ ಏಕಕಾಲಕ್ಕೆ ಎಂಟನೆಯವರಾಗಿರುವಾಗ ಪ್ರಸೂತರಾದರೆ ಹೆರಿಗೆ ತುಂಬ ಕಷ್ಟಕರವಾಗುವುದಲ್ಲದೆ ಬಹುಶಃ ಮಗು ಹೆಣ್ಣಾಗುವುದು. ಅದೇ ಏಳು ಇಲ್ಲವೆ ಒಂಭತ್ತನೆಯ ಗುರುವಿದ್ದಾಗ ಸುಲಭ ಪ್ರಸೂತಿಯಾಗುವುದು ಮಾತ್ರವಲ್ಲ, ಅನೇಕರಿಗೆ ಪುತ್ರಲಾಭದ ಆನಂದವೂ ದೊರೆಯುವುದು.

ಈ ರಾಶಿಯ ವಿದ್ಯಾರ್ಥಿಗಳ ಪರೀಕ್ಷೆ ಏಳು ಅಥವಾ ಒಂಭತ್ತನೆಯ ಗುರುವಿದ್ದಾಗ ಅಂದರೆ ಮಾರ್ಚ್ ೨೩ರ ವರೆಗೆ ಅಥವಾ ಜುಲೈ ೩೧ರ ನಂತರ ಆದರೆ ನಿಸ್ಸಂಶಯವಾಗಿಯೂ ಉತ್ತೀರ್ಣರಾಗುವರು ಮಾತ್ರವಲ್ಲ, ಫೆಬ್ರುವರಿ ೧೮ರಿಂದ ಮಾರ್ಚ್ ೬ ಇಲ್ಲವೆ ಸಪ್ಟೆಂಬರ್ ೨ರಿಂದ ೨೦ ಇಲ್ಲವೆ ಅಕ್ಟೋಬರ್ ೯ರ ನಂತರ ಆದರೆ ಕ್ಲಾಸ್ ಕೂಡ ದೊರಕಿಸುವರು.

ಒಟ್ಟಿನಲ್ಲಿ ಈ ವರುಷ ಪ್ರಾಪಂಚಿಕಸುಖಕ್ಕೆ ಸಾಮಾನ್ಯವೆನಿಸಿದರೂ ಗುರು, ರಾಹುಗಳಿಬ್ಬರೂ ಎಂಟನೆಯವರಾಗಿರುವ ಅವಧಿಯೊಂದನ್ನು ಬಿಟ್ಟರೆ ಉಳಿದ ಸಮಯವೆಲ್ಲ ದ್ರವ್ಯಲಾಭಕ್ಕೆ ಬಹಳ ಉತ್ತಮವೆಂಬುದರಲ್ಲಿ ಸಂಶಯವಿಲ್ಲ.

ಅವಿವಾಹಿತರ ವಿವಾಹವಾಗುವುದಿದ್ದರೆ ಈ ವರುಷ ಬಾಸಿಂಗಬಲ ಅಷ್ಟಾಗಿ ಇಲ್ಲವೇ ಇಲ್ಲವೆಂದರೂ ನಡೆಯುವುದು. ಆದರೆ ಅಷ್ಟೊಂದು ಹಟದಿಂದಲೆ ಪ್ರಯತ್ನಿಸಿದರೆ ಮತ್ತು ವಧುವಿನಿಂದ ದೊಡ್ಡ ವರದಕ್ಷಿಣೆಯು ಇಲ್ಲವೆ ವರನು ಶ್ರೀಮಂತನಾಗಿರಬೇಕೆಂಬ ಆಸೆ ಇರದಿದ್ದರೆ ಮಾತ್ರ, ಏಳನೆ ಗುರುವಿದ್ದಾಗ ಅಂದರೆ ಮಾರ್ಚ್ ೨೩ ರಿಂದ ಜುಲೈ ೩೧ ರ ವರೆಗಿನ ಅವಧಿಯಲ್ಲಿ ಆಗಬಹುದಾಗಿದೆ. ವಧು ಇಲ್ಲವೆ ವರ ಸ್ವತಃಕ್ಕಿಂತ ಹೆಚ್ಚು ಸುಂದರ ಬುದ್ಧಿವಂತ ಹಾಗು ಗಾಯನವಾದನಾದಿ ಯಾವುದೊಂದು ಕಲೆಯಲ್ಲಿ ಪ್ರಾವೀಣ್ಯಹೊಂದಿದವರಾಗಿರುತ್ತಾರೆ.

ನಿಮ್ಮ ಮಕ್ಕಳ ವಿವಾಹ ಮಾಡುವುದಿದ್ದರೆ ಮಾರ್ಚ್ ೨೩ರವರೆಗೆ ಸಹಜವಾಗಿಯೇ ಹೊಂದುವಷ್ಟು ಉತ್ತಮವಿದ್ದರೆ ಮುಂದೆ ಜುಲೈ ೩೧ರ ವರೆಗೆ ತುಸು ಆಯಾಸದಿಂದ ಹೊಂದುವಂತಹ ಬಾಸಿಂಗಬಲವಿದೆ. ಸೊಸೆ ಇಲ್ಲವೆ ಅಳಿಯ ಬಹಳ ಬುದ್ಧಿವಂತ, ಒಳ್ಳೆಯ ಸುದ್ಯೆವಿಯಾಗಿದ್ದರೂ ಸಹ ಸಾಮಾನ್ಯವೇ ಇರುವರು. ಮಕ್ಕಳ ಉತ್ಕರ್ಷಕ್ಕೆ ಈ ವರುಷ ಗುರು ಆರನೆಯವನಿರುವಾಗ ಅಂದರೆ ಮಾರ್ಚ್ ೨೩ ರ ವರೆಗೆ ಗಂಡುಮಕ್ಕಳಿಗೆ ಹಾಗು ಏಳನೆಯವನಿರುವಾಗ ಅಂದರೆ ಜುಲೈ ೩೧ ರ ವರೆಗೆ ಹೆಣ್ಣುಮಕ್ಕಳಿಗೆ ಹೆಚ್ಚು ಪ್ರಭಾವಿಯಾಗಿದೆ. ಅದರಂತೆಯೆ ಎಲ್ಲರಿಂದಲೂ ಈ ವರುಷ ಯಥೋಚಿತ ಸುಖ ದೊರೆಯುವುದು.

ಉದ್ಯೋಗ-ವ್ಯವಹಾರಸ್ಥರಲ್ಲಿ, ನಾಲ್ಕನೆಯ ಶನಿಯಿಂದಾಗಿ ಈ ವರುಷ ಬುದ್ಧಿಜೀವಿಗಳಿಗಿಂತ ಶ್ರಮಜೀವಿಗಳಿಗೆ ಹೆಚ್ಚು ಯಶ ಹಾಗು ಲಾಭಕರವೆನಿಸುವುದು; ಮತ್ತು ವ್ಯಾಪಾರಸ್ಥರಿಗಿಂತ ನೌಕರದಾರರಿಗೆ ಹೆಚ್ಚು ಲಾಭ ಹಾಗು ಸುಖಕರವಿರುವುದು. ವ್ಯಾಪಾರಿಗಳಿಗೆ ಆರನೆಯ ಗುರುವಿದ್ದಾಗ ಅಂದರೆ ಮಾರ್ಚ್ ೨೩ರ ವರೆಗೆ ಬಹುಶಃ ಲಾಭದ ಬದಲು ತುಸು ಹಾನಿಯನ್ನೇ ಸಹಿಸಬೇಕಾದ ಪ್ರಸಂಗವೂ ಬರಬಹುದು. ಆದರೆ ಗುರು ಏಳನೆಯವನಾದನಂತರ ಅದೆಲ್ಲ ತುಂಬಿಬರುವುದು. ಎಂಟನೆಯ ಗುರುವಿದ್ದಾಗ ಅಂದರೆ ಜುಲೈ ೩೧ರ ನಂತರ ಅನೇಕರಿಗೆ ಸಟ್ಟಾ,ಲಾಟರಿ, ಬೇರೆಯವರ ವಾರಸಾ ಸಿಗುವುದು ಇಲ್ಲವೆ ಇಂಥದೇ ಅಲ್ಪ ಶ್ರಮದಾಯಕ ಮೂಲಗಳಿಂದ ಗುಪ್ತ ಅಥವಾ ಅನಿರೀಕ್ಷಿತ ಲಾಭ ಬಹಳಷ್ಟಾಗುವ ಸಂಭವವಿದೆ. ಎಂಟನೆಯ ಗುರುವಿದ್ದಾಗಲೇ ಅನೇಕ ಶುಭ

## ವೃಶ್ಚಿಕ

ಈ ರಾಶಿಸ್ವಾಮಿಯಾದ ಮಂಗಳನು ಅಗಸ್ಟ ೧೦ ರ ವರೆಗೆ ಹತ್ತು ಹಾಗು ಹನ್ನೊಂದರಂತಹ ಪ್ರಬಲ ಹಾಗು ನಿರ್ದೋಷ ಸ್ಥಾನಗಳಲ್ಲಿ ಗೋಚರಭ್ರಮಣ ಮಾಡುತ್ತಿರುವುದರಿಂದ ಈ ರಾಶಿಯ ಜನರ ಆರೋಗ್ಯದ ವಿಷಯದಲ್ಲಿ ಎಂಥ ಕಿರಿಕಿರಿಯೂ ಇರಲಾರದೆಂಬುದು ನಿಜವಾದರೂ ಅನಂತರ ಬರುವ ಎಂಟನೆಯ ಗುರು ಒಂದಿಲ್ಲೊಂದು ಪ್ರಕಾರದ ವ್ಯಥೆ ಕೊಡುವ ಭಯವಿದೆ. ವಿಶೇಷತಃ ಗ್ಯಾಸಿನ ಅಥವಾಆಮ್ಲಪಿತ್ತದಉಪದ್ರವವಾಗಬಹುದು. ಇತರ ವಿಷಯಗಳಲ್ಲಿ ದೇಹಸುಖ ಯಾವಾಗಲೂ ಚನ್ನಾಗಿಯೇ ಇರುವುದು ಮಾತ್ರವಲ್ಲ ಏಳನೆಯ ಗುರುವಿನಲ್ಲಿ ಅಂದರೆ ಮಾರ್ಚ್ ೨೩ ರಿಂದ ಜುಲೈ ೩೧ ರ ವರೆಗಿನ ಅವಧಿಯಲ್ಲದು ಅತ್ಯಂತ ಸಮಾಧಾನಕರವಿರುವುದು, ಮತ್ತು ರಾಶಿಸ್ವಾಮಿ ಮಂಗಳನು ಮೊದಲನೆಯವನಾದ ನಂತರ ಅಂದರೆ ಸಪ್ಟೆಂಬರ್ ೨೩ರ ನಂತರ ಬಹುದಿನಗಳಿಂದ ಮನಸ್ಸಿನಲ್ಲಿದ್ದ ಮಹತ್ವಾಕಾಂಕ್ಷೆಯೊಂದು ಬಹಳ ಮಟ್ಟಿಗೆ ಸಫಲವಾಗುವುದು.

ಹೆಂಡತಿಯ ಆರೋಗ್ಯಕ್ಕೆ ಏಳನೆಯ ರಾಹು ಒಬ್ಬನೇ ಇರುವಾಗ ಅಂದರೆ ಡಿಸೆಂಬರ್ ೫ ರಿಂದ ಮಾರ್ಚ್ ೨೩ರ ವರೆಗೆ ತುಸು ಕ್ಲೇಶವುಂಟಾಗಬಹುದು, ಹಾಗು ಉಭಯತರಲ್ಲಿ ಚಿಕ್ಕ-ದೊಡ್ಡ ಕಾರಣಗಳಿಂದಾಗಿ ಸತತ ವಿರಸವಿದ್ದದ್ದೆ. ಆದರೆ ಅನಂತರದಲ್ಲಿ ಮಾತ್ರ ತಪ್ಪುತಿಳವಳಿಕೆ ದೂರವಾಗಿ ಒಳ್ಳೆಯ ಸಾಮರಸ್ಯವುಳಿಯುವುದು. ಈ ರಾಶಿಯ

ಸೂಚಕ ಸ್ವಪ್ನಗಳು ಬೀಳುವುವಲ್ಲದೆ ಅವುಗಳಲ್ಲಿ ಹಲವಾರು ಸತ್ಯವಾಗಿಯೂ ಪರಿಣಮಿಸಬಹುದು. ಏಳನೆಯ ಗುರುವಿದ್ದಾಗ ಮಿತ್ರಸುಖ ಹಾಗು ಅವರಿಂದ ಸಹಾಯ ಸ್ಮರಣೀಯ ಪ್ರಮಾಣದಲ್ಲಿ ದೊರೆಯುವುದು. ನೌಕರದಾರರಿಗೆ ಆರನೆಯ ಗುರುವಿದ್ದಾಗ ಮೇಲಿನ ಗ್ರೇಡು ದೊರೆಯುವುದು; ಆದರೆ ಏಳನೆಯ ಗುರುವಿದ್ದಾಗ ಅಂದರೆ ಎಪ್ರಿಲ್ ೧೪ ರಿಂದ ಮೇ ೧೫ ರ ಅವಧಿಯಲ್ಲಿ ದೊರೆತರೆ ಅದು ಹೆಸರಿಗೆ ಮಾತ್ರ ಅಂದರೆ ಅಧಿಕಾರ ಮೇಲಿನ ಗ್ರೇಡಿನದಾದರೆ ಸಂಬಳ ಹಿಂದಿನಷ್ಟೆ ಎನಿಸುವುದು.ಗುರು ಏಳನೆಯವನಿರುವಾಗಲೆ ರವಿ ಆರನೆಯವನಾಗಿ ಬಂದ ನಂತರ ನಿಜವಾದ ಅರ್ಥದಲ್ಲಿ ಮೇಲಿನ ಗ್ರೇಡು ದೊರೆಯುವುದು. ಬದಲಿಯಾದರೆ ಅದು ಆಫೀಸಿನ ದೃಷ್ಟಿಯಿಂದ ಮಹತ್ವದ್ದಾದರೂ ಇತರ ದೃಷ್ಟಿಯಿಂದ ತೀರ ಅನನುಕೂಲ ಸ್ಥಳಕ್ಕೆ. ಕೇವಲ ಒಕ್ಕಲತನ ಇಲ್ಲವೆ ತೋಟಗಾರಿಕೆಯ ಮೇಲೆ ಉಪಜೀವಿಸುವವರಿಗೆ ಈ ವರುಷ ವ್ಯಾಪಾರ ಇಲ್ಲವೆ ನೌಕರಿಯಲ್ಲಿರುವವರಿಗಿಂತ ಹೆಚ್ಚು ಲಾಭಕರವೆನಿಸುವುದು. ಪ್ರವಾಸಯೋಗ ಒಟ್ಟಿನಲ್ಲಿ ತೀರ ಕಡಿಮೆ ; ಆದರೆ ಇದ್ದಲ್ಲಿಯೆ ದೊಡ್ಡವರ ಆಕಸ್ಮಾತ್ ಭೆಟ್ಟಿಯ ಯೋಗವಿದೆ.

ದಾವೆ, ಫಿರ್ಯಾದಿ ಹಾಗು ಇತರ ಸ್ಪರ್ಧೆಯ ಕೆಲಸಗಳಲ್ಲಿ ತೀರ್ಪು ಏಳನೆಯ ಗುರುವಿದ್ದಾಗ ಅಂದರೆ ಮಾರ್ಚ್ ೨೩ ರಿಂದ ಜುಲೈ ೩೧ರ ವರೆಗಿನ ಅವಧಿಯಲ್ಲಿ ದೊರೆತರೆ ಒಳ್ಳೆಯ ಯಶಸ್ಸು ಸಿಕ್ಕುವುದು. ಇತರ ವೇಳೆಯಲ್ಲಾದರೆ ಪೂರ್ಣ ನಿಮ್ಮ ವಿರುದ್ಧವಾಗುವ ಭಯವಿದೆ.

ಈ ರಾಶಿಯ ಗರ್ಭಿಣಿಯರು ಆರು ಇಲ್ಲವೆ ಏಳನೆಯ ಗುರುವಿದ್ದಾಗ ಪ್ರಸೂತರಾದರೆ ಸುಲಭ, ಹಾಗು ಎಂಟನೆ ಗುರುವಿದ್ದಾಗ ಅಂದರೆ ಜುಲೈ ೩೧ರ ನಂತರ ಆದರೆ ತುಸು ಕಷ್ಟಕರ ಹೆರಿಗೆಯಾಗುವುದು. ಆದರೆ ಬಹುಜನರಿಗೆ ಎಂಟನೆಯ ಗುರುವಿದ್ದಾಗಾದರೆ ಗಂಡು ಹಾಗು ಆರು ಮತ್ತು ಏಳನೆಯ ಗುರುವಿದ್ದಾಗಾದರೆ ಹೆಣ್ಣು ಸಂತಾನವಾಗುವ ಯೋಗವಿದೆ.

ಈ ರಾಶಿಯ ವಿದ್ಯಾರ್ಥಿಗಳ ಪರೀಕ್ಷೆ ಎಂಟನೇ ಗುರುವಿದ್ದಾಗಾದರೆ ಯಶಸ್ಸಿನ ಬಗ್ಗೆ ಸಂಶಯವಿದೆಯಾದರೂ ಆರು ಮತ್ತು ಏಳನೆ ಗುರುವಿದ್ದಾಗಾದರೆ ನಿಶ್ಚಿತ ಉತ್ತೀರ್ಣರಾಗುವುರು ಮಾತ್ರವಲ್ಲ ಆರನೆಯ ಗುರುವಿದ್ದಾಗ ಅಂದರೆ ಮಾರ್ಚ್ ೨೩ ರ ಮೊದಲು ಆದರೆ ಕನಿಷ್ಠ ಎರಡನೆಯ ವರ್ಗವಾದರೂ ದೊರೆಯುವುದು ಖಂಡಿತ.

ಒಟ್ಟಿನಲ್ಲಿ ಈ ವರುಷ ವಿಶೇಷ ಸುಖಕರ ಅಥವಾ ದೊಡ್ಡ ಉತ್ಕರ್ಷದ್ದಾಗಿಲ್ಲವಾದರೂ ಬಹುತರ ವಿಷಯಗಳಲ್ಲಿ ಮಂದಗಾಮಿಯೆನಿಸುವಂತಹ ಸಮಾಧಾನ ಸಿಕ್ಕುವುದೆಂಬುದರಲ್ಲಿ ಸಂಶಯವಿಲ್ಲ.

ನಿಮ್ಮ ಮಕ್ಕಳ ವಿವಾಹ ಮಾಡುವುದಿದ್ದರೆ ಈ ವರುಷವಿಡಿ ಬಾಸಿಂಗ ಬಲವಿರುವುದರಿಂದ ಅದು ಹೊಂದಲು ಹಾಗೂ ಪೂರ್ತಿಗೊಳ್ಳಲು ಹೆಚ್ಚು ಪ್ರಯಾಸವಾಗುವುದಿಲ್ಲ ಮಾತ್ರವಲ್ಲ, ಸೊಸೆ ಇಲ್ಲವೆ ಅಳಿಯ ಅಪೇಕ್ಷೆಗಿಂತ ರೂಪ, ಗುಣ ಹಾಗು ದೈವಗಳೆಲ್ಲದರಲ್ಲೂ ಉತ್ತಮರಿರುವರು. ಅದರಂತೆಯೆ ಮಕ್ಕಳಲ್ಲಿ ಬಹು ಜನರ ಉತ್ಕರ್ಷವೂ ಮನಸ್ಸಿನಂತಾಗುವುದಲ್ಲದೆ ಅವರಲ್ಲೊಬ್ಬನಿಗೆ ಅಂತಾರಾಷ್ಟ್ರೀಯ ಕೀರ್ತಿಯು ಲಭಿಸುವುದೆಂದೂ ತೋರುತ್ತದೆ. ಅವರಿಂದ ತುಂಬ ಸುಖ ಹಾಗು ಸಹಾಯಗಳೂ ದೊರೆಯುವವು.

ಉದ್ಯೋಗ–ವ್ಯವಹಾರಸ್ಥರಿಗೆ ಕೂಡ ಈ ವರುಷವೆಲ್ಲ ಮೂರನೆಯ ಅರ್ಥಾತ್ ಪರಾಕ್ರಮ ಸ್ಥಾನದಲ್ಲಿ ಸ್ವರಾಶಿಯಾದ ಕುಂಭದಲ್ಲಿರುವ ಶನಿಯಿಂದಾಗಿ ಬಹು ರಭಸದ ಪ್ರಗತಿಯಾಗಿ ಜನರ ದೃಷ್ಟಿಯಲ್ಲಿ ಅಸಾಧ್ಯವೆನಿಸಿದ ಧೈರ್ಯ, ಸಾಹಸ ಕಾರ್ಯಗಳು ಸಾಧ್ಯವಾಗುವವು ಮಾತ್ರವಲ್ಲ ಅವು ನಿರೀಕ್ಷೆಗಿಂತಲೂ ಹೆಚ್ಚು ಯಶಸ್ವಿಯಾಗುವವು. ಅದರಿಂದಾಗಿಯೆ ಸ್ವತಂತ್ರ ಉದ್ಯೋಗವಿರುವವರಿಗೆ ಐದು ಹಾಗು ಏಳನೆಯ ಗುರುವಿದ್ದಾಗ ವಿಪುಲ ದ್ರವ್ಯಲಾಭ ದೊರೆತರೆ, ಆರನೆಯ ಗುರುವಿದ್ದಾಗ ಅಂದರೆ ಮಾರ್ಚ್ ೨೩ರಿಂದ ಜುಲೈ ೩೧ರ ಅವಧಿಯಲ್ಲಿ ನೌಕರದಾರರಿಗೆ ಉತ್ಕರ್ಷ ವುಂಟಾಗುವುದು. ಈ ವರುಷ ಶ್ರಮಜೀವಿಗಳಿಗಿಂತ ಬುದ್ಧಿಜೀವಿಗಳಿಗೆ ಹೆಚ್ಚು ಮಹತ್ವದ್ದಾಗಿದೆ. ನೌಕರದಾರರಿಗೆ ಜೂನ್ ೧೮ ರಿಂದ ಅಗಸ್ಟ್ ೨೩ರ ವರೆಗಿನ ಅವಧಿಯಲ್ಲಿ ನಿಶ್ಚಿತವಾಗಿಯೂ ಮೇಲಿನ ಗ್ರೇಡು ದೊರೆಯುವುದು. ಹಾಗು ಬದಲಿಯಾದರೆ ಅದು ಅನುಕೂಲ ಸ್ಥಳಕ್ಕೆಯೆ. ನವೆಂಬರ್ ೧೪ರ ವರೆಗೆ ಹಾಗು ಮೇ ೮ರಿಂದ ೨೭ರ ವರೆಗಿನ ಅವಧಿಯಲ್ಲಿ ಮಾತ್ರ ಒಂದು ವಿಷಯದಲ್ಲಿ ವರಿಷ್ಠ ಇಲ್ಲವೆ ಆಶ್ರಯದಾತರು ತುಸು ರುಷ್ಟರಾಗಿಯೆ ಇರುವರು. ಸ್ಥಾವರ, ಜಂಗಮ ವಸ್ತುಗಳ ಹೊಸ ಸಂಗ್ರಹವಾಗುವುದು. ಅದರಂತೆಯೆ ಸಾಲಸೋಲಗಳಿದ್ದರೆ ಬಹುಮಟ್ಟಿಗೆ ತೀರುವವು. ಐದನೆಯ ಗುರುವಿದ್ದಾಗ ಯಾತ್ರೆ,ಮಂಗಲಕಾರ್ಯ,ದೊಡ್ಡ ಧಾರ್ಮಿಕ ಕಾರ್ಯ ಇಲ್ಲವೆ ಜನಹಿತದ ಒಂದು ದೊಡ್ಡ ಕಾರ್ಯ ಇವುಗಳಲ್ಲೊಂದಿಲ್ಲೊಂದು ಆಗಿಯೇ ತೀರುವುದು. ಆದರೆ ಆರನೆಯ ಗುರುವಿದ್ದಾಗ ನಿಕಟವರ್ತಿಗಳನೇಕರು ದುಷ್ಟ ರೀತಿಯಲ್ಲಿ ವರ್ತಿಸುವರು.

## ಧನು

ಈ ಹಿಂದೆ ಅನೇಕ ವರುಷ ಕಾಲವಿದ್ದ ಸಾಡೇಸಾತಿಯಿಂದ ಕಳೆದ ಫೆಬ್ರುವರಿಯಲ್ಲಿ ಈ ರಾಶಿ ಮುಕ್ತವಾಗಿದ್ದು, ಪ್ರತಿಯಾಗಿ ಸಾಡೇಸಾತಿಯ ಕರ್ತಾರನಾದ ಶನಿಯು ಇನ್ನೂ ಸುಮಾರು ಎರಡು ವರುಷ ಕಾಲ ಶುಭಪ್ರದ ಅಂದರೆ ಮೂರನೆಯವನಾಗಿರುವನು. ಅಲ್ಲದೆ ಗುರು, ರಾಹು ಮುಂತಾದ ಇತರ ಗ್ರಹಗಳಲ್ಲಿ ಹೆಚ್ಚಿನವು ಅನುಕೂಲವಾಗಿಯೇ ಇವೆ. ಅಂತೆಯೆ ಬಹುತರ ವಿಷಯಗಳಲ್ಲಿ ಸಮಾಧಾನ ಸಿಕ್ಕುವುದು,ಹಾಗು ಡಿಸೆಂಬರ್ ೫ರಿಂದ ಬರುವ ಆರನೆಯ ರಾಹುವಿನಿಂದಾಗಿ ಆರೋಗ್ಯ ಹೆಚ್ಚು ಉತ್ತಮಗೊಳ್ಳತೊಡಗುವುದು ಮತ್ತು ಒಳ್ಳೆಯ ಹಾಗು ಉಪಯುಕ್ತ ಕೆಲಸಗಳನ್ನು ಮಾಡಲು ಮನೋತ್ಸಾಹ ಹೆಚ್ಚತೊಡಗುವುದಲ್ಲದೆ ಈ ರಾಶಿಸ್ವಾಮಿಯಾದ ಗುರುವು ಐದು ಹಾಗು ಏಳನೆಯವನಾಗಿರುವಾಗ ಅಂದರೆ ಮಾರ್ಚ್ ೨೩ ರ ವರೆಗೆ ಮತ್ತು ಜುಲೈ ೩೧ ರ ನಂತರದ ಕಾಲ ವಿಶೇಷ ಆನಂದದಾಯಕವಾಗಿರುವುದು.

ಹೆಂಡತಿಯ ಆರೋಗ್ಯ ಏಳನೆಯ ರಾಹುವಿರುವಾಗ ತುಸು ಕಿರಿಕಿರಿಯದೆನಿಸಿದರೂ ಡಿಸೆಂಬರ್ ೫ ರಂದು ರಾಹು ಏಳನೆಯವನಾದ ನಂತರ ಅದು ಚನ್ನಾಗಿಯೆ ಉಳಿಯುವುದು; ಉಭಯತರಲ್ಲಿ ಉತ್ತಮ ಸಾಮರಸ್ಯವೂ ಇರುವುದು. ಆದರೂ ಮಂಗಳ ಹನ್ನೆರಡನೆಯವನಾಗಿರುವಾಗ ಅಂದರೆ ಸಪ್ಟೆಂಬರ್ ೨೩ರ ನಂತರ ಮಕ್ಕಳ ವರ್ತನೆಯಿಂದಾಗಿ ತುಸು ದುಸುಮುಸು ಉಂಟಾಗಬಹುದಷ್ಟೆ. ಈ ರಾಶಿಯ ಅವಿವಾಹಿತರು ವಿವಾಹವಾಗುವುದಿದ್ದರೆ ಡಿಸೆಂಬರ್ ೫ರಿಂದ ಮಾರ್ಚ್ ೨೩ರ ವರೆಗೆ ಹಾಗು ಜುಲೈ ೩೧ರ ನಂತರದ ಅವಧಿಯಲ್ಲಿ ಒಳ್ಳೆಯ ಬಾಸಿಂಗಬಲವಿರುವುದರಿಂದ ಅದು ನಿಶ್ಚಿತವಾಗಿಯೂ ಅಲ್ಪಾಯಾಸದಿಂದಲೂ ಆಗುವುದು. ಆದರೆ ವರನಿಗೆ ವಧು ಇಲ್ಲವೆ ವಧುವಿಗೆ ವರ ಸ್ವತಃದಷ್ಟು ಸುಂದರ ಹಾಗೂ ಬುದ್ಧಿವಂತರಾಗಿಲ್ಲವೆಂದು ಅನಿಸಬಹುದು. ಇತರ ವಿಷಯಗಳಲ್ಲಿ ಉತ್ತಮ ಪ್ರಾಪಂಚಿಕ ಸುಖ ದೊರೆಯುವುದು.

ದಾವೆ, ಫಿರ್ಯಾದಿ ಇಲ್ಲವೆ ಇತರ ಸ್ಪರ್ಧೆಯ ಕೆಲಸಗಳಲ್ಲಿ ತೀರ್ಪು ಏಳನೆಯ ಗುರುವಿದ್ದಾಗ ಅಂದರೆ ಜುಲೈ ೩೧ರ ನಂತರ ದೊರೆತರೆ ಅದು ಅಪೂರ್ವ ಯಶಸ್ಸು ತರುವುದಲ್ಲದೆ ಎಲ್ಲರ ಮೇಲೆ ಮಹಾಪ್ರಭಾವ ಬೀರುವಂಥದಿರುತ್ತದೆ. ರಾಹು ಏಳನೆಯವನಾದ ನಂತರ ಶತ್ರು ಇಲ್ಲವೆ ಪ್ರತಿ ಸ್ಪರ್ಧಿಗಳಲ್ಲಿ ಕೆಲವರು ದಿವಂಗತರಾಗುವ ಸಂಭವವಿದೆ. ಆದರೆ ಡಿಸೆಂಬರ್ ೧೩ರಿಂದ ಜನೆವರಿ ೪ರ ವರೆಗೆ ಹಾಗು ಅಕ್ಟೋಬರ್ ೪ರ ನಂತರ ದೊರೆವ ತೀರ್ಪು ನಿಮ್ಮ ವಿರುದ್ಧವಾಗುವ ಸಂಭವವಿದೆ.

ಈ ರಾಶಿಯ ಗರ್ಭಿಣಿಯರು ಆರನೆಯ ಗುರುವಿದ್ದಾಗ ಪ್ರಸೂತರಾದರೆ ಅವರಿಗೆ ಹಾಗು ಜನಿಸುವ ಮಗುವಿಗೆ ತುಸು ಕಷ್ಟವಾಗಬಹುದಾಗಿದೆ. ಆದರೆ ಏಳನೆಯ ಗುರುವಿದ್ದಾಗಾದರೆ ಸುಲಭ ಪ್ರಸೂತಿಯಾಗುವುದಲ್ಲದೆ ಪುತ್ರಲಾಭದ ಯೋಗವೂ ಇದೆ.

ಈ ರಾಶಿಯ ವಿದ್ಯಾರ್ಥಿಗಳ ಪರೀಕ್ಷೆ ಐದು ಹಾಗು ಏಳನೆಯ ಗುರುವಿದ್ದಾಗಾದರೆ ಉತ್ತೀರ್ಣರಾಗುವರು ಮಾತ್ರವಲ್ಲ, ಅಗಸ್ಟ ೧೦ರಿಂದ ಸಪ್ಟೆಂಬರ್ ೨೩ರ ವರೆಗಿನ ಅವಧಿಯಲ್ಲಾದರೆ ಕ್ಲಾಸ್ ಕೂಡ ಪಡೆಯುವರು.

ಒಟ್ಟಿನಲ್ಲಿ ಈ ವರುಷ ಕಷ್ಟ ಇಲ್ಲವೆ ತೊಂದರೆಗಳಿಗಿಂತ ಎಷ್ಟೋ ಪಟ್ಟು ಹೆಚ್ಚಿನ ಸುಯಶ, ತುಂಬ ಲಾಭ ಹಾಗು ಒಳ್ಳೆಯ ಸಮಾಧಾನದ್ದಾಗಿದೆಂಬುದು ನಿಶ್ಚಿತ.

## ಮಕರ

ಈ ರಾಶಿ ಇನ್ನೂ ಸುಮಾರು ಎರಡೂಕಾಲು ವರುಷ ಸಾಡೇಸಾತಿಯಲ್ಲಿರುವುದು. ಆದರೆ ಈ ಶನಿ ಎರಡನೆಯ ಅಂದರೆ ಧನಸ್ಥಾನದಲ್ಲಿ ಹಾಗು ಸ್ವಗೃಹದಲ್ಲಿಯೂ ಇದ್ದಾನೆ; ಅಲ್ಲದೆ ಅವನೇ ಈ ರಾಶಿಸ್ವಾಮಿಯೂ ಅಹುದು. ಆದ್ದರಿಂದ ವಿಶೇಷ ಕಷ್ಟವಿಲ್ಲ, ಮಾತ್ರವಲ್ಲ ಯಾರ ಜನ್ಮಕುಂಡಲಿಯಲ್ಲಿ ಶನಿ ರಾಶಿ ಹಾಗು ಸ್ಥಾನಬಲಿಷ್ಠನಿರುವನೊ ಅವರಿಗಂತೂ ಅತ್ಯಂತಸುಖ ಹಾಗು ಯಶಸ್ಸು ಸಿಕ್ಕುವುದು. ಆದರೆ ಎಂಟನೆಯ ಮಂಗಳನಿರುವಾಗ ಅಂದರೆ ಡಿಸೆಂಬರ್ ೩೦ ರ ವರೆಗಿನ ಹಾಗು ಮತ್ತೆ ಫೆಬ್ರುವರಿ ೨೫ ರಿಂದ ಜೂನ್ ೧೮ ರ ವರೆಗಿನ ಅವಧಿಯಲ್ಲಿ ಈ ರಾಶಿಯ ಜನರ ಆರೋಗ್ಯ ಅಷ್ಟೊಂದು ಚನ್ನಾಗಿರಲಾರದು. ಆದರೆ ಅದು ಯಾವುದೇ ರೋಗದಿಂದ ಕೆಡದೆಯೆ ಅಗ್ನಿ ಇಲ್ಲವೆ ಶಸ್ತ್ರದಿಂದುಂಟಾಗುವ ಗಾಯದಿಂದ ಕೆಡಬಹುದೆಂದೆನಿಸುತ್ತದೆ. ಇನ್ನುಳಿದ ಸಮಯದಲ್ಲಿ ಉತ್ತಮ ಆರೋಗ್ಯ ಉಳಿಯುವುದು. ಇತರ ವಿಷಯಗಳಲ್ಲಿ ಪ್ರಾಪಂಚಿಕಸುಖ ಈ ವರುಷವಿಡಿ ಚನ್ನಾಗಿಯೇ ದೊರೆಯುವುದು. ಅದರಲ್ಲೂ ಐದನೆಯ ಗುರುವಿದ್ದಾಗ ಅಂದರೆ ಮಾರ್ಚ್ ೨೩ ರಿಂದ ಜುಲೈ ೩೧ ರ ವರೆಗಿನ ಅವಧಿಯಲ್ಲಿ ಪ್ರಾಪಂಚಿಕಸುಖ ಬಹಳ ಸಮಾಧಾನಕರ ಹಾಗು ಕೌಟುಂಬಿಕ ಉತ್ಕರ್ಷ ಹೆಚ್ಚಿಸುವಂಥದಿರುತ್ತದೆ. ಶಾರೀರಿಕ ಕ್ಲೇಶದ ಪರಿಹಾರಾರ್ಥ ೨೩೦೦೦ ಶನಿಜಪ ಹಾಗು ೧೦೦೦೦ ಮಂಗಳ ಜಪ ಮಾಡುವದು ಇಷ್ಟವೆನಿಸುತ್ತದೆ.

ಹೆಂಡತಿಯ ಆರೋಗ್ಯ ಒಟ್ಟಿನಲ್ಲಿ ಉತ್ತಮವಿರುವುದಾದರೂ ಆರನೆಯ ಗುರುವಿದ್ದಾಗ ಅಂದರೆ ಜುಲೈ ೩೧ರ ನಂತರ ನೆಗಡಿ, ಕೆಮ್ಮು, ತಲೆನೋವು, ಬದ್ಧಕೋಷ್ಠತೆ ಇವುಗಳಲ್ಲಿ ಯಾವುದೊಂದರಿಂದಾಗಿ ತುಸು ಕಿರಿಕಿರಿಯದ್ದಾಗಿರುವ ಸಂಭವವಿದೆ.

ಉಭಯತರಲ್ಲಿ ಯಾವಾಗಲೂ ಮತೈಕ್ಯವಿರುವುದು. ಈ ರಾಶಿಯ ಅವಿವಾಹಿತರು ವಿವಾಹವಾಗುವದಿದ್ದರೆ ನಾಲ್ಕನೆಯ ಗುರುವಿದ್ದಾಗಅಂದರೆ ಮಾರ್ಚ್ ೨೩ ರ ವರೆಗೆ ಮಧ್ಯಮ, ಆದರೆ ಮುಂದೆ ಐದನೆಯ ಗುರುವಿದ್ದಾಗ ಅಂದರೆ ಮಾರ್ಚ್ ೨೩ ರಿಂದ ಜುಲೈ ೩೧ರ ವರೆಗಿನ ಅವಧಿಯಲ್ಲಿ ಉತ್ತಮ ಬಾಸಿಂಗಬಲವಿರುವುದಲ್ಲದೆ ಆಗಲೇ ಬಹುಜನರ ವಿವಾಹವಾಗುವುದು ಕೂಡ. ವಧು ಇಲ್ಲವೆ ವರ ಸ್ವತಃಕ್ಕಿಂತ ಹೆಚ್ಚು ಸುಂದರ, ಸುಸಂಸ್ಕೃತ ವಿಚಾರಿ ಹಾಗು ಉತ್ತಮ ಸುದೈವಿಯಾಗಿರುವರು.

ನಿಮ್ಮ ಮಕ್ಕಳ ವಿವಾಹ ಮಾಡುವುದಿದ್ದರೆ ಐದು ಹಾಗು ಏಳನೆಯ ಗುರುವಿದ್ದಾಗ ಅಂದರೆ ಜುಲೈ ೨೩ ರಿಂದ ಮುಂದಿನ ಕಾಲದಲ್ಲೆಲ್ಲ ಉತ್ತಮ ಬಾಸಿಂಗಬಲವಿರುವುದರಿಂದ ವಿವಾಹ ಅಲ್ಪಾಯಾಸದಿಂದ ಹೊಂದುವುದಲ್ಲದೆ ನಿರ್ವಿಘ್ನವಾಗಿ ಪೂರ್ತಿಗೊಳ್ಳುವುದು. ಸೊಸೆ ಇಲ್ಲವೆ ಅಳಿಯ ರೂಪದಿಂದ ಸರ್ವಸ್ಸಾಮಾನ್ಯವಾಗಿ ಮಧ್ಯಮರೆನಿಸಿದರೂ ತೀಕ್ಷ್ಣ ಬುದ್ಧಿಯುಳ್ಳವರೂ ವಿವಾಹೋತ್ತರ ಸಾಂಪತ್ತಿಕ ಉತ್ಕರ್ಷ ಹಾಗು ಇಚ್ಛಿತ ಕಾರ್ಯಗಳಲ್ಲಿ ಯಶಸ್ಸು ತರುವವರಾಗಿರುತ್ತಾರೆ. ಆದರೆ ಮಕ್ಕಳಲ್ಲಿ ಒಬ್ಬನನ್ನುಳಿದು ಉಳಿದವರೊಂದಿಗೆ ಅಷ್ಟಾಗಿ ಕೂಡಿ ನಡೆಯುವುದಿಲ್ಲವಿಷ್ಟೇ ಅಲ್ಲ, ಇದು ವರೆಗೆ ಅತ್ಯಂತ ಪ್ರೇಮಳನೆನಿಸಿದ್ದವನೊಂದಿಗೆಯೆ ಉತ್ತರವೆಂದರೆ ದಕ್ಷಿಣವೆನ್ನುವಷ್ಟು ಮನಸ್ಸು ಕೆಡುವ ಭಯವಿದೆ.

ಉದ್ಯೋಗ—ವ್ಯವಹಾರಸ್ಥರಿಗೆ ನಾಲ್ಕನೆಯ ಗುರುವಿಗಿಂತ ಐದು ಹಾಗು ಆರನೆಯ ಗುರು ಹಿತಕರ. ಕೇತು ಹನ್ನೆರಡನೆಯವನಾದಂದಿನಿಂದ ಅಂದರೆ ಡಿಸೆಂಬರ್ ೫ ರಿಂದ ತೇಜಿ ವರ್ಧಿಸುತ್ತ ಹೋಗುವುದು. ಐದನೆಯ ಗುರುವು ಉದ್ಯೋಗಸ್ಥರಿಗೆ ತುಂಬ ಲಾಭದಾಯಕನಿರುವಂತೆಯೆ ಆರನೆಯ ಗುರು ನೌಕರದಾರರ ಅಧಿಕಾರ ಹಾಗು ದ್ರವ್ಯಲಾಭದ ಹೆಚ್ಚಳಕ್ಕೆ ಕಾರಣನಾಗುವನು. ಬಹುಜನರಿಗೆ ಮೇಲಿನ ಗ್ರೇಡು ಸಪ್ಟೆಂಬರ್ ೮ ರಿಂದ ಅಕ್ಟೋಬರ್ ೧೦ ರ ವರೆಗಿನ ಅವಧಿಯಲ್ಲಿ ಸಿಗುವುದು; ಆದರೆ ಆ ಅವಧಿಯಲ್ಲಿ ಸಿಗದಿದ್ದರೂ ಈ ವರುಷ ಮುಗಿಯುವುದರಲ್ಲಿಯೇ ಅಂದರೆ ಅಕ್ಟೋಬರ್ ೨೪ ರೊಳಗೆ ನಿಶ್ಚಿತವಾಗಿಯೂ ಸಿಕ್ಕುವುದು. ಬದಲಿಯಾದರೆ ಆ ಸ್ಥಳ ನಿಮಗೆಷ್ಟು ಒಪ್ಪಿತವೊ ಹೆಂಡತಿಗೆ ಅಷ್ಟೇ ಮನಸ್ಸಿಗೆ ಬರುವುದಿಲ್ಲ. ಈ ವರುಷವಿಡಿ ಸಂಗ್ರಹಾಧಿಪತಿ ಶನಿ ಇದೇ ಸ್ಥಾನದಲ್ಲಿರುವುದರಿಂದ ಬಹುದಿನಗಳಿಂದ ಮನದಲ್ಲಿದ್ದ ವಸ್ತುಗಳ ಸಂಗ್ರಹಮಾಡುವ ಅವಕಾಶ ಅನೇಕರಿಗೆ ದೊರೆಯುವುದು. ವರಿಷ್ಠ ಇಲ್ಲವೆ ಆಶ್ರಯದಾತರು ಒಮ್ಮೆ ಸಂತುಷ್ಟರಾಗಿದ್ದರೆ ಇನ್ನೊಮ್ಮೆ ಅಸಂತುಷ್ಟರು ಎಂಬಂತಿರುವರು; ಆದರೆ ಅಸಂತುಷ್ಟರಿರುವಾಗಲೂ ಎಷ್ಟೂ ಹಾನಿಯನ್ನುಂಟುಮಾಡುವುದಿಲ್ಲ. ಐದನೆಯ ಗುರುವಿದ್ದಾಗ ಮಂಗಲಕಾರ್ಯ ಇಲ್ಲವೆ ವಿಶಿಷ್ಟ ಧಾರ್ಮಿಕ ಕಾರ್ಯವೊಂದು ಅಕಸ್ಮಾತ್ತಾಗಿ ನಡೆದುಹೋಗಬಹುದು. ಸಂಬಂಧಿಕರಲ್ಲಿ ಬಹುಜನರು ಆತ್ಮೀಯತೆಯಿಂದ ವರ್ತಿಸುವರು. ತುಸು ಮಟ್ಟಿಗೆ ಮಾತ್ರ ಪ್ರವಾಸ ಕೈಕೊಳ್ಳಬೇಕಾಗಿ ಬಂದರೂ ಇದ್ದಲ್ಲಿಯೇ ದೊಡ್ಡ ಮನುಷ್ಯರ ಭೆಟ್ಟಿಯ ಯೋಗವಿದೆ.

ದಾವೆ, ಫಿರ್ಯಾದಿ ಹಾಗು ಇತರ ಸ್ಪರ್ಧೆಯ ಕೆಲಸಗಳಲ್ಲಿ ತೀರ್ಪು ಆರನೆಯ ರಾಹುವಿದ್ದಾಗ ಅಂದರೆ ಡಿಸೆಂಬರ್ ೫ರ ವರೆಗೆ ದೊರೆತರೆ ಒಳ್ಳೆಯ ಯಶಸ್ಸು ದೊರೆಯುವುದು. ಆದರೆ ನಂತರ ಮಾರ್ಚ್ ೨೩ ರ ವರೆಗೆ ದೊರೆತರೆ ಎಲ್ಲವೂ ನಿಮ್ಮ ವಿರುದ್ಧವಾಗುವವು. ಇತರ ವೇಳೆಯಲ್ಲಾದರೆ ನಿಮಗೆ ಸಾಮಾನ್ಯ ಯಶ ಸಿಕ್ಕುವುದಾದರೂ ಪ್ರತಿಪಕ್ಷಿಗಳಿಗೆ ಮುಂದೆ ಹೋಗಲು ಸಾಕಷ್ಟು ಅವಕಾಶವುಳಿಯುವುದು.

ಈ ರಾಶಿಯ ಗರ್ಭಿಣಿಯರಲ್ಲಿ ಬಹುಜನರ ಪ್ರಸೂತಿ ತುಸು ಕಷ್ಟಕರವೇ ಆಗಿ ಹೆಣ್ಣು ಮಗುವೇ ಆಗಬಹುದಾಗಿದೆ. ಆದರೆ ಯಾರ ಪ್ರಾಣಕ್ಕೂ ಎಷ್ಟು ಮಾತ್ರವೂ ಭಯವಿಲ್ಲವೆಂಬುದು ನಿಶ್ಚಿತ.

ಈ ರಾಶಿಯ ವಿದ್ಯಾರ್ಥಿಗಳ ಪರೀಕ್ಷೆ ಮಾರ್ಚ್

೨೩ರಿಂದ ಜುಲೈ ೩೧ರ ವರೆಗಿನ ಅವಧಿಯುಲ್ಲಾ-ದರೆ ಬಹುಶಃ ಕ್ಲಾಸ್ ಕೂಡ ದೊ'ಯುವುದು ; ಆದರೆ ಜುಲೈ ೩೧ ರ ನಂತರವಾದರೆ ಕನಿಷ್ಟ ಉತ್ತೀರ್ಣರಾಗುವುದಾದರೂ ನಿಶ್ಚಿತ.

ಒಟ್ಟಿನಲ್ಲಿ ಈ ವರುಷ ಸಾಡೇಸಾತಿಯಿಂದಾಗಿ ಅನೇಕ ವಿಷಯುಗಳಲ್ಲಿ ನಿರುತ್ಸಾಹ ಇಲ್ಲವೆ ಇದ್ದಲ್ಲೇ ಎಳೆದಾಡಿದಂತೆನಿಸಿದರೂ ವರುಷದ ಕೊನೆಗೆ ವೀಕ್ಷಿಸಿದಾಗ ಬಹುತರ ವಿಷಯುಗಳಲ್ಲಿ ಇದು ಅಭಿವೃದ್ಧಿಕಾರೀ ವರುಷವೇ ಆಗಿತ್ತೆಂಬುದು ಗೋಚರಿಸದಿರದು.

# ಕುಂಭ

ಹಿಂದಿನ ಎರಡೂವರೆ ವರುಷಗಳಂತೆಯೆ ಈಗಲೂ ಈ ರಾಶಿ ಸಾಡೇಸಾತಿಯುಲ್ಲಿಯೇ ಇದೆ. ಕಳೆದ ಫೆಬ್ರುವರಿಯಿಂದಲೂ ಶನಿ ಇದೇ ರಾಶಿಯುಲ್ಲಿರುವುದರಿಂದ ಈಗ ಸಾಡೇ-ಸಾತಿಯು ಮಧ್ಯಭಾಗದಲ್ಲಿದೆಯೆಂದು ತಿಳಿಯು ಬೇಕು. ಅದು ಇನ್ನೂ ಸುಮಾರು ನಾಲ್ಕೂವರೆ ವರ್ಷ ಕಾಲವಿರುವುದು. ಆದರೆ ಶನಿ ಈ ರಾಶಿಯು ಸ್ವಾಮಿಯೇ ಆಗಿರುವುದರಿಂದ ಹಾಗೂ ಅವನ ಶುಭಫಲಗಳು ಮಕರಕ್ಕಿಂ-ತಲೂ ಈ ರಾಶಿಯುಲ್ಲಿಯೇ ಹೆಚ್ಚು ಪರಿಣಾಮಕಾರಿಯೆಂದು ನಿಯುಮ ಹಾಗೂ ಅನುಭವಗಳೆರಡೂ ಇರುವುದರಿಂದ ಸಾಡೇಸಾತಿ ತೊಂದರೆಯುದಾಗಿರದೆಯೆ, ಅದಕ್ಕೆ ಪ್ರತಿಯಾಗಿ ತುಂಬ ಸುಖೋತ್ಪಾದಕ ಫಲಗಳನ್ನು ಕೊಡುವುದಾದ್ದರಿಂದ ನಿರ್ಭಯುವಾಗಿ ಇಚ್ಛಿತ ಕಾರ್ಯಗಳನ್ನು ಪ್ರಾರಂಭಿಸಬೇಕು. ಹಾಗು ಈ ರಾಶಿಯು ಜನರ ಆರೋಗ್ಯ ಏಳನೆಯು ಮಂಗಳ ಮತ್ತು ಮೊದಲನೆಯು ಶನಿ ಇವರ ಪ್ರತಿದೃಷ್ಟಿಯೋಗದಲ್ಲಿ ಅಂದರೆ ಫೆಬ್ರುವರಿ ೨೫ ರಿಂದ ಜೂನ್ ೧೪ ರ ವರೆಗಿನ ಕಾಲವನ್ನು ಬಿಟ್ಟರೆ ಇತರ ಸಮುಯುದಲ್ಲೆಲ್ಲ ಒಳ್ಳೆಯು ಸುದೃಢವಾಗಿರುವುದು. ಮೇಲಿನ ಅವಧಿಯುಲ್ಲಾಗುವ ತೊಂದರೆ ಸಹ ಸ್ವಾಭಾ-ವಿಕ ಅನಾರೋಗ್ಯದಿಂದಲ್ಲ ; ಆದರೆ ತಿನ್ನು-ಣ್ಣುವ ಇಲ್ಲವೆ ಸಾಹಸೀಕಾರ್ಯವೊಂದರ ಬಗ್ಗೆ ಜಿದ್ದಿಗೆ ಬೀಳುವುದರಿಂದುಂಟಾಗುವ ಸಂಭವವಿದೆ. ಇತರ ವಿಷಯುಗಳಲ್ಲಿ ದೇಹಸುಖ ಉತ್ತಮವೇ ಸಿಕ್ಕುವುದು. ಆದರೆ ಡಿಸೆಂ-ಬರ್ ೫ರಿಂದ ನಾಲ್ಕನೆಯು ರಾಹು ಬಂದ-ನಂತರ ಅಣ್ಣತಮ್ಮಂದಿರು, ಆಳುಹೋಳುಗಳು ಮುಂತಾದ ಆಶ್ರಿತರೊಂದಿಗೆ ಇಲ್ಲವೆ ನೆರೆಹೊರೆಯುವರೊಂದಿಗೆ ಚಿಕ್ಕ ದೊಡ್ಡ ಕಾರಣಗಳಿಗಾಗಿ ಬಾಯಿಗೆ ಬಾಯಿ ಹತ್ತುವ ಪ್ರಸಂಗ ಮಾತ್ರ ಮೇಲಿಂದಮೇಲೆ ಬರುವ ಭಯುವಿದೆ.

ಹೆಂಡತಿಯು ಆರೋಗ್ಯಕ್ಕೆ ಮಂಗಳ–ಶನಿ ಪ್ರತಿ-ದೃಷ್ಟಿಯೋಗದಿಂದಾಗಿ ತುಸು ಕ್ಲೇಶವುಂಟಾಗುವುದು, ಹಾಗು ವಿಶೇಷವೆಂದರೆ ಈ ಬಗ್ಗೆ ಜನರಲ್ಲಿ ನಿಮ್ಮ ವಿಷಯುಕ್ಕೆ ತಪ್ಪುಕಲ್ಪನೆ ಹರಡುವುದು. ಆದರೆ ಐದನೆಯು ಗುರು ಬಂದನಂತರ ಅಂದರೆ ಜುಲೈ ೩೧ರ ನಂತರ ಅದು ತಾನಾಗಿಯೇ ನಿವಾ-ರಿಸಲ್ಪಡುವುದು. ಅಲ್ಲದೆ ಪರಸ್ಪರರಲ್ಲಿ ಒಳ್ಳೆಯು ಸಾಮರಸ್ಯವುಂಟಾಗುವುದು ; ಆದರೆ ನೀವು ಇಲ್ಲವೆ ಅವಳು ಬೇರೂರಿಗೆ ಹೋಗಬೇಕಾಗಿ ಬರುವುದರಿಂದ ಪರಸ್ಪರ ಸಹವಾಸಕ್ಕೆ ವ್ಯತ್ಯಯು. ಈ ರಾಶಿಯು ಅವಿವಾಹಿತರ ವಿವಾಹವಾಗುವುದಿದ್ದರೆ ಈ ವರುಷ ೩ನೆಯು ಗುರುವಿದ್ದಾಗ ಅಂದರೆ ಮಾರ್ಚ್ ೨೩ ರ ವರೆಗೆ ಉತ್ತಮ ಬಾಸಿಂಗಬಲವಿರುವುದರಿಂದ ಅಲ್ಪಾಯಾಸದಿಂದಾಗುವುದಲ್ಲದೆ ವರ ಇಲ್ಲವೆ ವಧು ಸ್ವತಃಕ್ಕಿಂತ ಲೌಕಿಕವಾಗಿ ಹೆಚ್ಚು ಒಳ್ಳೆಯು ಸ್ಥಳದವರಾಗಿರುವರು. ನಾಲ್ಕ-ನೆಯು ಗುರುವಿದ್ದಾಗ ಅಂದರೆ ಮಾರ್ಚ್ ೨೩ ರಿಂದ ಜುಲೈ ೩೧ರ ವರೆಗಿನ ಅವಧಿಯುಲ್ಲಿ ವಿವಾಹ ನಿಶ್ಚಯುವಾದರೆ ಏನಾದರೂ ಕಾರಣದಿಂದಾಗಿ ಅದು ಪೂರ್ತಿಗೊಳ್ಳುವುದು ಕಠಿಣವಾಗುತ್ತದೆ ; ಆದರೆ ಅದರನಂತರ ಐದನೆಯು ಗುರುವಿದ್ದಾಗ ಮಧ್ಯಮ ಪ್ರತಿಯು ಬಾಸಿಂಗಬಲವಿದ್ದು ವಿವಾಹ ಹೊಂದಿಸಲು ಬಹಳಷ್ಟು ಪ್ರಯತ್ನ ಮಾಡಬೇಕಾಗುವುದಲ್ಲದೆ ಕಾಲು ಹಿಡಿಯುಬೇಕಾದ ಪ್ರಸಂಗವೂ ಬರಬಹುದು. ಆದರೂ ಕೊನೆಗೆ ಕೆಲಸವು ವ್ಯವಸ್ಥಿತವಾಗಿ ಕೈಗೂಡುವುದು.

ನಿಮ್ಮ ಮಕ್ಕಳ ವಿವಾಹ ಮಾಡುವುದಿದ್ದರೆ ಅದಕ್ಕೆ ಮೂರನೆಯು ಗುರುವಿದ್ದಾಗ ಮಧ್ಯಮ, ನಾಲ್ಕರಲ್ಲಿ ಅಸಾಧ್ಯ ಹಾಗು ಐದರಲ್ಲಿ ಮಾತ್ರ ಉತ್ತಮ ಬಾಸಿಂಗಬಲವಿದೆ. ಇದನ್ನು ಲಕ್ಷ್ಯದಲ್ಲಿರಿಸಿಕೊಂಡು ಸಾಮಾನ್ಯ ಇಲ್ಲವೆ ರಭಸದ ಪ್ರಯತ್ನ ಮಾಡಿದರೆ ವ್ಯರ್ಥ ತೊಂದರೆ ಹಾಗೂ ಮನೋಭಂಗಗಳು ತಪ್ಪುವವು. ಸೊಸೆ ಇಲ್ಲವೆ ಅಳಿಯು ರೂಪ ಮತ್ತು ಬುದ್ಧಿಯಿಂದ ಒಳ್ಳೆಯುವರಾಗಿರುವರಾದರೂ ಸ್ವಭಾವ ವೈಚಿತ್ರ್ಯದಿಂದಾಗಿ ಅಷ್ಟಾಗಿ ಹಿಡಿಸುವುದಿಲ್ಲ. ಮಕ್ಕಳಲ್ಲಿ ಕೆಲವರ ಭಾಗ್ಯ ಜುಲೈ ೩೧ಕ್ಕೆ ಬರುವ ಐದನೆಯು ಗುರುವಿದ್ದಾಗ ಬೆಳಕಿಗೆ ಬರುವುದು. ಆದರೆ ಪ್ರತಿಯೊಬ್ಬರೊಂದಿಗೆಯೂ ಉಂಟಾಗುವ ಮತಭೇದದಿಂದಾಗಿ ಈ ಸಲ ನಿಜವಾದ ಮಾನಸಿಕಸುಖ, ಸಮಾಧಾನಗಳ ಅಭಾವವೇ ಅನಿಸುವುದು.

ಉದ್ಯೋಗ - ವ್ಯವಹಾರಸ್ಥರಿಗೆ ವರ್ಷವಿಡಿ ಇರುವ ಮೊದಲನೆಯು ಶನಿಯಿಂದಾಗಿ ಈ ವರ್ಷ ಒಳ್ಳೆಯು ಪ್ರಗತಿಕರವಾಗಿದೆಯುಲ್ಲದೆ ಮೂರನೆಯು ಗುರು ಪ್ರತ್ಯಕ್ಷ ಲಾಭಕ್ಕೆ ಹಾಗು ನಾಲ್ಕನೆಯು ಗುರು ಲಾಭದಂತೆಯೆ ಭಾಗ್ಯವೃದ್ಧಿಗೆ ಸಹ ಉತ್ತಮರಾಗಿರುವರು. ಉದ್ಯೋಗಸ್ಥರಿಗೆ ಈಗಿರುವ ಉದ್ಯೋಗಕ್ಕೆ ಜೊತೆಯಾಗಿ ಅದಕ್ಕೆ ಪೂರಕವಾಗುವಂತಹ ಇನ್ನೊಂದು ಉದ್ಯೋಗ ನಿರಾಯಾಸವಾಗಿ ಕೈಸೇರುವ ಸಂಭವವಿದೆ. ವಿಶೇಷತಃ ಫೆಬ್ರುವರಿ ೨೪ ರಿಂದ ಮಾರ್ಚ್ ೨೧ ಹಾಗು ಸಪ್ಟೆಂಬರ್ ೮ರ ನಂತರದ ಕಾಲವೆಲ್ಲ ಲಾಭಕ್ಕೆ ಮತ್ತು ದೊಡ್ಡ ದೊಡ್ಡ ಘಟನೆಗಳಿಗಾಗಿ ತುಸು ಸಂಸ್ಮರಣೀಯುವಾಗಿ ಪರಿಣಮಿಸಲಿದೆ. ನೌಕರದಾರರಿಗೆ ಸಹ ಮೂರು ಮತ್ತು ಐದನೆಯು ಗುರು ಲಾಭ ಹಾಗು ಭಾವೀ ಭಾಗ್ಯಸೂಚಕವಾದಂತಹ ಕೆಲ ಘಟನೆಗಳು ಜರುಗುವುದಕ್ಕೆ ಒಳ್ಳೆಯು ಕಾರಕರಾಗಿದ್ದು, ಬಹು ಜನರಿಗೆ ಸಪ್ಟೆಂಬರ್ ೨೩ರ ನಂತರ ಮೇಲಿನ ಗ್ರೇಡು ನಿಶ್ಚಿತ ದೊರೆಯುವುದು. ನಾಲ್ಕನೆಯು ರಾಹುವಿನಿಂದಾಗಿ ಡಿಸೆಂಬರ್ ೫ರ ನಂತರ ಬದಲಿಯಾದರೆ ಅದು ತೀರ ಪ್ರತಿಕೂಲ ಸ್ಥಳಕ್ಕೆ ಮಾತ್ರವಲ್ಲ, ಎರಡು ಮೂರು ಸ್ಥಳಗಳಿಗೆ ಮೇಲಿಂದ ಮೇಲೆ ಬದಲಿಯಾಗುವುದರಿಂದ ದಗದಗಿಯುಂತೂ ಬಹಳವಾಗುವುದು. ನಾಲ್ಕನೆಯು ಗುರು, ನಾಲ್ಕನೆಯು ರಾಹು ಹಾಗು ಎಂಟನೆಯು ಮಂಗಳರು ಏಕ ಕಾಲಕ್ಕೆ ಇರುವ ಸಮುಯದಲ್ಲಿ—ಅಂದರೆ ಜೂನ್ ೧೪ ರಿಂದ ಜುಲೈ ೩೧ರ ವರೆಗಿನ ಅವಧಿಯುಲ್ಲಿ-ವಿನಾಕಾರಣ ವರಿಷ್ಠರ ಕೋಪವನ್ನು ಸಹಿಸಬೇಕಾದ ಪ್ರಸಂಗ ಬರಬಹುದು. ನಾಲ್ಕನೆಯು ಗುರುವಿದ್ದಾಗ ಅನೇಕ ವರ್ಷ ಬರಬಲ್ಲಂಥ ಕೆಲ ವಸ್ತುಗಳ ಸಂಗ್ರಹ, ಅದೂ ನಿರಾಯಾಸವಾಗಿ ಹಾಗು ಅಲ್ಪವೆಚ್ಚದಲ್ಲಿಯೇ ಆಗುವ ಯೋಗ. ಸಾಲ ಸೋಲಗಳಿದ್ದರೆ ಜೂನ್ ೨೪ ರಿಂದ ಜುಲೈ ೧೯ರ ವರೆಗಿನ ಅವಧಿಯುಲ್ಲಿ ತೀರುವವು. ಐದನೆಯು ಗುರುವಿನಲ್ಲಿ ಯಾತ್ರಾದಿ ಪುಣ್ಯಪ್ರದ, ಹಾಗು ಮೂರನೆಯು ಗುರುವಿನಲ್ಲಿ ವ್ಯವಹಾರದಲ್ಲಿ ಮಹತ್ವದ ಕಾರ್ಯವೊಂದರ ನಿಮಿತ್ತ ದೂರದ ಪ್ರವಾಸ ಅವಶ್ಯ ಜರುಗುವುದು.

ದಾವೆ, ಫಿರ್ಯಾದಿ ಹಾಗು ಇತರ ಸ್ಪರ್ಧೆಯ ಕೆಲಸಗಳಲ್ಲಿ ಶೀಘ್ರ ಡಿಸೆಂಬರ್ ೫ರ ವರೆಗೆ ಇಲ್ಲವೆ ಜುಲೈ ೩೧ರ ನಂತರ ದೊರೆತರೆ ಪೂರ್ಣಅನುಕೂಲವಾಗಿರುವುದಾದರೆ, ಜುಲೈ ೨೩ರಿಂದ ೩೧ರ ವರೆಗಿನ ಅವಧಿಯಲ್ಲಾದರೆ ತೀರ ವಿರುದ್ಧವಾಗುವಭಯವಿದೆ.

ಈ ರಾಶಿಯ ಗರ್ಭಿಣಿಯರು ಮೂರು ಇಲ್ಲವೆ ಐದನೆಯ ಗುರುವಿದ್ದಾಗ ಪ್ರಸೂತರಾದರೆ ಹೆರಿಗೆ ಕಷ್ಟವಾಗುವುದಿಲ್ಲ. ಹಾಗು ಐದನೆಯ ಗುರುವಿದ್ದಾಗ ಬಹುತರರಿಗೆ ಪುತ್ರಪ್ರಾಪ್ತಿಯ ಯೋಗ ಬಲವತ್ತರವಾಗಿದೆ. ಆದರೆ ನಾಲ್ಕನೆಯ ಗುರುವಿದ್ದಾಗ ಅಂದರೆ ಮಾರ್ಚ್ ೨೩ ರಿಂದ ಜುಲೈ ೩೧ ರ ವರೆಗಿನ ಅವಧಿಯಲ್ಲಿ ಕನ್ಯಾಪ್ರಾಪ್ತಿಯ ಸಂಭವವಿದೆ.

ಈ ರಾಶಿಯ ವಿದ್ಯಾರ್ಥಿಗಳ ಪರೀಕ್ಷೆ ಮೂರು ಹಾಗು ಐದನೆಯ ಗುರುವಿದ್ದಾಗಾದರೆ ಉತ್ತೀರ್ಣರಾಗುವದು ಮಾತ್ರವಲ್ಲ. ಫೆಬ್ರುವರಿ ೧೮ ರಿಂದ ಮಾರ್ಚ್ ೫, ನೋ ೮ ರಿಂದ ೨೭ ಮತ್ತು ಅಕ್ಟೋಬರ್ ೯ರ ನಂತರ ಆದರೆ ನಿಶ್ಚಿತವಾಗಿಯೂ ಕ್ಲಾಸ್ ದೊರಕಿಸುವರು.

ಒಟ್ಟಿನಲ್ಲಿ ಈ ವರ್ಷ ನಾಲ್ಕನೆಯ ರಾಹು ಹಾಗು ನಾಲ್ಕನೆಯ ಗುರುಗಳಿಬ್ಬರೂ ಒಂದೆಡೆ ಇರುವಾಗ ತುಸು ಕಷ್ಟ ಮತ್ತು ಅಸ್ವಸ್ಥತೆಯುಂಟಾದರೂ ಇತರ ವೇಳೆಯಲ್ಲಿ ಸುಖಕರ ಹಾಗು ವರುಷದ ಕೊನೆಗೆ ಹಿಂದಿನ ವರ್ಷಕ್ಕಿಂತ ಹೆಚ್ಚು ಪ್ರಗತಿಪರವಾದದ್ದು ನಿಶ್ಚಿತ ಗಮನಕ್ಕೆ ಬರುವುದು.

# ಮೀನ

ಈ ರಾಶಿಯ ವಿಷಯಕ್ಕೆ ವಿಶೇಷ ಹೇಳುವುದೆಂದರೆ ಇದಕ್ಕೆ ಕಳೆದ ಫೆಬ್ರುವರಿಯಿಂದ ಮಾತ್ರವೇ ಸಾಡೇಸಾತಿ ಪ್ರಾರಂಭವಾಗಿದೆ. ಹಾಗು ಈ ವರ್ಷವಿಡಿ ಶನಿ ಹನ್ನೆರಡನೆಯವನಾಗಿಯೇ ಇರುವನು. ಇದು ವ್ಯಯಸ್ಥಾನವು. ಇದರಿಂದಾಗಿ ಕೆಲವು ಯೋಗ್ಯ, ಆದರೆ ಇನ್ನು ಕೆಲವು ನಿರರ್ಥಕ ಹಾಗು ವ್ಯರ್ಥ ಕೆಲಸಗಳಿಗಾಗಿ ಪ್ರಮಾಣಮೀರಿ ವೆಚ್ಚವಾಗುತ್ತ ಹೋಗುವುದು; ಹಾಗು ಕುಟುಂಬದಲ್ಲಿಯ ಬಹುಜನರು ನಿಮ್ಮ ಮೇಲೆ ವಿನಾಕಾರಣ ಸಿಟ್ಟಾಗುವರು. ಆದರೂ ರಾಶಿಸ್ವಾಮಿಯಾದ ಗುರು ಮಾರ್ಚ್ ೧೩ ರಿಂದ ಎರಡನೆಯವನಾಗಿ, ಹಾಗು ಅನಂತರ ಜುಲೈ ೩೧ರ ವರೆಗೆ ಮೂರನೆಯವನಾಗಿ ಅನುಕೂಲಭ್ರಮಣದಲ್ಲಿರುವುದರಿಂದಾಗಿ ಅದು ವರೆಗೆ ಈ ರಾಶಿಯ ಜನರ ಆರೋಗ್ಯ ಉತ್ತಮವಾಗಿರುವುದು. ಆದರೆ ಅನಂತರ ಗುರುವು ನಾಲ್ಕನೆಯವನಾದಾಗ ಹಾಗು ಅಗಸ್ಟ್ ೧೦ ರಿಂದ ಸಪ್ಟೆಂಬರ್ ೨೩ರ ವರೆಗೆ ಮಂಗಳ ಎಂಟನೆಯವನಾಗಿರುವಾಗ ರಕ್ತದೋಷ ಅಥವಾ ಉಷ್ಣವಾತದಿಂದ ಆರೋಗ್ಯ ತುಸು ಕೆಡಬಹುದಾಗಿದೆ. ಆದರೂ ಇತರ ವಿಷಯಗಳಲ್ಲಿ ದೇಹಸುಖ ಡಿಸೆಂಬರ್ ೫ ರಂದು ಬರುವ ಮೂರನೆಯ ರಾಹುವಿನಿಂದಾಗಿ ತುಂಬ ಉತ್ತಮವಾಗಿರುವುದು.

ಹೆಂಡತಿಯ ಆರೋಗ್ಯ ಶನಿ-ಮಂಗಳರ ಪ್ರತಿದೃಷ್ಟಿಯೋಗವಿರುವಾಗ ಅಂದರೆ ಡಿಸೆಂಬರ್ ೩೧ ರ ವರೆಗೆ ಮತ್ತೆ ಫೆಬ್ರುವರಿ ೨೫ ರಿಂದ ಜೂನ್ ೧೮ರ ವರೆಗಿನ ಅವಧಿಯಲ್ಲಿ ತುಸು ಕಿರಿಕಿರಿಯಾಗಿರುವುದಾದರೂ ಇತರ ಸಮಯದಲ್ಲಿ ಚೆನ್ನಾಗಿಯೇ ಇರುವುದು. ಜೂನ್ ೧೮ ರಿಂದ ಅಗಸ್ಟ್ ೧೦ರ ವರೆಗಿನ ಅವಧಿಯಲ್ಲಿ ನಿಮ್ಮ ನಿಮ್ಮಲ್ಲಿ ತೀರ ಮತಭೇದವುಂಟಾದರೂ ಇತರ ಕಾಲದಲ್ಲಿ ಒಳ್ಳೆಯ ಮತ್ಯೈಕ್ಯವುಳಿಯುವುದು. ಗುರು ಎರಡನೇಯವನಾಗಿರುವಾಗ ಹೆಂಡತಿಯ ತವರುಮನೆಯ ಕಡೆಯವರಲ್ಲಿ ಕೆಲವರ ಉತ್ಕರ್ಷ ಕೂಡ ಆಗುವುದು. ಈ ರಾಶಿಯ ಅವಿವಾಹಿತರು ವಿವಾಹವಾಗುವುದಿದ್ದರೆ ಈ ವರುಷ ಎರಡನೆಯ ಗುರುವಿಗಿಂತ ಮೂರನೆಯ ಗುರುವಿದ್ದಾಗ ಅಂದರೆ ಮಾರ್ಚ್ ೨೩ ರಿಂದ ಜುಲೈ ೩೧ ರ ವರೆಗಿನ ಅವಧಿಯಲ್ಲಿ ಉತ್ತಮ ಬಾಸಿಂಗಬಲವಿದ್ದು, ವಿವಾಹ ಅಲ್ಪಾಯಾಸದಿಂದ ಹಾಗು ಅಪೇಕ್ಷಿತ ವಧು ಅಥವಾ ವರನೊಂದಿಗೆಯೇ ಆಗುವದು. ಎರಡು ಹಾಗು ನಾಲ್ಕನೆಯ ಗುರುವಿಗಿಂತ ಮೂರನೆಯ ಗುರುವಿದ್ದಾಗಾದರೆ ವಧೂವರರು ಹೆಚ್ಚು ಅನುರೂಪರಿರುವರು.

ನಿಮ್ಮ ಮಕ್ಕಳ ಮದುವೆಯಾಗುವುದಿದ್ದರೆ ಎರಡು ಹಾಗು ಮೂರನೆಯ ಗುರುವಿದ್ದಾಗ ಒಳ್ಳೆಯ ಬಾಸಿಂಗಬಲವಿದ್ದು ಅದು ಹೊಂದಲು ಹಾಗು ಪ್ರತ್ಯಕ್ಷ ಪೂರ್ತಿಗೊಳ್ಳಲು ಹೆಚ್ಚಿನ ಪ್ರಯಾಸ ಇಲ್ಲವೆ ತೊಂದರೆಯಾಗದು. ಆದರೆ ಎರಡನೆಯ ಗುರುವಿದ್ದಾಗ ಅಂದರೆ ಮಾರ್ಚ್ ೨೩ ರ ವರೆಗಾದರೆ ಅದಕ್ಕಾಗಿ ನಿರೀಕ್ಷೆಗಿಂತ ಹೆಚ್ಚು ವೆಚ್ಚ ಮಾಡಬೇಕಾಗುವುದಲ್ಲದೆ, ಅಷ್ಟು ಮಾಡಿದರೂ ಪ್ರತಿಪಕ್ಷದವರು ತುಸು ಮುನಿದುಕೊಂಡೇ ಇರುವರು; ಮತ್ತು ಸೊಸೆ ಇಲ್ಲವೆ ಅಳಿಯ ಅಪೇಕ್ಷೆಯಷ್ಟು ರೂಪ ಗುಣಗಳೆರಡರಲ್ಲೂ ಮನವೊಪ್ಪುವಂತಿರಲಾರರು. ಮಕ್ಕಳಿಂದ ಎರಡನೆಯ ಗುರುವಿದ್ದಾಗ ಬಹಳ ಉತ್ತಮವಾದರೆ ಮೂರನೆಯದರಲ್ಲಿ ಮಧ್ಯಮ ಮತ್ತು ನಾಲ್ಕನೆಯದರಲ್ಲಿ ತೀರ ಕನಿಷ್ಠ ಸುಖ ದೊರೆಯುವುದು. ಒಬ್ಬನೊಡನಂತೂ ತೀರ ವಿರಸವಾಗುವ ಸಂಭವವಿದೆ. ಎರಡನೆಯ ಹಾಗು ನಾಲ್ಕನೆಯ ಗುರುವಿದ್ದಾಗ ಮಕ್ಕಳಿಗೆ ಹೆಚ್ಚು ಉನ್ನತಿ ಕಾಲವಿದೆ.

ಉದ್ಯೋಗ – ವ್ಯವಹಾರಸ್ಥರಿಗೆ ಮೂರನೆಯ ರಾಹುವಿದ್ದಾಗ ಅಂದರೆ ಡಿಸೆಂಬರ್ ೫ ರ ನಂತರ ಮನೋತ್ಸಾಹ ಹೆಚ್ಚತೊಡಗುವುದಲ್ಲದೆ, ಧೈರ್ಯ ಸಾಹಸಗಳು ಅವಶ್ಯವಿರುವಂತಹ ಉದ್ಯೋಗಗಳಲ್ಲಿ ಉತ್ತಮ ಯಶಸ್ಸು ಮಾತ್ರವಲ್ಲದೆ ತುಂಬ ಲಾಭ ಕೂಡ ದೊರೆಯುವುದು. ಎರಡು ಮತ್ತು ನಾಲ್ಕನೆಯ ಗುರುವಿದ್ದಾಗ ವ್ಯವಸಾಯದಲ್ಲಿಯು ಲೌಕಿಕಕ್ಕೆ, ಆಶ್ರಯದಾತರು ಇಲ್ಲವೆ ವರಿಷ್ಠರ ಮರ್ಜಿಗೆ ಹಾಗು ಪ್ರಭುತ್ವ ಹೆಚ್ಚಲಿಕ್ಕೆ ಇಲ್ಲವೆ ನೌಕರಿಯಲ್ಲಿ ಮೇಲಿನ ಗ್ರೇಡು ದೊರಕಿಸುವುದಕ್ಕೆ ಒಳ್ಳೆಯ ಕಾಲವಿದೆ. ಅದರಂತೆಯೆ ಮೂರನೆಯ ಗುರು ಪ್ರತ್ಯಕ್ಷ ಲಾಭಕ್ಕೆ ಉತ್ತಮನು. ಉದ್ಯೋಗಸ್ಥರಿಗೆ ಎಪ್ರಿಲ್ ೯ ರಿಂದ ಅಗಸ್ಟ್ ೧೦ ರ ವರೆಗಿನ ಹಾಗು ಮುಂದೆ ಸಪ್ಟೆಂಬರ್ ೨೩ ರ ನಂತರದ ಕಾಲ ಭರಭರಾಟಿಯದೂ ಹೆಚ್ಚು ಲಾಭಕರವಾದದ್ದೂ ಆಗಿದೆ. ಆದರೆ ಹಣವೆಷ್ಟೇ ಬಂದರೂ ವೆಚ್ಚ ಕೂಡ ಅದೇ ಪ್ರಮಾಣದಲ್ಲಿಯೇ ಹೆಚ್ಚುತ್ತ ಹೋಗುವುದರಿಂದ ಈ ವರುಷ ಸದಾ ಕಾಲ ಬೇಸರವೇ ಅನಿಸುವುದು. ಮೂರನೆಯ ಗುರುವಿದ್ದಾಗ ಮಂಗಲ ಹಾಗು ಧಾರ್ಮಿಕ ಕಾರ್ಯಗಳು ಜರುಗುವವಲ್ಲದೆ ಸಮೀಪದ ಯಾತ್ರೆಯೂ ಜರುಗುವುದು. ಎರಡು ಹಾಗು ನಾಲ್ಕನೆಯ ಗುರುವಿದ್ದಾಗ ಮಹತ್ವ ಹೆಚ್ಚಿಸುವಂತಹ ದೊಡ್ಡ ಮನುಷ್ಯರ ಭೆಟ್ಟಿಯ ಯೋಗವಿದೆ. ಮಿತ್ರರಲ್ಲಿ ಕೆಲವರು ಹಿಂದಿಗಿಂತಲೂ ಹೆಚ್ಚು ಆತ್ಮೀಯತೆಯಿಂದ ವರ್ತಿಸಿದರೆ, ಇನ್ನು ಹಲವರು ವಿನಾಕಾರಣ ಬಿರುಸಾಗಿ ನಡೆದುಕೊಳ್ಳುವರು. ಮೂರನೆಯ ರಾಹುವಿದ್ದಾಗ ಅಣ್ಣತಮ್ಮಂದಿರೊಂದಿಗೆ ತೀರ ಕೆಡುವುದು. ಎರಡನೆಯ ಗುರುವಿದ್ದಾಗ ಐಹಿಕಸುಖಕ್ಕೆ ಸಂಬಂಧಿಸಿದ್ದಾದರೆ ನಾಲ್ಕನೆಯವನಿದ್ದಾಗ ಪಾರಮಾರ್ಥಿಕ ಮಾರ್ಗಕ್ಕೆ ಸಂಬಂಧಿಸಿದ್ದಂತೆ ಮೇಲಿಂದ ಮೇಲೆ ಸ್ವಪ್ನಗಳು ಬೀಳುವವು.

ದಾವೆ, ಫಿರ್ಯಾದಿ ಹಾಗು ಸ್ಪರ್ಧೆಯ ಬಹಳಷ್ಟು ಕೆಲಸಗಳಲ್ಲಿ ಮೂರನೆಯ ರಾಹು ಬಂದಂದಿನಿಂದಲೇ ಯಶಸ್ಸಿಗೆ ಅನುಕೂಲವೆನಿಸುವಂತಹ ವಾತಾವರಣ ನಿರ್ಮಾಣವಾಗತೊಡಗುವುದು. ಹಾಗು ಮೂರನೆಯ ಗುರುವಿದ್ದಾಗ ತೀರ್ಪು ದೊರೆತರೆ ಒಳ್ಳೆಯ ಯಶಸ್ಸು ಕೂಡ ಸಿಕ್ಕುವುದು. ಅದರಂತೆಯೆ ಮಂಗಳ ಆರನೆಯವನಾಗಿರುವಾಗ ಅಂದರೆ ಡಿಸೆಂಬರ್ ೩೦ ರ ವರೆಗೆ ಹಾಗು ಮತ್ತೆ ಫೆಬ್ರುವರಿ ೨೫ ರಿಂದ ಜೂನ್ ೧೮ ರ ವರೆಗಿನ ಅವಧಿಯಲ್ಲಿ ಶತ್ರು ಇಲ್ಲವೆ ಪ್ರತಿಸ್ಪರ್ಧಿಗಳಲ್ಲಿ ಅನೇಕರಿಗೆ ಬೇರೆಡೆಯೆ ಉದ್ಭವಿಸುವ ಸಂಕಟಗಳಿಂದಾಗಿ ಭಯಂಕರ ಹಾನಿಯಾಗುವುದಾದರೆ ವಿಶೇಷ ಬಲಾಢ್ಯರೆನಿಸುವ ಕೆಲ ಶತ್ರುಗಳು ಸ್ವರ್ಗವಾಸಿಯಾಗುವ ಯೋಗವೂ ಇದೆ.

ಈ ರಾಶಿಯ ಗರ್ಭಿಣಿಯರು ಎರಡು ಮತ್ತು ಮೂರನೆ ಗುರುವಿದ್ದಾಗ ಪ್ರಸೂತವಾದರೆ ಎಷ್ಟೂ ಕಷ್ಟವಾಗುವುದಿಲ್ಲವಾದೂ ಅದರಲ್ಲಿ ಹೆಚ್ಚಿನವರಿಗೆ ಕನ್ಯಾಪ್ರಾಪ್ತಿ ಯೋಗವೇ ವಿಶೇಷವಾಗಿದೆ. ಆದರೆ ಅದೇ ನಾಲ್ಕನೆ ಗುರುವಿದ್ದಾಗಾದರೆ ಪ್ರಸೂತಿ ತುಸು ಕಷ್ಟಕರವಾದರೂ ಬಹುಜನರಿಗೆ ಪುತ್ರಪ್ರಾಪ್ತಿಯ ಯೋಗವಿದೆ.

ಈ ರಾಶಿಯ ವಿದ್ಯಾರ್ಥಿಗಳ ಪರೀಕ್ಷೆ ಎರಡು ಮತ್ತು ಮೂರನೆಯ ಗುರುವಿದ್ದಾಗಾದರೆ ಉತ್ತೀರ್ಣರಾಗುವರು, ಆದರೆ ಆರನೆಯ ಮಂಗಳನಿದ್ದಾಗ ಅಂದರೆ ಡಿಸೆಂಬರ್ ೩೦ ರ ವರೆಗೆ ಹಾಗು ನಂತರ ಫೆಬ್ರುವರಿ ೨೫ರಿಂದ ಜೂನ್ ೧೮ರ ವರೆಗಿನ ಅವಧಿಯಲ್ಲಾದರೆ ಅವರಲ್ಲಿ ಬಹುಜನರು ಪ್ರಥಮ ಇಲ್ಲವೆ ಕನಿಷ್ಠ ದ್ವಿತೀಯ ವರ್ಗವನ್ನಾದರೂ ಪಡೆಯುವ ಯೋಗ ಪ್ರಬಲವಿದೆ.

ಒಟ್ಟಿನಲ್ಲಿ ಈ ವರುಷ ಸಾಡೇಸಾತಿಯಲ್ಲಿಯ ಹನ್ನೆರಡನೆಯ ಶನಿಯಿಂದಾಗಿ ತುಸು ಹೆಚ್ಚು ವೆಚ್ಚದಾಯಕವೆಂದೆನಿಸಿದರೂ ಸಾಲಸೋಲಗಳಾಗದಷ್ಟು ದ್ರವ್ಯಪ್ರಾಪ್ತಿ ಹಾಗು ವ್ಯವಹಾರದಲ್ಲಿ ಕಷ್ಟಸಾಧ್ಯವಾದರೂ ಯಶಸ್ಸು ನಿಶ್ಚಿತವಾಗಿಯೂ ಸಿಕ್ಕುವುದು.

|| ಶುಭಂ ಭವತು ||



ಶ್ರೀ ಕೃಷ್ಣಮೂರ್ತಿ ಕಿತ್ತೂರ
ಹುಬ್ಬಳ್ಳಿ

# ಬಾಡಿಗೆ ಮನೆ

ಬಾಡಿಗೆ ಮನೆಯೆ? ಅಂಥದೇನು ಅದರ ಕುರಿತು ಬರೆಯುವದೆನ್ನುವಿರೇನು? ಆದರೆ ಇಂದು ಏನೆಲ್ಲ ಸಿಕ್ಕರೂ ಬಾಡಿಗೆ ಮನೆ ಸಿಗುವದೆಂದರೆ ಪೂರ್ವಜನ್ಮದ ಪುಣ್ಯವೇ ಬೇಕು. ಅಷ್ಟೊಂದು ಅದಕ್ಕಾಗಿ ಪರಿದಾಡಬೇಕಾಗಿದೆ. ಲೇಖಕರು ತಮ್ಮ ಕೆಲವೊಂದು ಅನುಭವಗಳನ್ನು ಇಲ್ಲಿ ಬಹು ಸ್ವಾರಸ್ಯಕರವಾಗಿ ನಿಮ್ಮೆದುರು ಇರಿಸಿದ್ದಾರೆ.

'ಮನೆ ಕಟ್ಟಿ ನೋಡು, ಮದುವೆ ಮಾಡಿ ನೋಡು' ಎಂಬ ನಾಣ್ಣುಡಿ ಹಳೆಯದಾದ್ದರೂ ನಿತ್ಯ ಸತ್ಯವಾದುದು. ಅದರಲ್ಲೂ ಸಿಮೆಂಟು, ಕಬ್ಬಿಣ, ಕಟ್ಟಿಗೆ, ಕೂಲಿ-ಎಲ್ಲವೂ ತುಟ್ಟಿಯೂ ದುರ್ಲಭವೂ ಆಗಿರುವಾಗ. ಅದರಂತೆ ವರಗಳು ಅಪರೂಪವಾಗಿ ವರದಕ್ಷಿಣೆಯ ರೇಟು ಅತಿಶಯ ಏರಿರುವಾಗ— ಈ ಗಾದೆಮಾತು ಹದಿನಾರಾಣೆ ಸತ್ಯ ಎಂಬುದನ್ನು ನಾನು ಮನೆ ಕಟ್ಟಿಸಿದ ಅಥವಾ ಮದುವೆ ಮಾಡಿದ ಅನುಭವ ಇಲ್ಲದಿದ್ದರೂ— ಒಪ್ಪಿಕೊಳ್ಳುತ್ತೇನೆ. ಆದರೆ ಬಾಡಿಗೆಮನೆಯನ್ನು ದೊರಕಿಸುವುದು ಮಾತ್ರ ಮನೆ ಕಟ್ಟುವುದಕ್ಕಿಂತಲೂ ಅಳಿಯನನ್ನು ದೊರಕಿಸುವುದಕ್ಕಿಂತಲೂ ಹೆಚ್ಚು ದುಸ್ಸಾಧ್ಯವೆಂದೇ ನನ್ನ ಮತ.

ನನ್ನ ಈ ಮಾತಿನ ಸತ್ಯಾಂಶದ ಅರಿವಾಗದೆ ಇರುವಂಥ ಕೆಲ ಸುದೈವಿಗಳೂ ಇರಬಹುದು. ಜಾಗತಿಕ ಮಹಾಯುದ್ಧದ ಕಾಲದ ಮೊದಲೇ ಮನೆಯೊಂದನ್ನು ನಾಲ್ಕೊ ಎಂಟೊ ರೂಪಾಯಿ ಬಾಡಿಗೆಗೆ ಹಿಡಿದು ಇಂದಿಗೂ ಎಂಟೇ ರೂಪಾಯಿ ಕೊಡುತ್ತ ಮಾಲಕನನ್ನೇ ಹೆದರಿಸುವ ಬಾಡಿಗೇದಾರರೂ ಇದ್ದಾರಷ್ಟೇ? ಅಷ್ಟೇ ಏಕೆ? ಈಗ ತಿಂಗಳಿಗೆ ಎಪ್ಪತ್ತೈದು ರೂಪಾಯಿಗಳನ್ನು 'ಓಣೀಲೀ ಹೋಗುವ' ಯಾರೂ ಕೊಡಬಹುದಾದಂತಹ ಐದಾರು ಕೋಣೆಗಳ ಮನೆಯನ್ನು ಮೊನ್ನೆ ಮೊನ್ನೆ ರಾಜ್ಯಪುನರ್ವಿಂಗಡಣೆಯ ಪೂರ್ವದಲ್ಲಿ ಕೇವಲ ಇಪ್ಪತ್ತು ರೂಪಾಯಿಗೆ ಹಿಡಿದುಕೊಂಡು ಕುಳಿತವರು ಇಲ್ಲವೆ? ಇವರೆಲ್ಲ ಸುದೈವಿಗಳಲ್ಲದೆ ಇನ್ನೇನು? ನಾನು ಈ ಮಾತುಗಳನ್ನು ಹೇಳುತ್ತಿರುವುದು ಹುಬ್ಬಳ್ಳಿಯಂಥ ಒಂದು ನಗರದ ಬಗ್ಗೆ ವಿನಾ ದಿಲ್ಲಿ, ಮುಂಬಯಿಗಳಂತಹ ಮಹಾನಗರಗಳ ಬಗ್ಗೆ ಅಲ್ಲ. ಅಲ್ಲಿಯ ಸ್ಥಿತಿಯನ್ನು ಕೇಳಿದರೆ ಮೈನವಿರೇಳುತ್ತದೆ. ಅಂಥ ಪಟ್ಟಣಗಳಲ್ಲಿ ಜನರು ಹೇಗೆ ಬಾಡಿಗೆ ಮನೆ ದೊರಕಿಸುತ್ತಾರೋ ದೇವರೇ ಬಲ್ಲ!

ಈ ಸಮಸ್ಯೆ ಇಂದು ಹಳ್ಳಿಗಳಿಗೂ ಮುಟ್ಟಿದೆ. ಒಂದು ಕಾಲಕ್ಕೆ 'ಉಡುಗಿ-ಸಾರಿಸಿಕೊಂಡು' ಇದ್ದರೆ ಸಾಕು ಎನ್ನುತ್ತಿದ್ದರಂತೆ! ಅಂಥ ಪುಣ್ಯಾತ್ಮರೂ ದೊರೆಯದೆ ಹಾಳುಬಿದ್ದುಹೋದ ಮನೆಗಳೂ ಉಂಟು. ನಮ್ಮ ಹಳ್ಳಿಯಲ್ಲಿ ಹೀಗೆಯೇ ಬಹಳ ವರ್ಷಗಳಿಂದ ಯಾರೂ ವಾಸಮಾಡದೆ ಇದ್ದ ಮನೆಗಳು "ದೆವ್ವದಮನೆ"ಗಳೆಂದೇ ಖ್ಯಾತವಾಗಿದ್ದವು. ನಾವು ಚಿಕ್ಕವರಾಗಿದ್ದಾಗ ಆ ಸುದಾಮಗಟ್ಟಿಯ ಗುಂಡೋಪಂತರ ನಾಲ್ಕು ಅಂಕಣದ ಮನೆಯ ಬಾಗಿಲನ್ನೇ ಯಾರೂ ತೆಗೆದುದು ನನಗೆ ನೆನಪಿಲ್ಲ. ರಾತ್ರಿಯಷ್ಟೇ ಅಲ್ಲ, ಹಗಲುಹೊತ್ತು ಕೂಡ ಆ ಮನೆಯ ಹತ್ತಿರ ಸುಳಿಯಲು ನಾವೆಲ್ಲ ಅಂಜುತ್ತಿದ್ದೆವು. ಆ ಮನೆಯಲ್ಲಿ ರಾತ್ರಿ ಭೂತಗಳು ಕುಣಿಯುತ್ತಿರುವುದನ್ನೂ ಕೆಲವರು ಪ್ರತ್ಯಕ್ಷ ಕಂಡಿದ್ದರಂತೆ! ಇದೆಲ್ಲ ಕೇವಲ ಒಂದೇ ಒಂದು ಕಾಲುಶತಮಾನದ ಹಿಂದಿನ ವಿಚಾರ. ಆದರೆ ಇಂದು? ಅದೇ ಗುಂಡೋಪಂತರ ಮಗ ಎಬಡೋಪಂತ ಅದೇ ಮನೆಯಿಂದ ಪ್ರತಿತಿಂಗಳೂ ೩೦ ರೂಪಾಯಿ ಬಾಡಿಗೆ ದೊರಕಿಸುತ್ತಾನೆ!

ಕಿಟ್ಟೆಲ್ ಸಾಹೇಬರು ತಮ್ಮ ಕೋಶದಲ್ಲಿ ಅರಮನೆ, ಸೆರೆಮನೆ, ಬಾಣಸಿನಮನೆ, ಸೆಜ್ಜೆಮನೆ, ಹೆತ್ತಮನೆ, ತವರ್ಮನೆ, ತಾವರೆಮನೆ ಎಂದು ಮೊದಲಾಗಿ ನಮೂದಿಸುತ್ತ ಚಿಪ್ಪಿಗರಮನೆಯನ್ನೂ ಹೇಳಿದ್ದಾರೆ. ಆದರೆ "ಬಾಡಿಗೆಮನೆ"ಯ ಪ್ರಸ್ತಾಪವನ್ನೇ ಎತ್ತಿಲ್ಲ. (ಅವರು ಯಾಕೆ ಆ ಪ್ರಸ್ತಾಪ ಮಾಡಿಲ್ಲ ಎಂಬ ಬಗ್ಗೆ ಸಂಶೋಧನೆ ಮಾಡಿ ಸಹಜವಾಗಿ ಒಂದೆರಡು ಪಿ.ಎಚ್‌ಡಿ. ಡಿಗ್ರಿಗಳನ್ನೇ ಪಡೆಯಬಹುದು!) ಆದರೆ ಇಂದು ಕೂಡ ಬಾಡಿಗೆ ಮನೆ ಪ್ರಸ್ತಾಪ ಮಾಡುವಂತೆಯೇ ಇಲ್ಲ. ಯಾಕೆಂದರೆ ಮನೆಯನ್ನು ಬಾಡಿಗೆಯಿಂದ ದೊರಕಿಸುವುದೇ ಅಷ್ಟು ಕಷ್ಟವಾಗಿದೆ. ಈ ಕಷ್ಟದ ನನ್ನ ಅನುಭವ ಇನ್ನೂ ತೀರ ತಾಜಾ ಇದೆ. ಅದನ್ನು ನಿಮಗೂ ಸ್ವಲ್ಪ ಕೇಳಿಸಬೇಕೆಂದಿದ್ದೇನೆ.

ನನ್ನದು ಸಹಸಾ ವರ್ಗವಾಗುವ ನೌಕರಿಯಲ್ಲ. ಆದರೂ ನನ್ನ ಕಷ್ಟಸಹಿಷ್ಣುತೆಯ ಪರೀಕ್ಷೆ ಮಾಡಲಿಕ್ಕೇ ಎಂಬಂತೆ ನನಗೆ ಈ ಊರಿಗೆ ವರ್ಗವಾಯಿತು. ವರ್ಗವಾದ ಬಗ್ಗೆಯಾಗಲಿ, ಈ ಊರಿಗೇ ಬರಬೇಕಾದ ಬಗ್ಗೆಯಾಗಲಿ ನನ್ನ ವಿಶೇಷ ತಕರಾರಿಲ್ಲ. (ತಕರಾರಿದ್ದರೂ ನಾನೇನು ಮಾಡಬಲ್ಲೆ ಎಂದು ನನ್ನನ್ನು ಕೇಳಿ, ನನ್ನ ಸತ್ವಪರೀಕ್ಷೆಯನ್ನು ಮಾತ್ರ ದಯವಿಟ್ಟು ಮಾಡಬೇಡಿರಿ).

ಅಂತೂ ಈ ಊರಿಗೆ ವರ್ಗವಾಗಿ ಬಂದು ಕೆಲಸಕ್ಕೆ ಹಾಜರಾದೆ. ಅರ್ಥಾತ್ ಸಹಕುಟುಂಬ ಸಹಪರಿವಾರ ಬಾರದೆ ಒಬ್ಬನೇ ಬಂದೆ. ಹಾಗೆ ಪರಿಚಿತರು ಇಲ್ಲಿ ಕೆಲವರಿದ್ದರೂ ಅವರವರ ಅಡಚಣಿ ಅವರಿಗೆ ಇದ್ದೇ ಇವೆ. ಕಾರಣ ಕೆಲವು ದಿನಗಳ ಸಲುವಾಗಿ ಸುಮ್ಮನೆ ಇನ್ನೊಬ್ಬರಿಗೆ ಯಾಕೆ ಹೆಚ್ಚಿನ ಅಡಚಣಿ ಮಾಡಬೇಕೆಂದು ಲಾಜಿಂಗಿನಲ್ಲಿಯೇ ಇಳಿದುಕೊಂಡೆ. ನಾಲ್ಕೆಂಟು ದಿನಗಳಲ್ಲಿ ಒಂದು ಬಾಡಿಗೆ ಮನೆಯನ್ನು ದೊರಕಿಸಬಹುದೆಂದು ನನ್ನ ವಿಚಾರವಿತ್ತು. ನನ್ನ ಕೆಲವು ಸ್ನೇಹಿತರೂ ಮನೆ ಹುಡುಕಿ ಕೊಡುವುದಾಗಿ ಭರವಸೆಯನ್ನಿತ್ತಿದ್ದರು.

ಅವರ ಭರವಸೆ ಮತ್ತು ನನ್ನ ಆತ್ಮವಿಶ್ವಾಸಗಳಿಂದ ಅದೊಂದು ಮಹಾಸಮಸ್ಯೆಯೆಂದು ನಾನು ಮೊದಲು ತಿಳಿದೇ ಇರಲಿಲ್ಲ. ಆದರೆ ಮುಂದೆ ದಿನದಿನಕ್ಕೂ ನನ್ನ ಅನುಭವ ಬೇರೆಯೇ ಆಯಿತು.

ಮೊದಲುಮೊದಲು ನನಗೆ ಭೆಟ್ಟಿಯಾದವರನ್ನೆಲ್ಲ "ಒಂದು ಬಾಡಿಗೆಮನೆಯಿದ್ದರೆ ನೋಡಿರಿ" ಎಂದೇ ಕೇಳುತ್ತಿದ್ದೆ. ಅವರೂ "ಆಗಲಿ" ಎನ್ನುತ್ತಿದ್ದರು.

"ಇವರು ನನ್ನ ಸ್ನೇಹಿತರು...... ಈ ಊರಿಗೆ ವರ್ಗವಾಗಿ ಬಂದಿದ್ದಾರೆ..." ಎಂದು ಮೊದಲಾಗಿ ನನ್ನ ಸ್ನೇಹಿತರು ತಮ್ಮ ಸ್ನೇಹಿತರಿಗೆ ನನ್ನ ಪರಿಚಯ ಮಾಡಿಕೊಟ್ಟಾಗೆಲ್ಲ ನಾನು ದೇಶಾವರಿ ನಗೆ ನಕ್ಕು, "ನಿಮ್ಮನ್ನು ಕಂಡು ತುಂಬಾ ಸಂತೋಷವಾಯ್ತು. ಹ...ಹ...... ನಾನೀಗ ಗೃಹಾರ್ಥಿ" ಎಂದೇ ಹಲ್ಲುಕಿರಿಯುತ್ತಿದ್ದೆ. ಆಗ "ಅದಕ್ಕೇನಂತೆ ನೋಡೋಣ" ಎಂದು ಹದಿನಾರಾಣೆ ಅಲ್ಲ ನೂರು ಪೈಸೆ-ಸುಳ್ಳು ಆಶ್ವಾಸನ ಕೊಡುತ್ತಿದ್ದವರೇ ಹಲವರು. ಕೆಲವರು ಮಾತ್ರ ಪ್ರಾಮಾಣಿಕತೆಯಿಂದ, "ಅದೇ ಕಷ್ಟರಿ, Housing problem ಈ ಊರಲ್ಲಿ ಬಹಳೇ acute ನೋಡ್ರಿ" ಎಂದು ನನ್ನ ಉತ್ಸಾಹಕ್ಕೆ ತಣ್ಣೀರೆರಚಿ, "ಆದರೂ ನೋಡೋಣ" ಎನ್ನುತ್ತಿದ್ದರು.

ಹಾಗೆ ಶ್ರೀ ಕಾಮರಾಜರಂತೆ "ಪಾರ್ಕಲಾಂ" ಎಂದವರಲ್ಲಿ ಒಬ್ಬಿಬ್ಬರಾದರೂ ನಿಜವಾಗಿಯೂ ನನ್ನ ಸಲುವಾಗಿ ಮನೆ ನೋಡಿದರು. ನನಗೇ ಕೊಡಿಸಲೂ ಯತ್ನಿಸಿದರು. ಸಾಧ್ಯವಾಗದೇ ಇದ್ದಾಗ ನನ್ನಷ್ಟೇ ಖಿಡುಕಿದರು. ಆದರೆ ನಾನು ಮಾತ್ರ ನನ್ನ ಪ್ರಯತ್ನವನ್ನು ಹಾಗೇ ಮುಂದುವರಿಸಿದೆ. ನನಗಿನ್ನೂ ಮನೆ ಸಿಕ್ಕಿಲ್ಲ ಎಂಬುದು ನನ್ನ 'ಸಾಹೇಬ'ರಿಗೂ ಗೊತ್ತಿತ್ತು. ಅದಕ್ಕಾಗಿ ನಾನು ಕೆಲಸ ಬಿಟ್ಟು ಬೇಗನೇ ಹೋದಾಗಲೆಲ್ಲ ನೋಡಿಯೂ ನೋಡದಂತಿರುತ್ತಿದ್ದರು. ಅಷ್ಟೇ ಏಕೆ, ಅವರೇ ಒಂದೆರಡು ಸಲ ನನ್ನ ಸಲುವಾಗಿ ತಮ್ಮ ಮಾತನ್ನೂ ಖರ್ಚು ಮಾಡಿದರು. ನಿಜವಾಗಿ ಹೇಳಬೇಕೆಂದರೆ ಅವರಂಥ ಪ್ರಭಾವೀ ವ್ಯಕ್ತಿಗಳ ಮಾತೂ ಹುಸಿ ಹೋಗಬೇಕೆಂದರೆ ನನ್ನ ಗ್ರಹಬಲವೇ (ಅಥವಾ ಗೃಹಬಲ ಎನ್ನಿರಿ ಬೇಕಾದರೆ) ದುರ್ಬಲವಿರಬೇಕು.

ನಾನು ದಿನಾಲು ಏನಿಲ್ಲೆಂದರೂ ಆರೇಳು ತಾಸಾದರೂ ಮನೆ ಹುಡುಕುವುದರಲ್ಲಿಯೇ ಕಳೆಯುತ್ತಿದ್ದೆ. ಕೆಲವೇ ದಿನಗಳಲ್ಲಿ ನನಗೆ ಹಲವಾರು ಜನರ ಪರಿಚಯವಾಯಿತು. ಸುಮಾರು ಮುಕ್ಕಾಲುಪಾಲು ಊರಿನ ಪರಿಚಯವಾಗಿತ್ತು. ನಾನು ಇಷ್ಟು ತಿರುಗಿದರೂ ಒಂದು ಕಡೆಗೂ "ಮನೆ ಬಾಡಿಗೆಯಿಂದ ಕೊಡುವುದಿದೆ" ಎಂಬ



ನಾನು ದೇಶಾವರಿ ನಗೆ ನಕ್ಕು "ನಾನೀಗ ಗೃಹಾರ್ಥಿ" ಎನ್ನುತ್ತಿದ್ದೆ

ಬೋರ್ಡು ಕಾಣಿಸಲಿಲ್ಲ. "ನೋಡೋಣ" ಎಂದು ಹೇಳಿದವರನ್ನೆಲ್ಲ ನಾನು ತಪ್ಪದೆ ಭೆಟ್ಟಿಯಾದೆ. ಕೆಲವರು ದೇಶಾವರಿ ನಗೆಯಿಂದ "ಖಾಲಿ ಮನೀನೇ ಎಲ್ಲೂ ಇಲ್ಲರೆಪಾ. ಆ 'ಇವರಿಗೆ' ಹೇಳಿದ್ದೆ. ಆದರೆ ಅವರು ಇನ್ನೂ ಏನೂ ತಿಳಿಸಿಲ್ಲ. ಇನ್ನೊಂದು ನಾಲ್ಕು ದಿನ ಬಿಟ್ಟು ನಾನೇ ನಿಮಗೆ ತಿಳಿಸುತ್ತೇನೆ" ಎನ್ನುವರು. ಇನ್ನು ಕೆಲವರು, "ಏನ್ರೀ, ನೀವು ನಿನ್ನೆಯೆ ಬರಬಾರದೆ? ಎಂಥಾ ಕೈಯೊಳಗಿನ ಮನೀ ಹೋಯಿತಲ್ಲರೀ!" ಎಂದು ಉದ್ಗಾರ ತೆಗೆಯುತ್ತಿದ್ದರು. ಅವರು ಹದಿನಾರಾಣೆ ಪ್ರಾಮಾಣಿಕತೆಯಿಂದಲೇ ಹೇಳಿರಬಹುದು. ಆದರೆ (ಕ್ಷಮಿಸಿರಿ) ಓಣಿ ಓಣಿ ತಿರುಗಿ ಚಪ್ಪಲಿ ಹರಿದು, ಹಿಮ್ಮಡವೇ ಸವೆದು ಹೋದ ನನಗೆ ಮಾತ್ರ ಅದು ನಿಜವೆಂದು ತೋರುತ್ತಿರಲಿಲ್ಲ.

ನನ್ನ ಗೆಳೆಯನೊಬ್ಬ ಸೈಕಲ್ ಮೋಟಾರೊಂದನ್ನು ಕೊಳ್ಳುವ ಮೊದಲು ಆರು ತಿಂಗಳು ಬೀದಿಯಲ್ಲಿ ಕಂಡ ಎಲ್ಲ ಸೈಕಲ್ ಮೋಟಾರುಗಳನ್ನೂ ಸಣ್ಣ ಹುಡುಗರಂತೆ ಹಾಗೇ ನೋಡುತ್ತ ನಿಲ್ಲುತ್ತಿದ್ದ. (ಅವನ ಜೊತೆಗೆ ತಿರುಗಾಡಲು ನನಗೆ ಎಷ್ಟೋ ಸಲ ಸಂಕೋಚವೆನಿಸುತ್ತಿತ್ತು.) ಈಗ ನನ್ನ ಸ್ಥಿತಿಯೂ ಅವನ ಹಾಗೇಯೇ ಆಯಿತು. ನಾನು ಬೀದಿಯಲ್ಲಿ ಹೋಗುವಾಗ ಯಾವ ಮನೆಯನ್ನೇ ನೋಡಿದರೂ "ನನಗೆ ಇಂಥ ಮನೆಯೊಂದು ಸಿಗಬಾರದೇ?" ಎಂದುಕೊಳ್ಳುತ್ತಿದ್ದೆ. ಯಾವುದೇ ಒಳ್ಳೆಯ ಮನೆಯನ್ನು ಕಂಡಕೂಡಲೆ ನನ್ನ ದೃಷ್ಟಿ ಅತ್ತ ಕಡೆಗೇ ಹೋಗುತ್ತಿತ್ತು. ಬಹುಶಃ ನನ್ನ ಕಣ್ಣುಗಳು ತೀರ ಶಕ್ತಿಹೀನವಾಗಿರಬೇಕು. ಇಲ್ಲವಾದರೆ ಆ ಎಲ್ಲ ಸುಂದರ ಮನೆಗಳಿಗೂ ನನ್ನ "ದೃಷ್ಟಿತಾಕದೆ" ಇರುತ್ತಿತ್ತೇ?

ಅಂತೂ ಎಷ್ಟು ತಿರುಗಿದರೂ ಮನೆ ಖಾಲಿ ಇದ್ದುದು ಪತ್ತೆಯಾಗಲಿಲ್ಲ. ಎಲ್ಲರೂ "ಈ ಊರಾಗ ಮನೀದ ಕಠಿಣರೀ" ಎನ್ನುತ್ತಿದ್ದರೇ ವಿನಾ ಅದಕ್ಕೆ ಉಪಾಯ ಸೂಚಿಸುತ್ತಿರಲಿಲ್ಲ. ಪಾಪ ಅವರಾದರೂ ಏನು ಮಾಡಬೇಕು? ನನ್ನ ಅಸಹಾಯ ಪರಿಸ್ಥಿತಿಯನ್ನು ಕಂಡು ಅವರು ಕನಿಷ್ಠ ಕನಿಕರದ ಮಾತನ್ನಾದರೂ ಆಡುತ್ತಿದ್ದರು. ಆದರೆ ಆ ಕನಿಕರದ ಮಾತಿನಿಂದ ನನ್ನ ಹೃದಯ ಸಾಂತ್ವನಗೊಳ್ಳುತ್ತಿರಲಿಲ್ಲ. ನನ್ನ ಆತ್ಮವಿಶ್ವಾಸವಂತೂ ಎಂದೋ ಮಾಯವಾಗಿತ್ತು. ನನ್ನ ಹೃದಯ ಅಧೈರ್ಯದಿಂದ ಇನ್ನೂ ಹೆಚ್ಚಾಗಿ ಬಡಿದುಕೊಳ್ಳುತ್ತಿತ್ತು. ಸರಕಾರದ ಮೇಲೆ, ಮನೆ ಮಾಲೀಕರ ಮೇಲೆ ಹರಿ ಹಾಯುವಂತಾಗುತ್ತಿತ್ತು. ಒಂದು ಬಾಡಿಗೆ ಮನೆಯನ್ನೂ ದೊರಕಿಸಲಾರದ ನಾನು ಈ ಜೀವನದಲ್ಲಿ ಏನನ್ನು ಸಾಧಿಸಬಲ್ಲೆ?— ಎಂದುಕೊಳ್ಳುತ್ತಿದ್ದೆ. ಒಂದು ದಿನವಂತೂ ತೀರ "ಅಳಮುಷ್ಟಿಗೇ" ಬಂದಿದ್ದೆ. ಆದರೆ ಒಮ್ಮೊಮ್ಮೆ ನನಗೇ ನಗೆ ಬರುತ್ತಿತ್ತು. "ಏನು ಅಂಥ ಅನಾಹುತವಾಯಿತೀಗ? ಒಂದು ತಿಂಗಳಲ್ಲ, ಇನ್ನೊಂದು ತಿಂಗಳ ನಂತರವಾದರೂ ಒಂದು ಮನೆ ದೊರಕಲಾರದೇ? ಇಷ್ಟೇಕೆ ಹಗರಣ ಮಾಡಬೇಕು?" ಎಂದು ನನ್ನಷ್ಟಕ್ಕೆ ನಾನೇ ಸಮಾಧಾನ ಹಚ್ಚಿಕೊಳ್ಳುತ್ತಿದ್ದೆ. ಆದರೆ ಆ ಸಮಾಧಾನ ಬಹುಕಾಲ ಬಾಳುತ್ತಿರಲಿಲ್ಲ.

ನನ್ನ "ಮನೆಬೇಟೆ" ಆರಂಭವಾಗಿ ಸರಿಯಾಗಿ ಮೂವತ್ತೇಳನೆಯ ದಿನ ನನ್ನ ಸಂಬಂಧಿಕರೊಬ್ಬರು ಬೀದಿಯಲ್ಲಿ ಅಕಸ್ಮಾತ್ ಭೆಟ್ಟಿಯಾದರು. ಅವರ ನನ್ನ ಸಂಬಂಧವೇನು ಬಂತು? ಅವರು ನನ್ನ ಹೆಂಡತಿಯ ಅಣ್ಣನ ಹೆಂಡತಿಯ ಕಕ್ಕನ ಮಗನ ಹೆಂಡತಿಯ ಅಣ್ಣನೋ ತಮ್ಮನೋ! ನಮ್ಮ ಬೀಗರ ಮನೆಯಲ್ಲೊಮ್ಮೆ ಅವರನ್ನು ಕಂಡದ್ದಷ್ಟೇ ಸಂಬಂಧ— ಆದರೂ ಬಹಳೇ ಆತ್ಮೀಯರೆಂಬಂತೆ ಅವರನ್ನು ಮಾತನಾಡಿಸಿದೆ. ಯಥಾಪ್ರಕಾರ ನನ್ನ ಸಮಾಚಾರ ಹೇಳಿ "ನಾನು ಗೃಹಾರ್ಥಿ" ಎಂದು ಹಲ್ಲುಕಿರಿದೆ. ಈ ಸಲ ಬಹುಶಃ ನನ್ನ ಮೂವತ್ತೆರಡೂ ಹಲ್ಲು ಅವರಿಗೆ ಕಂಡಿರಲಿಕ್ಕಿಲ್ಲ. ಯಾಕೆಂದರೆ ನಾನು ಎಷ್ಟೇ ಧೈರ್ಯ ಹೇಳಿಕೊಂಡರೂ, ಸಮಾಧಾನ ತಂದುಕೊಂಡರೂ ನನ್ನ ಉತ್ಸಾಹವೆಲ್ಲ ಎಂದೋ ಉಡುಗಿಹೋಗಿತ್ತು. ಹೀಗಿರುವಾಗ ನಗೆ ಎಲ್ಲಿಂದ ಬರಬೇಕು? ಆದರೂ ನನ್ನದು ಅಳುವ moodಏ ಇದ್ದರೂ ನಗುವುದು ಶಿಷ್ಟಾಚಾರವಲ್ಲವೇ? ಅಂತೂ ನಕ್ಕೆ.

ನನ್ನ ಬವಣೆಯನ್ನು ಕಂಡು ದೇವರೇ ಅವರನ್ನು ನನ್ನ ಕಡೆಗೆ ಕಳಿಸಿರಬೇಕು ಎನ್ನಿಸಿತು. ಯಾಕೆಂದರೆ ಅವರಿಗೆ ಈ ಊರಿಂದ ವರ್ಗವಾಗಿ ಅವರು ಮರುದಿನವೇ ಇಲ್ಲಿಂದ ತಳಕಿತ್ತಲಿದ್ದರು. ಇದನ್ನು ಕೇಳುತ್ತಲೇ ನನ್ನ ಸಂತೋಷಕ್ಕೆ ಪಾರವೇ ಉಳಿಯಲಿಲ್ಲ. ಅವರು ನನ್ನನ್ನು ನೇರವಾಗಿ ಕರೆದೊಯ್ದು ತಮ್ಮ ಮನೆಯನ್ನು ತೋರಿಸಿದರು. ಮನೆ ಇದ್ದುದರಲ್ಲಿ ಚೆನ್ನಾಗಿಯೇ ಇತ್ತು. ಬಾಡಿಗೆ ಕೇವಲ ೨೪ ರೂ. ಇತ್ತು. ಅವರು ಮನೆ ಮಾಲೀಕನ ವಿಳಾಸ ಕೊಟ್ಟು ಭೆಟ್ಟಿಯಾಗಲು ಹೇಳಿದರು.

ನಾನು ನೇರವಾಗಿ ಮಾಲೀಕನ ಕಡೆಗೇಹೋದೆ. ಆತನೊಬ್ಬ ವಿಚಿತ್ರ ವ್ಯಕ್ತಿಯಾಗಿ ಕಂಡ ನನಗೆ. ನನ್ನ ವಿಚಾರವನ್ನೆಲ್ಲ ಕೇಳಿ, "ನೋಡ್ರಿ ಮಿಸ್ಟರ್, ಕೀಲೀ ಕೈ ನನ್ನ ತಾಬೇಕ್ಕ ಬರೋತನಕಾ ನಾನು ಏನೂ ಹೇಳೋದಿಲ್ಲ. ಅಲ್ಲದ, ಈಗಾಗಲೇ ಎಂಟುಹತ್ತು ಮಂದಿ ಬಂದು ಕೇಳಿ ಹೋಗ್ಯಾರ. ನನ್ನ ಲೆಕ್ಕದ ಪ್ರಕಾರ ನಾನೊಂದು List of preference ಮಾಡೀನಿ. ಅದರಲ್ಲಿ ನಿಮ್ಮದೂ ಹೆಸರು ಬರಕೋತೇನಿ......" ಎಂದ.

ನಾನು ಮತ್ತೆ ನನ್ನ ಭವಣೆಯನ್ನೆಲ್ಲ ಹೇಳಿ ದಯವಿಟ್ಟು ಮನೆಯನ್ನು ನನಗೇ ಕೊಡಬೇಕೆಂದು



"ನಾನೊಂದು ಲಿಸ್ಟ್ ಆಫ್ ಪ್ರಿಫರನ್ಸ್ ಮಾಡೀನಿ" ಎಂದವನು ಹೇಳಿದ

ವಿನಮ್ರವಾಗಿ ವಿಜ್ಞಾಪಿಸಿಕೊಂಡೆ. ಅವನ ಮನಸ್ಸು ಕರಗಲಿಲ್ಲ. ಆತ ಒಂದು ಭಾಷಣವನ್ನೇ ಆರಂಭಿಸಿದ. ಜೀವನ, ಅಡಚಣೆ, ಬಾಡಿಗೇದಾರ, ಸರಕಾರ ಮೊದಲಾದವುಗಳ ಬಗ್ಗೆ ತನ್ನ ಅಗಾಧ ಪಾಂಡಿತ್ಯವನ್ನು ನನ್ನ ಮೇಲೆ ಬಿಂಬಿಸಿದ. ನಾನು ಅದನ್ನೆಲ್ಲ (ಅನಿವಾರ್ಯ ಶಿಕ್ಷೆ ಎಂಬಂತೆ) ಸಹಿಸಿದೆ.

"ಮನೆಗೆ ಬಾಡಿಗೆಯಾದರೂ ಎಷ್ಟು? ನಿಮ್ಮ ಲಿಸ್ಟಿನಲ್ಲಿ ನನ್ನ ನಂಬರು ಎಷ್ಟನೇದ್ದಿದೆ? ಏನಾದರೂ ಚಾನ್ಸ್ ಇದೆಯೇ?" ಎಂದು ನಾನು ಮತ್ತೆ ದೈನ್ಯದಿಂದ ದನಿ ತೆಗೆದೆ.

"ನಾನು ಅದನ್ನೇನೂ ಈಗಲೇ ಹೇಳೋದಿಲ್ಲ. ನಾಳೆ ಸಾಯಂಕಾಲ ನನ್ನ ಕೈಯಲ್ಲಿ ಕೀಲಿಕೈ ಸಿಗುತ್ತದೆ. ನಾಡದು ಮುಂಜಾನೆ ಎಂಟು ಗಂಟೆಗೆ ಒಬ್ಬರಿಗೆ ಬರಲಿಕ್ಕೆ ಹೇಳಿದ್ದೇನೆ. ೯॥ ಗೆ ಮತ್ತೊಬ್ಬರಿಗೆ, ೧೧-೧೫ಕ್ಕೆ ಇನ್ನೊಬ್ಬರಿಗೆ. ಮಧ್ಯಾಹ್ನ ೨॥ ಗೆ ಒಬ್ಬರು ಬರುತ್ತಾರೆ. . . . ಹೀಗೆ ಅವರಿಗೆಲ್ಲ appointment ಕೊಟ್ಟಿದ್ದೇನೆ. ನೀವು ಆಚೆ ನಾಡಿದು ಮುಂಜಾನೆ ೮-೪೫ಕ್ಕೆ ಬಂದು ಭೆಟ್ಟಿಯಾಗಿರಿ, ನೋಡೋಣ" ಎಂದ.

ನಾನು ಮರಳಿದೆ. ಆಸೆಯಿಂದಲೊ, ನಿರಾಸೆಯಿಂದಲೊ, ಜುಗುಪ್ಸೆಯಿಂದಲೊ? ಹೇಗೋ ಹೇಳಲಾರೆ.

ಆತ ಹೇಳಿದ ದಿನ ೮-೪೫ಕ್ಕೇ ಅವನ ಮನೆಯಲ್ಲಿ ಹಾಜರಾದೆ. ಆತ ಕುಳಿತುಕೊಳ್ಳಲು ಹೇಳಿದ. ಅದರಿಂದ ಆಸೆತಳೆದ ನಾನು, "ಏನಾಯಿತು?" ಎಂದು ಕೇಳಿದೆ. ಆತ "sorry ರೆಪ. ನಾನು ಆರಿಸಿದ ಮೊದಲನೇ ವ್ಯಕ್ತಿಗೇ ಮನೆ ಸಿಕ್ಕಿತು." ಎಂದು ಹೇಳಿದಾಗ ನನ್ನ ಸ್ಥಿತಿ ಏನಾಗಿರಬೇಕೆಂದು ನೀವೇ ಊಹಿಸಿರಿ.

"ಒಳ್ಳೇದು ಆಗಲಿ" ಎನ್ನುತ್ತ ಎದ್ದೆ. ಆತ ಬಿಡಲಿಲ್ಲ. "Don't feel sorry. ಖರೇ ಹೇಳಬೇಕೆಂದರೆ ನಾನು ನಿಮ್ಮ ನಂಬರು ಎರಡನೇದ್ದೇ ಇಟ್ಟಿದ್ದೆ . . . . (ಬಹುಶಃ ಅವನು ಎಲ್ಲರಿಗೂ ಹೀಗೇ ಹೇಳಿದ್ದನೋ ಏನೊ!) . . . ಆದರೆ ಅವನು ತಾನಾಗಿಯೇ ೫೦ ರೂ. offer ಮಾಡಿದ. ನಾನೂ ಒಪ್ಪಿದೆ. ಆದರೂ ನನ್ನ ಒಂದು ಕಂಡಿಶನ್ . . . ."

ಅದನ್ನೆಲ್ಲ ತೆಗೆದುಕೊಂಡು ನನಗೇನು ಮಾಡಬೇಕಿತ್ತು? ಅಂತೂ ಆತನಿಂದ ಇನ್ನೊಂದು ಭಾಷಣ ಹೇಗೋ ತಪ್ಪಿಸಿಕೊಂಡು ಪಾರಾಗಿ ಬಂದೆ.

ಮತ್ತೆ ನಾಲ್ಕು ದಿನಗಳ ವರೆಗೆ ಖಾಲಿ ಮನೆಯ ಸುಳಿವು ಎಲ್ಲಿಯೂ ಹತ್ತಲಿಲ್ಲ. ಐದನೆಯ ದಿನ ಯಾರೋ ಒಬ್ಬರಿಂದ ಮನೆಯೊಂದು ಖಾಲಿಯಿದ್ದ ಸಮಾಚಾರ ತಿಳಿಯಿತು. ತಡಮಾಡದೆ ನಾನು ಅಲ್ಲಿಗೆ ಧಾವಿಸಿದೆ.

ಅದೊಂದು ವಿಶಾಲವಾದ ಬಂಗಲೆ. ಬಂಗಲೆಯ ಹಿಂದಿರುವ 'ಔಟಹೌಸ್' ಖಾಲಿಯಿತ್ತು. ಮನೆಯ ಮಾಲೀಕರು ನನ್ನನ್ನು ಆದರದಿಂದಲೇ ಬರಮಾಡಿಕೊಂಡು, ಖಾಲಿ ಮನೆ ತೋರಿಸುವ ಮೊದಲೇ ತಮ್ಮ ಬಂಗಲೆ ತೋರಿಸಿದರು. ಅದನ್ನು ಕಟ್ಟಿಸಿದ ರೀತಿ, ಮಾಡಿದ ಖರ್ಚು ಎಲ್ಲವನ್ನೂ ವಿವರವಾಗಿ ಬಣ್ಣಿಸಿದರು. ಅದನ್ನು ಸಾವಧಾನದಿಂದ ಕೇಳಿ ನಾನು, "ಹಾಗಾದರೆ ನಿಮ್ಮ ಮನೆಗೆ ಬಾಡಿಗೆ ಎಷ್ಟು?" ಎಂದು ಪ್ರಶ್ನಿಸಿದೆ.



ಅವರ ಮುಖ ಒಮ್ಮೆಲೇ ಇಳಿಯಿತು

ಅವರು "ಹೇಳೋಣಂತೆ ಅದಕ್ಕೇಕಿಷ್ಟು ಅವಸರ?" ಎಂದು ಅಟ್ಟಹಾಸದಿಂದ ನುಡಿದು, "ಅಂದಹಾಗೆ, Mr. . . ನಿಮ್ಮ ಮದುವೆ . . ?" ಎಂದು ತಡವರಿಸಿದರು.

ನನಗೆ ಒಮ್ಮೆಲೇ ಬೇಂದ್ರೆ ಲಕ್ಷ್ಮಣರಾಯರ 'ಮದುವೆಯ ಪತ್ತಲ' ನೆನಪಾಯಿತು. ನಾನು ಉತ್ಸಾಹದಿಂದಲೇ, "ಹೋ! ಮದುವೆಯೇಕೆ? ಮೂರು ಮಕ್ಕಳೂ ಆಗಿವೆ!" ಎಂದೆ,

ಆದರೆ, ಆಶ್ಚರ್ಯ! ಅವರ ಮುಖ ಒಮ್ಮೆಲೇ ಇಳಿಯಿತು. ಸಾವರಿಸಿಕೊಂಡ ಅವರು "ತಡೀರಿ ಒಂದು ಮಿನೀಟು. . ." ಎಂದು ಒಳಗೆ ಹೋಗಿ ಬಂದರು.

"Sorry. Extremely sorry. ನಿನ್ನೇ ನಮ್ಮ ಮನೆಯವರು ಮತ್ತೆ ಯಾರಿಗೋ ಪ್ರೊಮೀಜ್ ಮಾಡಿದ್ದಾರಂತೆ, ನನಗೆ ಗೊತ್ತೇ ಇರಲಿಲ್ಲ. ಸುಮ್ಮನೆ ನಿಮಗೆ . . ಹೆ ಹೇ. . ," ಎಂದರು.

ಈಗ ನನ್ನ ಮುಖ ಕಪ್ಪಿಟ್ಟಿತು. ಆದರೂ "ಹೀಗೇನು? ಇರ್ಲಿ ಬಿಡ್ರಿ." ಎಂದು ಹೇಳಿ ಹೊರಟು ಬಂದೆ. ನನಗೆ ನಂತರ ತಿಳಿಯಿತು! ಆ ಮಹಾಶಯರ ಮೂವತ್ತು ವರ್ಷದ ಮಗಳೊಬ್ಬಳು ಮದುವೆಗಾಗಿದ್ದಾಳೆ ಎಂದು! ನಾನು "ಲಕ್ಷ್ಮಣರಾಯರೇ, ನಿಮ್ಮ 'ಮದುವೆಯ ಪತ್ತಲ' ಒಂದು ಮುಖ ಮಾತ್ರ" ಎಂದು ಮನದಲ್ಲಿಯೇ ಅಂದುಕೊಂಡೆ!

ನನ್ನ ಆತ್ಮೀಯ ಮಿತ್ರರಾದ ಶ್ರೀಪತಿರಾಯರು ನನಗೆ ಮನೆ ಹುಡುಕಿ ಕೊಡಲು ಬಹಳೇ ಯತ್ನಿಸುತ್ತಿದ್ದರು. ನಾನು ಬಹುಶಃ ದಿನಾಲು ಸಾಯಂಕಾಲ ಅವರ ಕಡೆಗೆ ಹೋಗಿ ನನ್ನ ಅಂದಿನ Adventure ದ ವರದಿಯನ್ನು ಅವರಿಗೊಪ್ಪಿಸುತ್ತಿದ್ದೆ. ಸೋತು ನೊಂದ ನನಗೆ ಅವರು ಧೈರ್ಯ-ಸಮಾಧಾನ ಹೇಳುತ್ತಿದ್ದರು. ಅಂದು ನಾನು ಅವರ ಕಡೆಗೆ ಹೋದಾಗ ಅವರು ಒಳ್ಳೇ ಉತ್ಸಾಹದಲ್ಲಿದ್ದರು. ಅವರ ಮುಖವನ್ನು ನೋಡಿದ ಕೂಡಲೇ ಏನೋ ವಿಶೇಷ ಸಮಾಚಾರವಿದೆಯೆಂದು ನನಗನಿಸಿತು.

ಅದು ನಿಜವೇ ಆಗಿತ್ತು. ಅವರ ಮನೆಯಿಂದ ೪-೬ ಮನೆಗಳ ಅಂತರದಲ್ಲಿರುವ ಶ್ರೀಮಾನ್ ಒಬ್ಬರು ಮನೆ ಬಿಡಲಿದ್ದರು. ಅವರಿಗೆ ಬೇರೆ ಊರಿಗೆ ವರ್ಗವಾಗಿ ಆಗಲೇ ಆರು ತಿಂಗಳು ಕಳೆದಿತ್ತು. ಈಗ ಅವರು ಇಲ್ಲಿಯ ಬಿಡಾರವನ್ನು ತೆಗೆಯಲಿದ್ದರು. ಆ ಮನೆಯ ಮಾಲಕರೂ ಶ್ರೀಪತಿರಾಯರ ಪರಿಚಯದವರೇ ಆಗಿದ್ದರು. ಹೀಗಾಗಿ ಆ ಮನೆ ನನಗೆ ದೊರಕುವಲ್ಲಿ ಯಾವ ತೊಡಕೂ ಇರಲಿಲ್ಲ—ಮರುದಿನವೇ ನಾವಿಬ್ಬರೂ ಹೋಗಿ ಮನೆಯನ್ನು ನೋಡಿಕೊಂಡು ಬಂದೆವು. ಮೂರೇ ಕೋಣೆಗಳಿದ್ದರೂ ಮನೆ ಚನ್ನಾಗಿತ್ತು. ಶ್ರೀಮಾನ್ನರ ಶ್ರೀಮತಿಯವರು ತಾವು ಆ ವಾರಾಂತ್ಯವೇ ಮನೆ ತೆರವು ಮಾಡಲಿರುವುದಾಗಿ ಹೇಳಿ ಮನೆಯನ್ನೂ ಮನೆಯ ಮಾಲಕರನ್ನೂ ಬಾಯಿತುಂಬ ಹೊಗಳಿದರು. ಅವರು ೪೦ ರೂ. ಬಾಡಿಗೆ ಕೊಡುತ್ತಿದ್ದರು. ನಾನು ಬಹಳವಾದರೆ ೫೦ ರೂ. ಕೊಡಬೇಕಾಗುತ್ತಿತ್ತು. ನಾನು ಕೂಡಲೇ ಒಪ್ಪಿಕೊಂಡೆ. ಅದರಿಂದ ನನಗಿಂತ ಹೆಚ್ಚು ಸಮಾಧಾನ-ಸಂತಸ ಶ್ರೀಪತಿರಾಯರದು!

ನಾನು ಕೂಡಲೇ ಪತ್ರ ಬರೆದು ನನ್ನ ಸೌಭಾಗ್ಯವತಿಗೆ ಈ ಮಹಾಸಂತೋಷದ ವಾರ್ತೆಯನ್ನು ತಿಳಿಸಿದೆ. ಪಾಪ! ಮೂರು ಮಕ್ಕಳನ್ನು ಕಟ್ಟಿಕೊಂಡು ೫೦ ಮೈಲು ದೂರದ ಊರಲ್ಲಿ, ಸನಾಥೆಯಾಗಿದ್ದರೂ ಅನಾಥಳಂತೆ ದಿನಗಳನ್ನು ಕಳೆಯುತ್ತಿದ್ದ ಅವಳು ಆ ನನ್ನ ಪತ್ರ ನೋಡಿ ಅಕ್ಷರಶಃ ಕುಣಿದಾಡಿರಲಿಕ್ಕೆ ಸಾಕು!

ಮರುದಿನ ನಾನು ಆಫೀಸಿನಲ್ಲಿದ್ದಾಗ ನನಗೊಂದು ಫೋನು ಬಂತು. ನನಗೆ ಎರಡನೆಯ

preference ಕೊಟ್ಟಿದ್ದ ಆ ಮಾಲಕ ಮನೆ ನನಗೆ ಕೊಡುವುದಾಗಿಯೂ, ಬೇಕಾದರೆ ಕೂಡಲೇ ಹೋಗಿ ಕಾಣಬೇಕೆಂದೂ, ಕೇವಲ ಆರು ತಿಂಗಳ ಬಾಡಿಗೆ advance ಕೊಡಬೇಕೆಂದೂ ತಿಳಿಸಿದ.

ಬರುವ ಕಾಲಕ್ಕೆ "ಹಿರಿದು ಹೆದ್ದೊರೆಯೆ ಕೆರೆ ತುಂಬಿದಂತಯ್ಯ" ಎಂದು ಬಸವಣ್ಣನವರು ಹೇಳಿದ್ದು ತೀರ ಸರಿ ಎಂದೆನಿಸಿತು ನನಗೆ.

ನಾನು "No. Thanks" ಎಂದಿಷ್ಟೇ ನುಡಿದು ಫೋನನ್ನು ಅಪ್ಪಳಿಸಿದೆ!

ಅದರೆ ನನ್ನ ಲೆಕ್ಕ ಇಲ್ಲಿಯೂ ತಪ್ಪಿತು! ಆ ರವಿವಾರ ಶ್ರೀಮಾನ್ನರು ಮನೆ ಖಾಲಿ ಮಾಡಲಿಲ್ಲ. ಸೋಮವಾರ, ಮಂಗಳವಾರ, ಬುಧವಾರ ದಾಟಿ ಗುರುವಾರ ಬಂದರೂ ಮನೆ ಖಾಲಿಯಾಗಲಿಲ್ಲ. ಶುಕ್ರವಾರ ನಾನು ಮತ್ತೆ ಹೋಗಿ ವಿಚಾರಿಸಿದಾಗ ಮಿಸೆಸ್ ಶ್ರೀಮಾನ್ನರು "ನಮ್ಮ ಮನೆಯವರು ಇನ್ನೂ ಬಂದಿಲ್ಲ. ಆದರೂ ಅವರ ಪತ್ರ ಬಂದಿದೆ. ನಾಳೆ ಬರುತ್ತಾರಂತೆ" ಎಂದರು. ನಾನು ಮರುದಿನ ಹೋದಾಗ ಸುದೈವದಿಂದ ಶ್ರೀಮಾನ್ನರು ಬಂದಿದ್ದರು.

ಅವರು ನನ್ನ ವಿಚಾರವನ್ನೆಲ್ಲ ಕೇಳಿ, ಮನೆ ದೊರಕಿಸುವ ತಮ್ಮ ಅನುಭವವನ್ನು ಹೇಳಿ ಒಟ್ಟಿನಲ್ಲಿ housing problem ಕುರಿತು ಬೇಕಾದಷ್ಟು ಮಾತನಾಡಿ ಕೊನೆಗೆ, "ನನಗೆ ಅಲ್ಲಿ ಮನೆ ಸಿಕ್ಕರೂ ಏನೇನೂ ಉಪಯೋಗವಿಲ್ಲ. ಯೋಚಿಸಿ ಯೋಚಿಸಿ ಕೊನೆಗೆ ತಿರುಗಿ ಈ ಊರಿಗೇ ವರ್ಗ ಮಾಡಿಸಿಕೊಳ್ಳಬೇಕೆಂದು ನಾನು ನಿರ್ಧರಿಸಿದ್ದೇನೆ. ಈ ಊರಿಗೆ ವರ್ಗ ಮಾಡಿರಿ. ಅಲ್ಲಿಯ ವರೆಗೆ ರಜೆ ಕೊಡಿರಿ ಎಂದು ನಾನು ಸ್ಪಷ್ಟವಾಗಿ ಅರ್ಜಿ ಬರೆದೇ ಬಂದಿದ್ದೆ......"

ಅವರು ಮಧ್ಯದಲ್ಲಿಯೇ ತಡೆದರು, ಬಹುಶಃ ನನ್ನ ಮುಖಭಾವದಲ್ಲಿಯ ಬದಲಾವಣೆಯನ್ನು ಗಮನಿಸಿದರೋ ಏನೋ!

"Very very sorry, young man. ನಿಮಗೆ ನಾವು ಸುಳ್ಳೇ ಆಸೆ ಹಚ್ಚಿ ಕಾಯಿಸಿದಂತಾಯಿತು" ಎಂದು ನನ್ನ ಕ್ಷಮಾಪಣೆಯನ್ನು ಕೇಳಿದರು. ಅಷ್ಟರಲ್ಲಿ ಅವರ ಮಗಳು ಚಹ ತಂದಳು. "ಒಲ್ಲೆ" ಎಂದು ಹೇಳಲಾರದೆ ಕುಡಿದೆ. ಚಹಕ್ಕೆ ಸಕ್ಕರೆಯನ್ನು ಹಾಕಲು ಮರೆತಿದ್ದರೆಂದು ನನಗಂತೂ ಅನಿಸಿತು!

ದಾರಿಯಲ್ಲಿ ಬರುವಾಗ "ನಾನೂ ಶ್ರೀಮಾನ್ನರಂತೆ ತಿರುಗಿ ವರ್ಗ ಮಾಡಿಸಿಕೊಳ್ಳಲು ಸಾಧ್ಯವಿದ್ದರೆ ಎಷ್ಟು ಚೆನ್ನಾಗಿತ್ತು!" ಎಂಬ ವಿಚಾರವೇ ನನ್ನ ತಲೆಯಲ್ಲಿ ಸುಳಿಯುತ್ತಿತ್ತು.

ಆದರೆ ಮುಂದೆ ಮೂರನೇ ದಿನವೇ ನನ್ನ ದೈವ ತೆರೆಯುವಂತೆ ಕಂಡಿತು. ನನ್ನ ಆಫೀಸಿನ ಸ್ನೇಹಿತರೊಬ್ಬರು ಒಂದು ಮನೆಯ ಸಮಾಚಾರ ತಿಳಿಸಿ ಮಾಲಕನ ಕಡೆಗೆ ಕರೆದೊಯ್ದರು. ಆ ಮನೆಯೂ ಒಂದನೆಯ ತಾರೀಖು ತೆರವಾಗಲಿದ್ದಿತು. ನನಗೇಕೋ ಸಂದೇಹ. ಮಾಲಕ ಮಾತ್ರ ಸಜ್ಜನನಾಗಿಯೇ ಕಂಡ.

"ನೋಡ್ರಿ ರಾಯರೇ, ಮೊದಲು ಮನೆ ನೋಡಿರಿ. ಬೇಕಾದರೆ ಮಾತಾಡೋಣ" ಎಂದ.

"ಮನೆಯನ್ನು ನೋಡೋಣಂತೆ ಆಮೇಲೆ. ನನಗೆ ನೀವು ಕೊಡುತ್ತೀರಾ ಅಥವಾ ಇನ್ನು ಯಾರಿಗಾದರೂ ಮಾತು ಕೊಟ್ಟಿದ್ದೀರಾ?" ಎಂದೆ.

"ಹಾಗೆ ಅನೇಕರು ಬಂದು ಹೋಗಿದ್ದಾರೆ. ನಿಮಗೆ ಮನೆ ಬೇಕಾದರೆ ನೀವು ಈಗಲೇ ಹೇಳಬೇಕು, ಮನೆಗೆ ಈಗ ೪೦ ರೂ. ಬಾಡಿಗೆ ಇದೆ. ನೀವು ೪೫ ರೂ. ಕೊಡಬೇಕಾಗುತ್ತದೆ. ೫೦ ರೂ. ಕೊಡುತ್ತೇನೆ ಎಂದೂ ಒಬ್ಬಿಬ್ಬರು ಕೇಳಿದ್ದಾರೆ. ಆದರೆ ನಮಗೆ ಸಜ್ಜನರು ಬೇಕು." ಎಂದ ಆಢ್ಯತೆಯಿಂದ.

( ನಾನು ಸಜ್ಜನನೆಂದವನೆಂತು ತಿಳಿದನೊ! )

ನಾನು "ಆಗಲಿ. ಆದರೆ ನನಗೆ ನಿಶ್ಚಿತವಾಗಿಯೂ ಕೊಡುತ್ತೀರಾ?" ಎಂದು ಮತ್ತೆ ಕೇಳಿದೆ.

"ಸಂಶಯಕ್ಕೆ ಆಸ್ಪದ ಯಾಕೆ ಕೊಡಬೇಕು? ನೀವು ಈಗಲೇ ಒಂದು ತಿಂಗಳ ಬಾಡಿಗೆ ಕೊಟ್ಟು ಬಿಡಿರಿ. ಅಂದರೆ ನೀವು ನಮ್ಮ ಕೈಯಲ್ಲಿ ಸಿಕ್ಕಂತಾಯಿತು. ನಾವು ನಿಮ್ಮ ಕೈಯಲ್ಲಿ ಸಿಕ್ಕಂತಾಯಿತು. ಅಲ್ಲವೇ?"

ಆತನ ಈ ಮಾತಿಗೆ ನಾನು ತಲೆದೂಗಲೇ ಬೇಕಾಯಿತು. ಆದರೆ ಜೇಬಿನಲ್ಲಿ ೪೫ ರೂ. ಎಲ್ಲಿಂದ ಬರಬೇಕು? ಸಾಯಂಕಾಲ ಹಣ ತಂದು ಕೊಡುವುದಾಗಿ ತಿಳಿಸಿ ಬಂದೆವು.

"ಆ ಮನೆ ಇಲ್ಲಿಯೇ ಸಮೀಪ ಇದೆ. ನೋಡುತ್ತೀರಾ?" ಎಂದರು ನನ್ನ ಮಿತ್ರರು. ನಾನು "ನೋಡಿ ಏನು ಮಾಡುವದು? ನೀವು ನೋಡಿದ್ದೀರಲ್ಲ? ಅಷ್ಟೇ ಸಾಕು." ಎಂದೆ. ಅವರೂ ಸರಿಯಾಗಿ ನೋಡಿದ್ದಿಲ್ಲವಂತೆ. ಅವರು ನನ್ನನ್ನು ಆ ಮನೆ ತೋರಿಸಲು ಕರೆದೊಯ್ದರು.

ಅಯ್ಯೋ! ಅದೊಂದು ಮನೆಯೆ? ೬ ಫೂಟು ಅಗಲ ೧೫ ಫೂಟು ಉದ್ದ; ಅದರಲ್ಲಿಯೇ ಪಡಸಾಲೆ ನಡುಮನೆ, ಅಡಿಗೆಮನೆ, ಬಚ್ಚಲುಮನೆ, ಎಲ್ಲ! ನಿಂತರೆ ಮೇಲೆ ತಲೆಗೆ ಬಡಿಯುವಂಥ ತಗಡಿನ ಛಪ್ಪರ! ಬದಿಯಲ್ಲಿಯೇ ಇದ್ದ ತಿಪ್ಪೆಯಿಂದ ಬರುವ ಗೊಬ್ಬರ ಎಂಬ ನಾತ!!

"ರಾಮ, ರಾಮ! ಇಂಥಾ ಮನೆಯಲ್ಲಿರುವದಕ್ಕಿಂತ care of foot path ಇರುವದೇ ಲೇಸು!" ಎಂದೆ ನನ್ನ ಗೆಳೆಯರಿಗೆ!

*

ಅಂತೂ ಕೈಗೆ ಬಂದ ತುತ್ತನ್ನು ಬಾಯಿಗೆ ಹಾಕದೆ ನಾನೇ ಬಿಟ್ಟಂತಾಯಿತು. ಹಾಗಾದರೆ ನಾನಿನ್ನೂ care of foot path ಏ ಎಂದು ನೀವು ತಿಳಿದಿರಬಹುದು. ಆದರೆ ಹಾಗೆ ಆಗಲಿಲ್ಲ.

ಶ್ರೀಪತಿರಾಯರು ತಮ್ಮ ಮಿತ್ರರೊಬ್ಬರಿಂದ ಕೊಡಿಸಿದ್ದಾರೆ— ಒಂದು ತಾತ್ಪೂರ್ತಿಕ ಮನೆಯನ್ನು. ಒಂದು ವರ್ಷ ಯಾವುದೋ ಟ್ರೇನಿಂಗಿಗಾಗಿ ಹೋಗಲಿದ್ದ ಅವರು ಮನೆಬಿಟ್ಟು ಹೋದರೆ ಮತ್ತೆ ಸಿಗುವದಿಲ್ಲವೆಂದು ತಾವೇ ಇಟ್ಟುಕೊಂಡು ಹೋಗುವವರಿದ್ದರು. ಅವರು ತಿರುಗಿ ಬಂದ ಕೂಡಲೇ ಖಾಲಿ ಮಾಡಿ ಕೊಡುವ ಕರಾರಿನಿಂದ ಶ್ರೀಪತಿರಾಯರು ನನಗೆ ಮನೆಯನ್ನು ಕೊಡಿಸಿ ಪುಣ್ಯ ಕಟ್ಟಿಕೊಂಡರು.

ಅಂತೂ ನನಗೆ ಮನೆ ಸಿಕ್ಕಿತು- ಸಹಕುಟುಂಬ ಸಹಪರಿವಾರ ಬಂದು ಈ "ತೀನ ಮೂರ್ತಿ ಭವನ" ದಲ್ಲಿ ನೆಲೆಸಿದ್ದೇನೆ. ಏಳು ಕೋಣೆಗಳು, ಗಾಳಿ-ಬೆಳಕು-ನೀರು ಎಲ್ಲಾ ಸಮೃದ್ಧ. ಕೇವಲ ಮೂವತ್ತೈದು ರೂಪಾಯಿಗೆ ಇಂಥ ಮನೆ ಹತ್ತು ಜನ್ಮ ಹುಡುಕಿದ್ದರೂ ನನಗೆ ಸಿಗುತ್ತಿರಲಿಲ್ಲ!

ಹಾಗಾದರೆ ನಾನೀಗ ಪೂರ್ಣಸುಖಿ ಎಂದು ನೀವು ಭಾವಿಸಿದ್ದರೆ ಅದು ಶುದ್ಧ ತಪ್ಪು. ಇನ್ನು ಮೂರು ತಿಂಗಳ ನಂತರ ಈ ಮನೆಯನ್ನು ಬಿಡಬೇಕಲ್ಲ? ಹೇಗೆ ಬಿಡಲಿ? ಎಂಬ ಕೊರಗು ನನ್ನ ತಲೆ ತಿನ್ನುತ್ತಲಿದೆ ಸದಾಕಾಲವೂ! ಹೀಗಾಗಿ ಇಂಥ ದಿವ್ಯಮನೆಯಲ್ಲಿದ್ದೂ ಅದರ ಸುಖ ಸವಿಯಲಾರೆ.

ಈ ಚಿಂತೆಯನ್ನು ಹೊತ್ತುಕೊಂಡು ನಾನು ಮನೆಯ ಮುಂದಿನ ಕೈತೋಟದಲ್ಲಿ ಸಾಯಂಕಾಲ ಕುಳಿತು ನಿಟ್ಟುಸಿರು ಬಿಡುತ್ತಿರುವಾಗ, ತಟ್ಟನೆ ಒಂದು ಯೋಜನೆ ಹೊಳೆಯುತ್ತದೆ—

"ಯಾವುದು ಶಾಶ್ವತ ಈ ಲೋಕದಲ್ಲಿ? ಎಲ್ಲವೂ ಮಿತಿಯನ್ನು ಉಳ್ಳದ್ದೇ ಅಲ್ಲವೆ? ಈ "ನಾನು" ಎಂಬುದೇ ಒಂದು "ಬಾಡಿಗೆಮನೆ" ಯಲ್ಲವೇ?...ಇದನ್ನೂ ತ್ಯಜಿಸಿ ಹೋಗಲೇ ಬೇಕಲ್ಲವೇ? ಹಾಗೆ ಹೊರಟಾಗಲಾದರೂ ನಾವು ಇಷ್ಟು ವಿಚಾರ ಮಾಡುತ್ತೇವೆಯೋ? ......ಇರುವಷ್ಟು ಕಾಲ ಸುಖದಿಂದಿರಲು ಯತ್ನಿಸಬಾರದೇಕೆ?"

ತಂಗಾಳಿ ಹಿತವಾಗಿ ಬೀಸುತ್ತದೆ. ಮೆಲ್ಲಗೆ ತಲೆ ಎತ್ತುತ್ತೇನೆ. ಎದುರಿಗೆ ದೂರದ ಬಾನಂಚಿನಲ್ಲಿ ಅಸ್ತವಾಗಲಿರುವ ಕೆಂಪು ಸೂರ್ಯ ರಂಗುರಂಗಾಗಿ ವಿರಾಜಿಸುತ್ತಿದ್ದಾನೆ!



"ಅಯ್ಯೋ! ಅದೊಂದು ಮನೆಯು?"

ಶಂ. ಬಾ. ಮನಗೂಳಿ
ಹುಬ್ಬಳ್ಳಿ

# ಭ್ರಷ್ಟಾಚಾರ ನಿರ್ಮೂಲನ

ಇಂದು ಎಲ್ಲೆಲ್ಲಿಯಯೂ ಭ್ರಷ್ಟಾಚಾರದ ಮಾತು ಕೇಳಿ ಬರುತ್ತಿದೆ ಅದನ್ನು ನಿರ್ಮೂಲನ ಮಾಡುವ ಹಲವಾರು ಕ್ರಮಗಳ ವಿಷಯವೂ ತಿಳಿದುಬರುತ್ತಿದೆ, ಆದರೆ ಪತ್ರಿಕಾವರದಿಗಾರನೊಬ್ಬ ತನ್ನದೇ ಆದ ರೀತಿಯಲ್ಲಿ ಅದಕ್ಕೊಂದು ಪರಿಹಾರವನ್ನು ಸೂಚಿಸಿದ್ದಾನೆ. ಅದನ್ನರಿಯಲು ನೀವು ಈ ಲೇಖವನ್ನು ಓದಬೇಕು.

ಅನೇಕ ದಿನಗಳಿಂದ ದೇಶದ ತುಂಬೆಲ್ಲ ಭ್ರಷ್ಟಾಚಾರದ ಸುದ್ದಿಯೇ ಸುದ್ದಿ. ಪತ್ರಿಕೆಗಳಲ್ಲಿ,ಬಾನುಲಿಯಲ್ಲಿ, ರೈಲು ಪ್ರವಾಸದಲ್ಲಿ, ಉಪಹಾರಗೃಹಗಳಲ್ಲಿ ಎಲ್ಲೆಲ್ಲಿಯೂ ಇದೇ ಸುದ್ದಿಯೇ ಸುದ್ದಿ.

ಎಲ್ಲಿ ನೋಡಿದಲ್ಲಿ ಇದೇ ಸುದ್ದಿಯೇ ಸುದ್ದಿ ! ಇಂದು ಈ ರಾಜ್ಯದ ಮಂತ್ರಿಮಂಡಳದ ಮೇಲೆ ಭ್ರಷ್ಟಾಚಾರದ ಆರೋಪದ ಸುದ್ದಿ ಬಂದಿದ್ದರೆ ಬೆಳಗಾಗುವಷ್ಟರಲ್ಲಿ ಮತ್ತೊಂದು ರಾಜ್ಯದ ಮುಖ್ಯ ಮಂತ್ರಿಗಳ ಮೇಲೆ ಈ ಭ್ರಷ್ಟಾಚಾರದ ಶನಿದೃಷ್ಟಿ ಬಿದ್ದ ಸುದ್ದಿ!! ಹೀಗಾಗಿ ದೇಶದ ಮೂಲೆ ಮೂಲೆಗಳಲ್ಲಿ, ಸಂದಿಗೊಂದಿಗಳಲ್ಲಿ ಈ ಭ್ರಷ್ಟಾಚಾರದ ವಾರ್ತೆ ಗಾಳಿಯಂತೆ ಸರ್ವಾಂತರ್ಯಾಮಿಯಾಗಿ ವ್ಯಾಪಿಸಿಬಿಟ್ಟಿತ್ತು. ಅದರ ಸಹಜ ಪರಿಣಾಮ ತಲೆ ಇದ್ದ ಎಲ್ಲರಿಗೂ ಆಗುವದೇ.

ಇಂಥ ಮನಃಸ್ಥಿತಿಯಲ್ಲಿದ್ದಾಗ ನಮ್ಮ ಸಂಪಾದಕರಿಂದ ನನಗೆ ಕರೆ ಬಂತು. ಸಂಪಾದಕರ ಮೇಜಿನ ಮುಂದೆ ಹೋಗಿ ನಿಂತೆ.'ಇಂದು ಪೇಟೆಯ ಬಯಲಿನಲ್ಲಿ ರಾತ್ರಿ ೧೦ ಗಂಟೆಗೆ ಸಾರ್ವಜನಿಕ ಸಭೆ ಇದೆ. ಮಂತ್ರಿಮಂಡಳದ ಮೇಲೆ ಕೆಲವರು ಭ್ರಷ್ಟಾಚಾರದ ಆರೋಪ ಹೊರಿಸಿದ್ದು ಸರಿಯೋ-ತಪ್ಪೋ ಎಂಬ ವಿಷಯದ ಮೇಲೆ ಭಾಷಣಗಳಾಗಲಿವೆ. ಅಲ್ಲಿಗೆ ನೀನು ಹೋಗಿ ಕೊನೆಯ ಮುದ್ರಣಕ್ಕೆ ವರದಿಯನ್ನು ಬರೆದುಕೊಡು' ಎಂದು ಸಂಪಾದಕರ ಆಜ್ಞೆ ಬಂತು.

ಅಂದೇ ಸಂಜೆಗೆ ಧರ್ಮೋ ರಕ್ಷತಿ ರಕ್ಷಿತಃ ಎಂಬ ವಿಷಯದ ಮೇಲೆ ಪಂಡಿತ ಶಿರೋಮಣಿಗಳೊಬ್ಬರ ಪ್ರವಚನಕ್ಕೆ ಹೋಗಲೇಬೇಕೆಂದು ಮುಂಚಿತವಾಗಿಯೇ ನನಗೆ ಸೂಚನೆ ಬಂದಿತ್ತು. ಇವೆರಡಕ್ಕಿಂತಲೂ ಮಹತ್ವದ್ದಾದ ಮಂತ್ರಿಗಳ ಪತ್ರಿಕಾಪರಿಷತ್ತೊಂದು ರಾತ್ರಿ ಎಂಟು ಗಂಟೆಗೆ ಕೂಡುವುದಿತ್ತು. ಅಲ್ಲಿ ಮಂತ್ರಿವರ್ಯರು ದೇಶದಲ್ಲಿ ಭ್ರಷ್ಟಾಚಾರ ನಿರ್ಮೂಲನಕ್ಕಾಗಿ ಸರಕಾರವು ಕೈಕೊಂಡ ಕ್ರಮಗಳ ವಿವರಣೆಯನ್ನು ನೀಡುವವರಿದ್ದರು. ಪತ್ರಿಕಾಪರಿಷತ್ತು ಮುಗಿದನಂತರ ಸ್ಥಾನಿಕ ಚಕ್ರಕೂಟದವರು ಮಂತ್ರಿಗಳಿಗೆ ಭೋಜನಕೂಟವನ್ನೇರ್ಪಡಿಸಿದ್ದರಿಂದ ಆ ಕಾರ್ಯಕ್ರಮವನ್ನೂ ತಪ್ಪಿಸುವಂತಿದ್ದಿಲ್ಲ. ಹೀಗಾಗಿ ಇಡೀ ದಿನವೇ ಅಂದು ನನಗೆ ಎಡೆಯಿಲ್ಲದ ಗಡಿಬಿಡಿಯ ದಿನವಾಗಿತ್ತು.

೦ ೦ ೦

ಸಂಜೆಗೆ ಕೂಡಿದ ಸಭೆಯಲ್ಲಿ ಪಂಡಿತ ಶಿರೋಮಣಿಗಳು ಧರ್ಮೋ ರಕ್ಷತಿ ರಕ್ಷಿತ: ಎಂಬ ವಿಷಯದ ಮೇಲೆ ಪಾಂಡಿತ್ಯಪೂರ್ಣ ಪ್ರವಚನ ಮಾಡಿದರು. ತಮ್ಮ ಭಾಷಣದುದ್ದಕ್ಕೂ ವೇದ, ಉಪನಿಷತ್ತುಗಳನ್ನು ನಿರರ್ಗಳವಾಗಿ ಉದಾಹರಿಸಿದರು. ಧರ್ಮಬಾಹಿರ ವರ್ತನೆಯಿಂದ ದೇವತೆಗಳೂ ಕೂಡ ಕಷ್ಟಪಡಬೇಕಾಯಿತೆಂದೂ ಇಂದ್ರನಂಥ ಇಂದ್ರನೂ ಕೂಡ ತನ್ನ ಆಧಿಪತ್ಯವನ್ನು ಕಳೆದುಕೊಳ್ಳಬೇಕಾಯಿತೆಂದೂ ನಹುಷನಂಥ ಪುಣ್ಯಪುರುಷನು ತನ್ನ ಪುಣ್ಯಬಲದಿಂದ ದೇವೇಂದ್ರನ ಸ್ಥಾನವನ್ನು ಸಂಪಾದಿಸಿದರೂ ಆ ಅಧಿಕಾರಸ್ಥಾನಕ್ಕೆ ಬಂದಮೇಲೆ ಮದೋನ್ಮತ್ತನಾಗಿ ತನ್ನ ಪುಣ್ಯಸಂಚಯಕ್ಕೆ ಕಾರಣೀಭೂತರಾದ ಸಪ್ತರ್ಷಿಗಳು ತನ್ನ ಮೇಣೆಯನ್ನು ಹೊರುವಂತೆ ಮಾಡಿ ಸ್ಥಾನಭ್ರಷ್ಟನಾದುದನ್ನೂ ರಸವತ್ತಾಗಿ ವರ್ಣಿಸಿ, ಪ್ರತಿಯೊಬ್ಬನಿಗೂ ಧರ್ಮವೇ ಮುಖ್ಯ, ಧರ್ಮಾಚರಣೆಯೇ ತಾರಕವೆಂದು ಪ್ರತಿಪಾದಿಸಿದರು.

೦ ೦ ೦

ಪೇಟೆಯಲ್ಲಿ ನಡೆದ ಸಾರ್ವಜನಿಕ ಸಭೆಯಲ್ಲಿ ಮಂತ್ರಿಮಂಡಲದವರು ಅಧಿಕಾರಾರೂಢರಾದ ಕೂಡಲೆ ತಮ್ಮ ಆಪ್ತಮಿತ್ರರಿಗೂ ಚುನಾವಣಿಯಲ್ಲಿ ತಾವು ಆರಿಸಿ ಬರಲಿಕ್ಕೆ ಸಹಾಯ ಮಾಡಿದವರಿಗೂ ತಮ್ಮ ಅಣ್ಣತಮ್ಮಂದಿರಿಗೂ ಬಂಧುಬಳಗದವರಿಗೂ ತಮ್ಮ ಜಾತಿಕೋತಿಗಳವರಿಗೂ ವಿವಿಧ ರೀತಿಯಲ್ಲಿ ಅಕ್ರಮವಾಗಿ ಅನ್ಯಾಯವಾಗಿ ವರ್ತಿಸಿ ಹೇರಳ ಹಣವನ್ನೂ ಭೂಮಿಸೀಮೆಗಳನ್ನೂ ಗಳಿಸಿರುವರೆಂದೂ ಅವುಗಳನ್ನು ತಮ್ಮ ವಿಶ್ವಾಸಿಕರಾದ ಅನ್ಯರ ಹೆಸರಿನಲ್ಲಿ ಮಾಡಿರುವರೆಂದೂ ಆರೋಪಿಸಿ, ಇವೆಲ್ಲ ಅಕ್ರಮಗಳ ಅನ್ಯಾಯಗಳ ಬಹಿರಂಗ ವಿಚಾರಣೆಯಾಗಬೇಕೆಂದೂ ತಪ್ಪಿತಸ್ಥರೆಂದು ತೀರ್ಮಾನಿಸಲ್ಪಟ್ಟ ಅಂಥ ಮಂತ್ರಿಗಳನ್ನೂ ಅವರಿಗೆ ನೆರವಾದ ಅಧಿಕಾರಿಗಳನ್ನೂ ಸ್ಥಾನಭ್ರಷ್ಟರನ್ನಾಗಿ ಮಾಡಿ ಅವರಿಗೆ ತಕ್ಕಶಾಸನ ಮಾಡಬೇಕೆಂದು ಪ್ರತಿಪಾದಿಸಿದರು.

೦ ೦ ೦

ಮಂತ್ರಿವರ್ಯರು ಕರೆದ ಪತ್ರಿಕಾಪರಿಷತ್ತಿನಲ್ಲಿ ದೇಶದಲ್ಲಿ ನಡೆದ ಭ್ರಷ್ಟಾಚಾರ, ಕಳ್ಳಸಂತೆ, ಅಧಿಕಾರದ ದುರುಪಯೋಗ ಇವೇ ಮೊದಲಾದ ವಿಷಯಗಳನ್ನು ಪ್ರಸ್ತಾಪಿಸಿ ದೇಶವು ಸುಭದ್ರವಾಗಬೇಕಾದರೆ, ಸಂಪದ್ಭರಿತವಾಗಬೇಕಾದರೆ, ಜನತೆ ಸುಖದಿಂದ, ನೆಮ್ಮದಿಯಿಂದ, ಜೀವನ ಸಾಗಿಸಬೇಕಾದರೆ ಜನಜೀವನದಲ್ಲಿ ಹಾಸುಹೊಕ್ಕಾಗಿ ನುಸುಳಿಕೊಂಡಿರುವ ಭ್ರಷ್ಟಾಚಾರ, ಅನಾಚಾರ, ಅತ್ಯಾಚಾರಗಳ ಉಚ್ಚಾಟನವಾಗಬೇಕೆಂದು ಕೇಳಿಕೊಂಡರು. ಮತ್ತು ಈ ದಿಶೆಯಲ್ಲಿ ಸರಕಾರವು ಕೈಕೊಂಡ ಕ್ರಮಗಳನ್ನು ವಿವರಿಸುತ್ತ ಜನತೆಯು ಈ ಮಹತ್ಕಾರ್ಯದಲ್ಲಿ ಸರಕಾರದೊಂದಿಗೆ ಸಹಕರಿಸಬೇಕೆಂದೂ ಭ್ರಷ್ಟಾಚಾರ, ಅನಾಚಾರಗಳನ್ನೂ ಲಂಚಗುಳಿತನ, ಅಂಜುಗುಳಿತನ, ಅತಿಬುರುಕುತನ, ಪಕ್ಷಪಾತ ಜಾತಿಹಿತಸಂವರ್ಧನೆಗಳನ್ನೂ ಬಯಲಿಗೆಳೆದು ಸರಕಾರಕ್ಕೆ ತಿಳಿಸಬೇಕೆಂದೂ ಕೇಳಿಕೊಂಡರು.

ಪತ್ರಿಕಾಕರ್ತರೊಬ್ಬರ ಪ್ರಶ್ನೆಗಳಿಗೆ ಉತ್ತರಿಸುತ್ತ ತಪ್ಪಿತಸ್ಥರು ಯಾರೇ ಇದ್ದರೂ ಅವರ ಮೇಲೆ ಉಗ್ರಕ್ರಮ ಕೈಕೊಳ್ಳುವ ಭರವಸೆ ಇತ್ತರು.

ಮತ್ತೊಬ್ಬ ಪತ್ರಿಕಾಕರ್ತರು "ನೀವು ಈ ರೀತಿ ಆಶ್ವಾಸನವನ್ನೇನೋ ಕೊಟ್ಟಿರಿ. ಆದರೆ ಭ್ರಷ್ಟಾಚಾರ್ಯರೂ ಅನಾಚಾರ್ಯರೂ ಅಷ್ಟೇ ಪ್ರಬಲರಾಗಿದ್ದರೆ ಅವರ ಮೇಲೆ ಕ್ರಮ ಕೈಕೊಳ್ಳುವುದು ಕಠಿಣವಲ್ಲವೆ ?" ಎಂದು ಕೇಳಿದ್ದಕ್ಕೆ "ಅಂತಹ ಪ್ರಸಂಗ ಬಂದಾಗ ನಾವೇನು ಮಾಡುವೆವೆಂಬುದನ್ನು ನೀವೇ ನೋಡುವಿರಿ" ಎಂದು ಸಂದಿಗ್ಧವಾಗಿ ಉತ್ತರಿಸಿದರು.

ಚಕ್ರಕೂಟದ ಮೇಲ್ಗಣ್ಣ ( ಅಧ್ಯಕ್ಷ ) ರು ಮಂತ್ರಿಗಳ ಆಭಾರ ಮನ್ನಿಸಿದ ನಂತರ ಭೋಜನಕೂಟದೊಂದಿಗೆ ಪರಿಷತ್ತು ಕೊನೆಗಂಡಿತು.

೦ ೦ ೦

ಈ ಎಲ್ಲ ಕಾರ್ಯಕ್ರಮಗಳನ್ನು ಮುಗಿಸಿಕೊಂಡು ಮಧ್ಯರಾತ್ರಿಗೆ ನಮ್ಮ ಕಚೇರಿಗೆ ಬಂದು ನನ್ನ ಕುರ್ಚಿಯಲ್ಲಿ ಉಸ್ಸೆಂದು ಕುಳಿತೆ. ಮೂರೂ ಸಭೆಗಳ ವೃತ್ತಾಂತವನ್ನು ಬರೆಯುವದಿತ್ತು. ರಾತ್ರಿ ಪಾಳಿಯ ಉಪಸಂಪಾದಕರು ನನಗಾಗಿ ಎರಡು ಕಾಲಂ ಸ್ಥಳವನ್ನು ಕಾಯ್ದಿರಿಸಿದುದಾಗಿ ಹೇಳಿದರು. ಆದರೆ ಅದು ವೇಳೆಗೆ ದೊರೆಯದಿದ್ದರೆ ಸರಕಾರದ ಪ್ರಕಟನೆಯೊಂದನ್ನೂ ಸಿನಿಮಾದ ಜಾಹೀರಾತೊಂದನ್ನೂ ಹಾಕಿ ಆ ಪುಟವನ್ನು ಮುಗಿಸುವದಾಗಿ ಎಚ್ಚರಿಕೆಯನ್ನು ಕೊಟ್ಟರು.



ನಾನು ಬರೆಯುವದಕ್ಕೆ ಪ್ರಾರಂಭಮಾಡಿದೆ. ಒಂದು ಪಟ್ಟಿಯಾಯಿತು ಎರಡು ಪಟ್ಟಿಗಳಾದವು ನಾಲ್ಕಾದವು. ಎಂಟಾದವು. ಇನ್ನೂ ಬರೆಯುವದು ಹಾಗೇ ಮುಂದೆ ಸಾಗಿತು. ಭೋಜನ ಕೂಟದಲ್ಲಿ ಊಟವು ಹೆಚ್ಚಾದುದರಿಂದಲೋ ಅಥವಾ ಮೂರು ಸಭೆಗಳಲ್ಲಿಯ ವಿಚಾರಗಳು ಒಮ್ಮೆಲೇ ನುಸುಳಿಕೊಂಡು ಮುನ್ನುಗ್ಗುತ್ತ ಬಂದುದರಿಂದಲೋ ಕಣ್ಣಿಗೆ ಮಂಪರು ಬಂದಂತಾಯಿತು. ಆದರೆ ಅಭ್ಯಾಸಬಲದಿಂದ ನನ್ನ ಬರೆವಣಿಗೆಯು ಅವಿಚ್ಛಿನ್ನವಾಗಿ ಹಾಗೇ ಮುಂದೆ ಸಾಗಿತು. ಉಪಸಂಪಾದಕರು ೨-೩ ಬಾರಿ ಬರೆಯುವದು ಆಯಿತೇನು? ಎಂದು ಕೇಳಿದರೂ ನಾನು ಮುಗಿಸಿ ಕೊಡುವವರೆಗೆ ನನ್ನನ್ನು ಮಾತಾಡಿಸಬೇಡಿರೆಂದು ನಾನು ನಿಷ್ಠುರವಾಗಿ ಹೇಳಿದ್ದರಿಂದ ಅವರು ನನ್ನ ಗೋಜಿಗೆ ಹೋಗದೆ ತಮ್ಮ ಹತ್ತರವಿದ್ದ ವಿಷಯವನ್ನು ಕಂಪೋಜಿಟರರಿಗೆ ಕೊಟ್ಟು ಕೊನೆಯ ಮುದ್ರಣದ ಏರ್ಪಾಟುಮಾಡಿದರು.

ನನ್ನ ಬರವಣಿಗೆ ಯಥಾಪ್ರಕಾರ ನಡೆದೇ ಇತ್ತು. ನಾನು ಎಲ್ಲಿ ಕುಳಿತಿದ್ದೆ? ಏನು ಮಾಡುತ್ತಿದ್ದೆನೆಂಬ ಕಲ್ಪನೆಯು ಕೂಡ ನನಗಿಲ್ಲದೆ ಪರಮಾತ್ಮನ ಚರಣಾರವಿಂದಗಳಲ್ಲಿ ಲೀನನಾಗಿ ದೇಹಭಾನವನ್ನು ಮರೆತು ಬಿಡುವ ಯೋಗಿಯಂತೆ ನಾನು ನನ್ನನ್ನೇ ಮರೆತು ನನ್ನ ವರದಿಗಳನ್ನು ಬರೆಯುತ್ತ ಸಾಗಿದೆ. ಬರೆದೆ, ಬರೆದೆ, ಬರೆದೇ ಬರೆದೆ. ಆ ನನ್ನ ಬರೆವಣಿಗೆ ಯಾವಾಗ ಮುಗಿಯಿತೋ ನಾನು ಹೇಳಲಾರೆ.

o o o

ಮುಂಜಾವಿನ ೯ ಗಂಟೆಯ ಸಮಯಕ್ಕೆ ಸಂಪಾದಕರು ನಮ್ಮ ವಿಭಾಗದಲ್ಲಿ ಬಂದು ನನ್ನನ್ನು ಕೂಗಿ ಕರೆದಾಗಲೇ ನನಗೆ ಎಚ್ಚರ, ಕಣ್ಣು ತೆರೆದು ಸುತ್ತಲೂ ನೋಡಿದೆ. ನನ್ನ ಸುತ್ತುಮುತ್ತು ನಾನು ಬರೆದ ವರದಿಗಳ ಪಟ್ಟಿಯ ರಾಶಿ ಬಿದ್ದಿತ್ತು.

ಅಂದು ಅದೇ ಹೊರಬಂದ ಪತ್ರಿಕೆಯನ್ನು ಸಂಪಾದಕರು ತರಿಸಿ ನೋಡಿ ನನ್ನ ವರದಿಯೇಕೆ ಪ್ರಕಟವಾಗಲಿಲ್ಲವೆಂದು ಕೇಳಲು ನನ್ನನ್ನು ಅವರು ಕೂಗಿ ಕರೆದದ್ದು.

'ವರದಿಯನ್ನೇನೋ ಬರೆದೆ. ಆದರೆ ಅದೇಕೆ ಪತ್ರಿಕೆಯಲ್ಲಿ ಬರಲಿಲ್ಲವೋ ತಿಳಿಯದು" ಎಂದು ಉತ್ತರಿಸಿದೆ.

'' ನಿನಗೆ ನಾನು ನಿನ್ನಿನ ಸಭೆಯ ವೃತ್ತಾಂತವನ್ನು ಬರೆದು ಇಂದಿನ ಸಂಚಿಕೆಯಲ್ಲಿ ಹಾಕಲು ಹೇಳಿದ್ದೆ. ನೀನು ಬರೀ ಭೋಜನ ಕೂಟಗಳಲ್ಲಿ ಮೇಯ್ದು ಮನಬಂದಂತೆ ತಿರುಗತೊಡಗಿರುವೆ. ನಿನ್ನ ಮೇಲೆ ಕ್ರಮತೆಗೆದುಕೊಳ್ಳಬೇಕು. ಇಲ್ಲದೆ ಹೋದರೆ ಕಚೇರಿಯಲ್ಲಿ ಶಿಸ್ತೇ ಇಲ್ಲದಂತಾಗುವದು.'' ಎಂದು ಆರ್ಭಟಿಸಿದರು ಸಂಪಾದಕರು.

ನಾನು ನಡುಗುತ್ತ ಅವರೆದುರು ನಿಂತೆ.

''ಇರಲಿ, ಬರೆದದ್ದಾದರೂ ಏನು? ಓದು ನೋಡೋಣ" ಎಂದು ಸಂಪಾದಕರು ಮತ್ತೊಮ್ಮೆ ಗುಡುಗಿದರು. ನಾನು ಬರೆದ ವರದಿಯನ್ನು ಓದಲಾರಂಭಿಸಿದೆ.

o o o

ದೇವೇಂದ್ರನ ಓಲಗದಲ್ಲಿ ಶಚೀಪತಿಯು ಅಗ್ರಾಸನವನ್ನಲಂಕರಿಸಿದ್ದಾನೆ. ದೇವಗುರುಗಳು ಉಚ್ಚಾಸನದಲ್ಲಿ ಕುಳಿತು ಸಭೆಯ ಕಾರ್ಯಕಲಾಪಗಳನ್ನು ತದೇಕಚಿತ್ತದಿಂದ ಈಕ್ಷಿಸುತ್ತಿದ್ದಾರೆ. ಯಮಧರ್ಮನು ತನ್ನ ಸುದೀರ್ಘವಾದ ಹೇಳಿಕೆಯನ್ನು ಪ್ರಾರಂಭಿಸಿದ.

ಪರಮಪೂಜ್ಯ ದೇವಗುರುಗಳೇ, ಸುರೇಂದ್ರನೆ, ದೇವತೆಗಳೆ ಇಂದು ನಿಮ್ಮೆಲ್ಲರಿಗೂ ಅಚ್ಚರಿಯನ್ನುಂಟುಮಾಡುವ ಮತ್ತು ನಿಮ್ಮಲ್ಲಿ ಕೆಲವರ ಮನಸ್ಸಿಗೆ ಬೇಸರವನ್ನುಂಟುಮಾಡಬಹುದಾದ ಒಂದು ಮಹತ್ವದ ವಿಷಯದತ್ತ ನಿಮ್ಮ ಗಮನವನ್ನು ಸೆಳೆಯುಬಯುಸುತ್ತೇನೆ- '' ಧರ್ಮೋ ರಕ್ಷತಿ ರಕ್ಷಿತಃ'' ಎಂಬ ತತ್ವವು ಜನಜನಿತವಾಗಿದೆಯಷ್ಟೆ. ಆದರೆ ನಮ್ಮ ಅಧಿಕಾರಕಕ್ಷೆಯಲ್ಲಿರುವ ಭೂಲೋಕದ ಮಾನವರು ಧರ್ಮಬಾಹಿರರಾಗಿ ವರ್ತಿಸುತ್ತ ಸಾಗಿರುವರಲ್ಲದೆ, ಕಾಲಕಾಲಕ್ಕೆ ದೇವತೆಗಳಿಗೆ ಸಲ್ಲಿಸಬೇಕಾದ ಹವಿರ್ಭಾಗವನ್ನು ಕೂಡ ಸಲ್ಲಿಸದಾಗಿದ್ದಾರೆ. ಎಲ್ಲೆಲ್ಲಿಯೂ ಅನಾಚಾರ, ಅತ್ಯಾಚಾರ, ಭ್ರಷ್ಟಾಚಾರಗಳ ದೂರುಗಳೇ ಕೇಳಿಬರುತ್ತಿವೆ. ಅಧಿಕಾರದಲ್ಲಿದ್ದವರು ಜನತೆಯ ಹಿತಮಾಡುವದಕ್ಕಾಗಿ ಪ್ರತಿಯಾಗಿ ಕೆಲವೇ ಜನ ತಮ್ಮ ಆಪ್ತಸ್ವಕೀಯರ ಹಿತಕ್ಕಾಗಿ ನ್ಯಾಯಮಾರ್ಗವನ್ನೂ ಸತ್ಯಮಾರ್ಗವನ್ನೂ ತ್ಯಜಿಸಿ ಜನಜೀವನವನ್ನು ದುಃಖಮಯಮಾಡಿ ತಮ್ಮ ಅನುಯಾಯಿಗಳಿಗೂ ಆಪ್ತಸ್ವಕೀಯರಿಗೂ ಲಾಭ ಮಾಡಿಕೊಡುತ್ತಿದ್ದಾರೆ. ನಮ್ಮ ಗೂಢಚಾರರು ಈ ವಿಷಯವಾಗಿ ನಮಗೆ ವರದಿಮಾಡಿದ ಕೂಡಲೆ ನಿಜಸ್ಥಿತಿಯನ್ನು ಅರಿತುಕೊಂಡು ವಿವರವಾದ ವರದಿಯನ್ನು ಒಪ್ಪಿಸಲು ನಾವು ನಮ್ಮ ಮುಖ್ಯ ಕಾರ್ಯದರ್ಶಿಗಳಾದ ಶ್ರೀ ಚಿತ್ರಗುಪ್ತರಿಗೆ ಸೂಚಿಸಿದೆವು. ಅವರು ಭೂಲೋಕದಲ್ಲೆಲ್ಲ ಅದರಲ್ಲಿಯೂ ವಿಶೇಷವಾಗಿ ನಮ್ಮ ಪ್ರೀತಿಯ ಪುಣ್ಯಭೂಮಿಯಾದ ಭಾರತದ ಮೂಲೆಮೂಲೆಗಳಲ್ಲಿ ಸಂಚರಿಸಿ, ವಿಷಯಗಳನ್ನು ಸಂಗ್ರಹಿಸಿ ವಿದ್ಯಮಾನಗಳ ಸುದೀರ್ಘ ವರದಿಯನ್ನು ನಮಗೊಪ್ಪಿಸಿದ್ದಾರೆ. ಆ ವರದಿಯನ್ನು ಓದಿದಾಕ್ಷಣ ಮಾನವಕೋಟಿಯ

ಮೇಲೆ ಉಗ್ರಕ್ರಮವನ್ನು ಕೈಕೊಳ್ಳಬಾರದೇಕೆ ? ಎಂಬ ಯೋಚನೆಯೂ ಮಿಂಚಿನಂತೆ ಸುಳಿದು ಹೋಯಿತು. ಆದರೆ ದೇವೇಂದ್ರನಿಗೂ ದೇವ ಗುರುಗಳಿಗೂ ನಿಮಗೂ ಈ ವಿಷಯವನ್ನು ಅರಿಕೆ ಮಾಡಿಕೊಟ್ಟು ನಿಮ್ಮ ಅಭಿಪ್ರಾಯವನ್ನು ತಿಳಿದು ಕೊಂಡು ಮುಂದಿನ ಕ್ರಮಕೈಕೊಳ್ಳಬೇಕೆಂಬ ವಿಚಾರವು ಹೊಳೆದದ್ದರಿಂದ ಈ ವಿಷಯವನ್ನು ಕೂಲಂಕಷವಾಗಿ ಚರ್ಚಿಸುವದಕ್ಕಾಗಿ, ಭೂಲೋಕದಲ್ಲಿ, ಅದರಲ್ಲಿಯೂ ವಿಶೇಷತಃ ಭಾರತದಲ್ಲಿ ನಡೆಯುತ್ತಿರುವ ಅನಾಚಾರ—ಭ್ರಷ್ಟಾಚಾರಗಳ ಸುದೀರ್ಘಪಟ್ಟಿಯೊಂದನ್ನು ನಿಮ್ಮ ಮುಂದೆ ಮಂಡಿಸಬಯಸುತ್ತೇನೆ.

ಕೃತಯುಗದಲ್ಲಿ ಧರ್ಮವು ನಾಲ್ಕು ಪಾದಗಳ ಮೇಲೂ ತ್ರೇತಾಯುಗದಲ್ಲಿ ಮೂರು ಪಾದಗಳ ಮೇಲೂ ದ್ವಾಪರದಲ್ಲಿ ಎರಡು ಕಾಲುಗಳಮೇಲೂ ಕಲಿಯುಗದಲ್ಲಿ ಒಂದೇ ಪಾದದಮೇಲೂ ನಿಲ್ಲುವದೆಂದು ಶಾಸ್ತ್ರಗಳು ಹೇಳುತ್ತಿದ್ದರೂ ಈಗ ಕಲಿಯುಗದಲ್ಲಿ ಆ ಒಂದು ಕಾಲು ಕೂಡ ಕುಂಟತೊಡಗಿದೆ. ದೇವಧರ್ಮಗಳಲ್ಲಿ ಜನರ ಭಕ್ತಿ ವಿಶ್ವಾಸಗಳು ಮಾಯವಾಗುತ್ತ ಸಾಗಿವೆ. ಡಾಂಭಿಕತೆಯು ಬೆಳೆಯುತ್ತ ನಡೆದಿದೆ. ಈ ಪಾರ್ಶ್ವಭೂಮಿಕೆಯಲ್ಲಿ ಕೆಳಗಿನ ಅನಾಚಾರ, ಭ್ರಷ್ಟಾಚಾರ, ಅತ್ಯಾಚಾರಗಳು ಅನಿರ್ಬಂಧವಾಗಿ ಆಚರಿಸಲ್ಪಡುತ್ತಿವೆ.

ಯಮಧರ್ಮರಾಯನು ಮುಂದಿನ ವಿಷಯವನ್ನು ಓದಬೇಕೆನ್ನುವಷ್ಟರಲ್ಲಿ 'ನಾರಾಯಣ, ನಾರಾಯಣ' ಎಂಬ ನಾಮಘೋಷವೂ ಮಂಜುಳ ವೀಣಾನಿನಾದವೂ ಕೇಳಬಂದುದರಿಂದ ಸಭಿಕರೆಲ್ಲರೂ ಕತ್ತೆತ್ತಿ ಮಹಾದ್ವಾರದತ್ತ ನೋಡತೊಡಗಿದರು. ತ್ರಿಲೋಕ ಸಂಚಾರಿಗಳಾದ ನಾರದರು ಹೀಗೆ ಅನಿರೀಕ್ಷಿತವಾಗಿ ಸಭೆಗೆ ಆಗಮಿಸಿದುದನ್ನು ಕಂಡು ದೇವರಾಜನು ತನ್ನ ಸಿಂಹಾಸನದಿಂದೆದ್ದು ನಾರದಮಹರ್ಷಿಗಳನ್ನು ಅರ್ಘ್ಯ-ಪಾದ್ಯಾದಿಗಳಿಂದ ಸತ್ಕರಿಸಿ ಅತಿಪ್ರಮುಖ (V. I. P.) ರಿಗೆ ಮೀಸಲಾಗಿರಿಸಿದ ಸ್ಥಾನದಲ್ಲಿ ಅವರನ್ನು ಕುಳ್ಳಿರಿಸಿದನು. ನಾರದರು ದೇವ-ಗುರುಗಳಿಗೆ ವಂದಿಸಿ ಹಸನ್ಮುಖದಿಂದ ಸುತ್ತಲೂ ನೋಡಿ ಸಭೆಯ ಕಾರ್ಯಕಲಾಪಗಳು ಮುಂದೆ ಸಾಗಬಹುದೆಂದು ಅಪ್ಪಣೆ ಕೊಡಿಸಿದರು.

ಯಮಧರ್ಮನು ಮಾನವರ ಅನಾಚಾರಗಳ ಒಂದು ದೊಡ್ಡ ಪಟ್ಟಿಯನ್ನೇ ಓದಲಾರಂಭಿಸಿದನು.

೧. ಮಾನವರಲ್ಲಿ ಮಾನವ್ಯವೇ ಇಲ್ಲದಂತಾಗಿದೆ.
೨. ಹಣಕ್ಕಾಗಿ ಏನು ಬೇಕಾದ, ಹೀನಮಾರ್ಗವನ್ನು ಜನರು ಅನುಸರಿಸಹತ್ತಿದ್ದಾರೆ.
೩. ಗತಾನುಗತಿಕರಾದ ಮಾನವರು ದೊಡ್ಡವರೆಂದೆನ್ನಿಸಿಕೊಳ್ಳುವವರಲ್ಲಿಯ ಸದ್ಗುಣಗಳ ಅನುಕರಣೆಮಾಡುವದನ್ನು ಬಿಟ್ಟು ಅವರ ವೇಷಭೂಷ ಭಾಷೆಗಳನ್ನಷ್ಟೇ ಅನುಕರಣೆಮಾಡುತ್ತ ಡಾಂಭಿಕ ವೃತ್ತಿಯನ್ನೇ ಸಂಪೂರ್ಣವಾಗಿ ಅವಲಂಬಿಸಿದ್ದಾರೆ.
೪. ಮಾನವರಲ್ಲಿ ನ್ಯಾಯಾನ್ಯಾಯದ ತಾರತಮ್ಯ ಬುದ್ಧಿಯೇ ಲುಪ್ತವಾಗಿದೆ.
೫. ಜನನಾಯಕರೆಂದೆನಿಸಿಕೊಳ್ಳುವ ಅನೇಕರು ಆತ್ಮವಂಚನೆಮಾಡಿಕೊಳ್ಳುತ್ತ ಜನತೆಯನ್ನು ವಂಚಿಸಿ ಕ್ಷಣ ಭಂಗುರವಾದ ಸಿರಿ ಸಂಪತ್ತುಗಳನ್ನು ಗಳಿಸುವದನ್ನೇ ತಮ್ಮ ಧ್ಯೇಯವನ್ನಾಗಿರಿಸಿಕೊಂಡಿದ್ದಾರೆ.
೬. ಈ ಜನರು ಬಹುಮತದ ಬೆಂಬಲದಿಂದ, ನಿಜವಾದ ಜನನಾಯಕರೂ ಜನಹಿತೇಚ್ಛುಗಳೂ ತಮ್ಮ ಉಚ್ಛೃಂಖಲ ವೃತ್ತಿಗೆ ಅಡ್ಡಬರಬಹುದೆಂದು ಜನತೆಯಲ್ಲಿ ಬುದ್ಧಿಭೇದವನ್ನುಂಟುಮಾಡಿ ಅವರ ಆಟ ನಡೆಯದಂತೆ ಮಾಡಿದ್ದಾರೆ.
೭. ಪ್ರಜಾಸ್ವಾಮ್ಯತತ್ವದ ಹೆಸರಿನಲ್ಲಿ ಪ್ರಜಾಸ್ವಾಮ್ಯಾಧಿಕಾರಪಡೆದು ಆ ಅಧಿಕಾರವನ್ನು ಪ್ರಜಾಹಿತಕ್ಕಾಗಿ ಉಪಯೋಗಿಸದೆ ತಮ್ಮ ಸ್ವಾರ್ಥಕ್ಕಾಗಿ ಉಪಯೋಗಿಸಿಕೊಳ್ಳುತ್ತಿದ್ದಾರೆ.
೮. ಕಳ್ಳಪೇಟೆ, ಲಂಚಬಡಕತನ, ಪುಂಡಾಟಿಕೆಗಳ ಅಕಾಂಡ ತಾಂಡವನೃತ್ಯ ಅವ್ಯಾಹತವಾಗಿ ಸಾಗಿದೆ.
೯. ಬೇಲಿಯೇ ಎದ್ದು ಹೊಲಮೇಯುವಂತೆ ಜನಜೀವನವು ನೆಮ್ಮದಿಯಿಂದಿರಬೇಕೆಂದು ರಚಿಸಲ್ಪಟ್ಟ ರಕ್ಷಾದಲವು ಅನಾಚಾರಿಗಳೊಂದಿಗೆ ಸಮ್ಮಿಲಿತವಾಗಿ ಕಾನೂನು ವಿರೋಧೀ ಕೃತಿಗಳನ್ನೆಸಗಲು ಪುಂಡಪೋಕರಿಗಳಿಗೆ ಪ್ರತ್ಯಕ್ಷಾಪ್ರತ್ಯಕ್ಷವಾಗಿ ನೆರವಾಗುತ್ತಿದೆ.
೧೦. ತಮ್ಮ ಮತ್ತು ತಮ್ಮ ಹಿಂಬಾಲಿಗರಿಗೆ ಲಾಭಮಾಡಿಕೊಡುವದಕ್ಕಾಗಿ ಅಲ್ಲದಸಲ್ಲದ ನಿಯಮ ನಿಬಂಧನೆಗಳನ್ನು ಜಾರಿಗೆ ತಂದು ಸಲೀಸಾಗಿ ದೊರೆಯಬಹುದಾದ ಜೀವನಾವಶ್ಯಕ ಸಾಮಗ್ರಿಗಳ ಕೃತ್ರಿಮ ಕೊರತೆಯ ಪರಿಸ್ಥಿತಿಯನ್ನುಂಟುಮಾಡುತ್ತಿದ್ದಾರೆ.
೧೧. ಹಿಂದಿನಕಾಲದಲ್ಲಿ ಅಧಿಕಾರಿಗಳು ಹೀಗೆ ಮಾಡಿದ್ದರೆ ಜನತೆಯು ತನಗಾಗುತ್ತಿರುವ ಸಂಕಟವನ್ನು ತನ್ನ ರಾಜನಿಗರುಹಿ ಆತನಿಂದ ತನ್ನ ಸಂಕಟಗಳನ್ನು ಪರಿಹರಿಸಿಕೊಳ್ಳಬಹುದಾಗಿತ್ತು. ಆದರೆ ಈಗ ರಾಜನೇ ಇಲ್ಲದ ಅರಾಜಕ ಆಡಳಿತ ನಡೆದಿರುವದರಿಂದ ಜನತೆ ತಬ್ಬಿಬ್ಬಾಗಿ ಮೂಕ ಗುದ್ದುಗಳನ್ನು ಮರುಮಾತಾಡದೆ ತಿನ್ನಬೇಕಾಗಿ ಬಂದಿದೆ.
೧೨. ಮದಿರಾಪಾನವು ಕಾನೂನುಬಾಹಿರವೆಂದು ಆಡಳಿತವರ್ಗವು ಕಾನೂನುಮಾಡಿರುವದಾದರೂ ಅಕ್ರಮ ಮದ್ಯತಯಾರಿಕೆ, ಸಂಗ್ರಹ, ಮಾರಾಟ, ಮದಿರಾಪಾನವು ಇಂದು ಮನೆ ಮನೆಗೆ ಹಬ್ಬಿದೆ.

ಇನ್ನೂ ಓದಬೇಕೆಂದರೆ ಯಾವುದು ಅಕ್ರಮವೋ, ಯಾವದು ಧರ್ಮಬಾಹಿರವೊ, ಯಾವದು ನೀತಿಬಾಹಿರವೋ ಆ ಎಲ್ಲ ಅವ್ಯಾಪಾರಗಳು ಮಾನವಕೋಟಿಯಲ್ಲಿ ಎಂದಿಗಿಂತಲೂ ಇಂದು ಹೆಚ್ಚಾಗಿವೆ. ಇಂಥ ಉಲ್ಬಣ ಪರಿಸ್ಥಿತಿಯನ್ನು ಕಂಡೂ ನಾವು ನಿಷ್ಕ್ರಿಯರಾಗಿ ಸುಮ್ಮನೆ ಕೂಡ್ರಬೇಕೋ ಅಥವಾ ಮಾನವರ ಮೇಲೆ ಯಾವುದಾದರೂ ಉಗ್ರ ಕ್ರಮಕೈಕೊಂಡು ಅವರಲ್ಲಿ ಮತ್ತೆ ಧರ್ಮ ನೀತಿನ್ಯಾಯಗಳ ಮಹತಿಯ ಅರಿವುಂಟಾಗುವಂತೆ ಮಾಡಬೇಕೋ ? ಈ ವಿಷಯವಾಗಿ ನೀವೆಲ್ಲರೂ ನಿಮ್ಮ ಅಭಿಪ್ರಾಯವನ್ನು ತಿಳಿಸಬೇಕೆಂದು ನನ್ನ ಬಿನ್ನಹವಿದೆ. ಎಂದು ತನ್ನ ಸುದೀರ್ಘ ಭಾಷಣ ಮುಗಿಸಿ ಯಮಧರ್ಮರಾಯನು ತನ್ನ ಆಸನವನ್ನಲಂಕರಿಸಿದನು.

ಯಮಧರ್ಮನು ಒಂದೊಂದೇ ವಿಷಯವನ್ನು ಓದುತ್ತ ಸಾಗಿದಂತೆ ದೇವರಾಜನ ಮುಖವು ಗಂಭೀರವಾಗುತ್ತ ಸಾಗಿದುದನ್ನು ನೋಡಿದ ದೇವಗುರು ಬೃಹಸ್ಪತ್ಯಾಚಾರ್ಯರು ಶಚೀಪತಿಯು ಅವಸರದಲ್ಲಿ ದುಡುಕಿ ಮಾನವಕೋಟಿಗೆ ಏನಾದರೂ ಆಘಾತಮಾಡಬಹುದೆಂದು ಆಲೋಚಿಸಿ ಸಭಿಕರನ್ನುದ್ದೇಶಿಸಿ—

"ಯಮಧರ್ಮರಾಯನು ಹೇಳಿದುದನ್ನು ಕೇಳಿದರೆ ಮಾನವರ ಸ್ಥಿತಿ ಹೀನಾಯಮಾನವಾಗಿರುವದು ಖಂಡಿತ. ಆದರೆ ತ್ರಿಲೋಕ ಸಂಚಾರಿಗಳೂ ಭೂಲೋಕದ ಮಾನವರ ಕಲ್ಯಾಣಕ್ಕಾಗಿ ಸದಾಕಾಲವೂ ಅನವರತವಾಗಿ ಶ್ರಮಿಸುವವರೂ ಆದ ನಾರದ ಮಹರ್ಷಿಗಳು ಇಲ್ಲಿಗೆ ಹೇಗೋ ದಯಮಾಡಿಸಿದ್ದಾರೆ. ಅವರ ಅಭಿಪ್ರಾಯವನ್ನೂ ಕೇಳಿಕೊಂಡು ಮುಂದಿನ ಕ್ರಮವನ್ನು ವಿಚಾರಮಾಡೋಣ" ಎಂದು ಸೂಚಿಸಿದರು.

ದೇವರಾಜನು ತನ್ನ ಕೋಪವನ್ನು ನುಂಗಿಕೊಂಡು ನಾರದ ಮಹರ್ಷಿಗಳತ್ತ ತಿರುಗಿ ಅವರ ಅಭಿಪ್ರಾಯವನ್ನು ಅರುಹಬೇಕೆಂದು ಬಿನ್ನವಿಸಿಕೊಂಡನು.

ಶ್ರೀಮನ್ನಾರದರು ಶ್ರೀಮನ್ನಾರಾಯಣ ನಾಮಸ್ಮರಣೆಮಾಡಿ ಎದ್ದು ನಿಂತು ಸಭಿಕರನ್ನುದ್ದೇಶಿಸಿ—

"ದೇವಗುರುವೆ, ದೇವರಾಜನೆ, ದೇವಗಣವೆ, ಯಮುಧರ್ಮರಾಯನು ಇಲ್ಲಿಯವರೆಗೆ ಹೇಳಿದುದನ್ನು ನೀವೆಲ್ಲರೂ ಕೇಳಿದ್ದೀರಿ. ನಾನೂ ಕೇಳಿದೆ. ಇದರಲ್ಲಿ ಹೊಸದೇನೂ ಇಲ್ಲ. ಮನಸ್ಸುಮಾಡಿದ್ದರೆ ದೇವರಾಜನಾಗಲಿ, ಯಮರಾಯನಾಗಲಿ ಈಗಾಗಲೇ ಮಾನವಕೋಟಿಗೆ ಅದು ಎಸಗುತ್ತಿರುವ ಭ್ರಷ್ಟಾಚಾರ, ಅನಾಚಾರ, ಅತ್ಯಾಚಾರಗಳಿಗಾಗಿ ತಕ್ಕ ಶಿಕ್ಷೆಯನ್ನು ಭೂಲೋಕದಲ್ಲಿಯೇ ವಿಧಿಸಬಹುದಾಗಿತ್ತು. ಆದರೆ ಹಾಗೆ ಮಾಡುವದು ದೇವತ್ವದ ಲಕ್ಷಣವಲ್ಲ. To err is human and to forgive is divine (ಮಾನವಪ್ರಾಣಿ ತಪ್ಪು ಮಾಡುವದೇ. ಆದರೆ ಆ ತಪ್ಪನ್ನು ಕ್ಷಮಿಸುವದೇ ದೇವತ್ವದ ಲಕ್ಷಣ) ಎಂಬುದನ್ನು ಮರೆಯಬೇಡಿರಿ. ಅಂತೆಯೇ ನಮ್ಮ ದೇವರಾಜನಾಗಲಿ ಧರ್ಮರಾಜನಾಗಲಿ ಮಾನವರ ಶತಾಪರಾಧಗಳನ್ನು ಕ್ಷಮಿಸುತ್ತ ಬಂದಿದ್ದಾರೆಂದು ನಾನು ತಿಳಿಯುತ್ತೇನೆ.



"ಈ ತಿಂಡಿ ಎಷ್ಟು ಬೇಕಾದ್ರು ತಿನ್ನಬೋದು ಡಾಕ್ಟರ ಮನೇದು ಅಂದ್ಹೇಳಿ ಹೆದರಬೇಕಿಲ್ಲ ತೊಗೊಳ್ರಿ

ಇನ್ನು ಮಾನವರ ಲೋಪದೋಷಗಳನ್ನು ಎತ್ತಿ ತೋರಿಸುವಾಗ ಯಮುಧರ್ಮರಾಯನೂ ಸ್ವಲ್ಪ ದುಡುಕಿರುವನೆಂದು ನನ್ನ ಅಭಿಪ್ರಾಯ. ಯಾಕೆಂದರೆ ಶ್ರೇಷ್ಠರೆಂದೆನ್ನಿಸಿಕೊಳ್ಳುವವರು ಮಾಡಿದುದನ್ನು ಜನರು ಅನುಸರಿಸುವದಿಲ್ಲವೆ ? 'ಯದ್ಯದಾಚರತಿಶ್ರೇಷ್ಠಃ ಲೋಕಸ್ತದನುವರ್ತತೆ'। ಹಾಗೆ ಮಾನವರಲ್ಲಿ ತಪ್ಪುತಡೆಗಳಾಗುತ್ತಿರಬಹುದು. ಹಿಂದಕ್ಕೆ ಅಮೃತಮಂಥನವಾಯಿತು. ಆಗ ಉದ್ಭವಿಸಿದ ಶ್ರೀದೇವಿಯನ್ನೂ ಕೌಸ್ತುಭಮಣಿಯನ್ನು ಶ್ರೀಮನ್ನಾರಾಯಣನು ತಾನೇ ತೆಗೆದುಕೊಂಡ. ಐರಾವತ ಉಚ್ಚೈಶ್ರವವನ್ನು ದೇವೇಂದ್ರನು ತಾನು ಎತ್ತಿಹಾಕಿದ. ಕಾಲಕೂಟ ವಿಷವು ಹೊರಬಂದಾಗ ನಿಮ್ಮೆಲ್ಲರನ್ನೂ ಉಳಿಸುವದಕ್ಕಾಗಿ ಉಮಾನಾಥನು ಆ ಕಾಲಕೂಟ ವಿಷವನ್ನು ನುಂಗಿ ವಿಷಕಂಠನಾದ. ನೀವೇನು ಮಾಡಿದಿರಿ? ಅಮೃತವು ಹೊರಬಂದ ಕೂಡಲೆ ದಾನವರನ್ನು ವಂಚಿಸಿ ನೀವಷ್ಟೇ ಅಮೃತಪ್ರಾಶನ ಮಾಡಿ ಅಮರರಾದಿರಿ. ಭೂಲೋಕದಲ್ಲಿ ಅದರಲ್ಲಿಯೂ ವಿಶೇಷವಾಗಿ ಭಾರತದಲ್ಲಿಯೂ ಇದೇ ನಡೆದಿದೆ.

ಭಾರತದಲ್ಲಿಯೂ ಅಮೃತಮಂಥನವಾಯಿತು. ಆ ಮಂಥನದಲ್ಲಿ ಅನೇಕ ದಿವ್ಯರತ್ನಗಳು ತತ್ವರೂಪದಲ್ಲಿ ಹೊರಬಿದ್ದವು. ಅವುಗಳನ್ನು ಅಳವಡಿಸಿಕೊಳ್ಳುವ ಸಾಮರ್ಥ್ಯವುಳ್ಳ ಮಹಾತ್ಮರು ಅವುಗಳನ್ನು ಸ್ವೀಕರಿಸಿದರು. ಅವುಗಳೊಂದಿಗೆ ಸ್ವಾತಂತ್ರ್ಯವೂ ಮೇಲೆ ಬಂದಿತು. ಮಂಥನದಲ್ಲಿ ಮುಂದಿದಿದ್ದವರು ಸ್ವಾತಂತ್ರ್ಯದ ಸಿಹಿ ಫಲವನ್ನು ತಾವು ಸ್ವೀಕರಿಸಿ ಅದರ ಲಾಭ ಹೊಡೆಯುತ್ತಿದ್ದಾರೆ. ಅಮೃತವನ್ನು ದೇವತೆಗಳಿಗೆ ಹಂಚುವಾಗ ದಾನವನಾದ ರಾಹುವು ದೇವತೆಗಳ ಗುಂಪಿನಲ್ಲಿ ನುಸುಳಿಕೊಂಡು ಅಮೃತವನ್ನು ಸೇವಿಸಿದಂತೆ ಮಾನವರಲ್ಲಿ ದಾನವರಂತಿರುವವರು ಸ್ವಾತಂತ್ರ್ಯಯೋಧರ ಗುಂಪಿನಲ್ಲಿ ನುಸುಳಿಕೊಂಡು ಸ್ವಾತಂತ್ರ್ಯದ ಸಿಹಿ ಫಲವನ್ನು ಗಿಳಂಕೃತ ಮಾಡುತ್ತಿದ್ದಾರೆ. ಆಗ ಉದ್ಭವಿಸಿದ ಕಾಲಕೂಟ ವಿಷವನ್ನು ಜನತಾರೂಪಿ ಪರಮೇಶ್ವರನು ನುಂಗಿದ. ದಾನವರ ಪಾಲಿಗೆ ಸುರಾದೇವಿ ಬಂದಂತೆ ಅಜ್ಞಜನರ ಪಾಲಿಗೆ ಮದ್ಯಪಾನ, ಜೂಜಗಾರಿಕೆ, ಕಳ್ಳಪೇಟಿ, ಲಂಚಗುಳಿತನ ಇವೇ ಮೊದಲಾದ ದುರ್ವ್ಯಾಪಾರಗಳು ಬಂದವು. ಆಗ ನೀವು ಮಾಡಿದುದನ್ನೇ ಈಗ ಮಾನವರು ಅನುಕರಿಸುತ್ತಿದ್ದಾರೆ. ಆದುದರಿಂದ ಈ ಜಟಿಲ ಸಮಸ್ಯೆಯನ್ನು ನಿರ್ವಿಕಾರ ಬುದ್ಧಿಯಿಂದ ಬಿಡಿಸಬೇಕು.

ಇವೆಲ್ಲ ಅಂಶಗಳನ್ನು ಲಕ್ಷ್ಯದಲ್ಲಿಟ್ಟುಕೊಂಡು ನೀವು ಮುಂದೆ ಹೆಜ್ಜೆ ಇಡಬೇಕು ಎಂದುಸುರಿದರು.

ಯಮರಾಜನ ಪ್ರಸ್ತಾಪದಿಂದ ವ್ಯಗ್ರವಾಗಿದ್ದ ಸಭೆಯ ವಾತಾವರಣವು ನಾರದರ ಈ ಸ್ಪಷ್ಟೀಕರಣದಿಂದ ಮತ್ತೆ ಶಾಂತವಾಯಿತು.

ದೇವರಾಜನು ಸಭೆಯನ್ನುದ್ದೇಶಿಸಿ ಮಾತನಾಡುತ್ತ ಈ ವಿಷಯದಲ್ಲಿ ಮುಂದೆ ನಾವು ಯಾವ ಕ್ರಮ ಕೈಕೊಳ್ಳಬೇಕು ? ಎಂದು ಪ್ರಶ್ನಿಸಿದ. ನಾರದರೂ ದೇವಗುರುಗಳೂ ತಮ್ಮತಮ್ಮೊಳಗೆ ಮಾತನಾಡಿಕೊಂಡು ಒಂದು ತೀರ್ಮಾನಕ್ಕೆ ಬಂದುದು ಎದ್ದು ಕಾಣಹತ್ತಿತು.

ಆಗ ದೇವಗುರುಗಳು ಸಭಿಕರನ್ನುದ್ದೇಶಿಸಿ,—

"ಇದು ಜಟಿಲವಾದ ಪ್ರಶ್ನೆ. ಹಿಂದಕ್ಕೆ ಇಲ್ಲಿ ನಾವು ಆಚರಿಸಿದಂತೆಯೇ ಸ್ವಲ್ಪ ಹೆಚ್ಚು ಕಡಿಮೆ ಭಾರತದ ಜನರೂ ಆಚರಿಸುತ್ತಿದ್ದಾರೆ. ಆದುದರಿಂದ ಈ ವಿಷಯದಲ್ಲಿ ನಾವು ತ್ರಿಮೂರ್ತಿಗಳ ಅಭಿಪ್ರಾಯಪಡೆದುಕೊಂಡು ಅದರಂತೆ ವರ್ತಿಸಬೇಕು" ಎಂದು ಸೂಚಿಸಿದರು.

ಅದರಂತೆ ಶಚೀಪತಿ, ಯಮುಧರ್ಮರಾಜ, ದೇವಗುರು ಬೃಹಸ್ಪತ್ಯಾಚಾರ್ಯರು ಮತ್ತು ನಾರದರು ಈ ನಾಲ್ವರ ಒಂದು ಆಯೋಗವು ತ್ರಿಮೂರ್ತಿಗಳನ್ನು ಕಾಣಬೇಕೆಂದು ನಿರ್ಧಾರವಾಗಿ ಅದರಂತೆ ನಾಲ್ವರೂ ಸತ್ಯಲೋಕ, ಕೈಲಾಸ, ವೈಕುಂಠಲೋಕಗಳಿಗೆ ಪ್ರಯಾಣ ಬೆಳೆಸಿದರು.

ಲೋಕಾನುಗ್ರಹಕ್ಕಾಗಿ ಈ ನಾಲ್ವರು ತಮ್ಮ ಕಡೆಗೇ ಬರುತ್ತಿರುವುದನ್ನು ಸರ್ವಜ್ಞರೂ ಸರ್ವತಂತ್ರ ಸ್ವತಂತ್ರರೂ ಸರ್ವಾಂತರ್ಯಾಮಿಗಳೂ ಆದ ಬ್ರಹ್ಮ-ವಿಷ್ಣು-ಮಹೇಶ್ವರರು ಅರಿತು ಈ ನಾಲ್ವರಿಗೂ ಪ್ರತ್ಯಕ್ಷರಾಗಿ "ವಿಷಯವೇನೆ"ಂದು ಪ್ರಶ್ನಿಸಿದರು.

ಯಮಧರ್ಮರಾಯನು ಎಲ್ಲ ಸಂಗತಿಯನ್ನೂ ವಿವರಿಸಿದ ಮೇಲೆ ಜಗತ್ಪಾಲಕನಾದ ಶ್ರೀ ಮಹಾವಿಷ್ಣುವು ಮುಗುಳ್ನಗೆ ನಗುತ್ತ ಇಂಥ ಸಣ್ಣ ವಿಷಯಕ್ಕಾಗಿ ನೀವೇಕೆ ತಲೆಕೆಡಿಸಿಕೊಂಡಿರುವಿರಿ?

ಭೂಲೋಕದಲ್ಲಿ--ಅದರಲ್ಲಿಯೂ ಭಾರತದಲ್ಲಿ--ಧರ್ಮಬಾಹಿರ ಆಚಾರ-ವಿಚಾರ-ಉಚ್ಚಾರಗಳು ಈಗ ಹೆಚ್ಚಾಗುತ್ತಿವೆಯೆಂಬುದೇನೋ ನಿಜ. ಆದರೆ ಪರಿಸ್ಥಿತಿ ಅಷ್ಟೇನೂ ವಿಕೋಪಕ್ಕೆ ಹೋಗಿಲ್ಲ. ಚಕ್ರನೇಮಿಕ್ರಮದಂತೆ ಪ್ರತಿಯೊಂದು ವಿಷಯದಲ್ಲಿಯೂ ಏರಿಳಿತಗಳು ಇದ್ದೇ ಇರುವವು. ಯಾವಾಗ ಸಂಪೂರ್ಣವಾಗಿ ಧರ್ಮಕ್ಕೆ ಗ್ಲಾನಿ ಬರುವುದೋ ಸಜ್ಜನರಿಗೆ ಕಷ್ಟಪರಂಪರೆಗಳುಬರುವವೋ ದೈವೀವಿಚಾರಕ್ಕೆ ಪ್ರತಿಯಾಗಿ ದಾನವೀ ಆಚಾರವು ಅದೇ ಅನಾಚಾರ–ಅದೇ ಭ್ರಷ್ಟಾಚಾರ–ಹೆಚ್ಚೆಚ್ಚು ಪ್ರಬಲವಾಗುವದೋ ಆಗ ನಾನು ಅದನ್ನು ಸರಿಪಡಿಸುತ್ತೇನೆ. ಅಥವಾ ಮುಕ್ಕಣ್ಣನು ತನ್ನ ತೃತೀಯ ನೇತ್ರದಿಂದ ಆ ಅತ್ಯಾಚಾರಿಗಳನ್ನು ಸುಟ್ಟು ಭಸ್ಮಮಾಡುವನು.' ಈ ಬಗ್ಗೆ ನೀವು ತಾಳ್ಮೆವಹಿಸಿರಿ' ಎಂದುಸುರಿದನು.

'ದೇವಾಧಿದೇವಾ, ಇಂಥ ಕ್ಷುಲ್ಲಕ ಕಾರ್ಯಕ್ಕಾಗಿ ನೀನೇಕೆ ಮತ್ತೆ ಅವತಾರ ತಾಳಬೇಕು? ನನ್ನ ದೈನಂದಿನ ವ್ಯವಹಾರದಲ್ಲಿ ನಾನೇ ಅದನ್ನು ನೋಡಿಕೊಳ್ಳಬಲ್ಲೆ. ಪಾಪಿಗಳಿಗೆ ಶಾಸನ ಮಾಡಬಲ್ಲೆ. ಆ ಅಧಿಕಾರವನ್ನು ನನಗೆ ಕೊಟ್ಟೇ ಇರುವಿಯಲ್ಲ?' ಎಂದು ಯಮರಾಜನು ಪ್ರಶ್ನಿಸಿದ.

'ರವಿಪುತ್ರಾ, ನೀನನ್ನುವುದೂ ನಿಜ. ಶ್ರೀಮನ್ನಾರಾಯಣನು ಅವತಾರ ತಾಳುವ ಪ್ರಶ್ನೆಯೇ ಇಲ್ಲ. ಒಂದೊಮ್ಮೆ ಈ ಭ್ರಷ್ಟಾಚಾರಿಗಳೂ ಅನಾಚಾರಿಗಳೂ ತಮ್ಮ ಕೈಯಲ್ಲಿರುವ ಅಧಿಕಾರ ಬಲದಿಂದಲೋ ಪುಂಡಪೋಕರಿಗಳ ಮುಂಗೈ ಜೋರಿನ ಮೇಲಿಂದಲೋ ಅನ್ಯಾಯವನ್ನೆಸಗುತ್ತ ಸಾಗಿದರೆ, ಜನಾರ್ದನನು ಜನತೆಯ ರೂಪದಲ್ಲಿ ಪ್ರಕಟನಾಗಿ ಅಂಥವರನ್ನು ನಿರ್ಮೂಲ ಮಾಡಿಯೇ ಮಾಡುವನು.

'ಈಗಾಗಲೇ ಜನನಾಯಕರು ಈ ದಿಶೆಯಲ್ಲಿ ಕಾರ್ಯವನ್ನು ಪ್ರಾರಂಭಿಸಿದ್ದಾರೆ. ಆಡಳಿತದಲ್ಲಿಯೂ ಸಮಾಜದಲ್ಲಿಯೂ ಇರುವ ದುಶ್ಶಕ್ತಿಯನ್ನು ಸದೆಬಡಿಯಲು ಕ್ರಮಕೈಕೊಳ್ಳುತ್ತಿದ್ದಾರೆ. ಜನತೆಯು ಜಾಗೃತವಾಗಿ ಈ ಜನನಾಯಕರಿಗೆ ಬೆಂಬಲ ಕೊಟ್ಟರೆ ಅಲ್ಪಾವಧಿಯಲ್ಲಿ ಈ ಭ್ರಷ್ಟಾಚಾರಿಗಳೂ ಅನಾಚಾರಿಗಳೂ ಅವರು ಯಾರೇ ಇರಲಿ. ಅವರಿಗೆ ಎಷ್ಟೇ ಅಧಿಕಾರದ ಬೆಂಬಲವಿರಲಿ, ರಸಾತಳಕ್ಕಿಳಿಯುವರೆಂಬುದನ್ನು ಮರೆಯಬೇಡಿರಿ. 'ದೇವಾ, ಇದೇ ನಿನ್ನ ಇಚ್ಛೆಯಲ್ಲವೆ?' ಎಂದು ನಾರದರು ಶ್ರೀಮನ್ನಾರಾಯಣನನ್ನು ಕುರಿತು ಪ್ರಶ್ನೆ ಮಾಡಿದರು.

'ಅಹುದು ನಾರದಾ, ನೀನು ಸರಿಯಾಗಿ ಊಹಿಸಿದೆ. ಅದನ್ನೇ ನಾನು ಮೂರು ಶಬ್ದಗಳಲ್ಲಿ ಅಂದರೆ "ಧರ್ಮೋ ರಕ್ಷತಿ ರಕ್ಷಿತಃ" ಎಂದು ಹೇಳಿದ್ದು ಎಂದು ಹೇಳಿ ಅಂತರ್ಧಾನ ಹೊಂದಿದರು.

೦ ೦ ೦

ಈ ನನ್ನ ವರದಿಯನ್ನು ನಾನು ಅಂಜುತ್ತ ಅಂಜುತ್ತಲೇ ಓದಿ ಮುಗಿಸಿದಾಗ, ಸಂಪಾದಕರ ಮುಖದ ಮೇಲೆ ಪ್ರಾರಂಭದಲ್ಲಿದ್ದ ರೌದ್ರಾವೇಶದ ಕಾರ್ಮೋಡವು ಕರಗಿ ಅವರು ಮಂದಹಾಸ ಬೀರುತ್ತಿದ್ದರು.

'ಇರಲಿ, ಇದನ್ನು ಏನು ಮಾಡಬೇಕೆಂಬುದನ್ನು ನಾನು ಯೋಚಿಸುವೆ. ನೀನು ಹೋಗು' ಎಂದು ನನಗೆ ಅಪ್ಪಣೆಯನ್ನಿತ್ತರು.

೦ ೦ ೦

ವರದಿಗಾರನಾದ ನನ್ನನ್ನು ಸಹಾಯಕ ಸಂಪಾದಕನ ಸ್ಥಾನಕ್ಕೆ ನೇಮಿಸಿದ ಆಜ್ಞೆಯೊಂದು ಮರುದಿನ ನನ್ನ ಕೈಗೆ ಬಂತು.



# ತಾಪದಿಂದ ತಂಪಿಗೆ

( ಸಾಮಾಜಿಕ ಕಾದಂಬರಿ )

ಜಗನ್ಮೋಹಿನಿಯ ಶ್ವೇತಾಂಬರ ಹರಡಿದಂತೆ ಧರೆಗೆಲ್ಲ ಪಸರಿಸಿದ ತಿಂಗಳಕಾಂತಿ ಪ್ರೇಮಿಗಳಿಗೆ, ವಿಲಾಸಿಗಳಿಗೆ ತಾನಾಗಿ ಒದಗಿ ಬಂದ ಅಮೃತ ಮುಹೂರ್ತ. 'ಹೋಟೆಲ್ ಅಪ್ಸರಾ'ದ ವಿಸ್ತಾರವಾದ ಸಿವೇಶನದೊಳಗೆ ಮೂರು ಅಂತಸ್ತುಗಳ ಭವ್ಯ ಮಹಲು 'ತಾಜಮಂದಿರ'ದಂತೆ ಕಂಗೊಳಿಸಿದೆ. ಹೊರಗಿನ ಚಂದ್ರಕಿರಣಗಳಿಗೆ ತೆಳು ನೀಲಿಯ ತೆರೆ ಎಳೆದಂತೆ ಮಹಲಿನ ತುಂಬೆಲ್ಲ ಕೊಳವೆ ದೀಪಗಳು; ಮೋಹಕ ಬೆಳಕನ್ನು ತುಂಬಿವೆ.

ಅಪ್ಸರಾದ ಒಳಗಡೆ ನೂರಾರು ಜನರ ಓಡಾಟವಿದ್ದರೂ ಅರ್ಥವಾಗದ ಒಂದು ಗಂಭೀರ ಶಾಂತಿ ಭವನದ ಗುಟ್ಟನ್ನು ಹೊರಗೆಡವದ ಗುಪ್ತಚಾರನಂತೆ, ಸರಲತೆಯನ್ನೇ ತೋರಿದೆ.

ಹೋಟೆಲಿನ ಹೊರಗೆ ನಿಂತವರಿಗೆ ಕಪ್ಪುಬಸಿಗಳ, ಬಾಟಲಿ ಗ್ಲಾಸುಗಳ ಟೊಕಟೊಕ ಸದ್ದು ಒಳಗೆ ನಡೆಯುವ ಅಕಾರ್ಯಗಳ ಸಂಕೇತಸೂಚಕವಾಗಿದೆ. ವಿಸ್ತಾರವಾದ ಕಂಪೌಂಡಿನೊಳಗೆ ಸುಮಾರು ಅರವತ್ತು ಕಾರುಗಳು ಮೌನದಲ್ಲಿ ನಿಂತಿವೆ.

ಒಳನೆಲದ ಮೂಲೆಯ ರಾತ್ರಿರಾಣಿಯ ನೆರಳಿನಲ್ಲಿ ಬಾಲು ಏಕಾಂಗಿಯಾಗಿ ಮಗುವಿನಂತೆ ನೆಲದ ಮೇಲೆ ಹೊರಳುತ್ತ ಬಿಕ್ಕಿಬಿಕ್ಕಿ ಅಳುತ್ತಿದ್ದಾನೆ. ಅವನ ಒಡಲಿನ ಉರಿಯನ್ನು ಶೀತಲಚಂದ್ರಕಿರಣಗಳು ಮತ್ತಷ್ಟು ಹೆಚ್ಚಿಸಿದವು. ಬಾರಿಬಾರಿಗೂ ನಿಟ್ಟುಸಿರು ಕಡೆದ.

'ಇಲ್ಲಿಯೇ ಅಲ್ಲವೇ ಎಷ್ಟು ಬಾರಿ; ಹೀಗೇ ಬೆಳದಿಂಗಳಿನಲ್ಲಿ; ಇದೇ ನೆರಳಿನಲ್ಲಿ, ಚಿತ್ರಾ ತನ್ನ ತೋಳಸೆರೆಯಲ್ಲಿ!'...

'ಅಯ್ಯೋ! ಅಮ್ಮಾ; ಉಸ್ ಅಪ್ಪಾ!'

ಬಾಲು ಬೆಂಕಿಯಲ್ಲಿ ಬಿದ್ದಂತೆ ಉಸುರ್ಗರೆದು ವಿಲಿಗುಟ್ಟಿದ. ಹೋಟೆಲಿನ ಒಳಗಡೆಯಿಂದ ಆಗಾಗ ಕೇಳಿಬರುತ್ತಿದ್ದ ನಗೆಯ ಅಲೆ, ಮೃದುಮಧುರವಾಗಿ ತೇಲಿಬರುತ್ತಿದ್ದ ಕಾಶ್ಮೀರಿ ಗಾಯನ ಅವನ ಚಿತ್ತವನ್ನು ಮತ್ತಷ್ಟು ಬೇಯಿಸಿತು, ಹೊಟ್ಟೆಯನ್ನು ಇನ್ನಷ್ಟು ಉರಿಸಿತು.

ಹುಟ್ಟಿದಂದಿನಿಂದ ಹೂವಿನ ತೊಟ್ಟಿಲಲ್ಲಿ ಬೆಳೆದ ಬಾಲು ಇದೀಗ ನೋವು ಸಂಕಟಗಳ ಅನುಭವ ಮಾಡುತ್ತಿದ್ದಾನೆ. ಚಿತ್ರಾ ಹಾರಿಹೋದಂದಿನಿಂದ ಅವನ ಗೆಳೆಯರೂ ಅವನ ಹತ್ತಿರ ಸುಳಿದಿಲ್ಲ. ದಿನದಿನವೂ ಹೋಗಬರುವಾಗ ಹಲ್ಲುಕಿರಿದು, ಸೊಟ್ಟ ಸಲಾಮು ಹೊಡೆದು ಇಡಿ ಇಡೀ ರೂಪಾಯಿಗಳನ್ನೇ ಕೀಳುತ್ತಿದ್ದ ಆ ಹೋಟೆಲಿನ ವಾಚ್‌ಮನ್, ಇದೇ ಈಗ ಕ್ಯಾಕರಿಸಿ ಉಗುಳಿ ಅತ್ತ ಹೋದ. ತನ್ನನ್ನೂ ತಿರುಗಿಯೂ ನೋಡಲಿಲ್ಲ.

'ಅಯ್ಯೋ! ಚಿತ್ರಾ ನಾನು ಹೇಗೆ ಬದುಕಲಿ? ಇಲ್ಲ ಅವಳಿಲ್ಲದೆ ಬದುಕಲಾರೆ!'

'ಅಮ್ಮ! ಅಮ್ಮ!! ಅಮ್ಮಾ!!!'

ಪಕ್ಕದ ಗೋಡೆಗೆ ತಲೆ ಕುಟ್ಟಿಕೊಂಡ ಬಾಲು. ಕಂಪೌಂಡಿನೊಳಗೆ ಮತ್ತೊಂದು ಕಾರು ಬಂದು ನಿಂತಿತು. ಅದರೊಳಗಿಂದ ಇಳಿದವರು ವಾಚ್‌ಮನ್ನಿನೊಂದಿಗೆ ಏನೋ ಮೆಲ್ಲನೆ ಮಾತನಾಡಿದರು. ಬಾಲು ತಿರುಗಿ ನೋಡಿದ. ತಮ್ಮದೇ ಕಾರು

**ಎಂ. ಕೆ. ಇಂದಿರಾ**

ಎಂದು ತಿಳಿಯಿತು. ಮಾರಯ್ಯ ಗೊಗ್ಗರದನಿಯಲ್ಲಿ ಹೇಳುತ್ತಿದ್ದ.—"ಅಲ್ಲವರೆ ನೋಡಿಬುದ್ಧಿ. ಮದ್ಯಾನದಿಂದ ಅಲ್ಲೇ ಹೊಳ್ಳಾಡ್ತ ಬಿದ್ದವರೆ. ನಂಗೂ ಸಮಾಧಾನ ಮಾಡೀ ಮಾಡೀ ಸಾಕಾಗೋಯ್ತು. ಓಗೋರು, ಬರೋರೆಲ್ಲ ಈ ಯಪ್ಪಂಗೆ ಉಚ್ಚ್ಯ ಅಂತ ತಿಳಕೊಂಡವರೆ. ಓಗಿ ಬುದ್ದಿ ಸದ್ಯ ಮನೇಗೆ ಕರಕೊಂಡ್ಹೋಗಿ ಒಸಿ ದಿನ ಹೊರಕ್ಕೆ ಬಿಡಬ್ಯಾಡಿ. ಬಿರ್ನೆ ಒಂದು ಮದ್ವೆ ಮಾಡಿಬುಡಿ ಯಲ್ಲ ಸರಿಓಯ್ತದೆ''.

ಇಷ್ಟು ಹೇಳಿದವನೆ ಮಾರಯ್ಯ ಮಹಾ ಕಾರ್ಯ ಗೌರವವಿದ್ದವನಂತೆ ಮುಂದೆ ನಡೆದ. ತಂದೆ, ಸೀತಾರಾಂ ಇಬ್ಬರನ್ನೂ ನೋಡಿದವನೇ ಬಾಲು ಕುಳಿತಲ್ಲಿಂದ ಧಿಗ್ಗನೆ ಎದ್ದು, ಎತ್ತರದ ಕಾತಾಳಿ ಮರಗಳ ನೆರಳಿನಲ್ಲಿ ಓಡತೊಡಗಿದ. ಬಾಲುವಿನ ತಂದೆ ರಂಗಯ್ಯನವರು ತೀರಾ ವ್ಯಥಿತರಾಗಿದ್ದರು. ಅವರು ಮತ್ತೆ ಕಾರಿನಲ್ಲಿ ಕುಳಿತುಕೊಳ್ಳುತ್ತ ಸೀತಾರಾಮುವಿಗೆ ಹೇಳಿದರು—

"ಸೀತಾರಾಂ ನೀನೇ ಹೇಗಾದರೂ ಕರಕೊಂಡು ಬಾಪ್ಪ. ನಾನು ಅವನ ಹಿಂದೆ ಓಡಲಾರೆ"—ಸೀತಾರಾಮು ಮೆಲ್ಲಮೆಲ್ಲನೆ ಮರಗಳ ನೆರಳಿನಲ್ಲಿ ನಡೆದ. ಬಾಲು ಕತ್ತಲೆಯ ಮೂಲೆಯಲ್ಲಿ ಮುದುರಿ ಕುಳಿತವನು ತಾನೇ ಗಟ್ಟಿಯಾಗಿ ಕಿರಿಚಿಕೊಂಡ—

"ನಾನು ಬರೋಲ್ಲಾ ಸೀತಾರಾಂ. ನಾ ಬರೋಲ್ಲಾ! ನಾ ಇಲ್ಲೆ ಸತ್ಹೋಗ್ತೀನೀ!"

ಸೀತಾರಾಮು ತೀರಾ ಹತ್ತಿರ ಹೋಗಿ ಮೆಲ್ಲಗೆ ಅವನ ತೋಳುಹಿಡಿದು ಎಬ್ಬಿಸಿದ ಬಾಲುವಿಗೆ ಮಾತ್ರ ಕೇಳುವಂತೆ ಮೃದುವಾಣಿಯಲ್ಲಿ ನುಡಿದ —"ಏಳಿ ಬಾಲು, ನಿಮ್ಮ ತಾಯಿ ಬೆಳಗಿನಿಂದ ಅನ್ನ ನೀರು ಇಲ್ದೆ ಅಳತಾ ಕೂತಿದಾರೆ. ದಯವಿಟ್ಟು ಮನೆಗೆ ಬನ್ನಿ. ಆ ಮೇಲೆ ನಾ ಎಲ್ಲ ಸರಿ ಮಾಡ್ತೀನಿ''.

ಬಾಲು ಹುಡುಗಿಯಂತೆ ಗಳಗಳನೆ ಅತ್ತ—

"ಇಲ್ಲ ಸೀತಾರಾಂ. ಚಿತ್ರಾ ನಂಗೆ ಮೋಸಾ ಮಾಡ್ಬಿಟ್ಲು. ಅವಳನ್ನು ಬರೋಲ್ಲಾ ಅವಳಿಲ್ದೆ ನಾ ಬದುಕ್ಲಾರೇ..."

"ಅದೆಲ್ಲ ಸುಳ್ಳು ಬಾಲು. ಅವಳು ಮತ್ತೆ ಇಲ್ಲಿಗೇ ಬರ್‍ತಾಳೆ. ನೀವು ಸ್ವಲ್ಪ ನಾ ಹೇಳಿದ ಹಾಗೆ ಕೇಳ್ಬೇಕು ನೋಡಿ."

ಸೀತಾರಾಂ ಅವನ ತೋಳು ಹಿಡಿದು ಮೇಲೆತ್ತಿದ. ಬಾಲು ಒಮ್ಮೆ ನಡುಗಿ ಸೀತಾರಾಮುವನ್ನು ಬಿಗಿಯಾಗಿ ಅವಚಿಕೊಂಡ. ಸೀತಾರಾಮುವಿಗೆ ಉಸಿರು ಕಟ್ಟಿದಂತಾಯಿತು. ಹಾಗೇ ನಾಲ್ಕು ಹೆಜ್ಜೆ ಕುರಿಯನ್ನು ಎಳೆದಂತೆ ಎಳೆತಂದ. ಬಾಲು ಹಿಂದೆ ಜಗ್ಗುತ್ತಿದ್ದುದರಿಂದ ಸೀತಾರಾಮು ಮುಂದೆ ಜಗ್ಗಬೇಕಾಯಿತು. ಅವನ ಬೆನ್ನಿಗೆ ಕೈಬಳಸಿ ಮೆಲ್ಲಗೆ ನಡೆಸಿದ.

"ಸೀತಾರಾಂ!''— ಅನ್ನುತ್ತ ಬಾಲು ಅವನನ್ನು ಬಿಗಿಯಾಗಿ ತಬ್ಬಿ ಅವನ ಕೆನ್ನೆಗೆ ಕೊಚಪಚನೆ ಮುತ್ತಿಟ್ಟ. ಸೀತಾರಾಮುವಿಗೆ ಹೇಸಿಗೆ ಎನಿಸಿತು. ಹಾಗೇ ಹುಡುಗನಿಗೆ ಬುದ್ಧಿಭ್ರಮಣೆಯಾಗಿದೆಯೆಂದೂ ಅನಿಸಿತು.

ಪಕ್ಕದ ಗಾಜಿನ ಕಿಟಿಕಿಯಿಂದ ಬೆಳಕು ಇಬ್ಬರ ಮುಖದ ಮೇಲೂ ಬಿದ್ದಿತು. ಜೊತೆಗೇ ನಗುವಿನ ಅಲೆಯೊಂದು ತೇಲಿಬಂದಿತು. ಒಳಗೆ ಇಸ್ಪೇಟ್ ಆಟದ ಮಜಲು ನಡೆದಿತ್ತು. ಸದಾ ನಟನಟಿಯರೂ, ಹಿರಿಯ ವಾಣಿಜ್ಯೋದ್ಯಮಿಗಳೂ, ರಾಜಮನೆತನದವರೂ ಬಂದು ತಂಗುತ್ತಿದ್ದ ಆ 'ಅಪ್ಸರಾ ಹೋಟೆಲ್' ದೊಳಗೆ ಬೆಳಗಿನಿಂದ ಸಂಜೆಯ ವರೆಗೆ ಸುರಾ ಸಮಾರಾಧನೆ ನಡೆದೇ ಇರುತ್ತಿತ್ತು. ಸಮವಸ್ತ್ರ ಧರಿಸಿದ ಹೋಟೆಲ್ ನೌಕರರು ಅತ್ತಿಂದಿತ್ತ ಗಾಳಿಯಂತೆ ಸರಿದಾಡುತ್ತಿದ್ದರು.

ಬಾಲು ಸೀತಾರಾಮುವಿನ ಭುಜ ಹಿಡಿದು ಕಚ್ಚಿದಾಗ ಅವನು ಎಚ್ಚೆತ್ತು ಬಾಲುವನ್ನು ಸರಸರನೆ ಕಾರಿನೆಡೆಗೆ ಕರೆದೊಯ್ದ. ತಮ್ಮನ್ನು ಯಾರೂ ನೋಡುವುದು ಸೀತಾರಾಮುವಿಗೆ ಬೇಕಿರಲಿಲ್ಲ. ರಂಗಯ್ಯನವರು ಒಂದೂ ಮಾತಾಡದೆ

'ತುಂಗಭದ್ರಾ' ಕಾದಂಬರಿಯಿಂದ ಕನ್ನಡದ ಓದುಗರಿಗೆ ತುಂಬ ಪರಿಚಿತರಾಗಿರುವ ಶ್ರೀಮತಿ ಎಂ. ಕೆ. ಇಂದಿರಾ ಅವರು ಕರ್ಮವೀರದ ಓದುಗರಿಗಾಗಿ ಮುದ್ದಾದ ಈ ಕಿರುಕಾದಂಬರಿಯನ್ನು ಕೊಟ್ಟಿದ್ದಾರೆ. ಪಟ್ಟಣದ ಪಾತರಗಿತ್ತಿಯನ್ನು ಬೆಂಬತ್ತಿ ಕೈಸುಟ್ಟುಕೊಂಡ ನವಯುವಕನೊಬ್ಬ ಸ್ನೇಹಿತನ ಹಳ್ಳಿಯಲ್ಲಿಯ ಅಂತಃಕರಣಪೂರ್ವಕ ವಾತಾವರಣದಲ್ಲಿ ಬೇಗುದಿಗೊಂಡ ಮನಕ್ಕೆ ತಂಪು ಪಡೆದು ಜೀವನದಲ್ಲಿ ಹೊಸ ಅಧ್ಯಾಯವನ್ನು ಹೇಗೆ ಪ್ರಾರಂಭಿಸಿದ ಎಂಬುದರ ಸುಂದರ ಚಿತ್ರಣ ಈ ಕಾದಂಬರಿಯಲ್ಲಿ ಮೈತಾಳಿ ನಿಂತಿದೆ.

ಹಿಂಬದಿಯ ಬಾಗಿಲು ತೆರೆದರು. ಬಾಲು ಹಟ-ಮಾರಿ ಹುಡುಗನಂತೆ ಕಾರಿನ ಪಕ್ಕದಲ್ಲಿ ನೆಲದ ಮೇಲೆ ಕುಳಿತು—

"ನಾ ಮನೇಗೆ ಬರೋಲ್ಲಾ ಅಣ್ಣಾ! ಇಲ್ಲೇ ಇರ್ತೀನಿ. . . ." ಅನ್ನುತ್ತ ಗಳಗಳನೆ ಅತ್ತ. ಅಲ್ಲಿ ಮಗನನ್ನು ಗದರಿಸುವುದೂ ಸಾಧ್ಯವಿರಲಿಲ್ಲ;



ಸುಮ್ಮನಿರಲೂ ಸಾಧ್ಯವಿಲ್ಲ. ಮೆಲ್ಲನೆ ಅವನ ತೋಳು ಹಿಡಿದು ಮೇಲೆತ್ತಿ ಅವನ ಕಿವಿಯಲ್ಲಿ ಹೇಳಿದರು—

"ಮಗು ನಿಮ್ಮಮ್ಮ ಅಳುತಾ ಕೂತಿದ್ದಾಳೆ ಕಣೋ. ಅವಳು ಏನು ಹೇಳ್ತಾಳೋ ಕೇಳಿಕೊಂಡು ಮತ್ತೆ ಇಲ್ಲಿಗೇ ಬರೂವಂತೆ ಬಾಪ್ಪ".

ಅಂತೂ ಇಬ್ಬರೂ ಬಲವಂತದಿಂದ ಕಾರಿನೊಳಕ್ಕೆ ತಳ್ಳಿ ಕೂರಿಸಿದರು. ಒಂದುಗಳಿಗೆ ತಡಮಾಡುವಂತಿರಲಿಲ್ಲ. ಸರಸರ ಕಾರು ನಡೆಸಿದರು ರಂಗಯ್ಯ. ಬಾಲುವನ್ನು ತಬ್ಬಿ ಹಿಡಿದಿದ್ದ ಸೀತಾರಾಮು. ಹೆಬ್ಬಾಗಿಲು ದಾಟುವಾಗ ರಂಗಯ್ಯ ತಿರಗಿ ನೋಡಿದರು. ಅಷ್ಟಗಲ ಡಾಂಬರ ರಸ್ತೆಯಲ್ಲಿ ಐದಾರು ಕಾರುಗಳು ಬಂದು ನಿಂತಿದ್ದವು. ಹೊಸ ಅತಿಥಿಗಳಿಗೆ ಡೊಂಕು ಸಲಾಮು ಹೊಡೆಯುತ್ತ ಹಲ್ಲು ಕಿರಿಯುತ್ತಿದ್ದ ಮಾರಯ್ಯ. ಹೊರಟವರೊಡನೆ ಭಕ್ಷೀಸಿಗೆ ಕೈ-ಯೊಡ್ಡಿದ್ದ.

ತಂಪಿನ ಚಂದ್ರಕಿರಣಗಳಲ್ಲಿ ಬಣ್ಣಬಣ್ಣದ ಕಾರುಗಳು ಪಳಪಳನೆ ಹೊಳೆದವು. ರಂಗಯ್ಯನವರ ಬೂದಿ ಕಾರು ಬಿರ್ರನೆ ಓಡಿತು. ಹೆಬ್ಬಾಗಿಲ ಹತ್ತಿರವೇ ಬಂದು ನಿಂತಿದ್ದಾರೆ ರಾಜಮ್ಮನವರು ಗಂಡನಮನೆಗೆ ಬಂದ ಲಾಗಾಯ್ತು ಸುಖದ ಸುಷುಪ್ತಿಯಲ್ಲಿದ್ದ ರಾಜಮ್ಮ ಇದೀಗ ಎಂಟು ದಿನಗಳಿಂದ ಈ ಮಗನ ಹುಚ್ಚಾಟದಿಂದ ಚಿಂತೆಗೊಳಗಾಗಿದ್ದಾರೆ. ಕಣ್ಣೀರು ಸುರಿಸಿ ಕೊರಗಿದ್ದಾರೆ.

ಕಾರು ಪೋರ್ಟಿಕೋ ಒಳಗೆ ಹೋಗಿ ನಿಂತಾಗ ತಾಯಿಯೂ ಅಲ್ಲಿಗೇ ದುಡುದುಡು ಬಂದರು. ಇನ್ನೂ ಕೊಸರಾಡಿ ಅಳುತ್ತಲೇ ಇದ್ದ ಬಾಲುವನ್ನು ಮೂವರೂ ಸೇರಿ ನುನೆಯು ಒಳಕೋಣೆಗೆ ಒಯ್ದರು. ತನ್ನ ಮಂಚದ ಮೇಲೆ ಬಿದ್ದು 'ಹೋ!-ಎಂದು ಭೋರಾಡಿ ಅಳುತ್ತಿದ್ದ ಬಾಲು.

ತಾಯಿ ಅಳುತ್ತಳುತ್ತ ಮಗನನ್ನು ಸಂತೈಸ ತೊಡಗಿದಳು—

"ಇದೆಂತ ನಾಚಿಕ್ಕೇಡೋ ಮಗು! ಒಂದು ಹೋಟ್ಲುಹುಡಗೀಗೆ ಹೀಗೆ ಅಳೋದೂಂದ್ರೆ ನೋಡಿದೋರು ನಗೋದಿಲ್ವೇನೋ? ಯಾಕಪ್ಪ ಹೀಗಾದೆ ನೀನು! ಯಂತೆಂತ ಹೆಣ್ಣುಗಳು ಬಂದಿದ್ವಲ್ಲೋ ನಿಂಗೆ; ಒಳ್ಳೆ ಮನೆತನದಾಗೆ ಹುಟ್ಟಿ ಯಾಕಪ್ಪ ನಿಂಗೆ ಇಾಥಾ ಬುದಿ ಬಂತು? ನಿಮ್ತಂದೆ ಒಂದೂ ಹೆಣ್ಮಕ್ಕಳನ್ನ ಕತ್ತೆತ್ತಿ ನೋಡಿದೋರಲ್ವಲ್ಲೋ. ಆ ತಂದೆ ಹೊಟ್ಟೇಲಿ ಈ ಮಗನೇ? ನಿಂಗಿನ್ನು ಮದುವೆ ಮಾಡೋದು ಹೇಗೋ ಬಾಲು?"

ಬಾಲು ಬೋರಲುಬಿದ್ದು ಕಿವಿಮುಚ್ಚಿಕೊಂಡು ಕಿರುಚಿಕೊಂಡ—"ಅಯ್ಯೋ ನಂಗೆ ಮದುವೇನೂ ಬೇಡಾ; ಸುಡುಗಾಡೂ ಬೇಡಾ. ಚಿತ್ರಾಹೋದ್ಲೂ! ಚಿತ್ರಾಹೋದ್ಲೂ!!"

ಸೀತಾರಾಮು ರಾಜಮ್ಮನವರನ್ನು ಸನ್ನೆ ಮಾಡಿ ಹೊರಗಡೆ ಕರೆದು ಮೆಲ್ಲಗೆ ಹೇಳಿದ—

"ಅಮ್ಮಾ, ದಯವಿಟ್ಟು ನೀವು ಸ್ವಲ್ಪ ಸಮಾಧಾನ ತಂದ್ಕೊಳ್ಳಿ. ಆಗಿಹೋದದ್ದಕ್ಕೆ ಈಗ ಏನೂ ಮಾಡೋಕಾಗೋಲ್ಲ ಈಗ ಹಳೇ ವಿಷಯ ಏನೂ ಎತ್ಬೇಡಿ. ತುಂಬಾ ಮನಸ್ಸಿಗೆ ಹಚ್ಕೊಂಡಿದಾರೆ. ಉಪಾಯವಾಗಿ ಸ್ವಲ್ಪ ಅವರ ಹೊಟ್ಟೇಗೇನಾದ್ರೂ ಕೊಡಿ. ಒಂದೆರಡು ದಿನ ಹಾಗೇ ಹಗುರವಾಗಿದ್ರೆ ತಾನಾಗಿ ಎಲ್ಲ ಮರತ್ಹೋಗುತ್ತೆ."

ಇದ್ದ ಒಬ್ಬನೇ ಮಗನ ದುರವಸ್ಥೆಗೆ ಹೆತ್ತ-ಹೊಟ್ಟೆ ಸಂಕಟಪಟ್ಟಿತು. ಮೂಗು ಒರಸಿಕ್ಕೊಳ್ಳುತ್ತ ರುದ್ಧಕಂಠದಿಂದ ರಾಜಮ್ಮ ಮೆಲ್ಲನಂದರು—"ಹಾಗಾದ್ರೆ ನೀ ಸ್ವಲ್ಪ ಅವನ ಹತ್ತಿರ ಕೂರಪ್ಪ ಸೀತಾರಾಮು. ಈಗ್ಲೆ ಬಂದ." ಮಗನಿಗೆ ಊಟ ತರಲು ಆಕೆ ಒಳಗೆ ಹೋದರು. ಸೀತಾರಾಮು ಮೆಲ್ಲನೆ ಬಾಲುವಿನ ಹತ್ತಿರ ಬಂದು ನಿಂತ.

'ಊಂ......ಊಂ......ಊಂ.'

ಮಗುವಿನಂತೆ ರಾಗರಾಗವಾಗಿ ಅಳುತ್ತಿದ್ದಾನೆ ಹುಡುಗ.

ಸುಮ್ಮನೆಯೇ ನಿಂತ ಸೀತಾರಾಮು. ಕಾರನ್ನು ಷೆಡ್ಡಿನೊಳಗೆ ಬಿಟ್ಟು ಒಳಬಂದರು ರಂಗಯ್ಯನವರು. ರಾಜಮ್ಮ ಅಡಿಗೆಯವನಿಂದ ಊಟ ತೆಗೆಯಿಸಿಕೊಂಡು ಬಂದರು. ಮಂಚದ ಪಕ್ಕದಲ್ಲಿ ಕಾಲುಮಣಿ ಇಟ್ಟು ತಟ್ಟೆಯಿಟ್ಟು ಮಗನನ್ನು ಮೆಲ್ಲಗೆ ತಟ್ಟಿದರು.—

"ಏಳು ಮಗು ಒಂತುತ್ತು ಊಟ ಮಾಡಪ್ಪ ಜಾಣ. ಬೆಳಿಗ್ಗೆಯಿಂದ ಉಪವಾಸ ಇದ್ದೀ, ಏಳಮ್ಮ ಕಂದ!"

"ಊಹೂಂ ಬೇಡಾ, ಬೇಡಾ, ಬೇಡಾ!!! ನೀವೆ ಮಾಡಿ ಊಟಾನ. ನಾ ಹೀಗೇ ಸಾಯ್ತೀನಿ"

ರಂಗಯ್ಯನವರು ಹೊರಬಾಗಿಲಲ್ಲಿ ನಿಂತು ನೋಡಿ ಸೀತಾರಾಮುವಿಗೆ ಹೇಳಿದರು.—

"ಅವಳಿಂದ ಸಾಧ್ಯವಿಲ್ಲ ಸೀತಾರಾಂ. ನೀನೇ ಹೇಗಾದ್ರು ಒಂತುತ್ತು ಊಟ ಮಾಡ್ಸಪ್ಪ."

ಸೀತಾರಾಮು ಸದ್ದಿಲ್ಲದೆ ಬಟ್ಟೆಬದಲಿಸಿ ಕಾಲು ತೊಳೆದು ಬಂದ. ರಾಜಮ್ಮ ಸೋತು ಕೂತಿದ್ದರು. ರಂಗಯ್ಯನವರು ಸಂಜ್ಞೆಮಾಡಿ ಮಡದಿಯನ್ನು ಹೊರಕ್ಕೆ ಕರೆದರು.

ಸೀತಾರಾಮು ಮೆಲ್ಲನೆ ಬಾಲುವನ್ನು ಇತ್ತ ತಿರುಗಿಸಿ ಹೇಳಿದ—

"ಏಳಿ, ಬಾಲು, ಸ್ವಲ್ಪ ಊಟಮಾಡಿ. ನೋಡಿ ನಿಮ್ಮ ತಂದೆ-ತಾಯಿ ಎಲ್ಲ ಬೆಳಗಿನಿಂದ ಉಪವಾಸ ಕೂತಿದಾರೆ. ನನಗೂ ಊಟ ಇಲ್ಲ. ಯಾಕೆ ಹೀಗೆ ಮಾಡ್ತೀರಿ?"

ಅವನ ಕೊರಳಿಗೇ ತೆಕ್ಕೆಬಿದ್ದ ಬಾಲು—

"ನಿಜ ಹೇಳಿ ಸೀತಾರಾಂ. ನಾ ಊಟ ಮಾಡ್ತೀನಿ, ಚಿತ್ರಾ ಮತ್ತೆ ಬರ್ತಾಳಾ?"

ಸೀತಾರಾಮು ಮೃದುವಾಗಿ ನಕ್ಕ—

"ಅವಳು ಮತ್ತೆ ಬರೋಲ್ಲಾಂತ ನಿಮಗೆ ಯಾರು ಹೇಳಿದ್ದು ಬಾಲು? ಇಲ್ಲೇ ಮದ್ರಾಸಿಗೋ, ಬೊಂಬಾಯಿಗೋ ಹೋಗಿದ್ದಾಳೆ. ಮತ್ತೆ ಬಂದೇ ಬರ್ತಾಳೆ ಅವಳು. ನಿಮ್ಮನ್ನು ಬಿಟ್ಟು ಎಲ್ಲಿಗೆ ಹೋಗ್ತಾಳ ಅವಳು. ಅವಳು ಬರದಿದ್ರೆ ನಾನೇ ಹೋಗಿ ಕರಕೊಂಡು ಬರ್ತೀನಿ. ನೀವು ಮೊದ್ಲು ಊಟಮಾಡಿ."

ಬಾಲು ಹುಚ್ಚನಗೆ ನಕ್ಕ—

"ನಿಜವಾ ಸೀತಾರಾಂ! ನಂಗೆ ಸುಳ್ಳುಗಿಳ್ಳು ಹೇಳಿದ್ರೆಕೆಂಪಾಂಬುಧಿ ಕೆರೆ ಹಾರ್ಬಿಡ್ತೀನಿ ಗೊತ್ತಾ!"

"ಇಲ್ಲಪ್ಪಾ ಇಲ್ಲ. ನಾಯಾಕೆ ಸುಳ್ಳು ಹೇಳಲಿ? ಎಲ್ಲಿ ತಗೊಳ್ಳಿ ನೋಡೋಣ!" ಅನ್ನುತ್ತ



ತುತ್ತನ್ನು ಬಾಯಿಗಿಟ್ಟ ಸೀತಾರಾಮು. ಬಾಲು ಮೆಲ್ಲಮೆಲ್ಲನೆ ಊಟಮಾಡತೊಡಗಿದ.

೨

ಎಲ್ಲರ ಊಟದ ಶಾಸ್ತ್ರ ಮುಗಿದು ಮಲಗುವಾಗ ರಾತ್ರಿ ಹನ್ನೊಂದು ಮುಟ್ಟಿತು. ಹಾಲಿನ ಜೊತೆಯಲ್ಲಿ ಒಂದು ನಿದ್ರೆಬರುವ ಮಾತ್ರೆಯನ್ನು ಬೆರಸಿಕೊಟ್ಟರು ಬಾಲುವಿಗೆ. ಸೀತಾರಾಮುವಿನ ಕೈಹಿಡಿದುಕೊಂಡೇ ಮೆಲ್ಲನೆ ಕಣ್ಣು ಮುಚ್ಚಿದ ಬಾಲು.

ಹಗುರವಾಗಿ ಹೊದಿಕೆ ಹೊದಿಸಿ ಮೆಲ್ಲನೆ ಹೊರಗೆ ಬಂದ ಸೀತಾರಾಮು. ರಾಜಮ್ಮ ಮಂಚದ ಪಕ್ಕದ ಕುರ್ಚಿಯಲ್ಲಿ ಚಿಂತಿಸುತ್ತ ಕುಳಿತರು.

'ಬಾಲು; ಮೂರು ಮಕ್ಕಳನ್ನು ಕಳೆದುಕೊಂಡ ನಂತರ ಹುಟ್ಟಿ ಬದುಕಿದವನು ಬಾಲು. ಅವನ ಮುಂದೆ ಮಕ್ಕಳೇ ಇಲ್ಲ. ಒಬ್ಬನೇ ಮಗನೆಂದು ಎಷ್ಟು ಮುದ್ದಿನಿಂದ ಬೆಳೆಸಿದ್ದಾಯಿತು.

ಒಬ್ಬನೇ ಮಗನಾದರೂ ಮುತ್ತಿನಂತಹ ಹುಡುಗ. ತಂದೆ-ತಾಯಿಗಳ ಕಣ್ಮಣಿಯಾಗಿ ಈವರೆಗೆ ಬೆಳೆದುಬಂದನಲ್ಲ! ಈಗ ಒಂದೆರಡು ವರ್ಷಗಳಿಂದೀಚೆ ಹುಡುಗ ಏಕೋ ಬದಲಿಸಿದ. ವರ್ಷದ ಹಿಂದೆ ಕೂಡ ನನ್ನ ತೊಡೆಯ ಮೇಲೆ ಬಂದು ಮಲಗುತ್ತಿದ್ದನಲ್ಲವೆ?

ವಯಸ್ಸು ಬಂದ ಹುಡುಗ. ಆ ಮಾಯದ ಜಿಂಕೆ ಏನು ಮರುಳು ಮಾಡಿತೋ. ಯಾವ ಹೆಣ್ಣೂ ಮೋಹಿಸುವಂಥ ಚೆಲುವ ನನ್ನ ಮಗ. ಹುಡುಗನ ರೂಪೇ ಮುಳುವಾಯಿತೇ ಅವನಿಗೆ?'

ಶಾಂತವಾಗಿ ನಿದ್ರಿಸುತ್ತಿದ್ದರೂ ರಾವು ತಟ್ಟಿದಂತಿದ್ದ ಮಗನ ಮುಖನೋಡಿ ರಾಜಮ್ಮ ಉಸುರ್ಗರೆದರು.

ಗಂಡ ಲಕ್ಷಗಟ್ಟಲೆ ಸಂಪಾದಿಸಿ ಗುಡ್ಡೆಹಾಕಿದ್ದಾರೆ. ಒಬ್ಬನೇ ಮಗ. ಕುಲೀನರ ಮಗಳನ್ನು ತಂದು ಮನೆತುಂಬಿಸಿಕೊಳ್ಳಬೇಕೆಂದಿದ್ದ ಅವರ ದಿನದಿನದ ಕನಸು ದುಃಸ್ವಪ್ನವಾಗಿ ತಿರುಗಿತು.

'ಇನ್ನು ಈ ಹುಡುಗ ಸರಿಯಾಗುವುದು ಹೇಗೆ? ಈಗಲೇ ಅನೇಕರಿಗೆ ಗುಮಾನಿ ಬಂದಿದೆ. ಹೆಣ್ಣು ಕೊಡುವವರು ಯಾರು?'

"ಚಿತ್ರಾ, ಚಿತ್ರಾ!"

ಎರಡು ತೋಳನ್ನೂ ಉಜ್ಜುತ್ತಾ ಕನವರಿಸಿದ ಬಾಲು. ತಾಯಿ ಎದ್ದು ಮಗನ ಪಕ್ಕದಲ್ಲಿ ಕುಳಿತು ಮೆಲ್ಲನೆ ತಲೆಯನ್ನು ಸವರಿದರು. ಅವನು ಮಗ್ಗಲು ತಿರುಗಿದ.

ಆರೇಳು ದಿನಗಳಿಂದ ನಡೆದ ಭವಣೆ ಇದು. ಮನೆಮಂದಿಗೆಲ್ಲ ಸಾಕಾಗಿ ಹೋಗಿದೆ. ಓಡಿ ಓಡಿ ಹೋಗುವ ಹುಡುಗನನ್ನು ಹಿಡಿದು ತರುವ ಕೆಲಸ ರಂಗಯ್ಯನವರು, ಸೀತಾರಾಮುವಿನದಾಗಿದೆ.

ಈ ಚಿಂತೆಯಲ್ಲೂ ರಾಜಮ್ಮನವರ ಕಣ್ಣು ಮುಚ್ಚತೊಡಗಿತು. ಸೀತಾರಾಮುವಿಗಾಗಿ ಆಕೆ ಕಾದು ಕುಳಿತರು. ಹೊರಗಿನ ಆಫೀಸು ಕೋಣೆಯಲ್ಲಿ ರಂಗಯ್ಯನವರು ಸೀತಾರಾಮು ಮೆಲ್ಲಮೆಲ್ಲನೆ ಮಾತು ನಡೆಸಿದ್ದಾರೆ. ಸೀತಾರಾಮು ಒಂದು ಬದಿಯ ಕಿಟಕಿಯ ಹತ್ತಿರ ಕೈಕಟ್ಟಿ ನಿಂತಿದ್ದಾನೆ.

ಸಾಂಸಾರಿಕ ಚಿಂತೆಯೆಂಬುದನ್ನೇ ಕಾಣದ ರಂಗಯ್ಯನವರು ಈಗ ಎಂಟು ದಿನಗಳಿಂದ ಕಂಗೆಟ್ಟು ಹೋಗಿದ್ದರು. ಅವರು ತಮ್ಮ ಬೋಳು ತಲೆ ಸವರಿಕೊಳ್ಳುತ್ತ ಅಂದರು.

"ಏನೋ ನನಗೆ ಒಂದೂ ತೋರೋಲ್ಲಪ್ಪ ಸೀತಾರಾಮು ಹ್ಯಾಗೆ ಸುದಾರಿಸೋದಪ್ಪ ಇವನ್ನ?"

ಮುಖಬಾಗಿ ಮೌನದಲ್ಲಿ ನಿಂತ ಸೀತಾರಾಮು. ಎಲ್ಲ ಬಗೆಯಲ್ಲೂ ಹಿರಿಯರಾದ ಅವರ ಮುಂದೆ ಅವರ ಮಗನ ವಿಷಯವಾಗಿ ಏನು ಹೇಳಲೂ ಅವನಿಗೆ ಮನಬರದು.

ತಾನು ಕಂಡಂತೆ ಅಂತಹ ಹಾಲು ಹೃದಯದ ಹುಡುಗ ಕೇವಲ ಒಂದು ಹುಡುಗಿಯ ಸಹವಾಸದಿಂದ ತೀರಾ ಇಷ್ಟು ಭ್ರಮೆಗೆಡುವುದೆಂದರೆ ಎಂತಹ ಆಭಾಸ!

ಕೂಡಲೇ ಅವನಿಗೆ ತನ್ನ ಗಿರಿಜಳ ನೆನಪು ಬಂದಿತು. ಬಾಲ್ಯದಿಂದಲೂ ಗಿರಿಜ ತನ್ನ ಹೆಂಡತಿಯಾಗುವವಳೆಂದು ಗೊತ್ತು. ಆದರೂ ಒಂದು ದಿನವಾದರೂ ಈ ಹುಚ್ಚುಚ್ಚಾರ ಇಲ್ಲವಲ್ಲ. ಇತ್ತೀಚೆಗೆ ತಾವಿಬ್ಬರೂ ಪ್ರಾಯಕ್ಕೆ ಬಂದಮೇಲೂ ಊರಿಗೆ ಹೋದಾಗ ನಾಲ್ಕಾರು ಬಾರಿ ಗಿರಿಜನ ದರ್ಶನವಾಗುವುದು. ಸ್ವಲ್ಪ ಹತ್ತಿರದಲ್ಲಿ ಕಂಡಾಗ ಇಬ್ಬರಲ್ಲೂ ಅನ್ಯತಭಾವನೆಯ ಮೃದುನಗೆಯ ವಿನಿಮಯವಾಗುವುದು. 'ಇದು ನನ್ನ ಹೂವು' ಎಂಬ ಒಂದು ಪುನೀತಭಾವ ಅವನಲ್ಲಿ ಮೂಡುವುದು. ಅಷ್ಟೆ; ಅವನು ಸಂತೃಪ್ತ.

ಹಿರಿಯರು ಏಕೆ ತಮ್ಮ ಮದುವೆಯನ್ನು ನಿಧಾನ ಮಾಡಿದ್ದಾರೆಂದು ಬೆದಕುವ ಗೋಜಿಗೆ ಅವನು ಹೋದವನಲ್ಲ. ಗಿರಿಜೆಯೊಡನೆ ಚಲ್ಲಾಟ, ಪ್ರಣಯ ಚೇಷ್ಟೆ ನಡೆಸಿದವನಲ್ಲ. ತನ್ನ ತಂಗಿ ಗಂಗೆಯೊಡನೆ ಅವಳು ಮೆಲುಮೆಲನೆ ಮಾತಾಡುತ್ತ ಸುಳಿದಾಡುವಾಗ ತಾನೂ ದೂರದಿಂದ ಆ ಗಿರಿಕನ್ನೆಯನ್ನ ನೋಡಿ ಮನ ತಂಪು ಮಾಡಿಕೊಳ್ಳುತ್ತಿದ್ದ; ಆಯಿತು.

ಈಗಲೂ ಅವನಿಗೆ ಅನೇಕಬಾರಿ ಗಿರಿಜೆಯ ನೆನಪು ಬರುವುದು. ಆದರೆ ಭಾವನೆ ಇಷ್ಟೆ. ಗಿರಿಜ ನನಗಾಗಿ ಅರಳಿನಂತ ಸಿರಿದಾವರೆ. ಅವಳು ಎಂದೂ ನನ್ನವಳೆ.

ಇದಕ್ಕಿಂತ ಹೆಚ್ಚಿನ ಗದ್ದಲ ಎಂದೂ ಹಚ್ಚಿಕೊಂಡವನಲ್ಲ ಸೀತಾರಾಮು. ಈಗ ಈ ಬಾಲುವಿನ ರಗಳೆ ಅವನಿಗೆ ಅರ್ಥವೇ ಆಗಲೊಲ್ಲದು.

ನಾಲ್ಕು ವರ್ಷಗಳಿಂದ ನೋಡಿದ್ದಾನೆ ಬಾಲುವನ್ನ. ಅವನು ಶ್ರೀಮಂತರ ಹುಡುಗ; ಕೈಯಲ್ಲಿ ಹೇರಳ ಹಣ ಇರುತ್ತದೆ. ಧಾರಾಳ ಖರ್ಚು ಮಾಡುತ್ತಾನೆ. ಹೇಳಿ ಕೇಳಿ ಬೆಂಗಳೂರಿನಲ್ಲಿಯೇ ಹುಟ್ಟಿ ಬೆಳೆದವ. ಷೋಕಿಯ ಲೋಕದಲ್ಲೇ ಓಲಾಡುವ ಹುಡುಗ. ಮಗನ ಎಲ್ಲ ಚರ್ಯೆಗೂ ತಂದೆ ತಾಯಿಗಳ ಸಹಿ ಇದೆ. ಯಾವ ಜವಾಬ್ದಾರಿಯೂ ಇಲ್ಲದ ಸ್ವಚ್ಛಂದ ರಸಯೌವನ. ಸರ್ವಸ್ವಾತಂತ್ರ್ಯ.

ಬಾಲುವಿನ ಇತ್ತೀಚಿನ ಚಲನವಲನಗಳು ಸೀತಾರಾಮುವಿಗೆ ತಿಳಿದಿತ್ತು. ಚಿತ್ರಾಳ ಜೊತೆ ನಾಲ್ಕಾರು ಬಾರಿ ಅವನನ್ನು ಕಂಡಿದ್ದ. ಆದರೆ, ಅದರಲ್ಲಿ ಪ್ರವೇಶ ಮಾಡುವುದು ಅವನ ಜಾಯಮಾನಕ್ಕೆ ಬಂದದ್ದಲ್ಲ. ಅಲ್ಲದೆ ಇನ್ನು ಒಂದೇ ವರ್ಷದ ಅವನ ವಿದ್ಯಾಭ್ಯಾಸ ಮುಗಿದೊಡನೆ ಅವನ ಮದುವೆ ಮಾಡಬೇಕೆಂಬ ಮಾತು ಆಗಾಗ್ಗೆ ಮನೆಯಲ್ಲಿ ಬರುತಿತ್ತಾದ್ದರಿಂದ; ಮದುವೆಯಾದರೆ ಈ ಹೊರಗಿನ ಹವ್ಯಾಸ ತಪ್ಪೀತು ಎಂಬ ಒಂದು ಸಮಾಧಾನವೂ ಬಂದು ಅವನು ಅದರ ವಿಷಯವಾಗಿ ಯಾರೊಡನೆಯೂ ಚಕಾರವೆತ್ತದೆ ಸುಮ್ಮನಾದ.

ರಂಗಯ್ಯನವರ ಗಮನಕ್ಕೂ ಈ ವಿಷಯ ಬಾರದೇ ಇರಲಿಲ್ಲ. ಮಡದಿಗೆ ತಿಳಿದರೆ ನೊಂದುಕೊಂಡಾಳು- ಎಂದು ಅವರು ಆ ವಿಷಯ ಮನೆಯಲ್ಲಿ ವಿಚಾರಿಸದೆ ಪ್ರತ್ಯೇಕ ಬಾಲುವನ್ನು ಕರೆದು ಸೂಕ್ಷ್ಮದಲ್ಲಿ ಎಚ್ಚರಿಕೆ ತಿಳಿಸಿದರು. ಆದರೆ ಬಾಲು ಒಂದು ಸತ್ಯವನ್ನು ಮುಂದಿಟ್ಟು ಜಾರಿಕೊಂಡಿದ್ದ.

"ಹಾಗೇನಿಲ್ಲಣ್ಣ. ನಮ್ಮ ಕಾಲೇಜಿನ ಕಲಾಸಂಘದ ಸದಸ್ಯೆ ಅವಳು. ಅವಳಂತೇ ಇನ್ನೂ ನಾಲ್ಕೆಂಟು ಹುಡುಗೀರು ಇದಾರೆ ಅಲ್ಲಿ. ಎಲ್ಲಾ ಒಟ್ಗೇನೇ ಓಡಾಡ್ತಾ ಇರ್ತೀವಿ ಅಲ್ಲಿ"

ಹಾಗಿದ್ದದ್ದು ನಿಜ. ತಂದೆಯ ಬಾಯಿ ಕಟ್ಟಿತು. ಬಾಲುವಿನ ದಾರಿ ನಿರಾಳವಾಯಿತು. ಕಾಲೇಜಿನ ವಾತಾವರಣದಲ್ಲಿ ಎಲ್ಲರೂ ಬೆರೆಯುವವರು. ಯಾರು ಅಡ್ಡಿಮಾಡಬೇಕು?

ತಮ್ಮ ಉದಾಸೀನದಿಂದ ಮೀರಿ ಹೋದ ಸಂಗತಿಗೆ ರಂಗಯ್ಯನವರು ಚಿಂತಾಕ್ರಾಂತರಾದರು. ಅವರ ಮುಂದಿನ ಅಪ್ಪಣೆಗಾಗಿ, ಸೀತಾರಾಮು ಕೈಕಟ್ಟಿ ನಿಂತೇ ಇದ್ದ. ಅವರು ಉಸ್, ಅನ್ನುತ್ತ ನುಡಿದರು—

"ತುಂಬಾ ಹೊತ್ತಾಗಿದೆ ಹೋಗಿ ಮಲಕ್ಕೋಪ್ಪ ಸೀತಾರಾಂ. ಇನ್ನೊಂದು ಎಂಟ್ದಿನ ನೀನು ಆಫೀಸಿಗೆ ಬರಬೇಡ. ಸ್ವಲ್ಪ ಅವನ ಹತ್ರಾನೆ ಇದ್ದು ಏನಾದರೂ ಸಮಾಧಾನ ಹೇಳಪ್ಪ. ಅವನು ಹೊರಗಡೆ ಹೋಗದೇ ಇದ್ದಾಗೆ ನೋಡ್ಕೋಬೇಕು. ಅವಳಂತೂ ತುಂಬಾ ಗಾಬರಿಯಾಗಿದಾಳೆ."

ಸೀತಾರಾಮು ಮೆಲ್ಲನೆ ಅಲ್ಲಿಂದ ಒಳಬಂದ. ರಾಜಮ್ಮನವರು ತಲೆಯ ಮೇಲೆ ಕೈ ಹೊತ್ತು ಜೂಗರಿಸುತ್ತ ಕುಳಿತಿದ್ದಾರೆ. ಅವನು ಮೆಲ್ಲನೆ ಹತ್ತಿರ ಬಂದು ನಿಂತು ಬಹು ಮೆಲ್ಲನೆ ಹೇಳಿದ.

"ಅಮ್ಮ ನೀವು ಹೋಗಿ ಮಲಕೊಳ್ಳಿ. ನಾ ಇಲ್ಲೇ ಮಲಕ್ಕೊಳ್ತೀನಿ."

ಅವರು ಹಗುರ ಏಳುತ್ತ ಪಿಸುಗುಟ್ಟಿದರು—

"ಎಲ್ಲಾದ್ರು ಎದ್ದು ಓಡ್ಯಾನಪ್ಪ; ಭದ್ರವಾಗಿ ಬಾಗ್ಲುಹಾಕ್ಕೊಂಡು ಮಲಕ್ಕೋಪ್ಪ."

"ಪರವಾಗಿಲ್ಲಮ್ಮ. ನಾ ನೋಡ್ಕೋತೀನಿ, ನೀವು ಮಲಕ್ಕೊಳ್ಳಿ."

ರಾಜಮ್ಮ ಹೊರಗೆ ದಾಟಿದರು. ಸೀತಾರಾಮು ಬಾಗಿಲು ಭದ್ರಪಡಿಸಿ ಆ ಕೊಠಡಿಗೇ ಸೇರಿದಂತಿದ್ದ ಬಾತ್‌ರೂಮಿಗೆ ಹೋಗಿಬಂದು ತನ್ನಮಂಚದ ಮೇಲೆ ಕುಳಿತ.

ಪುಟ್ಟ ನೀಲಿಯ ದೀಪ ತೆಳು ನೀಲಿಯ ಗೋಡೆಯ ಮೇಲೆ ಹರಡಿ ತಂಪನ್ನು ತಂದಿದೆ ಕೊಠಡಿಗೆ. ಸೀತಾರಾಮು ಬಾಲುವಿನ ಮುಖ ನೋಡಿದ. ಕಂದನ ಹಾಲುತನ ಸೂಸುತ್ತಿದೆ ಮೊಗದಲ್ಲಿ. ಸ್ವಲ್ಪ ಓರೆಯಾಗಿ ಅಸ್ತವ್ಯಸ್ತವಾಗಿ ಮಲಗಿದ್ದಾನೆ. ಹೊದ್ದಿಕೆ ಸರಿಮಾಡೋಣವೇ?--- ಎಂಬ ಒಂದು ಯೋಚನೆ ಬಂತು. ಆದರೆ ಮುಟ್ಟಿದರೆ ಎಚ್ಚರವಾಗುತ್ತೆ. ಆಯಾಸದ ನಿದ್ರೆ. ಯಾಕೆ ಮುಟ್ಟಬೇಕು? ಚಳಿ ಏನೂ ಇಲ್ಲ— ಎಂದುಕೊಂಡು ಅವನು ತನ್ನ ಹಾಸಿಗೆಯಲ್ಲಿ ಮುಗ್ಗಲುಕೊಟ್ಟ.

ರಾಜಮ್ಮನವರ ಹೃದಯ ನೊಂದು ಸೋತಿತ್ತು. ಮಲಗಿದ ಕೂಡಲೆ, ಆಕೆಗೆ ನಿದ್ರೆಬಂದಿತು.

ರಂಗಯ್ಯನವರು ಮಾತ್ರ ಮಲಗಲಿಲ್ಲ. ಅವರ ನಿದ್ರೆ ಎಲ್ಲೋ ಓಡಿ ಹೋಗಿತ್ತು. ಅವರು ತಮ್ಮ ಹೊರಗಿನ ಕೋಣೆಯಲ್ಲಿ ಅತ್ತಿಂದಿತ್ತ ಎಡೆಯಾಡಿದರು. ಧುತ್ತೆಂದು ತಲೆಯಮೇಲೆ ಬಿದ್ದ ಈ ಚಿಂತೆಯ ಬೇಗೆಯಲ್ಲಿ ಅವರ ತಲೆ ಕಾಯ್ದು ಹೋಯಿತು.

ಅವರ ಕಾಲುಗಳಂತೆ ತಲೆಯೂ ಅತ್ತಿತ್ತ ಎಡತಾಕುತ್ತಿತ್ತು—

ಮಗನ ಹೀನ ವರ್ತನೆ ಅವರ ಗಂಭೀರ ಬಾಳ್ವೆಗೆ ಮಸಿ ಬಳೆದಿತ್ತು. ಸ್ವತಃ ಎಗ್ಸಿಕ್ಯೂಟಿವ್ ಇಂಜನಿಯರಾಗಿ ಮೆರೆದು ನಿವೃತ್ತರಾಗಿ ಈಗ ಸ್ವಂತ ಕಂಟ್ರಾಕ್ಟು ನಡೆಸಿ ನಾಲ್ಕಾರು ಜ್ಯೂನಿಯರ್ ಇಂಜನಿಯರುಗಳಿಗೆ ಸಂಬಳ ಕೊಡುತ್ತಿದ್ದರು. ಲಕ್ಷಾಂತರ ರೂಪಾಯಿನ—ವಹಿವಾಟು. ಇನ್ನು ಒಂದೆರಡು ವರ್ಷಗಳಲ್ಲಿ ಮಗ ತರಬೇತು ಪಡೆದು ತಮಗೆ ನೆರವಾಧಾನು— ಎಂಬ ಭ್ರಮೆಯೊಂದು ಈ ಎಲ್ಲ ಪ್ರಕರಣಗಳಿಗೂ ತೆರೆ ಎಳೆದಿತ್ತು.

ಇಂಥದು ಎಲ್ಲೆಲ್ಲೂ ನಡೆಯುತ್ತದೆಂದು ಆಗಾಗ ಅವರ ಕಿವಿಗೆ ಬೀಳುತ್ತಿತ್ತಾದರೂ ಅದು ಅವರ ಮೆದುಳಿನವರೆಗೆ ಮುಟ್ಟುತ್ತಿರಲಿಲ್ಲ. ತಮ್ಮ ಸ್ವಂತ ಬಾರುಬಾರುಗಳಲ್ಲಿ ಅವರು ಇಂತಹ ಕ್ಷುಲ್ಲಕ ವಿಷಯಗಳಿಗೆ ಕಿವಿಗೊಡುತ್ತಲೂ ಇರಲಿಲ್ಲ. ಆದರೆ ಕೆಲವು ತಿಂಗಳ ಹಿಂದೆ ಅವರ ಸರಿಸಮಾನರಾದ ಗೆಳೆಯರೊಬ್ಬರು ಸಹಜವಾಗಿ ಹೇಳಿದಮಾತು, ಮುಖದ ಮೇಲೆ ಹೊಡೆದಂತೆ ನೆನಪು—

"ಏನು ರಾಯರೇ ನಿಮ್ಹುಡಗ ಯಾವದೋ ಒಂದು ಬಣ್ಣದಹಕ್ಕಿ ಹಿಡಕೊಂಡು ಓಡುತ್ತಾ ಇದಾನಲ್ಲ ?"

ಅದು ಸಹಜವಿದ್ದರೂ ರಂಗಯ್ಯನವರ ಆಂತರಿಕ ಅಂತಸ್ತಿಗೆ ಅಸಹ್ಯಕರವೆನಿತು. ಆ ಕಹಿ ಪ್ರಶ್ನೆಗೆ ಉತ್ತರ ಸಿಗದೆ ರಂಗಯ್ಯನವರು ಕಕಮಕವಿರುವಾಗಲೇ ಆ ಗೆಳೆಯರು ಆ ವಿಷಯ ಬಿಟ್ಟು ಬೇರೆ ವಿಷಯಕ್ಕೆ ದಾಟಿದ್ದರು.

ಇಂತಹ ಮಹಾನಗರದಲ್ಲಿ ಇವೆಲ್ಲ ಸಾಮಾನ್ಯ — ಎಂಬ ಧೋರಣೆ ಇತ್ತು ಆ ಗೆಳೆಯರ ಮಾತಿನಲ್ಲಿ.

ಮುಂದೆ ಅವರು ಮಗನನ್ನು ವಿಚಾರಿಸಿದಾಗ ಅವನಿಂದ ಸಹಜ ಉತ್ತರದೊರೆತು ಅವರು ನಿಶ್ಚಿಂತರಾದರು.

ಈಗ! ಸತ್ಯ ಬೆತ್ತಲೆಯಾಗಿ, ಅವರ ಮುಂದೆ ಬಂದು ನಿಂತಿತು. ಅವರು ಅದಕ್ಕೆ ಮುಖಕೊಡಲಾರರು.

ಯಃಕಶ್ಚಿತ್ ಆ ಹೊಟೇಲ ಕದ ಕಾಯುವ ಜವಾನನಿಗೂ ಎಷ್ಟು ತಿರಸ್ಕಾರ!

ಇಂಜನಿಯರ ಮಗನೆಂದು ಎಷ್ಟುಬಾರಿ ಕಾರಿನಲ್ಲಿ, ಮೋಟರುಬೈಕಿನಲ್ಲಿ ಆ ಹೋಟಲಿಗೆ ಹೋಗಿ ಬಂದಿದ್ದಾನೋ; ಎಷ್ಟುಬಾರಿ ಆ ಜವಾನನಿಗೆ ಭಕ್ಷೀಸು ಕೊಟ್ಟಿದ್ದಾನೋ ?

ಆದರೆ ಇಂದು ಅವನಾಡಿದ ನಿರ್ಲಕ್ಷ್ಯದ ಮಾತು ರಂಗಯ್ಯನವರ ಅಭಿಮಾನಕ್ಕೆ ಬರೆ ಎಳೆಯಿತು. ಅವರು ಕಿವಿಬಾಯಿ ಮುಚ್ಚಿ ಸಹಿಸಿದರು.

ಈ ಭೋಳೇಹುಡುಗನಿಗೆ ಮಂಕುಬೂದಿ ಹಾಕಿದ ಆ ಹುಡುಗಿ ಯಾರಿರಬಹುದು. ?

ಯೋಚಿಸಿ, ಯೋಚಿಸಿ ಆಯಾಸವಾಯಿತು ರಂಗಯ್ಯನವರಿಗೆ. ದೀಪವಾರಿಸಿ ನೀರು ಕುಡಿದು ಮಂಚದಮೇಲೆ ಉರುಳಿದರು. ಬಗೆಹರಿಯದ ಸಮಸ್ಯೆ. ಕಡೆಗೆ ಅವರಿಗೆ ಸಮಾಧಾನ ತಂದದ್ದು ಸೀತಾರಾಮುವಿನ ನೆರವು.

'ದೇವರಂಥ ಹುಡುಗ ಸೀತಾರಾಮು. ಅವನಿಂದ ನಮ್ಮ ಹುಡುಗ ದಾರಿಗೆ ಬಂದಾನು'.

ಈ ಭರವಸೆ ಅವರ ತಲೆ ತಂಪುಮಾಡಿತು. ಅವರು ಮೆಲ್ಲಮೆಲ್ಲನೆ ಕಣ್ಣು ಕೂಡಿಸಿದರು.

## ೨

ಗಕ್ಕನೆ, ಎಚ್ಚರವಾಯಿತು ಸೀತಾರಾಮುವಿಗೆ. ಬಡಕ್ಕನೆ ಎದ್ದು ಕುಳಿತ. ಮಂಚದ ಮೇಲೆ ಬಾಲು ಇಲ್ಲ. ಬಾಗಿಲು ಕಡೆ ನೋಡಿದ. ಬೋಲ್ಟ್ ಹಾಕಿಯೇ ಇದೆ.

ಬಾಲು ತೂರಾಡುತ್ತಾ ಬಾತ್ ರೂಮಿನಿಂದ ಹೊರಬಂದ. ಸುಮ್ಮನೆ ಕುಳಿತಿದ್ದ ಸೀತಾರಾಮು. ಬಾಲು ಬಂದವನು ತನ್ನ ಮಂಚಕ್ಕೆ ಹೋಗಲಿಲ್ಲ. ಸೀತಾರಾಮುವಿನ ಪಕ್ಕದಲ್ಲಿ ಕುಳಿತು ಅವನ ಕೊರಳಿಗೆ ತೆಕ್ಕೆ ಬಿದ್ದ.

ಮೆಲ್ಲನೆ ಅವನ ಕ್ರಾಪನ್ನು ಸವರಿದ ಸೀತಾರಾಮು.

"ನಂಗೆ ತುಂಬಾ ತಲೆ ತಿರುಗುತ್ತೆ ಸೀತಾರಾಂ. ಏನೋ ಒಂಥರಾ..."

"ಏಳಿ ಮಲಕೊಳ್ಳಿ ಬಾಲು. ಸರಿಯಾಗಿ ನಿದ್ದೆ ಮಾಡಿದ್ರೆ ಎಲ್ಲ ಸರಿಯಾಗುತ್ತೆ. ಸ್ವಲ್ಪ ಹಾಲು ಕುಡಿತೀರಾ ?"

ಹೂವರಳಿದಂತೆ ಮಾತಾಡಿಸಿದ ಸೀತಾರಾಮು.

"ನಂಗೆ ಹಾಲೂ ಬೇಡ ಕೋಲೂ ಬೇಡ.

ಚಿತ್ರಾ ಬೇಕು. ಯಾವಾಗ ಬರ್‍ತಾಳೋ ಅವಳು..?''

'' ನಾನು ನಾಳೆ ವಿಚಾರಿಸ್ತೀನಿ. ಈಗ ನೀವು ಮಲಗಿಕೊಳ್ಳಿ.''

ಹೊರಗಡೆಗೆ ಕೇಳಬಾರದೆಂದು ಪಿಸುಪಿಸನೆ ಮಾತಾಡಿದ ಸೀತಾರಾಮು. ಬಾಲು ಅವನ ಕೆನ್ನೆ ಸವರುತ್ತ ಹೇಳಿದ—

''ಸೀತಾರಾಂ. ನಿಮ್ಮ ಕೆನ್ನೆ ಹುಡುಗೀರ ಕೆನ್ನೆ ಇದ್ದಹಾಗೇ ಇದೆ ಎಷ್ಟು ಮೆತ್ತಗೆ; ಅಯ್ಯೋ ನಿಮ್ಮ ಮೈ ಕೂಡಾ ಅಷ್ಟೆ, ಎಷ್ಟು ದುಂಡು! ಚಿತ್ರಾನ ಕೆನ್ನೆ ಹೀಗೇ ಇತ್ತು ಸೀತಾರಾಂ! ನಿಮ್ಮ ತುಟೀನಂತೂ ಹೆಣ್ಣು ತುಟೀನೇ!''

''ಮೋಹಿನಿ ಬಲವಾಗಿಯೇ ಹಿಡಿದಿದ್ದಾಳೆ,'' ಎನಿಸಿತು ಸೀತಾರಾಮುವಿಗೆ. ಮೆಲ್ಲನೆ ಅವನ ಕೈಯಿಂದ ಬಿಡಿಸಿಕೊಳ್ಳುತ್ತ ಅವನತ್ತ ನೋಡಿದ.

''ಅಯ್ಯೋ!... ನಿಮ್ಮ ಕಣ್ಣು ಎಷ್ಟು ಚೆನ್ನ!''

ಅನ್ನುತ್ತ ಬಾಲು ಅವನನ್ನು ಬಿಗಿದಪ್ಪಿ ಅವನ ತುಟಿ ಕೆನ್ನೆಗಳಿಗೆ ಲೊಟ ಲೊಟ ಮುತ್ತಿಟ್ಟ.

'ನಿಜವಾಗಿ ಹುಡುಗನಿಗೆ ಈಗ ಮೈ ಮೇಲೆ ಪ್ರಜ್ಞೆ ಇಲ್ಲ' —ಅನಿಸಿತು ಸೀತಾರಾಮುವಿಗೆ. ಮೆಲ್ಲನೆ ಅವನ ತೋಳ್ಸೆರೆಯಿಂದ ಬಿಡಿಸಿಕೊಳ್ಳುತ್ತ ಅವನಿಂದ ''ಹೀಗೆಲ್ಲ ಮಾಡಬಾರದು ಬಾಲು. ಸದ್ಯದಲ್ಲೇ ನಿಮಗೆ ಮದ್ವೆ ಮಾಡ್ತಾರೆ. ಒಳ್ಳೆ ಹೆಂಡ್ತಿ ಬರ್‍ತಾರೆ. ಆಗ ಎಲ್ಲ ಸರಿಹೋಗುತ್ತೆ''

ಬಾಲು ಅಳತೊಡಗಿದ—

''ಬೇಡ ಸೀತಾರಾಂ. ನಂಗೆ ಬೇರೆ ಯಾವ ಹುಡುಗೀನು ಬೇಡ. ಚಿತ್ರಾನಂಥ ಹುಡುಗಿ ಮತ್ತೆ ಎಲ್ಲೂ ಇಲ್ಲ.''

ಸೀತಾರಾಮುವಿಗೆ ಹೊಸ ಯೋಚನೆಯೊಂದು ಹೊಳೆಯಿತು. ಹುಡುಗನ ಈ ಭ್ರಮೆಯಲ್ಲೇ ಆ ಹುಡುಗಿ ಯಾರೆಂಬುದನ್ನಾದರೂ ತಿಳಿಯೋಣ ಅವನು ಬಾಲುವಿನ ಬೆನ್ನು ಸವರುತ್ತ ಉಪಾಯದಲ್ಲಿ ಕೇಳಿದ---

''ಬಾಲು ನಿಮ್ಮ ಚಿತ್ರಾ ಯಾರೆಂದು ನನಗಂತೂ ಗೊತ್ತಿಲ್ಲ. ಯಾರು ಆಕೆ?'' ಬಾಲು ಮುಖ ತಗ್ಗಿಸಿದ. ತನ್ನಷ್ಟಕ್ಕೆ ಗೊಣಗಿದ---

''ಚಿತ್ರಾ ಯಾರು? ಅವಳು ಚಿತ್ರಾನೇ! ಅದೇ ಅಪ್ಸರಾ ಹೋಟಲಿನ ಪ್ರೊಪ್ರೈಟರ್ ಇದಾರಲ್ಲ ಫಣಿರಾಜ ಬಾಯರ್, ಅವರ ತಂಗೀ ಮಗಳು''

ಮೆಲ್ಲನೆ ಮತ್ತೊಂದು ಪ್ರಶ್ನೆ ಹಾಕಿದ ಸೀತಾರಾಮು---

''ಈಗ ಆಕೆ ಎಲ್ಲೀಗೆ ಹೋಗಿದಾಳೆ ಬಾಲು?''

ಬಾಲು ಮತ್ತೆ ಮುಳಮುಳ ಅತ್ತ--

''ನಂಗೆ ಗೊತ್ತಿಲ್ಲ ಸೀತಾರಾಂ. ಒಬ್ಬೊಬ್ರು ಒಂದೊಂಥರಾ ಹೇಳಿದ್ರು. ಬಾಯರ್ ಹೇಳಿದ್ರು ಬೊಂಬಾಯಿಗೆ ಹೋಗಿದಾಳೇಂತ. ಆ ಮ್ಯಾನೇಜರ್ ಹೇಳ್ತಾನೆ ಯಾರ ಜೊತೇಗೋ ಇಂಗ್ಲಂಡಿಗೆ ಹೋದ್ಲೂಂತ. ಆ ಮಾರಯ್ಯ ಹೇಳ್ತಾನೆ ಯಾರನ್ನೋ ಮದ್ವೆ ಮಾಡಿಕೊಂಡ್ಲೂಂತ. ಒಬ್ರೂ ಸರಿಯಾಗಿ ಹೇಳೋಲ್ಲ ಸೀತಾರಾಂ!''

''ಸರಿ ಬಿಡಿ; ಹಾಗಾದರೆ ಅವಳ ಯೋಚನೆ ಯಾಕೆ ನಿಮಗೆ. ನಿಮ್ಮ ಮೇಲೆ ಅವಳಿಗೆ ಸ್ವಲ್ಪಾನಾದ್ರೂ ಪ್ರೀತಿ ಇದ್ದಿದ್ರೆ ಹಾಗೆ ನಿಮಗೆ ಹೇಳ್ದೆ ಹೋಗ್ತಾ ಇದ್ಲಾ? ಅವಳಿಗೆ ನಿಮ್ಮ ಚಿಂತೆ ಇಲ್ಲ. ನೀವ್ಯಾಕೆ ಅವಳ ವಿಷಯಕ್ಕೆ ಇಷ್ಟು ಒದ್ದಾಡೋದು.?''

ಬಾಲು ತಟ್ಟನೆ ಅವನ ಮುಖ ನೋಡಿದ. ಅವನ ಮರುಳುತನ ಸ್ವಲ್ಪ ದೂರ ಸರಿದಂತೆ ಕಂಡಿತು. ಸ್ವಲ್ಪ ಸ್ವಚ್ಛವಾಗಿ ಮಾತಾಡಿದ---

''ಯಾಕೆ ಸೀತಾರಾಂ.! ಹೀಗೆ ಕೇಳ್ತೀರಿ? ನೀವು ಗಂಡಲ್ಲವೆ?''

ಸೀತಾರಾಂ ಮೃದುವಾಗಿ ನಕ್ಕ---

''ಏನೋ ನನಗೆ ಗೊತ್ತಿಲ್ಲ ಬಾಲು. ಈಗ ನೀವೇ ಅಂದ್ರಿ ನಾನು ಹೆಣ್ಣಿನ ಹಾಗೆ ಇದೀನೀಂತ! ಯಾಕೆ?''

''ಯಾಕೂ ಇಲ್ರಿ; ನಿಮಗಿನ್ನು ಮದ್ವೆನೇ ಆಗಿಲ್ಲ ಅಲ್ವ? ನಮ್ಮಮ್ಮನ ಹತ್ರ ಅಲ್ದೆ ಮತ್ತೆ ಯಾವ ಹೆಂಗಸರ ಹತ್ರಾನೂ ನೀವು ಮಾತಾಡಿದ್ದನ್ನೇ ನಾನು ನೋಡಿಲ್ಲ. ಹೆಂಗಸರೂಂದ್ರೆ ಏನೂಂತನ್ನೋದೂ ನಿಮಗೆ ಗೊತ್ತಿದ್ದಾಗೇ ಇಲ್ಲಅಲ್ವ?''

ಸೀತಾರಾಮು ಅವನ ಭಾವವನ್ನು ಗ್ರಹಿಸಿ ಅವನ ಕಣ್ಣುಗಳನ್ನೇ ನೋಡಿದ. ಅವನ ಭೋಳೆತನ ಅಲ್ಲಿ ಪ್ರತಿಬಿಂಬಿಸುತ್ತಿದೆ---

''ಯಾಕೆ ಬಾಲು; ನಮ್ಮನೇಲಿ ನಮ್ಮ ತಾಯಿ, ತಂಗಿ, ಅತ್ತಿಗೆ ಯಲ್ಲಾ ಇದಾರಲ್ಲ. ಅವರೆಲ್ಲ ಹೆಂಗಸರಲ್ವೆ?''

ಬಾಲು ಸೋತಂತೆ ನುಡಿದ---

''ಅಯ್ಯೋ! ನಿಮಗೆ ಅರ್ಥಾನೇ ಆಗೋಲ್ಲ ಸೀತಾರಾಂ. ಇಷ್ಟು ದೊಡ್ಡೋರಾಗಿದೀರ. ನೀವು ಯಾವ ಹುಡುಗೀನೂ 'ಲವ್' ಮಾಡಿಲ್ವೆ?''

ಸೀತಾರಾಮು ಬೇಕಂತ ಪೆದ್ದುತನ ತೋರಿದ--

''ಯಾಕೆ 'ಲವ್' ಮಾಡಬೇಕೋ ನಂಗೊತ್ತಿಲ್ಲ ಬಾಲು''

''ಉದ್ಧಾರವಾಯ್ತು. ನೀವು ನಿಜವಾಗೂ ಶಿಖಂಡೀನೇ ಇರಬೇಕು!''

ಸೀತಾರಾಮು ನಿರಾಳವಾಗಿ ನುಡಿದ—

''ನನಗೂ ಹಾಗೆ ಅನ್ಸುತ್ತೆ. ಆದರೆ ಶಿಖಂಡೀಂದ್ರೆ ಏನೋ ಅದೂ ನಂಗೊತ್ತಿಲ್ಲ.''

ಬಾಲು ಕುಳಿತಲ್ಲಿಂದ ಎದ್ದು ಗೊಣಗುತ್ತ ತನ್ನ ಮಂಚದ ಮೇಲೆ ಮುದುರಿದ—

''ಸರಿಬಿಡಿ ಸೀತಾರಾಂ. ನಿಮ್ಹತ್ರ ಯಾಕೆ ನನ್ನ ಸುಖದು:ಖ ಹೇಳಬೇಕು? ನೀವು ಏನೂ ಮಾಡೋಲ್ಲ''

ಸೀತಾರಾಮುವಿಗೆ ಅವನ ಅವಸ್ಥೆ ನೋಡಿ ಕನಿಕರವೆನಿಸಿತು. ಕೈಕಾಲು ಮುದುರಿ ಅಸ್ತವ್ಯಸ್ತ ಸುರುಟಿಕೊಂಡಿದ್ದ ಅವನ ಹತ್ತಿರ ನಿಂತು ಮೈದಡವಿ ಹೇಳಿದ.

''ಹಾಗೆಲ್ಲ ಅನ್ನಬೇಡಿ ಬಾಲು. ನೀವು ಏನು ಕೆಲಸ ಹೇಳಿದರೂ ನಾನು ಖಂಡಿತ ಮಾಡಿಕೊಡ್ತೀನಿ. ನೋಡಿ ಈಗ ರಾತ್ರಿ ಎರಡುಗಂಟೆ. ಈ ಅಪರಾತ್ರೀಲಿ ಏನೂ ಮಾತಾಡಬಾರದು. ಈಗ ದಯವಿಟ್ಟು ನಿದ್ರೆಮಾಡಿ. ಬಾಕಿ ಎಲ್ಲಾ ನಾಳೆ ನೋಡೋಣ''

''ನಂಗೆ ನಿದ್ರೆ ಬರೋಲ್ಲ ಸೀತಾರಾಂ. ನಾ ಹೀಗೇ ಮಲಗಿರ್‍ತೀನಿ. ನೀವು ನಿದ್ದೆಮಾಡಿ.''

''ಈಗ ಸರಿಯಾಯ್ತು! ನನಗೇನು ಧಾಡಿ ನಿದ್ದೆ ಮಾಡ್ದೆ. ಈಗ ನಿದ್ದೆ ಬರುತ್ತೆ ನಂಗೆ. ನೀವು ಮಾಡೀಂದ್ರೆ''

''ಹೂಂ ಮಾಡ್ತೀನಿ.''

ಬಾಲು ಕಣ್ಣುಮುಚ್ಚಿದ. ಸೀತಾರಾಮು ಅವನ ಕೈಕಾಲು ನೀಡಿಸಿ ಮೈತುಂಬ ರಗ್ಗು ಹೊದಿಸಿ ಬಂದು ಮಂಚದಲ್ಲಿ ಕುಳಿತ. ಕಾಲುಗಂಟೆ ಕಳೆ

ಯಿತು. ಬಾಲುವಿಗೆ ನಿದ್ರೆ ಹತ್ತಿದಂತೆ ಕಂಡಿತು. ಅವನು ಮೆಲ್ಲನೆ ಉರುಳಿದ.

'ಢಳಾರ್'—ಎಂಬ ಎದೆಯೊಡೆಯುವ ಶಬ್ದದೊಂದಿಗೇ ಸೀತಾರಾಮು ತಟ್ಟನೆ ಕಣ್ಣು ತೆರೆದ. ಆಳವಾದ ನಿದ್ರೆಯಿಂದ ಪಕ್ಕನೆ ಮೇಲೆದ್ದು ಬಂದ ಕಣ್ಣುಗಳು ಭುಗ್ಗನೆ ಉರಿದವು. ಬೇಗಬೇಗ ಕಣ್ಣು ಹೊಸಕಿದ. ಕೋಣೆಯ ತುಂಬೆಲ್ಲ ಬೆಳಕು. ಬಾಲು ಮೂಲೆಯಲ್ಲಿ ನೆಟ್ಟಗೆ ನಿಂತಿದ್ದಾನೆ. ಮೂಲೆಯ ಸೆಲ್ಫಿನ ಮೇಲಿದ್ದ ರಾಧಾಕೃಷ್ಣರ ಪ್ಲಾಸ್ಟರ್ ವಿಗ್ರಹ ಚೂರುಚೂರಾಗಿ ನೆಲದಮೇಲೆ ಬಿದ್ದಿದೆ. ಸೀತಾರಾಮು ಅವನ ಹತ್ತಿರ ನಿಂತು ಕೇಳಿದ—

"ಇದು ಯಾಕೆ ಬಿತ್ತು ಬಾಲು?"

ಬಾಲು ಇತ್ತ ತಿರುಗದೆ ನೇರ ಉತ್ತರವಿತ್ತ—

"ಅದೇ ಬೀಳಲಿಲ್ಲ. ನಾನೇ ಚುಚ್ಚಿ ಒಡೆದೆ. ಯಾಕೆ ಆ ರಾಧಾಕೃಷ್ಣ ನನ್ನ ಎದುರಿಗೆ ಹಾಗೆ ನಿಂತಿರಬೇಕು?"

ರಂಗಯ್ಯನವರು ಧಡಧಡ ಬಾಗಿಲು ಬಡೆದರು. ಸೀತಾರಾಮು ಬಾಗಿಲು ತೆರೆದ. ಒಳಗಿನ ದೃಶ್ಯ ಏಕೋ ಭೀಕರವಾಗಿ ಕಂಡಿತು ಅವರಿಗೆ. ಪ್ರಶ್ನಾರ್ಥಕವಾಗಿ ನೋಡಿದರು ಅವನನ್ನ. ಸುಮ್ಮನಿರಿ—ಎನ್ನುವಂತೆ ಸನ್ನೆ ಮಾಡಿದ ಸೀತಾರಾಂ. ಆದರೂ ಅವರು ತಡೆಯಲಾರದೆ ಮಗನನ್ನು ಕೇಳಿದರು—

"ಏನು ಬಾಲು ಈ ಅರ್ಧರಾತ್ರೀಲಿ ನಿನ್ನ ಗಲಾಟೆ. ಮಲಕ್ಕೋ ಹೋಗು!" ಬಾಲು ಮಾತಾಡಲಿಲ್ಲ. ಸರ್ರನೆ ಹಿಂದಿರುಗಿದ. ಅಲ್ಲೊಂದು ಕ್ಯಾಲೆಂಡರು. ಪಂಜಾಬಿನ ದೊಂಬರ ಕುಣಿತ. ಒಂದು ಜೊತೆ ಗಂಡು-ಹೆಣ್ಣು ಕೈಕೈ ಹಿಡಿದು ಕುಣಿಯುತ್ತಿದ್ದಾರೆ. ಪರ್ರನೆ ಅದನ್ನು ಹರಿದ ಬಾಲು ಚರಚರನೆ ಕಿತ್ತು ರೂಮಿನ ತುಂಬೆಲ್ಲ ತೂರಿ ಮಂಚದ ಮೇಲೆ ಬಿದ್ದ.

ರಂಗಯ್ಯನವರು ಸಂಕಟಪಟ್ಟರು. ರಾತ್ರಿ ಮೂರು ಗಂಟೆಯ ಸಮಯ. ಏನಿದು ದುರವಸ್ಥೆ ತಮ್ಮ ಮನೆಯಲ್ಲಿ. ಸೀತಾರಾಮುವಿನ ಕೆಂಪು ಕಣ್ಣು ನೋಡಿ ಅವರಂದರು—

"ಹೋಗಪ್ಪ ಸೀತಾರಾಮು.. ನಿನಗೆ ಪೂರ್ತಾ ಜಾಗರಣೆಯಾಗಿದೆ. ಇನ್ನಾದ್ರೂ ಸ್ವಲ್ಪ ನಿದ್ರೆ ಮಾಡುಹೋಗು. ನಾನೇ ಇಲ್ಲಿ ಕೂತಿರ್ತೀನಿ"

ಸೀತಾರಾಮುವಿಗೆ ಏನು ಹೇಳಲೂ ತೋರಲಿಲ್ಲ. ಕಣ್ಣು ಭುಗಭುಗ ಉರಿಯುತ್ತಿತ್ತು ತಂದೆ




ಎದುರಿಗಿದ್ದರೆ ಅವನು ಸುಮ್ಮನೆ ಮಲಗಿಯಾನು. ಅನ್ನಿಸಿತು. ಆ ಕಡೆ ತಿರುಗಿದ. ಬಾಲು ಗೊರಕೆ ಹೊಡೆಯುತ್ತಿದ್ದ. ಸೀತಾರಾಮು ಮೆಲ್ಲನೆ ಹೊರಬಂದ. ರಂಗಯ್ಯನವರು ಪಕ್ಕದ ಕುರ್ಚಿಯಲ್ಲಿ ಕುಳಿತರು. ಸೀತಾರಾಮು ಹಜಾರದ ಸೋಫಾದಲ್ಲಿ ಒರಗಿದ. ನಿದ್ರೆಯಲ್ಲೂ ಅವನ ಕಣ್ಣು ಉರಿಯುತ್ತಲೇ ಇತ್ತು.

ಬೆಳಗಾಗುವಾಗ ಬಾಲುವಿಗೆ ಪ್ರಚಂಡ ಜ್ವರ ಬಂದಿತ್ತು. ಹುಚ್ಚುಹುಚ್ಚು ಮಾತು. ತಂದೆ ತಾಯಿಗಳು ಎದೆಯೊಡೆದರು. ಮನೆಯ ಡಾಕ್ಟರು ಓಡಿಬಂದರು. ಇದು ಯಾವ ಬಗೆಯ ಜ್ವರ ಎಂದು ವೈದ್ಯರಿಗೆ ಅರ್ಥವಾಗಲಿಲ್ಲವಾದರೂ ಚಿಕಿತ್ಸೆ ನಡೆಯಿತು, ಹುಡುಗನ ಅಸಂಬದ್ಧ ಮಾತುಗಳಿಂದ ಸಾಕಷ್ಟು ವಿಷಯ ಹೊರಬಿದ್ದಿತು.

ಸೀತಾರಾಮು ಅವನ ಸೇವೆಗೇ ಕಟಿಬದ್ಧನಾಗಿ ನಿಂತ. ರಂಗಯ್ಯನವರು ಆಫೀಸನ್ನು ಬಿಟ್ಟು ಕುಳಿತರು. ರಾಜಮ್ಮನವರು ಕಂಗೆಟ್ಟರು.

ಎಂಟು ದಿನಕ್ಕೆ ಜ್ವರ ನಿಂತಿತಾದರೂ ಹುಚ್ಚು ಮಾತು ನಿಲ್ಲಲಿಲ್ಲ. 'ಅಪ್ಸರಾ' ಹೋಟೆಲಿನ ಗೀಳು ಹರಿಯಲಿಲ್ಲ. ಕಡೆಯದಾಗಿ ಡಾಕ್ಟರು ಹೇಳಿದರು—

"ಒಂದು ಬಾರಿ 'ಮೆಂಟಲ್' ಸರ್ಜನ್‌ರಿಗೆ ತೋರಿಸಿದರೆ ಒಳ್ಳೆಯದಿತ್ತು."

ಮಗನನ್ನು ಹುಚ್ಚಾಸ್ಪತ್ರೆಗೆ ಒಯ್ಯುವದು ರಂಗಯ್ಯನವರಿಗೆ ಆಗದ ಕೆಲಸವಾಯಿತು. ಅವರು ಕೇಳಿದಷ್ಟು ಫೀ ಸುರಿದು ಅವರ ಕಾಲುಕಟ್ಟಿ ಸರ್ಜನ್‌ರನ್ನು ಮನೆಗೆ ಕರೆತಂದರು.

ಸರ್ಜನರು ಉಪಾಯವಾಗಿ ಬಾಲುವನ್ನು ಮಾತಾಡಿಸಿದರು. ಹುಡುಗ ತೀರಾ ಬಳಲಿಹೋಗಿದ್ದ. ಕಣ್ಣುಗಳು ಗುಳಿಬಿದ್ದಿದ್ದವು. ತಂದೆಯಂತೆ ನೀಳದೇಹಿಯಾಗಿದ್ದವನು ಕೊಕ್ಕರೆಯಂತೆ ಮುದುರಿಕೊಳ್ಳುತ್ತಿದ್ದ.

ಅವನ ಮಾತೆಲ್ಲ ಚಿತ್ರಾಳಿಗೆ ಸಂಬಂಧಪಟ್ಟಿದ್ದೇ. ಡಾಕ್ಟರು ರಂಗಯ್ಯನವರೊಂದಿಗೆ ಹೊರಬಂದು ಕಾಹಿಲೆಗೆ ಕಾರಣವಾದ ಹಿಂದಿನ ಇತಿಹಾಸವೆಲ್ಲಾ ತಿಳಿದುಕೊಂಡರು. ವೈದ್ಯರ ಮುಂದೆ ರಂಗಯ್ಯನವರು ತಮ್ಮ ಬಿಂಕ, ಬಿಗುಮಾನ ತೋರುವಂತಿರಲಿಲ್ಲ. ತಮಗೆ ತಿಳಿದಷ್ಟನ್ನು ತಿಳಿಸಿದರು.

ಚಿಕಿತ್ಸೆ ನಡೆಯಿತು. ಈ ಡಾಕ್ಟರ ಔಷಧಿಯಿಂದ ಬಾಲು ದಿನದ ಹದಿನೆಂಟು ಗಂಟೆ ನಿದ್ರಿಸುತ್ತಿದ್ದ. ನಿದ್ರೆಗೆ, ಮತ್ತು ಮರೆವೆಗೆ ಅವರು ಔಷಧಿ ಕೊಟ್ಟಿದ್ದರು. ಈ ಕಾರಣದಿಂದಾಗಿ ಹುಡುಗ ತೀರಾ ಮಂಕಾಗಿ ಕುಳಿತ. ಮಾತಿಲ್ಲ, ಕತೆಯಿಲ್ಲ. ಎಲ್ಲೋ ನೋಟ, ಏನೋ ಮಂಪರು. ಎಳೆಯ ಮಗುವಿನಂತಾದ. ಯಾರು ಹೇಗೆ ಹೇಳಿದರೆ ಹಾಗೆ ಕೇಳುವಂತಾದ.

ಇಂದು ಕಡೆಯ ಸಲಹೆ ಹೇಳಿದರು ಡಾಕ್ಟರು—

"ಇನ್ನು ನನ್ನ ಚಿಕಿತ್ಸೆಯ ಅಗತ್ಯವಿಲ್ಲ. ಕಡೆಯ ಪಕ್ಷ ಎರಡು ಮೂರು ತಿಂಗಳಾದರೂ ಪ್ರಕೃತಿ ಚಿಕಿತ್ಸೆ ನಡೆಯಲೇಬೇಕು. ದಿನದಲ್ಲಿ ಆರೆಂಟು ಗಂಟೆಗಳಾದರೂ ಬೆಟ್ಟ, ಗುಡ್ಡ, ತೋಟಗಳಲ್ಲಿ ತಿರುಗಾಡಿದರೆ ಬಹಳ ಉತ್ತಮ.

ಮಾದಕಪದಾರ್ಥಗಳು ಅವನ ಹತ್ತಿರವೂ

ಬರಕೂಡದು. ಋಷ್ಯಾಶ್ರಮಗಳಂತಹ ವಾತಾವರಣ ಈಗ ಅವನಿಗೆ ಅಗತ್ಯವಿದೆ. ಈ ಸ್ಥಳ ಬದಲಿಸಿದರೆ ಹುಡುಗ ಜಾಗ್ರತೆ ಗುಣವಾಗುತ್ತಾನೆ. ನೀವು ಹೆದರುವ ಕಾರಣವಿಲ್ಲ. ಈಗ ವಿದ್ಯಾಭ್ಯಾಸದ ಗೊಂದಲ ಹಚ್ಚಬೇಡಿ. ಅವನು ಪೂರ್ಣ ಗುಣವಾದ ಮೇಲೆ ಮುಂದಿನ ಯೋಚನೆ."

ಇದಿಷ್ಟು ಮನಶ್ಶಾಸ್ತ್ರಜ್ಞರು ಕೊಟ್ಟ ಸಲಹೆಯಾಯಿತು.

೪

ರಂಗಯ್ಯನವರಿಗೆ ಮತ್ತೊಂದು ಹೊಸ ಚಿಂತೆ ಮೂಡಿತು. ನೀರಿನಂತೆ ಹಣ ಖರ್ಚುಮಾಡಲು ಅವರು ತಯಾರಿದ್ದರು. ಮಗನನ್ನು ಎಲ್ಲಿಗೆ ಕಳಿಸುವುದು? ಒಂದಲ್ಲ, ಎರಡಲ್ಲ, ಮೂರು ತಿಂಗಳು.

ನಂದಿ, ಊಟಿ, ಕೃಷ್ಣಗಿರಿಗಳು ಆ ದಂಪತಿಗಳ ವಿಚಾರದಲ್ಲಿ ಬಂದು ಹೋದವು. ತಾವಿಬ್ಬರೂ ಮಗನ ಜೊತೆ ಹೋದರೆ ಇಲ್ಲಿಯ ಗತಿಯೇನು? ರಾಜಮ್ಮ ಒಬ್ಬರೇ ಹೋಗಲು ಹೆದರಿದರು. ಸ್ನೇಹಿತರ ಎದುರು ಈ ಪ್ರಸಂಗ ಬಿಚ್ಚುವುದು ರಂಗಯ್ಯನವರಿಗೆ ಬೇಡವಾಯಿತು. ಗಂಡ ಹೆಂಡತಿರು ಸಮಾಲೋಚನೆ ನಡೆಸಿ ನೋಡಿದರು. ಕಡೆಯ ಮಾತಾಗಿ ಸೀತಾರಾಮು [illegible] ತಿಳಿಸಿದ—

"ನೀವಿಬ್ಬರೂ ಧೈರ್ಯವಾಗಿ ಕಳಿಸೋದಾದರೆ ನಮ್ಮೂರಿಗೆ ಕರಕೊಂಡು ಹೋಗ್ತೀನಿ. ಸದ್ದು ಗದ್ದಲವಿಲ್ಲದ ಹಳ್ಳಿ ನಮ್ಮದು. ಅವರನ್ನ ಸರಿಯಾಗಿ ನೋಡಿಕೊಳ್ಳೋ ಜವಾಬ್ದಾರಿ ನನಗೆ ಬಿಡಬೇಕು. ಅದೂ ಅಲ್ದೆ ನನಗೆ ಮೂರ್ತಿಂಗಳ ರಜಾನೂ ಬೇಕಾಗುತ್ತೆ."

ಹುಡುಕುತ್ತಿದ್ದ ಮೂಲಿಕೆ ಕಾಲಿಗೆ ತೊಡರಿದಂತಾಯಿತು ರಂಗಯ್ಯನವರಿಗೆ. ಸೀತಾರಾಮುವಿನ ಮನೆಯ ವಿಷಯ ಅವರ ಗಮನಕ್ಕೆ ಬಂದೇ ಇರಲಿಲ್ಲ. ಈ ಹುಚ್ಚು ಹುಡುಗನನ್ನು ಎಲ್ಲಿ ಬಿಡುವುದೆಂದು ಅವರು ಚಿಂತಾಕುಲರಾಗಿದ್ದರು. ಸೀತಾರಾಮುವಿನ ಮಾತು ಕೇಳಿ ಅವರಿಗೆ ನಿಧಿ ದೊರೆತಂತಾಯಿತು. ಕುಳಿತಲ್ಲಿಂದ ಧಿಗ್ಗನೆದ್ದು ಬಂದು ಸೀತಾರಾಮುವಿನ ಭುಜ ಸವರಿದರು. ಅವರ ಗಂಟಲು ಸ್ವಲ್ಪ ಬಿಗಿದಂತಾಯಿತು.—

"ನಿಜವೇನಪ್ಪ ಸೀತಾರಾಂ. [illegible] ತುಂಬಾ ತೊಂದ್ರೆ ಕೊಡ್ತಾ ಇದೀವಿ. ಮೂರ್ತಿಂಗ್ಳು ಅವನ್ನ ಸುಧಾರಿಸೋದು ಹೇಗೋ ನಂಗಂತೂ ತಿಳೀದು. ನಿಮ್ಮ ತಂದೆ–ತಾಯಿ ಒಪ್ತಾರೇನಪ್ಪಾ ಇದಕ್ಕೆಲ್ಲಾ. ಅವರನ್ನ ಕೇಳ್ದೆ ಹೇಗಪ್ಪಾ ಇವನ್ನ ಕರಕೊಂಡು ಹೋಗ್ತೀ?"

ಸೀತಾರಾಮು ಶಾಂತವಾದ ಸ್ಥೈರ್ಯದಿಂದ ಉತ್ತರವಿತ್ತ—

"ಆ ವಿಷಯದಲ್ಲಿ ನೀವು ಏನೂ ಯೋಚನೆ ಮಾಡೋದು ಬೇಡ. ನಮ್ಮ ತಂದ್ಯೆ ಅಣ್ಣ ಏನೂ ಅನ್ನೋದಿಲ್ಲ. ನೀವು ಒಪ್ಪೋದಾದ್ರೆ ನಾನು ನಾಳೆನೇ ಊರಿಗೆ ಕಾಗದ ಹಾಕ್ತೀನಿ."

ರಂಗಯ್ಯನವರು ಉತ್ತರ ಕೊಡದೆ ಕತ್ತು ಬಗ್ಗಿಸಿ ಅತ್ತಿಂದಿತ್ತ ಓಡಾಡಿದರು. ಸೀತಾರಾಮುವೇ ಮತ್ತೆ ಮಾತಾಡಿದ.

"ಅಮ್ಮನನ್ನೂ ಕೇಳಿ ಅವರೂ ಧೈರ್ಯದಿಂದ ಒಪ್ಪೋದಾದ್ರೆ ನಾ ಕರಕೊಂಡು ಹೋಗ್ತೀನಿ. ನಿಮ್ಮ ಹುಡುಗನಿಗೆ ಚೂರೂ ತೊಂದ್ರೆ ಆಗದ

ಇದ್ದಾಗೆ ನೋಡ್ಕೊಳ್ಳೋ ಜವಾಬ್ದಾರಿ ನಂದು."

ಬಹಳ ಅಳಿದು ಸುರಿದ ಮೇಲೆ–ಅಂತೂ ದಂಪತಿಗಳು ಗಟ್ಟಿಮನಸ್ಸು ಮಾಡಿ ಮಗನನ್ನು ಕಳಿಸಲು ಒಪ್ಪಿದರು.

ಡಾಕ್ಟರ ಸಲಹೆಯಂತೆ ಓನಕ್ಕೆರಡು ಮರೆಪಿನ ಮಾತ್ರೆ ನುಂಗುತ್ತಿದ್ದ ಬಾಲು. ಏನು ಕೇಳಿದರೂ ಕೋಲೆ ಬಸವನಂತೆ ತಲೆದೂಗುತ್ತಿದ್ದ. ಬಣ್ಣದ ಹಕ್ಕಿಯಂತೆ ಹಾರಾಡುತ್ತಿದ್ದ ಮಗ, ಒಂದು ಯಾವುದೋ ದಿಕ್ಕು-ದೆಸೆಯಿಲ್ಲದ ಹುಡುಗಿಯ ಸಲುವಾಗಿ-- ಮಂಕು ಮೂಳಿಯಂತೆ ಕುಳಿತಿರುವುದು ನೋಡಿ ಹೆತ್ತಕರುಳಿಗೆ ಬರೆಯಿಟ್ಟಂತಾಗುತ್ತಿತ್ತು.



ರಾಜಮ್ಮನವರ ಬುದ್ಧಿಯೇ ಸ್ಥಿಮಿತದಲ್ಲಿರಲಿಲ್ಲ. ಅಂತೂ ಅಳುತ್ತಳುತ್ತ ಮಗನ ಪ್ರಯಾಣದ ತಯಾರಿ ನಡೆಸಿದರು. ಅಲ್ಪಸ್ವಲ್ಪ ತಿಂಡಿಗಳು, ಹಣ್ಣು-ಹಂಪಲು, ಬೆಂಗಳೂರಿನ ತರಕಾರಿ ಕಟ್ಟಲ್ಪಟ್ಟಿತು. ತಮ್ಮ ಕಾರಿನಲ್ಲಿಯೇ ಕರೆದುಕೊಂಡು ಹೋಗಿ ಬಿಡುವುದೆಂದು ರಂಗಯ್ಯನವರ ತರ್ಕವಿತ್ತು. ಆದರೆ ಸೀತಾರಾಮು ಅವರನ್ನು ಪ್ರತ್ಯೇಕ ಕರೆದು ತಿಳಿಸಿದ. "ನೀವು ಕಾರು ತರುವುದು ಬೇಡ. ಕಾಹಿಲೆಯಿಂದ ಎದ್ದವರು ಹವ ಬದಲಿಸಲು ಬರುತ್ತಾರೆಂದು ಮಾತ್ರ ನಾನು ಊರಿಗೆ ತಿಳಿಸಿದ್ದೇನೆ. ನಾವು ರೈಲಿನಲ್ಲೇ ಹೋಗ್ತೇವೆ. ನಿಮ್ಮ ಮಗನಿಗೆ ನಾನು ಸ್ವಲ್ಪಾನೂ ನೋವು ಕೊಡೋದಿಲ್ಲ."

ರಂಗಯುನವರು ನಿರುಪಾಯರಾದರು. ಈಗ ಸೀತಾರಾಮುವೇ ಅವರ ಪಾಲಿನ ದೇವರಾಗಿದ್ದ. ಅವನು ಹೇಳಿದಂತೆ ದಂಪತಿಗಳು ನಡೆಯುತ್ತಿದ್ದರು.

ಒಂದು ಶುಭ ದಿನದ ರಾತ್ರಿ ರೈಲಿಗೆ ಅವರು ಹೊರಟರು. ಆಶ್ವಯುಜ ಶುಕ್ಲಪಕ್ಷದ ದಿನಗಳು. ಎಲ್ಲೆಲ್ಲಿಯೂ ದಸರೆಯ ಸಂಭ್ರಮ. ಅಂದು ರಾತ್ರಿ ಎಂಟಕ್ಕೆ ಊಟದ ಶಾಸ್ತ್ರ ಮುಗಿಸಿ ಕಾರಿನಲ್ಲಿ ಸ್ಟೇಷನ್ನಿಗೆ ಹೊರಟರು. ಹೊರಡುವ ಮುನ್ನ ರಾಜಮ್ಮನವರು ದೇವರ ಮುಂದೆ ತುಪ್ಪದದೀವಿಗೆ ಬೆಳಗಿಸಿ ಮಗನ ಕೈಹಿಡಿದು ಕರೆತಂದು ದೇವರಿಗೆ ನಮಸ್ಕರಿಸಲು ತಿಳಿಸಿದರು. ಬಾಲು ನಮ್ರತೆಯಿಂದ ಮಂಡಿಯೂರಿ ದೇವರಿಗೆ ನಮಸ್ಕರಿಸಿದ. ರಾಜಮ್ಮನವರ ದುಃಖ ಉಕ್ಕಿ ಬಂತು.

ತನ್ನ ತಾಯಿಯ ದೈವಭಕ್ತಿ, ಪೂಜೆ-ಪುರಸ್ಕಾರಗಳ ವಿಚಾರವಾಗಿ ಬಾಲು ಎಷ್ಟೋ ಬಾರಿ ಕುಚೋದ್ಯ ಮಾಡುತ್ತಿದ್ದುದುಂಟು. ಆದರೆ ಈಗ! ಯಾರಾದರೂ ವಿಷ ಕೊಟ್ಟರೂ ಹಿಂದೆ-ಮುಂದೆ ನೋಡದೆ ತಿನ್ನುವಂತಾಗಿದ್ದಾನಲ್ಲ ಮಗ ?

ಬಾಯಿ ಮುಚ್ಚಿಕೊಂಡು ಬಿಕ್ಕಿದರು ತಾಯಿ. ಅಲ್ಲೇನಿಂತಿದ್ದ ಸೀತಾರಾಮು ತಂದೆ-ತಾಯಿಗಳಿಗೂ ನಮಿಸಲು ತಿಳಿಸಿದ. ಹಾಗೆಯೇ ಮಾಡಿದ ಬಾಲು. ರಂಗಯ್ಯನವರು ಮಗನ ತಲೆ ಸವರಿ ತಮ್ಮ ದುಃಖ ಮರೆಮಾಚಲು ಅತ್ತ ತಿರುಗಿದರು. ಅವರ ಎದೆ ದುಗುಡದಿಂದ ತುಂಬಿಹೋಗಿತ್ತು. ತಾಯಿ ಮಾತ್ರ ಈಗ ದುಃಖವನ್ನು ತಡೆಯುವ ತಂಟೆಗೆ ಹೋಗಲಿಲ್ಲ. ಧಾರಾಳವಾಗಿ ಅಳುತ್ತ--- "ಆರೋಗ್ಯ ಪಡೆದು ಬಾ ಮಗು"---- ಎಂದು ಆಶೀರ್ವದಿಸಿ ಅವನ ಮುಖದಡವಿದರು.

"ಅವರ ಮನೇಲೆಲ್ಲ ಗಲಾಟೆ ಮಾಡಬಾರೋ ಮಗು. ಸೀತಾರಾಮು ಹೇಳಿದ ಹಾಗೆ ಕೇಳಿಕೊಂಡಿರಬೇಕಪ್ಪ! ಹಾಗೆ ಇರ್ತೀಯಾ?" ಎಂದರು.

"ಹೂಂ ಕಣಮ್ಮ"-- ಮಗುವಿನಂತೆ ಮಾತಾಡಿದ ಬಾಲು. ಸೀತಾರಾಮುವೂ ಹಿರಿಯರಿಗೆ ನಮಸ್ಕರಿಸಿದ. ಎಲ್ಲ ಕಾರನ್ನೇರಿದರು.

ಸಾಕಷ್ಟು ಹಣ, ತರೀಕೆರೆ ವರೆಗಿನ ಫಸ್ಟ್ ಕ್ಲಾಸ್ ಟಿಕೇಟು ಸೀತಾರಾಮುವಿನಕೈಯಲ್ಲಿ ಕೊಟ್ಟಿದ್ದರು ರಂಗಯ್ಯನವರು.

ಇಡೀ ಕಂಪಾರ್ಟಮೆಂಟಿಗೇ ಇವರೇ ಇಬ್ಬರು ಇದ್ದವರು. ಆರಾಮವಾಗಿ ಎರಡು ಹಾಸಿಗೆ ಬಿಚ್ಚಿದ ಸೀತಾರಾಮು. ರೈಲು ಹೊರಡುತ್ತೇನೆಂದು ಕೂಗಿ ತಿಳಿಸಿತು.

ಮೈತುಂಬ ಉಲ್ಲನ್ ಬಟ್ಟೆ ಧರಿಸಿದ್ದರೂ ಮಗನಿಗೆ ಥಂಡಿಯಾಗುವುದೇನೋ--ಎಂದು ತಾಯಿಯ ಕಳವಳ. ತಾವೇ ಮಫ್ಲರ್ ತೆಗೆದು ಬಾಲುವಿನ ಮುಖಕ್ಕೆ ಸುತ್ತಿ---

"ಬೆಚ್ಚಗೆ ಮಲಕ್ಕೊಳ್ಳಪ್ಪ. ಶೀತವಾದೀತು. ಜೋಪಾನ ಕಣೋ ಬಾಲು. ಸೀತಾರಾಮುವಿನ್ನ ಗೋಳು ಹುಯ್ಕೋಬೇಡಪ್ಪ."

"ಇಲ್ಲಮ್ಮ"

ಮಗನಿಂದ ಅಷ್ಟು ಉತ್ತರ ಪಡೆದು ತಾಯಿ ಇದ್ದದ್ದರಲ್ಲಿ ಸಮಾಧಾನ ತಳೆದರು.

ರೈಲು ಮೆಲ್ಲನೆ ಚಲಿಸಿತು. ರಂಗಯ್ಯನವರು ಕಡೆಯಮಾತು ತಿಳಿಸಿ ಕೆಳಗಿಳಿದರು.

"ಹೋಗಿ ತಲ್ಪಿದ ಕೂಡಲೆ ಎಲ್ಲ ವಿಷಯಕ್ಕೊ ಕಾಗ್ದ ಹಾಕಪ್ಪ."

ಬಾಲು ಕಿಟಕಿಯಲ್ಲಿ ತಲೆ ಇಟ್ಟಿದ್ದ. ಸೇಬು ಕೆಂಪಿನಲ್ಲಿದ್ದ ಹುಡುಗ ಹಾಲು ಬಿಳುಪಿಗೆ ತಿರುಗಿದ್ದ. ಮಫ್ಲರಿನ ಸುತ್ತಿನೊಳಗೆ ಕ್ರಾಪಿನ ಸುರುಳಿ ಗೂದಲು, ಅಬೋಧ ಹೊಳಪಿನ ಕಣ್ಣುಗಳು ಅವನ ಬಾಲ್ಯದ ನೆನಪು ತಂದುಕೊಟ್ಟವು ರಾಜಮ್ಮನವರಿಗೆ. ತಂದೆ-ತಾಯಿಯರನ್ನು ಮಿಳಮಿಳ






ನೋಡುತ್ತಿದ್ದ ಬಾಲು. ರೈಲು ಮುಂದೆ ಮುಂದೆ ಸರಿಯುತ್ತಿತ್ತು. ಪ್ರತಿ ಕಿಟಿಕಿಗಳಲ್ಲೂ ತಲೆಗಳು, ಕೈಗಳು, ಯಾರೊ, ಯಾರಿಗೊ, ಕೈ ಬೀಸುತ್ತಿದ್ದರು. 'ಟಾಟಾ, ಬೈಬೈ, ಚೀರಿಯೋ, ಬರ್ರೀನೀ; ಸಲಾಂ, ನಮಸ್ತೆ, ವಂದನಾ.'

ಏನೇನೋ ಕಿವಿಗೆ ಬಿದ್ದವು ರಾಜಮ್ಮನವರಿಗೆ. ಮಗನ ಮುಖ ಮರೆಯಾಯಿತು. ರೈಲು ರಭಸ ತೆಗೆದುಕೊಂಡು ಒನಕೆಹುಳುವಿನಂತೆ ಡೊಂಕು-ಡೊಂಕಾಗಿ ಬಳಕುತ್ತ ಓಡಿತು.

ಕಳ್ಳ-ಕಾಕರು; ಸಾಧು-ಸಜ್ಜನರು, ಪಾಪಿ-ಪರದೇಶಿಗಳು; ಬಡವ-ಬಲ್ಲಿದರು, ಓಹೋ ಎಷ್ಟು ಬಗೆಯ ಜನರು! ಭಿನ್ನವೇಷ, ಭಿನ್ನಭಾಷೆ, ವಿಭಿನ್ನಭಾವನೆಗಳ ಅಸಂಖ್ಯ ಮಾನವರನ್ನು ಹೊತ್ತು ಓಡಿತು ರೈಲು.

ರೈಲು ಮುಂದೆ ಹೋದರೂ ರಂಗಯ್ಯನವರು ಮಂಕರಂತೆ ನಿಂತಿದ್ದಾರೆ.ಇನ್ನೂ ಗದ್ದಲವೀಪರೀತ.

"ಇನ್ನು ಹೋಗೋಣವಾ ?"--- ಗಂಡನನ್ನು ಎಚ್ಚರಿಸಿದರು ರಾಜಮ್ಮನವರು. ಅಂತೂ ಹೇಗೋ ದಂಪತಿಗಳು ಮನೆ ಮುಟ್ಟಿದರು. ಮನೆ ಶತಶೂನ್ಯ, ಮನಸ್ಸು ಮಹಾಶೂನ್ಯ.

ಅಡಿಗೆಯುವ ಎಲ್ಲಾ ಕೆಲಸ ಮುಗಿಸಿ ತೆಪ್ಪಗೆ ಕುಳಿತಿದ್ದ. ಗಂಡ-ಹೆಂಡತಿ ಒಬ್ಬರನ್ನೊಬ್ಬರು ಸಂತೈಸುವ ಗೋಜಿಗೆ ಹೋಗಲಿಲ್ಲ. ತಮ್ಮ ತಮ್ಮ ಕೋಣೆಯ ಮಂಚಗಳಲ್ಲಿ ಉರುಳಿದರು.

ಅವರಿಬ್ಬರ ಬದುಕಿನಲ್ಲಿ ದೊಡ್ಡ ಪರಿವರ್ತನೆ ಇದು. ಒಬ್ಬನೇ ಮಗನನ್ನು ಇಷ್ಟು ದಿನಗಳವರೆಗೆ ಎಂದೂ ಕಳಿಸಿಕೊಟ್ಟವರಲ್ಲ ರಾಜಮ್ಮ. ಬಾಲು ಅಲ್ಲಿ ಇಲ್ಲಿಯ ಪ್ರವಾಸಕ್ಕಾಗಿ ಗೆಳೆಯರ ಜೊತೆ ಹೋಗುತ್ತಿದ್ದುದುಂಟು–ಅದು ಸಂತೋಷ ಕೂಟಗಳಲ್ಲಿ.

ಈಗ ಇನ್ನು ಈ ಮನೆಯಲ್ಲಿ ಮೂರು ತಿಂಗಳು ಕಳೆಯಬೇಕು! ಹೇಗೆ ಕಳೆಯುವುದು ?

ಅಳುತ್ತಳುತ್ತ ಬೆಳಗು ಕಳೆದರು ಆಕೆ. ಬಗೆಹರಿಯದ ಚಿಂತೆಯಲ್ಲಿ ರಂಗಯ್ಯನವರು ಬೆಂದು ಬೇಗುದಿಗೊಂಡರು.

ಸೀತಾರಾಮು—ಅವನು ಯಾರೊ ? ತಾವು ಯಾರೊ ? ಎರಡು ವರ್ಷಗಳ ಕೆಳಗೆ ನರಸಿಂಹರಾಜಪುರದ ತಮ್ಮ ಗೆಳೆಯ ವಕೀಲರೊಬ್ಬರು ಸೀತಾರಾಮುವಿಗೆ ಕೆಲಸ ಕೊಡಿಸಬೇಕೆಂದು ಒಂದು ಪತ್ರ ಕೊಟ್ಟಿದ್ದರು. ಹುಡುಗನ ಸೌಮ್ಯ ಮುಖ, ಗೆಳೆಯರ ಶಿಫಾರಸಿಗಾಗಿ ತಾವು ಅವನಿಗೆ ಕೆಲಸ ಕೊಟ್ಟಿದ್ದು. ಅಂದಿನಿಂದ ಇಂದಿನವರೆಗೆ ಹೇಗೆ ನಡೆದುಕೊಂಡು ಬಂದಿದ್ದಾನೆ ಹುಡುಗ!

ಬೇರೆ ರೂಮಿನಲ್ಲಿ ಅಡಿಗೆಮಾಡಿಕೊಳ್ಳುತ್ತಿದ್ದ ಅವನನ್ನು ರಾಜಮ್ಮನವರು ಒತ್ತಾಯಿಸಿ ತಮ್ಮ ಮನೆಯಲ್ಲೇ ಆಶ್ರಯಕೊಟ್ಟರು. ಈಗ ಅವನು ಬೇರೆಯವನಲ್ಲ, ತಮ್ಮ ಮಗನೇ— ಎಂಬ ಭಾವನೆ ಆ ದಂಪತಿಗಳಿಗೆ. ಶಿವಮೊಗ್ಗೆ, ಬೆಂಗಳೂರುಗಳಲ್ಲಿ ಸದ್ದುಗದ್ದಲವಿಲ್ಲದೆ ವಿದ್ಯೆ ಮುಗಿಸಿ, ಬಿ. ಇ. ಡಿಗ್ರಿ ಪಡೆದು ಇಂಜನಿಯರಾಗಿ ಬಂದವ ಸೀತಾರಾಮು. ಅಬ್ಬರ ಅಟ್ಟಹಾಸಗಳ ಈ ಬೆಂಗಳೂರಲ್ಲಿ ಯಾವ ಬಗೆಯ ಹೊಲಸು ಹವ್ಯಾಸಗಳಿಗೂ ಸಿಲುಕದೆ ಅಪರಂಜಿಯಾಗಿ ಉಳಿದಿದ್ದಾನೆ ಹುಡುಗ.

ಏನು ಋಣಾನುಬಂಧವೋ ನಮ್ಮ ಪಾಲಿನ ದೇವರಾಗಿ ಬಂದಿದ್ದಾನೆ! ಅದೇ ತಮ್ಮ ಮಗ?

ಸಹವಾಸ ದೋಷ! ಪುಂಡು ಗೆಳೆಯರು. ಸ್ವಾತಂತ್ರ್ಯ: ಪ್ರಾಯ; ಕೈತುಂಬ ಹಣ. ಒಬ್ಬನೇ ಮಗನೆಂಬ ಮುದ್ದು.

'ನಾನೇಕೆ ಇಷ್ಟು ವ್ಯಾಮರಿಕೆ? ಇನ್ನು ಒಂದು ವರ್ಷ ಕಳೆದರೆ ಮಗ ಪಾಸಾಗಿ ತಮ್ಮ ಕೆಲಸದಲ್ಲಿ ನೆರವಾಗುವನೆಂಬ ಭ್ರಮೆ! ಇದ್ದಕ್ಕಿದ್ದಂತೆ ಇದೇನಾಯಿತು? ಈ ಹಾಳು ಹುಡುಗಿ ಎಲ್ಲಿಂದ ಪ್ರಾಪ್ತವಾಯಿತು? ಇವನಿಗೆ ಎಲ್ಲಿ ಗಂಟು ಬಿತ್ತು?'

"ಹಾಯ್ ! ಪರಮಾತ್ಮಾ"— ಎಂದು ನಿಟ್ಟುಸಿರು ತೆಗೆದರು ರಂಗಯ್ಯನವರು.

ಚಿತ್ರಾಳ ಬಗ್ಗೆ ಇತ್ತೀಚೆಗೆ ತಿಳಿದು ಬಂದದ್ದು ಇಷ್ಟು---

ಚಿತ್ರಾ ಈಗ ನಾಲ್ಕು ವರ್ಷಗಳಿಂದ ಅಪ್ಸರಾ ಹೋಟೆಲಿನ ಮಾಲಕ ಫಣಿರಾಜ ಬಾಯರ್‌ರ ತಂಗಿಯ ಮಗಳೆಂದು ಹೇಳಿಕೊಂಡು ಹೋಟೆಲಿನಲ್ಲಿಯೇ ಇರುತ್ತಿದ್ದಳು. ಕಡೇ ವರ್ಷದ ಬಿ.ಎ. ನಲ್ಲಿದ್ದಳು. ಮೋಹಿನಿಯಂಥ ಚೆಲುವೆ. ಕಾಲೇಜಿನ ಯುವಕರನ್ನೆಲ್ಲಾ ತನ್ನ ಕುಡಿನೋಟದ ಕೊನೆಯಲ್ಲಿ ಕುಣಿಸುತ್ತಿದ್ದಳು.

ಶ್ರೀಮಂತರ ಮಕ್ಕಳನ್ನೆಲ್ಲಾ ತನ್ನ ಬೆರಳಲ್ಲಿಟ್ಟು ಸಾಕಷ್ಟು ಹಣ ಸೆಳೆದಿದ್ದಳು. ನಿಜವಾಗಿಯೂ ಬಾಯರ್‌ರಿಗೂ ಅವಳಿಗೂ ಎಲ್ಲಿಯ ಸಂಬಂಧವೆಂದು ಯಾರಿಗೂ ತಿಳಿಯದು.

ರಂಗಿನ ಉಡುಪು, ಮಾದಕನಗೆ. ಮನಮೋಹಕ ಚಲನವಲನದ ಈ ಅಪ್ಸರೆ ಶ್ರೇಷ್ಠವರ್ಗದ ವಾಣಿಜ್ಯೋದ್ಯಮಿಯೊಬ್ಬನೊಡನೆ ಅಮೇರಿಕೆಗೆ ಹಾರಿದಳು.

ಸೊಕ್ಕಿನ ಮೈಯಿನ ಶ್ರೀಮಂತ ಯುವಕರನೇಕರು ಅವಳ ಸಾಮೀಪ್ಯದಿಂದ, ಮುಟ್ಟಿ ಮೂಸುವುದರಿಂದ ಆನಂದ ಪಟ್ಟಿದ್ದರು. ಬಾಲು ಅವರಲ್ಲಿ ಒಬ್ಬ. ತನ್ನ ಚೆಲುವಿಕೆಗೆ ಸಮಾನವಾದ ಹುಡುಗ ಎಂದೂ ಏನೋ ಅವನಿಗೆ ಸ್ವಲ್ಪ ಹೆಚ್ಚು ಸಲಿಗೆ ಕೊಟ್ಟಿದ್ದಳು. ಪ್ರಾಯದ ಅಮಲಿನಲ್ಲಿ ಅವಳು ತನ್ನ ಪಾಲಿನ ಅಪ್ಸರೆ--ಎಂದು ಭಾವಿಸಿದ ಬಾಲು. ಆ ಅಪ್ಸರೆ ಇಂದು ಎಲ್ಲರ ಮೂಗಿಗೂ ಮಸಿಬಳಿದು ಮಾಯವಾದಳು.









BEMCO







## ೫

ತಂದೆ-ತಾಯಿಗಳನ್ನು ಬಿಟ್ಟು ಹೊರಟಿರುವೆನೆಂಬ ಯಾವ ಚಿಂತೆಯೂ ಇಲ್ಲದೆ ಬಾಲು ಆರಾಮವಾಗಿ ಬೆಚ್ಚಗೆ ರಗ್ಗು ಹೊದೆದು ನಿದ್ರಿಸಿದ. ಸೀತಾರಾಮು ಕೂಡಲೇ ಮಲಗಲಿಲ್ಲ. ಯಾವುದೋ ಪತ್ರಿಕೆಯೊಂದು ಅವನ ಕೈಲಿತ್ತು.

ಕಣ್ಣು ತೂಗಿದೊಡನೆ ಸೀತಾರಾಮು ಪತ್ರಿಕೆ ಮಡಿಸಿಟ್ಟು ಮಲಗಲು ಅಣಿಯಾದ. ಎಲ್ಲಾ ಕಿಟಕಿಗಳನ್ನು ಮುಚ್ಚಿದ್ದರೂ ಸಂದಿಗೊಂದಿಗಳಿಂದ ರೈಲಿನ ಎದುರು ಕುಳಿರ್ಗಾಳಿ ಒಳನುಗ್ಗಿ ಸ್ವಲ್ಪ ಚಳಿಯನ್ನು ತಂದಿತ್ತು.

ಅವನು ಮಲಗುವ ಮುನ್ನ ಬಾಲುವನ್ನೊಮ್ಮೆ ನೋಡಿದ— "ತನಗಿಂತ ಒಂದೆರಡು ವರ್ಷ ಚಿಕ್ಕವನಿರಬೇಕು ಬಾಲು. ಇನ್ನೂ ಹಸುಳೆಯ ಮುಖ. ಈ ಎಳೆಯ ವಯಸ್ಸಿಗೆ ಎಂತಹ ಪೆಟ್ಟು? ಪಾಪ! "— ಎಂದುಕೊಂಡು ಮಲಗಿದ ಸೀತಾರಾಮು. ಆ ಪ್ರಶಾಂತ ಶಿಶಿಯಲ್ಲಿ "ಗಡಲ್-ಗಡಲ್-ಗಡಲ್"— ಎನ್ನುತ್ತ ಯಾವುದೋ ವಿನ್ಯಾಸಬದ್ಧವಾಗಿ ತಾಳಹಾಕುತ್ತ ರೈಲುರಾಯ ನಡೆದಿದ್ದ. ಇಬ್ಬರೂ ಮೃದುವಾದ ಹಾಸಿಗೆಯ ಮೇಲೆ ಮಲಗಿದ್ದರಿಂದ ರೈಲಿನ ಬಳುಕುವಿಕೆ ಹೂವಿನ ತೊಟ್ಟಿಲಲ್ಲಿ ತೂಗಿದಂತೆ ಹಿತವಾಯಿತು. ಗಾಳಿಯ ಮೊರೆತ ರಾತ್ರಿಯ ಉಲಿತ ಎರಡೂ ಸೇರಿ ಯಾವುದೋ ಕಡು ಸ್ವರದ ಜೋಗುಳದಂತೆ ಮಂಜುಲವಾಗಿ ತೂರಿ ಬಂದು ಸೀತಾರಾಮುವಿನ ರೆಪ್ಪೆ ಕೂಡಿಸಿತು.

"ಬೀರೂರು ! ಬೀರೂರು!"—ಎಂಬ ಕರ್ಕಶವಾದ ಪೋರ್ಟರನ ಕೂಗು ಸೀತಾರಾಮುವನ್ನು ಬಡಿದೆಬ್ಬಿಸಿತು; ಬುಡಕ್ಕನೆ ಎದ್ದು ಕುಳಿತು ಗಡಿಯಾರ ನೋಡಿದ. ಗಂಟೆ ಎರಡೂಕಾಲು. ಇಲ್ಲೇ ರೈಲು ಬದಲಿಸಬೇಕು. ಗಡಬಡಿಸಿ ಎದ್ದು ಬಾಗಿಲು ತೆರೆದ. ಆ ನಡುರಾತ್ರಿಯಲ್ಲೂ ಗಡಿಬಿಡಿ. ಎಲ್ಲಾ ನಿದ್ರೆಗಣ್ಣಿನಲ್ಲಿ ಓಡಾಡುವವರೇ ಆಗಿದ್ದರು; ಅಂತೂ ಅವಸರದಲ್ಲಿ, ಗಡದ್ದು ನಿದ್ರೆಯಲ್ಲಿದ್ದ ಬಾಲುವನ್ನು ಎಬ್ಬಿಸಿ ರೈಲು ಬದಲಿಸಬೇಕಾದರೆ ಅವನಿಗೂ ಸಾಕಾಯಿತು.

ಮುಂದಿನ ರೈಲಿನಲ್ಲಿ ಆಗಲೇ ರಟ್ಟೆವಿಾಸೆಯ ಧಾಂಡಿಗನೊಬ್ಬ ಒಂದು ಪೂರಾ ಸೀಟು ಆಕ್ರಮಿಸಿದ್ದ. ಅಲ್ಲೂ ಬಾಲು ಅಮಲು ಬಂದಂತೆ ಉರುಳಿ ಕಣ್ಣುಮುಚ್ಚಿದ.

ಮತ್ತೆ ಇಬ್ಬರೂ ಕಣ್ಣು ತೆರೆದಾಗ ಬೆಳಗಿನ ಆರುಗಂಟೆ. ಅಂದು ರೈಲು ನಿಶ್ಯದಂತೆ ಲೇಟಾಗಿತ್ತು. ನರಸಿಂಹರಾಜಪುರಕ್ಕೆ ಹೊರಡುವ ಬಸ್ಸು ಸ್ಟೇಷನ್ನಿನ ಎದುರೆ ಸಿದ್ಧವಾಗಿ ನಿಂತಿತ್ತು. ಹೊರಡಲು ವೇಳೆ ಇದ್ದುದರಿಂದ ತರೀಕೆರೆ ಹೋಟೆಲಿನಲ್ಲಿ ಪ್ರಯಾಣಿಕರ ಕಲಕಲ ನಡೆದಿತ್ತು. ಬಸ್ಸಿಗೆ ಸಾಮಾನು ಹಾಕಿಸಿ ಇಬ್ಬರೂ ಮುಖ ತೊಳೆದು ಅಲ್ಲಿಯೇ ಕಾಫಿ-ತಿಂಡಿ ಮುಗಿಸಿದರು. ರಾಜಮ್ಮನವರು ಕೊಟ್ಟ ತಿಂಡಿ ಬಿಚ್ಚಲೇ ಇಲ್ಲ. ಏಳು ಗಂಟೆಗೆ ತರೀಕೆರೆಯಿಂದ ಬಸ್ಸು ಹೊರಟಿತು. ಬಾಲು ತುಟಿಪಿಟ್ಕೆನ್ನದೆ ಸೀತಾರಾಮುವಿನ ನೆರಳಾಗಿದ್ದ. ಅಷ್ಟು ಜೋರಾಗಿ ಕುಲುಕುವ ಬಸ್ಸಿನಲ್ಲಿ ಬಾಲು ಕುಳಿತಿದ್ದೇ ಇಲ್ಲ. ಸೈಕಲ್ಲು, ತಂದೆಯ ಕಾರು, ತನ್ನ ಮೋಟರು ಬೈಕು, ಹೀಗೆ ಬಿರುಗಾಳಿಯಂತೆ ಓಡಾಡಿದ ಹುಡುಗ. ಈಗ ಯಾವ ಯೋಚನೆಯೂ ಇಲ್ಲದೆ ಸ್ವಸ್ಥ ಕುಳಿತಿದ್ದಾನೆ.

ಹುಟ್ಟಿದಂದಿನಿಂದ ಬೆಂಗಳೂರಿನಲ್ಲಿಯೇ ಇದ್ದ ಬಾಲು ಮಲೆನಾಡು ಕಾಡುಮೇಡುಗಳನ್ನು ಕಂಡವನೇ ಅಲ್ಲ. ಈಗ ಮಂಕನಂತೆ ಸುತ್ತ-ಮುತ್ತ ನೋಡುತ್ತ ಕುಳಿತ.

ತರೀಕೆರೆಯ ಪರಿಚಯದವರೊಬ್ಬರು ಸೀತಾರಾಮುವನ್ನು ಕೇಳಿದರು—

''ಇವರು ಯಾರೋ ?''

''ನಮ್ಮ ಇಂಜನಿಯರ ಮಗ. ಕಾಹಿಲೆಯಾಗಿತ್ತು. ಸ್ವಲ್ಪ ಹವ ಬದಲಾವಣೆಗೆ ಬಂದಿದ್ದಾರೆ"

ಸತ್ಯವಾಗಿ, ಸಂಕ್ಷೇಪವಾಗಿ ಉತ್ತರವಿತ್ತ ಸೀತಾರಾಮು.

ಬಸ್ಸು ನರಸಿಂಹರಾಜಪುರ ತಲುಪಿದಾಗ ಹತ್ತೂವರೆ ಗಂಟೆ. ಸೀತಾರಾಮುವಿನ ಅಣ್ಣ ರಾಮಕೃಷ್ಣಯ್ಯ ತಮ್ಮ ಕಮಾನುಗಾಡಿಯನ್ನು ಛತ್ರದ ಬದಿಯಲ್ಲಿ ಬಿಟ್ಟು ಬಸ್ಟಾಂಡಿನಲ್ಲಿ ಕಾದಿದ್ದರು. ಇವರಿಬ್ಬರನ್ನೂ ಕಂಡಾಗ ಅವರು ಯಾವ ಅಚ್ಚರಿ, ಆರ್ಭಟವನ್ನೂ ತೋರಲಿಲ್ಲ. ಬಾಯಲ್ಲಿದ್ದ ತಂಬುಲವನ್ನು ಅತ್ತ ಉಗುಳಿ ಕೇಳಿದರು—

''ಸಮನಾಗಿ ಬಂದ್ರನಾ ?''

"ಹೂಂ. ಎಲ್ಲ ಸರಿಯಾಗಿತ್ತು"

"ನಡೀರಿ ಏನಾರ ಅಷ್ಟು ತಿಂಡಿ ತಿಂದ್ಕಂಡ್ ಬನ್ನಿ. ನಾ ಸಾಮಾನ ಗಾಡೀಗೆ ಹಾಕಸ್ತನಿ"

"ತುಂಬಾ ಚಪಾತಿ ಇದೆ ರಾಮಣ್ಣ. ಅದನ್ನೇ ತಿಂತೀವಿ. ಆಮೇಲಷ್ಟು ಕಾಫಿ ಕುಡದ್ರಾತು."

"ಸೈ ನಡೀರಿ ಹಂಗಾರೆ ಗಾಡೀಗೆ."

ಹಾಗನ್ನುತ್ತ ರಾಮಕೃಷ್ಣಯ್ಯ ಗಾಡಿಯ ಆಳಿನೊಡನೆ ಸಾಮಾನುಗಳನ್ನು ಗಾಡಿಗೆ ಹಾಕಿಸಿದರು.

ಗಾಡಿಯಲ್ಲೇ ಕುಳಿತು ಇಬ್ಬರೂ ಚಪಾತಿ ಚಟ್ನಿ, ತುಪ್ಪ ತೆಗೆದರು. ಸೀತಾರಾಮು ಅಣ್ಣನನ್ನು ಕರೆದ—

"ರಾಮಣ್ಣ ನೀ ಸ್ವಲ್ಪ ತಿಂಡಿ ತಗೋತೀಯಾ?"

"ಉಹುಂ, ನಾ ವಲ್ಲೆ ಕಣ. ನಂಗಾಗದೆ ತಿಂಡಿ. ನೀವ್ ತಿನ್ನಿ. ನಾ ಬರಿ ಕಾಪಿ ಕುಡಿತನಿ."

ಬಾಲು, ಸೀತಾರಾಮು ತಿಂಡಿ ಮುಗಿಸಿದರು. ಹೋಟಲಿನಲ್ಲಿ ಕಾಫಿ ಕುಡಿದಾಯಿತು. ಗೌಡರ ಪುಟ್ಟನಿಗೂ ಎಂದೂ ತಿನ್ನದ ಚಪಾತಿ ದೊರೆಯಿತು.

ರಾಮಕೃಷ್ಣಯ್ಯ ಗಾಡಿಯ ಹಿಂದೆ ನಿಂತು ಹೇಳಿದರು—

"ಸೀತೂ ನಂಗೆ ಪ್ಯಾಟೇಲಿ ತುಸ ಕೆಲ್ಸಹೆ. ನಾ ನಿಧಾನ ಬರ್ತನಿ. ನಿಂಪಾಡಿಗೆ ನೀವು ಹೋಗಿ. ಪಾಪ! ಅವ್ರಿಗೆ ಈ ಗಾಡೀಲಿ ಕೂತು ಅಭ್ಯಾಸ ಅದಯಾ ಇಲ್ಲ; ತುಸ ಸುಧಾರಿಸ್ಕಂಡು ಹೊಗ್ರಿ. ಏ ಪುಟ್ಟಾ ನಿಧಾನ ಹೊಡ್ಯಾ ಗಾಡೀನಾ ! ಆ ಕಾಳಪ ಬೋರೇ ಹತ್ರ ಗಾಡೀ ಇಳಿದು ನಡದು ಹೋದ್ರೇ ಒಳ್ಳೇದಿತ್ತು. ಆ ದಿಣ್ಣೆ ಹತ್ತಾಕೆ ಸಾಯ್ತಾವೆ ಈ ಹಾಲ-ಕೆಂಚ. ತಿಳೀತನಾ ಸೀತು ?"

''ಆಗ್ಲಿ ರಾಮಣ್ಣ. ನೀ ಎಷ್ಟು ಹೊತ್ತಿಗೆ ಬರ್ತೀ ?''

''ನಾ ಬರ್ತನಿ ಹೆಚ್ಚು ಕಮ್ಮಿ. ನೀವ್ ಹೋಗಿ.''

ಪುಟ್ಟ ನೊಗ ಏರಿಸಿದ. ಬಾಲು ಹುಟ್ಟಿದಾರಭ್ಯ ಈ ಎತ್ತಿನ ಗಾಡಿಯ ಹತ್ತಿರವೂ ಹೋದವನಲ್ಲ. ಬಲು ಕಷ್ಟದಿಂದ ಅವನನ್ನು ಗಾಡಿ ಹತ್ತಿಸಬೇಕಾಯಿತು. ಒಳಗೆ ಹುಲ್ಲು, ಜಮಖಾನ, ಒರಗಲು ಹಾಸಿಕೆಗಳು ಇದ್ದದ್ದರಿಂದ ಬಾಲು ಹೇಗೋ ಸರಿಯಾಗಿ ಕುಳಿತ. ಪುಟ್ಟ 'ಹೆಯ್'—ಅಂದೊಡನೇ ಹಾಲ- ಕೆಂಚ ಕೊರಳ ಬಿಂದುಲಿಯ ಸದ್ದು ಮಾಡುತ್ತ ಹೊರಟವು. ಬಾಲು ಈ ಹೊಸ ಅನುಭವದಿಂದ ಹೆದರಿಕೊಂಡು ಸೀತಾರಾಮುವನ್ನು ಬಿಗಿಯಾಗಿ ಅಪ್ಪಿಕೊಂಡ. ಸೀತಾರಾಮುವಿಗೆ ತಡೆಯಲಾರದ ನಗು ಬಂದಿತು. ನಗುತ್ತ ಬಾಲುವಿಗೆ ಧೈರ್ಯ ಹೇಳಿದ—

"ನಮ್ಮ ಫೋರ್ಡ್ ಕಾರು ಇದು. ಹೆದರಿಕೋಬೇಡಿ ಬಾಲು. ಏನೂ ಅಪಾಯ ಆಗೋಲ್ಲ. ನಮ್ಮ ಹಳ್ಳಿ ಇಲ್ಲೀಗೆ ಮೂರು ಮೈಲಿ ಇದೆ. ನಿಮ್ಕೈಲಿ ನಡೆಯೋಕಾಗೋಲ್ಲಾಂತ ಗಾಡಿ ತಠ ಹೇಳಿದ್ದೆ. ಅಲ್ದೆ ಸ್ವಲ್ಪ ಬಿಸಿಲೂ ಇದೆ ನೋಡಿ"

ಬಾಲು ಅವನನ್ನು ಬಿಗಿದುಕೊಂಡೇ ಕೇಳಿದ—

"ಇದು ಬೀಳೋದಿಲ್ವೆ ಸೀತಾರಾಂ ?"

"ಇಲ್ಲ ಬಾಲು. ಗಾಡಿ ಹೋಗೋದೇ ಹೀಗೆ. ಏನೂ ಭಯವಿಲ್ಲ. ನಾನು ಇಲ್ಲೇ ಇದೀನಲ್ಲ. ಹೀಗೇ ಹಿಡಕೊಂಡು ಕೂತ್ಕೊಳ್ಳಿ."

ಆದರೂ ಬಾಲು ಅವನನ್ನು ಬಿಡಲಿಲ್ಲ. ಬೆದರಿಕೊಂಡ ಅವನಿಂದ ಬಿಡಿಸಿಕೊಳ್ಳಲು ಸೀತಾರಾಮುವಿಗೂ ಮನ ಬರಲಿಲ್ಲ. ಗಾಡಿ ಛತ್ರದ ಹಿಂಬದಿಯಿಂದ ಕೆರೆಯ ಏರಿಯ ಮೇಲೆ ಹಳ್ಳಿಯ ದಾರಿ ಹಿಡಿಯಿತು. ಬಾಲುವಿಗಂತೂ ಬೇರೆಯೇ ಒಂದು ಲೋಕಕ್ಕೆ ಬಂದಂತೆ ಅನಿಸುತ್ತಿತ್ತು. ತರೀಕೆರೆಯಲ್ಲಿ ಕಣ್ಣು ತೆರೆದ ಲಾಗಾಯ್ತು, ಅವನು ಅನೇಕ ಬಗೆಯ ವಿಚಿತ್ರದ ಜನರನ್ನು ನೋಡಿದ. ಕನ್ನಡವನ್ನೇ ಬೇರೊಂದು ಧ್ವನಿಯಲ್ಲಿ,

ಬೇರೊಂದು ರೀತಿಯಲ್ಲಿ ಮಾತಾಡುವುದು ನೋಡಿದ. ಬಸ್ಸಿನಲ್ಲೂ ನಾನಾ ಬಗೆಯ ಕಲಬೆರಕೆ ಜನರನ್ನು ನೋಡಿದ.

ಈ ವರೆಗೆ ಬಾಲುವಿನ ಬಗ್ಗೆ ಹತ್ತಿಪ್ಪತ್ತು ಜನರು ಸೀತಾರಾಮುವನ್ನು ಕೇಳಿದ್ದರು. ಸೀತಾರಾಮು ಎಲ್ಲರಿಗೂ ಒಂದೇ ಬಗೆಯ ಉತ್ತರವನ್ನು ಹೇಳಿದ್ದ.

ರಾಮಕೃಷ್ಣಯ್ಯನ ಪಿಳ್ಳೆ ಜುಟ್ಟು, ಹೊಗೆಸೊಪ್ಪಿನ ಬಾಯಿ, ಸ್ವಲ್ಪ ಮಾಸಲು ಬಣ್ಣದ ಕಚ್ಚೆ ಪಂಚೆ ನೋಡಿ—'ಇವರು ಸೀತಾರಾಮುನ ಅಣ್ಣನೇ!' ಅನಿಸಿತು ಬಾಲುವಿಗೆ. ಆದರೆ ಯಾವುದರ ಬಗ್ಗೆಯೂ ಪ್ರಶ್ನಿಸಬೇಕೆಂದು ಮಾತ್ರ ಅವನಿಗೆ ಅನಿಸಲಿಲ್ಲ.

ಬಸ್ಸ್ಟಾಂಡಿನಲ್ಲಿಯೇ ಸೀತಾರಾಮುವನ್ನು ಮಾತಾಡಿಸಿದ ನರಸಿಂಹರಾಜಪುರದ ಹೆಡ್ ಮುನ್ಷಿ ಗುಂಡಪ್ಪನವರು ಮಾತ್ರ ಬಾಲುವನ್ನು ಎರಡು-ಬಾರಿ ಅಡಿಯಿಂದ ಮುಡಿಯ ವರೆಗ ಅಳೆದು ನೋಡಿದರು. ಸೀತಾರಾಮುವಿನ ಮಾತಿನಲ್ಲಿ ಅಷ್ಟಾಗಿ ಅವರಿಗೆ ನಂಬಿಕೆ ಬರಲಿಲ್ಲ.

'ಮದುವೆಗಿರುವ ತಂಗಿಯನ್ನು ತೋರಿಸುವ ಸಲುವಾಗಿ ಬೆಂಗಳೂರಿನಿಂದ ಈ ಹುಡುಗನನ್ನು ಕರೆತಂದಿರಬಹುದೇ ?'—ಎಂದವರು ಯೋಚಿಸಿದರು. ಮರುಗಳಿಗೆ ತಮ್ಮ ತರ್ಕ ತಪ್ಪೆಂದು ಅವರಿಗೇ ಅನಿಸಿತು.

ಬಾಲುವಿನ ಉಡುಪು ಆಗರ್ಭ ಶ್ರೀಮಂತರ ಮಗನೆಂದು ಸಾರುತ್ತಿತ್ತು. ಮುಖದ ತೇಜವೂ ಅಷ್ಟೆ. ಅಲ್ಲದೆ ಹುಡುಗನ ಮುಖ ಕಾಹಿಲೆ ಬಿದ್ದು ಎದ್ದವನೆಂದು ಯಾರೂ ಹೇಳಬಹುದಿತ್ತು. ಇಷ್ಟೂ ಅಲ್ಲದೆ ಈ ಬೆಂಗಳೂರ ಹುಡುಗ ಶುದ್ಧ ಹಳ್ಳಿಯ ಹುಡುಗಿ ಗಂಗೆಯನ್ನು ಒಪ್ಪಲಾರ ಎಂಬ ಶಂಕೆಯೂ ಬಂದಿತವರಿಗೆ. ಸೀತಾರಾಮುವಿನ ಮೊಟಕು ಮಾತಿನಲ್ಲಿ ಏನೂ ಪತ್ತೆ ಮಾಡುವಂತಿರಲಿಲ್ಲ.

'ಮಹಾ ಕೊರಮ ಇವ'— ಅಂದುಕೊಂಡು ನಡೆದರವರು.

ವರ್ಷಋತು ಕಳೆದುಹೋಗಿದ್ದರೂ ಮಲೆನಾಡ ಮಳೆ ಇನ್ನೂ ಪೂರಾ ಬಿಟ್ಟಿರಲಿಲ್ಲ. ಆಗಾಗ್ಗೆ ಮಕ್ಕಳು ಅಳುವಂತೆ ಅಷ್ಟಷ್ಟು ಮಳೆ ಬಂದು ಬಂದು ನಿಲ್ಲುತ್ತಿತ್ತು. ನೆಲದಲ್ಲಿನ ತಗ್ಗುಗಳಲ್ಲಿ ನೀರು ನಿಂತು ಕಿಚಪಿಚ ಕೆಸರು ಓಡಾಡುವವರ ಕಾಲಿಗೆಲ್ಲ ಮೆತ್ತಿಕೊಳ್ಳುತ್ತಿತ್ತು.

ಎಲ್ಲೆಲ್ಲಿ ನೋಡಿದರೂ ಶರದೃತುವಿನ ಹಸಿರು ಕಣ್ಣು ತುಂಬುತ್ತಿದೆ. ಗಾಡಿ ಕೆರೆಯ ಏರಿಯನ್ನು ದಾಟಿ ಬಯಲಿನಲ್ಲಿ ಸಾಗುತ್ತಿದೆ. ಬಾಲುವಿನ ಮೈ ಕುಲುಕುತ್ತಿದ್ದರೂ ಅವನು ಅತ್ತಿತ್ತ ಬಗ್ಗಿ ನೋಡಿದ. ಕೆರೆಯಲ್ಲಿ ಹೆಂಗಸರಿನ್ನೂ ಬಟ್ಟೆ ಒಗೆಯುತ್ತಿದ್ದಾರೆ ಕೆಲವು ಎಮ್ಮೆಗಳು ಅಲ್ಲಲ್ಲಿ ನಿಂತಿರುವ ಕೊಚ್ಚೆಯಲ್ಲಿ ಬಿದ್ದು ಅರಗಣ್ಣು ಮುಚ್ಚಿ ಯೋಗಧ್ಯಾನದಲ್ಲಿ ಮೆಲುಕು ಹಾಕುತ್ತಿವೆ. ಗಾಡಿ ಹೋಗುತ್ತಿದ್ದ ಜಿಯುಲ ತುಂಬಾ ದನಕರುಗಳು ಮೇಯುತ್ತಿವೆ. ಊರು ದಾಟಿ ಹಳ್ಳಿಯ ದಾರಿ ಹಿಡಿಯಿತು ಗಾಡಿ.

ಬಾಲುವಿಗೆ ದೊಡ್ಡ ಕಾರ್ಖಾನೆಯೊಂದರಿಂದ ಒಂದು ಸೊಂಪಿನ ಲೋಕಕ್ಕೆ ಬಂದಂತೆ ಮೈಮನಗಳು ತಂಪಾಗುತ್ತ ಬಂದಿತು. ಯಾವುದೋ ಹಿತದ ಭಾವ ಅವನ ಸೋತ ಮುಖಕ್ಕೆ ಲೇಪನವಾಯಿತು. ಆರಾಮವಾಗಿ ಹಾಸಿಗೆಗೆ ಒರಗಿ ಸೀತಾರಾಮುವಿನ ಭುಜದ ಮೇಲೆ ಕೈಹಾಕಿ ಕುಳಿತ.

ಈಗ ಮಳೆ ಇಲ್ಲದೆ ಬಿಸಿಲು ಸ್ವಲ್ಪ ಚುರುಕಾಯಿತು. ಬತ್ತದ ಪೈರು ಈಗಾಗಲೇ ಮೊಳಕಾಲೆತ್ತರ ಬೆಳೆದು ನಲವಿನಿಂದ ಲಾಸ್ಯವಾಡುತ್ತಿದೆ. ಗಾಡಿ ಈಗ ಗದ್ದೆಯೊಳಗಿಂದ ಹೋಗುವಂತಿಲ್ಲ. ಬಯಲಿನಿಂದ ಬಳಸಿಕೊಂಡೇ ಹೋಗಬೇಕು.

ಕಾಲುನಡಿಗೆಯಲ್ಲಿ ಮೂರು ಮೈಲಿಯಾಗುವ ಶೀಗವಾನಿ, ಗಾಡಿಯಲ್ಲಿ ಹೋದರೆ ನಾಲ್ಕು ಮೈಲಿಯಾಗುವುದು.

ಗಾಡಿ ಮುಂದೆ ಸರಿದಂತೆಲ್ಲ ಹಕ್ಕಿಪಕ್ಕಿಗಳ ಕಿಲ-ಪಿಲ ಸದ್ದು ಹೆಚ್ಚಾಯಿತು. ಕಾಡು ದಟ್ಟವಾಯಿತು. ಮುಂದೆ ಒಂದೆರಡು ಫರ್ಲಾಂಗು ಹೋಗಿ ಗಾಡಿ ನಿಂತಿತು. ಪುಟ್ಟ ಹಿಂದಿರುಗಿದ—

"ಅಯ್ಯ, ನೀವಿಲ್ಲೇ ಇಳಿದ್ರೆ ಸಮ ಇತ್ತು. ಈ ಹಾಳಾದೋವು ಬೋರೆ ಏರಾಕಿಲ್ಲ. ಏನ್ ಮಾಡ್ತೀರಯ್ಯಾ?"

"ಇಲ್ಲೇ ನಿಲ್ಸೋ, ನಾವು ನಡದು ಹೋಗ್ತೀವಿ-ಗಾಡಿ ಸಾಮಾನು ಜೋಪಾನ ಕಣೋ ! ಹುಷಾರಾಗಿ ತರ್ತೀಯಾ ?"

"ಹೂನ್ರಯ್ಯ ತರ್‍ತನಿ. ಇಳೀತೀರಾ ?"

"ಎತ್ತನ್ನ ಸ್ವಲ್ಪ ಹಿಡಕಳ್ಳೋ, ಇಳೀತೀವಿ."

ಪುಟ್ಟ ಎತ್ತನ್ನ ನೊಗ ಇಳಿಸದೆ ಹಾಗೇ ಹಿಡಿದ. ಸೀತಾರಾಮು ಬಾಲುವಿಗೆ ಹಗುರವಾಗಿ ಹೇಳಿದ—

"ಬಾಲು ಇಲ್ಲಿ ಒಂದೆರಡು ಫರ್ಲಾಂಗು ನಡೀಬೇಕಲ್ಲ. ಆಗುತ್ತಾ ?"

"ನಡೀತೀನಿ. ಗಾಡಿಗಿಂತ ನಡೆಯೋದೇ ವಾಸಿ."

ಬಾಲುವಿನ ಮಾತು ಒಂದು ನೇರ ಬಂದಂತೆ ಕಾಣಿಸಿತು ಸೀತಾರಾಮುವಿಗೆ. ಅವನನ್ನು ಕೈ ಹಿಡಿದು ಮೆಲ್ಲನೆ ಕೆಳಗಿಳಿಸಿದ. ಗಾಡಿ ಮುಂದೆ ಹೋಯಿತು. ಇವರು ಬೋರೆ ಏರಿದರು.



## ೬

"ಅಲ್ಲಿ ನೋಡಿ ಬಾಲು ಅದೇ ನಮ್ಮ ಶೀಗವಾನಿ."

ಬಾಲು ತಲೆ ಎತ್ತಿ ನೋಡಿದ. ನಿಂತ ಜಾಗದಿಂದ ಸ್ವಲ್ಪ ಕೆಳಗಿನ ಗದ್ದೆಗೆ ಇಳಿದು ಸುಮಾರು ಅರ್ಧ ಫರ್ಲಾಂಗು ನಡೆಯಬೇಕು. ಅಲ್ಲೇ ತಂಪಿನ ಗ್ರಾಮ ಶೀಗವಾನಿ.

ಪ್ರವೇಶದಲ್ಲೇ ವಿಸ್ತಾರವಾದ ಮಾವಿನ ತೋಪು. ಒಂದು ಬದಿಯಲ್ಲಿ ಹೊಲೆಯರ ಗುಡ್ಲುಗಳು. ತೋಪು ದಾಟಿದೊಡನೆ ಎದುರಿಗೆ ದೊಡ್ಡ ಹುಣಸೆ ಮರ. ಹುಣಿಸೇಮರದ ಕೆಳಗೆ ವಿಶಾಲವಾದ, ಬತ್ತ ಒಕ್ಕುವ ಕಣ, ನಾಲ್ಕಾರು ಎತ್ತರದ ಹುಲ್ಲು ಬಣವೆಗಳು ಮುಂದೆ ದೊಡ್ಡ ಹೊರ ಕೊಟ್ಟಿಗೆ, ದೊಡ್ಡ ಅಂಗಳ. ಅಲ್ಲೇ ಹಳೇ ಮಾದರಿಯ ದೊಡ್ಡ ಉಪ್ಪರಿಗೆಯ ಮನೆ. ಮನೆಯ ಎಡಬದಿಗೆ ಐನೂರು ಮಣ ಅಡಿಕೆ ನೀಡುವ ದೊಡ್ಡ ತೋಟ. ಬಲಬದಿಗೆ ದೊಡ್ಡ ಹಂಕಲು. ಅದರ ತುಂಬೆಲ್ಲ ಹಲಸು ಸಂಪಿಗೆ ಮರಗಳು. ಸ್ವಲ್ಪ ಮುಂದೆ 'ಮಡವತ್ತಿ' ಅಮ್ಮನವರ ಗುಡಿ. ಮತ್ತೆ ಅಷ್ಟು ಮುಂದೆ ಮಡವತ್ತಿ, ಹೊಸಕೆರೆ ಹಳ್ಳಿಗಳು.

ಮನೆಯ ಒಳತೊಟ್ಟಿಯಲ್ಲೇ ಈದ ದನಗಳ ಕೊಟ್ಟಿಗೆ. ಹಿಂಬದಿಗೆ ದೊಡ್ಡ ಅಚ್ರೆ (ಹೂವಿನ ತೋಟ.) ಅದಕ್ಕೂ ಹಿಂದೆ ದೊಡ್ಡ ಕೆರೆ, ಸಣ್ಣ ಕೆರೆ.

ಬಾಲು ಪೂರಾ ಮೈಮರೆತು ಎದುರಿನ ಸಸ್ಯ ಸಂಪನ್ನ ಹಳ್ಳಿಯನ್ನೆ ನೋಡುತ್ತಾ ನಿಂತ. ಅವನ ಇಡೀ ಬದುಕಿನಲ್ಲಿ ಮೊದಲ ಬಾರಿಗೆ ಇಂತಹ ತಂಪಿನ ತಾಣ ಒಂದನ್ನ ನೋಡುತ್ತಿದ್ದಾನೆ. ಮರೆವಿನ ಗುಳಿಗೆಯ ಪ್ರಭಾವ ಇನ್ನೂ ಅವನ ಮೇಲೆ ಇದ್ದರೂ ಬಾಲು ಏನನ್ನೋ ಜ್ಞಾಪಿಸಿಕೊಳ್ಳಲು ಪ್ರಯತ್ನಪಡುವಂತಿತ್ತು.




ಪ್ಯಾಂಟಿನ ಎರಡು ಜೇಬುಗಳಲ್ಲೂ ಕೈ ತುರುಕಿ ಅಚ್ಚರಿಯ ಕಣ್ಣುಗಳನ್ನರಳಿಸಿ ನೋಡಿದ.

ಹಳ್ಳಿಯ ಹೆಬ್ಬಾಗಿಲ ಬಳಿಯ ಎರಡು ಎತ್ತರದ ಕಲ್ಪವೃಕ್ಷಗಳು ಫಲಭರಿತವಾಗಿ ತಲೆ ದೂಗುತ್ತಿವೆ.

ಅವನ ಸೂಕ್ಷ್ಮ ಪರಿವರ್ತನೆಯನ್ನ ಗಮನಿಸಿದ ಸೀತಾರಾಮು ಮೆಲ್ಲನೆಂದ—

"ಮೆಲ್ಲಗೆ ಇಳೀರಿ ಬಾಲು. ಕಾಲು ಜಾರೀತು. ಇಲ್ಲಿ ನಡೆಯೋದು ನಿಮಗೆ ಸ್ವಲ್ಪ ಕಷ್ಟ. ನನ್ನ ಕೈ ಹಿಡಕೊಳ್ಳಿ."

ಬಾಲು ಅವನ ಕೈ ಹಿಡಿದು ನಡೆದ. ಮೂರು ಗೇಣಗಲ ಗದ್ದೆಯ ಬದುವಿನ ಮೇಲೆ ಒಬ್ಬರ ಹಿಂದೊಬ್ಬರು ನಡೆಯುತ್ತಿದ್ದಾರೆ. ಇಕ್ಕಡೆಗಳಲ್ಲೂ ಈಗ ತಾನೆ ತೆನೆಯೊಡೆದ ಪಚ್ಚೆಪೈರು ಅತಿಥಿಗಳಿಗೆ ಚಾಮರ ಬೀಸಿದವು. ಎರೆಮಣ್ಣಿನ ಜಿನುಗು ನೆಲ ಎಲ್ಲಿ ಜಾರೀತೋ—ಎಂದು ಬಾಲು ಹೆದರಿ ಹೆದರಿ ಹೆಜ್ಜೆ ಇಟ್ಟ. ಗದ್ದೆ ದಾಟಿ ಹೆಬ್ಬಾಗಿಲನ್ನೇರಿದರು. ಬಾಗಿಲಲ್ಲೇ ಶೀಗವಾನಿಯ 'ಘೂರ್ಖ' ಕೇಯ ಹೊಸ ಅತಿಥಿಗಳನ್ನು ಕಂಡು ಸ್ವಾಗತ ಗೀತೆ ಹಾಡಿತು. ಯಾರೋ ಬಂದರೆಂದು ಹೊಲೆಯರ ಹುಡುಗರು ಗುಡ್ಡಿನಿಂದ ಹೊರಬಂದವು. ಕರಿಯನಿಗೂ ಸೀತಾರಾಮುವಿನ ಗುರುತು ಹತ್ತಿ ಬಾಲ ಮುದುರಿಕೊಂಡು ಹಿಂದೆ ಸರಿಯಿತು.

"ಸಣ್ಣಯ್ಯ ಬಂದ್ರು! ಸಣ್ಣಯ್ಯ ಬಂದ್ರು!" ಅನ್ನುತ್ತ ಹೊಲೇರ ಕುರುದೆಗಳು ಮನೆಯ ಕಡೆಗೆ ಓಡಿದವು. ಹೊಲತಿಯರೂ ಹೊರಬಂದು ನಿಂತರು. ಮುದುಕಿ ಮಂಜಿ ಮಾತನಾಡಿಸಿದಳು—

"ಏನ್ ಸಣ್ಣಯ್ಯ ಈಗ ಬತ್ತಾ ಅದೀರಾ? ಗಾಡೀಲಿ ಬರ್ಲಿಲ್ವ?" ಸೀತಾರಾಮು ಚುಟುಕ ಉತ್ತರ ಹೇಳಿ ಮುಂದೆ ನಡೆದ—

"ಗಾಡೀಲೇ ಬಂದದ್ದು. ಬೋರೆ ಹತ್ತಿ ಬಂದ್ವಿ"

ಡೊಳ್ಳು ಹೊಟ್ಟೆಯ, ಕೊಳಕು ಲಂಗೋಟಿಯ, ತರಕು ತಲೆಯ ಹೊಲೆಯರ ಹೈಕಗಳು ಬಾಲುವನ್ನು ನೋಡುತ್ತ ಅವರ ಹಿಂದೆ ಹಿಂದೆ ನಡೆದವು.

ಮಾವಿನ ತೋಪು ಹಾದು ಇವರಿಬ್ಬರೂ ಮನೆಯ ಹತ್ತಿರ ಬಂದಾಗ ಮಧ್ಯಾಹ್ನ ಒಂದು ಗಂಟೆಯಾಗಿತ್ತು.

ಬಾಲು ಯಾವುದೋ ಪವಿತ್ರವಾದ ಋಷ್ಯಾಶ್ರಮದೊಳಗೆ ಕಾಲಿಡುವವನಂತೆ ನಮ್ರತೆಯಿಂದ ಮೆಲ್ಲಡಿಯಿಡುತ್ತ ಸೀತಾರಾಮುವಿನ ಹಿಂದೆ ನಡೆದಿದ್ದ. ಬೂಟಿನ ಸದ್ದು ಕೇಳಿ, ಒಳಚಪ್ಪರದಲ್ಲಿ ಅಡಿಕೆ ಚೊಗರಿಗಾಗಿ ತೆಂಗಿನ ಕೊಗಟೆ ಚಚ್ಚುತ್ತಿದ್ದ ನಂಜುಂಡಯ್ಯನವರು ಮೆಲ್ಲನೆ ಎದ್ದು ಬಂದರು.

ಯಾವುದೋ ಪವಾಡಕ್ಕೆ ಒಳಗಾದವನಂತೆ ಬಾಲು, ಬಾಗಿಲ ಬದಿಯಲ್ಲಿಯೇ ಇದ್ದ ದೊಡ್ಡ ಫಣತದ ಹತ್ತಿರ ಕೈಕಟ್ಟಿ ನಿಂತ. ಯಾವ ಅಚ್ಚರಿಯನ್ನೂ ವ್ಯಕ್ತಪಡಿಸದೆ ನಂಜುಂಡಯ್ಯನವರು ಅಂದರು—

"ಇನ್ನೂ ಗಾಡಿ ಬರಲಿಲ್ಲವ ಸೀತು?"

"ಆಗ್ಲೆ ಬಂತು. ಮಡವತಿ ಹಳ್ಳ ಬಂದಿದ್ದೀವಿ."

"ರಾಮು ಬರ್ಲಿಲ್ವ?"

"ಆಮೇಲೆ ಬರ್ತೀನೀಂದ."

"ನಡೀರಿ ಹುಸ ಕಾಪಿಗೀಪಿ ಬೇಕಾರೆ ಕುಡದು ಸ್ನಾನಮಾಡಿ. ಗಂಟೆ ಎಷ್ಟಾತೋ ಏನ್ಕತೆಯೋ?"

ಸೀತಾರಾಮು ವಾಚುನೋಡಿ ಹೇಳಿದ—

"ಒಂದೂಕಾಲು ಗಂಟೆ."

"ಬನ್ನಿ ಬಾಲು" ಅನ್ನುತ್ತ ಸೀತಾರಾಮು ಮುಂದೆ ನಡೆದ. ಅಡಿಗೆಮನೆಯೊಳಗಿಂದ ಬಂದಮ್ಮನವರು ಹೊರಬಂದರು—

"ರಾಮು ಸಿಕ್ಲಿಲ್ಲವ ಸೀತು?" ಆಕೆ ಮೆಲ್ಲನೆ ಕೇಳಿದರು.

"ಸಿಕ್ಕಿದ್ನಮ್ಮ. ಗಾಡಿಲೇ ಬಂದದ್ದು. ಸ್ವಲ್ಪ ಕಾಫಿ ಇದ್ರೆ ಕೊಡ್ತಿಯಾ? ಆಮೇಲೆ ಸ್ನಾನ ಮಾಡ್ತೀವಿ."

ಬಾಲು ಮುಂದೆ ಎಲ್ಲಿ ಹೋಗಬೇಕೆಂದು ತಿಳಿಯದೆ ಸೀತಾರಾಮುವಿನ ಹಿಂದೇ ನಿಂತಿದ್ದಾನೆ. ಈ ತಾಯಿ ಮಕ್ಕಳ ಮಾತು ನಡೆದಾಗ ಅಡಿಗೆ ಮನೆಯೊಳಗಿಂದ ಕೋಮಲ ಕನ್ನೆಯರ ಬಳೆಗಳ ಕಿಣಿ ಕಿಣಿ ನಾದ ದೂರದ ಗೆಜ್ಜೆಯ ಉಲಿತದಂತೆ ಬಾಲುವಿನ ಕಿವಿಯನ್ನು ತಾಗಿತು.

ತನಗೇ ಅರಿಯದಂತೆ ಅವನು ಅತ್ತ ತಿರುಗಿದ. ಎರಡು ಮುಂಗುರುಳಿನ ಮುಖಗಳು ಅಸ್ಪಷ್ಟವಾಗಿ ನೆರಳಿನಂತೆ ಮೂಡಿ ನಸುಗತ್ತಲೆಯ ಅಡಿಗೆಯ ಮನೆಯಲ್ಲಿ ಮರೆಯಾದವು. ಜೊತೆಗೇ ತೀರಾ ಅಸ್ಪಷ್ಟವಾದ ಪಿಸುಮಾತುಗಳು ಕೇಳಬಂದವು.

ಮಂತ್ರಮುಗ್ಧನಂತೆ ನಿಂತಿದ್ದ ಬಾಲುವನ್ನು ಕೈಹಿಡಿದು ಕರೆದೊಯ್ದ ಸೀತಾರಾಮು.

"ಮೆಲ್ಲಗೆ ಹತ್ತಿ ಬಾಲು ನಿಮಗಿದು ಅಭ್ಯಾಸವಿಲ್ಲ. ಒಂದೆರಡು ದಿನ ತೊಂದ್ರೆ ಅಷ್ಟೆ"—

—ಅನ್ನುತ್ತ ಅಗಲವಾದ ಮರದ ಮೆಟ್ಟಿಲನ್ನು ನಿಧಾನವಾಗಿ ಹತ್ತಿಸಿ ಉಪ್ಪರಿಗೆಯ ಮೇಲೆ ಕರೆದೊಯ್ದ.

ಅಲ್ಲಿ ಮಧ್ಯೆ ದೊಡ್ಡ ಬೋಳು ವರಾಂಡ. ಆಚೆಗೊಂದು, ಈಚೆಗೊಂದು ದೊಡ್ಡ ದೊಡ್ಡ ಕೋಣೆಗಳು. ಅಡಿಕೆ ಚಪ್ಪರಕ್ಕೆ ಹೋಗುವ ಸಲುವಾಗಿ ವರಾಂಡವನ್ನು ಬೋಳಾಗಿ ಬಿಟ್ಟಿದ್ದರು.

ಇಬ್ಬರೂ ಬಲಬದಿಯ ಕೋಣೆಗೆ ಹೋದರು. ನಾಲ್ಕು ಜನ ಮಲಗಬಹುದಾದಂಥ ಹಳೆಯ ಕಾಲದ ಅಗಲವಾದ ಮಂಚ- ಅದರ ಮೇಲೆರಡು ಸುತ್ತಿದ ಹಾಸಿಗೆಗಳು- ಮಂಚದ ಪಕ್ಕದಲ್ಲಿ ಒಂದು ಅರಾಮ ಕುರ್ಚಿ.

"ಕೂತ್ಕೊಳ್ಳಿ ಬಾಲು."

ಸೀತಾರಾಮು ಕೈ ಹಿಡಿದು ಕೂರಿಸಿದ ಬಾಲುವನ್ನ. ಎರಡು ಮೂರು ದಿನ ಮುನ್ನವೇ ಸೀತಾರಾಮುವಿನ ಕಾಗದ ಬಂದಿದ್ದರಿಂದ ಅವನ ತಂಗಿ ಗಂಗೆ ಅಣ್ಣನ ಕೋಣೆಯನ್ನು ಸ್ವಚ್ಛಗೊಳಿಸಿ ಹಾಸಿಕೆ ಬಟ್ಟೆ ಅಣಿಗೊಳಿಸಿಟ್ಟಿದ್ದಳು.

ಸೀತಾರಾಮು ಬೂಟು ಬಿಚ್ಚಿ ಎತ್ತರದ ನಾಗೊಂದಿಗೆಯ ಮೇಲಿಟ್ಟ. ಬಾಲುವೂ ಅವನಂತೇ ಮಾಡಿದ.

"ಸೀತೂ"—ತಾಯಿಯ ದನಿ ಕೇಳಿಸಿತು ಕೆಳಗಿನಿಂದ.

ಅವನು ಪ್ಯಾಂಟು ಬಿಚ್ಚಿ ಮಂಚದ ಕಟ್ಟೆಯ ಮೇಲೆ ಹಾಕಿ—

"ಇರಿ ಬಂದೆ ಬಾಲು"—ಅನ್ನುತ್ತ ಕೆಳಗಿಳಿದ. ಮಡಿಯಲ್ಲಿದ್ದ ತಾಯಿ ಎರಡು ಕಂಚಿನ ಲೋಟಗಳನ್ನು ಕೆಳಗಿಡುತ್ತ ಅಂದರು —

"ಕಾಪಿ ತಗಂಡ್ಹೋಗಾ ಸೀತು. ಹುಸ ಸುದಾರಿಸ್ಕಂಡು ಸಾನ ಮಾಡಾ."

ಸೀತಾರಾಮು ಲೋಟ ಕೈಗೆತ್ತಿಕೊಳ್ಳುವುದರೊಳಗೆ ಗಾಡಿ ಬಂದು ಪುಟ್ಟ ಎಲ್ಲಾ ಸಾಮಾನನ್ನೂ ಒಳತಂದಿಟ್ಟ. ತಿಂಡಿಯ ಬುಟ್ಟಿಯೊಂದು ಅಲ್ಲೇ ಉಳಿದಿತ್ತು.

ಪುಟ್ಟ ನಿಂತಲ್ಲೇ ಕೂಗಿದ—

"ಓ ಸಣ್ಣಯ್ಯ! ಆ ಪುಟ್ಟಿ ಗಾಡೀಲೆ ಅದೆ ತಕ್ಕಳ್ಳಿ ಬನ್ನಿ."

"ಬರ್ತೀನಿ. ನೀ ಆ ಹಾಸಿಗೆ ಪೆಟ್ಗೆ ಎಲ್ಲಾ ಮೇಲಕ್ಕಿಡೋ"—

ಹಾಗನ್ನುತ್ತ ಸೀತಾರಾಮು ಉಪ್ಪರಿಗೆ ಹತ್ತಿದ. ಹಿಂದೆಯೇ ಹಾಸಿಗೆ ಪೆಟ್ಟಿಗೆಗಳೂ ಮೇಲೇರಿದವು. ಕಾಫಿ ಕುಡಿದು ಬಟ್ಟೆ ಬದಲಿಸಿ ಸೀತಾರಾಮು ತಿಂಡಿಯ ಬುಟ್ಟಿ ಒಳಗೆ ತಂದ. ದೊಡ್ಡದಾದ ದುಂಡಗಿನ ರಂಗುರಂಗಿನ ಆ ಪ್ಲಾಸ್ಟಿಕ್ ಬುಟ್ಟಿಯನ್ನು ಆಸ್ಥೆಯಿಂದ ನೋಡಿದರು ಗಂಗೆ-ಗಿರಿಜೆಯರು.

ನರಸಿಂಹರಾಜಪುರದಲ್ಲಿ ಅಂತಹ ಬುಟ್ಟಿ ನೋಡಿ




"ಆ ಎಚ್ಚರಿಕೆ ಬೋರ್ಡು ಭಿಕ್ಷುಕರಿಗೆ ಮಾತ್ರ ಅಂತ ತಿಳಿದಿದ್ದೆ"

ದರೂ ಇನ್ನೂ ಅವರ ಮನೆಗಳಿಗೆ ಆ ಬುಟ್ಟಿ ಬಂದಿರಲಿಲ್ಲ.

ಸೀತಾರಾಮು ತಿಂಡಿಬುಟ್ಟಿ ತಂದಾಗ ಅವರಿಬ್ಬರೂ ಊಟದ ಮನೆಯಲ್ಲೇ ಇದ್ದರು. ತನ್ನ ಭಾವೀ ಪತಿ ಹಾಗೂ ಅವನ ಸ್ನೇಹಿತರು ಬರುವರೆಂದು ಗಿರಿಜೆ ಮನೆಯ ಕೆಲಸ ಮುಗಿಸಿ ಬೆಳಗಿನ ಹತ್ತು ಗಂಟೆಗೇ ಗಂಗೆಯ ಜೊತೆ ಸೇರಿದಳು. ಹುಡುಗಿಯರಿಬ್ಬರೂ ಜಡೆಹೆಣೆದು ನಿತ್ಯ-ಮಲ್ಲಿಗೆಯ ದಂಡೆ ಮುಡಿದಿದ್ದರು.

ಸೀತಾರಾಮುವಿನ ಮುಖ ನೋಡಿ ಗಿರಿಜೆ ಒಂದು ಸುಳಿನಗೆ ನಕ್ಕಳು. ಒಂದೂವರೆ ವರ್ಷವಾಗಿತ್ತು ಅವನು ಅವಳನ್ನು ನೋಡಿ. ಈ ಅವಧಿಯಲ್ಲಿ ಆ ಮನಸುಮ ಮತ್ತಷ್ಟು ಪ್ರಫುಲ್ಲಿತವಾಗಿತ್ತು. ಅವನ 'ರಿಮ್‌ಲೆಸ್' ಕನ್ನಡಕದೊಳಗಿನ ಪ್ರಶಾಂತ ಕಣ್ಣುಗಳು ತನ್ನ ಮನದನ್ನೆಯ ಸೊಬಗಿನ ಫೋಟೋ ತೆಗೆದುಕೊಂಡವು.

ಹಿಂದೆ ತಾಯಿ, ಎದುರಿಗೆ ತಂಗಿ ಇದ್ದುದರಿಂದ ಅವನು ಒಂದು ಹೂ-ನಗೆಯಲ್ಲಿ ಅವಳಿಗೆ ಉತ್ತರ ಕೊಟ್ಟು ತಂಗಿಗೆ ತಿಳಿಸಿದ—

"ಏ ಗಂಗಾ! ಮಧ್ಯಾನ್ಹ ಊಟಾದ ಮೇಲೆ ಈ ತಿಂಡೀನ ಎಲ್ಲಾರ್‍ಗೂ ಹಂಚಿಬಿಡೆ."—

ಗಂಗೆ ಅಚ್ಚರಿಯಿಂದ ಪ್ರಶ್ನಿಸಿದಳು—

"ಅಲ್ಲೋ ಸೀತಣ್ಣ! ಈ ಪಾಟಿ ತಿಂಡಿ ಯಾರೋ ಮಾಡ್ಕೊಟ್ಟೋರು?"

"ಅಲ್ಲಿ ಇಂದಿಲ್ವೇನೆ, ಅವರ ತಾಯಿ."

"ನೀನು ಅವರ ಮನೇಲೆ ಇರೂದಾ!?"

"ಹೂಂ ಅಲ್ಲೇ ಇರೋದು."

ಹೊರಗೆ ರಾಮಕೃಷ್ಣಯ್ಯನ ಧ್ವನಿ ಕೇಳಿಸಿತು. ಅಷ್ಟರೊಳಗೆ ಸೀತಾರಾಮುವಿನ ಅತ್ತಿಗೆ ಎರಡು ಮಕ್ಕಳ ಸ್ನಾನ ಮುಗಿಸಿ ಒಳಗೆ ಕರೆತಂದರು. ಸೀತಾರಾಮು ಉಪ್ಪರಿಗೆಗೆ ಹೋದ.

ಬಾಲು ಕಾಫಿ ಕುಡಿದು ತಣ್ಣಗೆ ಕುಳಿತಿದ್ದಾನೆ. ಬೆಂಗಳೂರಿನ ಕಾಫಿಗೂ ಇಲ್ಲಿಯ ಕಾಫಿಗೂ ರುಚಿಯಲ್ಲಿ ಬಹಳ ವ್ಯತ್ಯಾಸವಿದ್ದಂತೆ ಕಂಡಿತು ಅವನಿಗೆ. ನಾಲಿಗೆಯ ರುಚಿಯನ್ನು ನುಂಗುತ್ತ ಹಾಯಾಗಿ ಕುಳಿತಿದ್ದ. ಸೀತಾರಾಮು ಬಂದವನೇ ಕೇಳಿದ—

"ಸ್ನಾನ ಮಾಡೋಣವಾ ಬಾಲು?"

"ಹುಂ" ಅನ್ನುತ್ತ ಎದ್ದು ನಿಂತ ಅವನು. ಎರಡು ಟವೆಲು ಹಲ್ಲುಜ್ಜುವ ಸಾಧನಗಳನ್ನು ತೆಗೆದುಕೊಂಡು ಇಬ್ಬರೂ ಹೊರಟರು. ಮೆಟ್ಟಿಲನ್ನು ಇಳಿಯುವ ವಿಧಾನ ತೋರಿಸಿದ ಸೀತಾರಾಮು—

"ನೋಡಿ ಬಾಲು. ಈ ಹಗ್ಗ ಬಲವಾಗಿ ಹಿಡಕೊಂಡು ಇಳೀಬೇಕು."

ಬಾಲು ಮೇಲೆ ನೋಡಿದ. ಮೇಲಿನ ತೊಲೆಗೆ ಬಲವಾದ ಮಿಣಿಹಗ್ಗ ಕಟ್ಟಲ್ಪಟ್ಟು ಕೆಳಗಿನವರೆಗೂ ಇಳಿಬಿದ್ದಿದೆ. ಅದನ್ನು ಹಿಡಿದು ನಿಧಾನವಾಗಿ ಇಳಿದ ಅವನು.

ಹಿತ್ತಲಿನ ಬಾಗಿಲಿನ ಎದುರಿಗೇ ಸೊಂಪಾಗಿ ಪಲ್ಲವಿಸಿದ ಬೃಂದಾವನದ ಅತ್ತ, ಇತ್ತ ಹೀರೆ, ಪಡವಲ, ಕುಂಬಳ, ಸೀಮೆಬದನೆ, ತೊಂಡೆ ಚಪ್ಪರಗಳು. ನಾನಾ ಬಗೆಯ ಹೂವಿನ ಗಿಡಗಳು.

ಅವನ್ನು ದಾಟಿ ಮುಂದೆ ನಾಲ್ಕು ಹೆಜ್ಜೆ ನಡೆದು ತೋಟದ ಮೆಟ್ಟಿಲಿಳಿದ ಸೀತಾರಾಮು. ಬಾಲು ಹಿಂದೆ ಹಿಂದೆ ನಡೆದ. ಎರಡು ಕಡೆಗಳಲ್ಲಿಯೂ ಅಡಿಕೆ, ಬಾಳೆಯ ಮರಗಳು. ತೋಟದ ಒಳ್ಳನೆಲ ಇನ್ನೂ ಕೆಸರು ಕೆಸರು. ಬಾಲು ಇಂತಹ ನೆಲದ ಮೇಲೆ ಎಂದೂ ಓಡಾಡಿದವನಲ್ಲ. ಉಟ್ಟ ಪಂಚೆ ಎತ್ತಿಹಿಡಿದು ಹಗುರವಾಗಿ ಹೆಜ್ಜೆ ಇಡುತ್ತ ಅವನ ಹಿಂದೆ ನಡೆದಿದ್ದ. ಹಿಂದಿನಿಂದ ದಪ್ಪ ಕಾಲುಂಗುರದ ಕಿಂಕಿಣಿನಾದ ಕೇಳಿಸಿತು. ಬಾಲು ತಿರುಗಿ ನೋಡಿದ. ಮನೆಯೊಳಗಿಂದ ಸೀತಾರಾಮುವಿನ ಅತ್ತಿಗೆ ಹೊರಬರುತ್ತಿದ್ದರು. ಬೃಂದಾವನದ ಬದಿಯಲ್ಲಿ ಆ ಇಬ್ಬರು ಗಿರಿಕನ್ಯೆಯರು ನಿಂತಿದ್ದಾರೆ. ತಾನು ನಾಲ್ಕನೆಯ ವರುಷ ಟೂರು ಹೋಗಿದ್ದಾಗ ನೋಡಿದ್ದ ಕನ್ಯಾಕುಮಾರಿಯ ನೆನಪು ಬಂದಿತು ಬಾಲುವಿಗೆ.

"ಮೆತ್ತಗೆ ಬನ್ನಿ"—ಸೀತಾರಾಮು ಎಚ್ಚರಿಸಿದ ಅವನನ್ನ.

2

ತೋಟದ ಬಚ್ಚಲು. ಒಂದು ಬದಿಗೆ ಮಾತ್ರ ಅಡಿಕೆ ಸೋಗೆಯ ಮರೆ. ದೊಡ್ಡ ಹಂಡೆ. ದಪ್ಪ ದಪ್ಪ ಕುಂಟೆಗಳನ್ನ ಚಾಚಿದ ಒಲೆಯಲ್ಲಿ ರಾಶಿ ರಾಶಿ ಕೆಂಡ ಬಿದ್ದಿತ್ತು. ದೊಡ್ಡದಾದ ಒಂದೇ ಕಲ್ಲಿನ ಸುತ್ತಲೂ ಮಣ್ಣಿನ ಕಟ್ಟೆ. ಸಣ್ಣ ಕೆರೆಯಿಂದ ತೋಟದ ಮಧ್ಯ ಹರಿದು ಬಂದು ಬಚ್ಚಲಿನ ಪಕ್ಕದ ಹೊಂಡಕ್ಕೆ ತುಂಬುತ್ತಿದ್ದ ನೀರನ್ನ ಕೊಡದಿಂದ ಎತ್ತಿ ಹಂಡೆಗೆ ತುಂಬಿಸುವರು.

ಬಾಲುವಿಗೆ ಏನೊಂದೂ ಅರ್ಥವಾಗದೆ ಅತ್ತಿತ್ತ ನೋಡುತ್ತ ನಿಂತ. ಸೀತಾರಾಮು ದೊಡ್ಡ ಕವಳಿಗೆಗೆ ಹದವಾಗಿ ನೀರು ತೋಡಿ ಸೋಪು ತೆಗೆದುಕೊಟ್ಟು ಹೇಳಿದ—

"ಬಾಲೂ ಇಲ್ಲಿ ಬಚ್ಚಲು ಇರೋದು ಹೀಗೇ. ನೀವು ಡ್ರಾಯರ್‌ನಲ್ಲೇ ಸ್ನಾನಮಾಡಿ. ಇಲ್ಲಿ ಯಾರೂ ಬರೋಲ್ಲ. ನಾ ಇಲ್ಲೇ ಇರ್ತೀನಿ."

ಅವನಿಗೆ ತಿಳಿವಳಿಕೆ ಬಂದ ಲಾಗಾಯ್ತು ಬಚ್ಚಲುಮನೆಯ ಬೋಲ್ಟು ಬಿಗಿದು ಸ್ನಾನಮಾಡಿಯೇ ಅಭ್ಯಾಸ. ಅವನು ಸೀತಾರಾಮುವಿನ ಮುಖ ಮಿಕಿ ಮಿಕಿ ನೋಡಿದ.

"ಪರವಾಗಿಲ್ಲ ಸ್ನಾನಮಾಡಿ. ಮತ್ತೆ ಬೇಕಾದ್ರೆ ನೀರು ತೋಡ್ತೀನಿ."

ಬಾಲು ಹೆದರುತ್ತ ಬಚ್ಚಲಿಗಿಳಿದ. ಸೀತಾರಾಮು ಹೊಂಡದ ದಿಣ್ಣೆಯ ಮೇಲೆ ನಿಂತು ಹಲ್ಲುಜ್ಜಿದ.

ಸುತ್ತಲೂ ಸ್ವಲ್ಪ ತಣ್ಣನೆಯ ಗಾಳಿ ಇದ್ದದ್ದರಿಂದ ಬಿಸಿ ಬಿಸಿಯಾದ ಸ್ನಾನ ಬಾಲುವಿಗೆ ಹಿತವಾಯಿತು.

ಅಂತೂ ಇಬ್ಬರ ಸ್ನಾನ ಮುಗಿದು ಮನೆಗೆ ಬಂದು ಬಟ್ಟೆ ಧರಿಸಿದರು. ಎಣ್ಣೆ ಬಾಚಣಿಗೆಗಳು ಅವರ ಕೋಣೆಯಲ್ಲೇ ಇದ್ದವು. ರಾಮಕೃಷ್ಣಯ್ಯನ ಸ್ನಾನ ಮುಗಿದೊಡನೆ ಎಲೆ ಹಾಕಿ ಊಟಕ್ಕೆ ಕರೆದರು.

ತೋಟದ ಬಾಳೆ ಎಲೆ ಧಾರಾಳವಾಗಿದ್ದುದರಿಂದ ಅವರಲ್ಲಿ ತಟ್ಟೆ ಉಪಯೋಗವಿರಲಿಲ್ಲ.

ಊಟದ ಮನೆಯ ಒಂದು ಮೂಲೆಯಲ್ಲಿ ನಂಜುಂಡಯ್ಯನವರು ಮಡಿಯಲ್ಲಿ ಊಟಕ್ಕೆ ಕುಳಿತರು. ಮತ್ತೊಂದು ಬದಿಗೆ ರಾಮಕೃಷ್ಣಯ್ಯ, ಬಾಲು, ಸೀತಾರಾಮು, ಅವರ ಅಣ್ಣನ ಎರಡು ಮಕ್ಕಳು. ನಡುಗತ್ತಲೆಯ ಅಡಿಗೆಮನೆಯಲ್ಲಿ ಗಂಗೆ-ಗಿರಿಜೆಯರು ಕುಳಿತರು. ಅತ್ತೆ-ಸೊಸೆಯರು ಬಡಿಸಿದರು.

ಮಾಡಿದ್ದು ಅನ್ನ, ಸಾರು, ಹಲಸಿನಕಾಯಿ ಪಲ್ಯ, ಸಂಡಿಗೆ ಕರಿದಿದ್ದರು. ಬಾಲುವಿಗೆ ಮಣೆಯ ಮೇಲೆ ಕುಳಿತು ಅಭ್ಯಾಸವಿಲ್ಲ. ಮುಜುಗರವಾಗುತ್ತಿತ್ತು. ಅದನ್ನು ತೆಗೆಯಬೇಕೆಂದೂ ತೋರಲಿಲ್ಲ. ಹಾಗೇ ಊಟ ಮಾಡಿದ. ಬಿಸಿ ಬಿಸಿ ಅಡಿಗೆ; ರುಚಿಯೇ ಬೇರೆ. ತುಪ್ಪದ ವಾಸನೆಯೇ ಬೇರೆ. ತುಂಬೆ ಹೂವಿನಂತಹ ಹಗುರದ ಅನ್ನದ ಮೇಲೆ ಮನೆಯ ಆಕಳ ಮರಳು ತುಪ್ಪ ಒಂದು ಅಪರೂಪದ ಸ್ವಾದವನ್ನು ತಂದಿತು. ಬಾಲು ಎಷ್ಟೋ ದಿನಗಳಿಂದ ಊಟ, ತಿಂಡಿಗಳ ರುಚಿಯ ಕಡೆಗೆ ಗಮನವನ್ನೇ ಕೊಟ್ಟಿರಲಿಲ್ಲ. ಇಂದು ಈ ಹೊಸ ಅಡಿಗೆ ಅವನ ನಾಲಿಗೆಗೆ ಬಲು ರುಚಿ ಕಂಡಿತು.

ದೀಪಾವಳಿಯು

ಸರ್ವರಿಗೂ ಸುಖಪ್ರದವಾಗಲಿ!



ಭರದಿಂದ ಸಾಗುವ

**ರಾಷ್ಟ್ರದ**

ಆರ್ಥಿಕ ಅಭಿವೃದ್ಧಿಯಲ್ಲಿ

**"ರಸ್ತೆ ಸಾರಿಗೆ"ಯು**

ಆತ್ಯಂತ ಮಹತ್ವದ

ಪಾತ್ರವನ್ನು ನಿರ್ವಹಿಸುತ್ತದೆ.

---

ರಾಷ್ಟ್ರದ ಒಂದು ಮೂಲೆಯಿಂದ ಇನ್ನೊಂದು ಮೂಲೆಗೆ ಸರಕುಗಳನ್ನು ಮಿತವ್ಯಯವಾಗಿಯೂ ತೀವ್ರವಾಗಿಯೂ ಹಾಗೂ ಸುರಕ್ಷಿತವಾಗಿಯೂ ಸಾಗಿಸಲು ಈಗ ಶಕ್ಯವಾಗಿದೆ.

# ಕಾಳೇಜ

# ಟ್ರಾನ್ಸಪೋರ್ಟ ಸರ್ವೀಸ್

**೭೩-೭೫ ಡಾ. ಮಹೇಶ್ವರಿ ರೋಡ** · ಮುಂಬಯಿ-೯

ಫೋನ ನಂ. **P. P. 331485**

**H. O. Khaskhar Lane, Thana**
Phone: **591542**

ಒಡೆಯರು:

**ರಘುನಾಥ ವಿ. ಕಾಳೆ, ಬಿ. ಕಾಮ್.**

ಈ ಕೆಳಗಿನವುಗಳಿಗೆ ಟ್ರಾನ್ಸಪೋರ್ಟ ಕಂಟ್ರಾಕ್ಟರರು:

ಮೆ. ಹಿಂದುಸ್ತಾನಲೀವರ ಲಿ.,

ಮೆ. ಬರ್ಮಾಶೆಲ್ ಕಂಪನಿ ಲಿ.,

ಮೆ. ಮೆಟಲ ಬಾಕ್ಸ ಕಂ. ಲಿ.,



## ಕಾಳೇಜ

## ಟ್ರಾನ್ಸಪೋರ್ಟ ಸರ್ವೀಸವು

ಮುಂಬಯಿಯಿಂದ

**ಸಾಬೂನುಗಳು, ಡಾಲ್ಡಾ, ಟಾಯಲೆಟರೀಜ ಹಾಗೂ ಪೆಟ್ರೋಲಿಯಂ ಪದಾರ್ಥಗಳ ಬಹುಭಾರವಾದ ಸರಕುಗಳನ್ನು ದಕ್ಷಿಣದ ಪ್ರಮುಖ ನಗರಗಳಿಗೆ ಹಾಗೂ ಮಹಾರಾಷ್ಟ್ರದಲ್ಲಿಯ ಚಿಕ್ಕ ಹಾಗೂ ದೊಡ್ಡ ನಗರಗಳಿಗೆ ಪ್ರತಿದಿನವೂ ಸಾಗಿಸುತ್ತ ತನ್ನ ಪಾಲಿನ ಕರ್ತವ್ಯವನ್ನು ನಿರ್ವಹಿಸುತ್ತದೆ.**

ಅವರ ಮನೆಯವರ್‍ಯಾರೂ ಏನೂ ಋಣ ಉಪಚಾರ ಮಾಡಲಿಲ್ಲ. ಅವರವರ ಪಾಡಿಗೆ ಅವರವರು ಉಣ್ಣುತ್ತಿದ್ದರು.

ತಂದೆ-ಮಕ್ಕಳಲ್ಲೂ ಅನವಶ್ಯ ಮಾತುಕತೆಗಳಿಲ್ಲ-ಎಷ್ಟೋ ಅಷ್ಟೆ. ಹೆಂಗಸರೂ ಅಷ್ಟೆ. ಗಟ್ಟಿಯಾಗಿ ಮಾತಾಡುವ ರೂಢಿಯಿಲ್ಲ. ಆಡುವ ಮಾತೆಲ್ಲ ಕಳ್ಳದನಿಯಲ್ಲಿ.

ಊಟಮಾಡುವಾಗ ಅತ್ತೆ ಸೊಸೆಯರ ಕಾಲುಂಗುರದ ಸದ್ದು ಊಟದ ಸರಬರ ಸದ್ದು—ಮತ್ತೆ ಒಳಗೆ ಕುಳಿತ ಗಂಗೆ-ಗಿರಿಜೆಯರ ಬಳೆಗಳ ಸದ್ದು. ಆಯಿತು.

ಮತ್ತೆ ಮಾತಿಲ್ಲ, ಕತೆಯಿಲ್ಲ. ಊಟ ಮುಗಿಯಿತು. ಉಂಡು ಹಾಗಲಚಪ್ಪರದಡಿಯಲ್ಲಿ ಕೈ ತೊಳೆದು ಉಪ್ಪರಿಗೆ ಏರಿಯಾಯಿತು.

ದೊಡ್ಡ ಮಂಚದ ಮೇಲೆ ಎರಡು ಹಾಸಿಗೆಗಳನ್ನ ಬಿಚ್ಚಿದ ಸೀತಾರಾಮು.

"ಮಲಗಿಕೊಳ್ಳಿ, ಬಾಲು. ನಿಮಗೆ ತುಂಬಾ ಆಯಾಸ ಆಗಿದೆ, ಅಲ್ವಾ?"

"ಏನಿಲ್ಲ. ಆದ್ರೆ ನಿದ್ದೆ ಬರ್‍ತಾ ಇದೆ."

"ಹಾಗಾದ್ರೆ ಮಲಗಿ. ನಾನೂ ಮಲಗ್ತೀನಿ."

ಬಾಲುವಿಗೆ ನಿಜವಾಗಿ ಬಳಲಿಕೆಯಾಗಿತ್ತು. ಅವನು ಕೂಡಲೇ ಮಗ್ಗಲು ಕೊಟ್ಟ. ಸೀತಾರಾಮು ಪೆಟ್ಟಿಗೆಯಿಂದ ಹಣ ತೆಗೆದು ಅಣ್ಣನಲ್ಲಿಗೆ ಹೋದ. ಅಣ್ಣ ಆಗಲೇ ಬಾಯಿಗೆ ವೀಳ್ಯ ಏರಿಸಿ ಹೊರಗೆ ಕಾಲಿಟ್ಟಿದ್ದರು. ಸೀತಾರಾಮು ಹಿಂದಿನಿಂದ ಕರೆದ—

"ರಾಮಣ್ಣ !"

ಅಲ್ಲೇ ತಿರುಗಿ ನಿಂತು ಕೇಳಿದರು—

"ಏನ ಸೀತು ?"

ಸೀತಾರಾಮು ಅಣ್ಣನ ಹತ್ತಿರ ನಿಂತು ನೂರರ ನಾಲ್ಕು ನೋಟುಗಳನ್ನ ಅವರ ಕೈಗಿಡುತ್ತ ಅಂದ—

"ಅದೇ ಅವರು ಇನ್ನೂ ಮೂರು ತಿಂಗ್ಳು ಇಲ್ಲೇ ಇರ್‍ತಾರೆ. ನಾನೂ ಇರ್‍ತನೀ. ಅವರಿಗೆ ತುಂಬಾ ಕಾಯ್ಲೆ ಆಗಿತ್ತು. ಹವಾ ಬದ್ಲಾಯಿಸೋಕೇಂತ ಬಂದಿದಾರೆ. ಅದಕ್ಕೆ ಅವರ ತಂದೆ ಇಲ್ಲಿ ಖರ್ಚಿಗೇಂತ ಕೊಟ್ಟಿದಾರೆ."

''ಸೈ ಮೂರಲ್ದೇ ಇದ್ರೆ ನಾಕ್ ತಿಂಗ್ಳ್ ಇರ್‍ಲಿ. ಅದಕೆ ದುಡ್ಯಾಕ ತಗಂಡೆ ನೀನು ? ಬ್ಯಾಡಾಂತ ಹೇಳಾಕಿಲ್ವ ! ಅಷ್ಟ್ ತಿಳೀಲಿಲ್ಲನೋ ನಿಂಗೆ ?''

"ನಾ ಎಲ್ಲ ಹೇಳಿಯಾಯ್ತು. ಅವರು ಬಿಡ್ಲೇ ಇಲ್ಲಾ ನಾ ಏನ್ ಮಾಡ್ಲಿ? ಇಕೋ" ಅಣ್ಣನ ಕೈಯಲ್ಲಿ ಹಣವಿಟ್ಟು ಹಿಂದಿರುಗಿದ ಸೀತಾರಾಮು. ರಾಮಕೃಷ್ಣಯ್ಯ ಹಣ ತಂದು ತಮ್ಮ ಕತ್ತಲೆಕೋಣೆಯ ತಿಜೋರಿಯೊಳಗೆ ಭದ್ರಪಡಿಸಿ ಮತ್ತೆ ಹೊರಬಿದ್ದರು.

ಸೀತಾರಾಮು ಬಂದು ಬಾಲುವಿನ ಮಗ್ಗುಲಲ್ಲಿ ಪವಡಿಸಿದ. ಅವನಿಗೂ ನೆಮ್ಮದಿಯ ನಿದ್ರೆ ಬಂತು.

ಬಾಲು ಮೈಮುರಿದು ಎದ್ದು ಕುಳಿತ. ಗಂಟೆ ಐದು ದಾಟಿತ್ತು.

"ಸೀತೂ"—ಎಂಬ ಮೆಲುದನಿಯ ಕರೆ ಕೇಳಿಸಿತು ಕೆಳಗಿನಿಂದ. ಬಾಲು ಅವನನ್ನು ಅಲುಗಿಸಿದ. ಅವನೂ ಕಣ್ಣುಜ್ಜುತ್ತ ಎದ್ದು ಕುಳಿತು—

"ಏನು ಬೇಕು ಬಾಲು?" —ಎಂದ.

"ಯಾರೋ ನಿಮ್ಮನ್ನ ಕರೀತಾ ಇದಾರೆ."

ಸೀತಾರಾಮು ಕೆಳಗಿಳಿದು ಬಂದ. ಮತ್ತೆ



ಅವನು ಮೇಲೆ ಬಂದಾಗ ಒಂದು ತಟ್ಟೆಯ ತುಂಬ ರಾಜಮ್ಮನವರು ಕೊಟ್ಟ ತಿಂಡಿಗಳು, ಎರಡು ದೊಡ್ಡ ಲೋಟಗಳ ತುಂಬ ಬಿಸಿಬಿಸಿ ಕಾಫಿ ತಂದಿದ್ದ. ಮಂಚದ ಮೇಲಿಟ್ಟುಕೊಂಡು ನಿಧಾನವಾಗಿ ತಿಂದರು. ಸೀತಾರಾಮು ಚಕ್ಕಿ ತಿನ್ನುತ್ತ ಅಂದ—

"ಬಾಲು ಇವೆಲ್ಲ ನಿಮ್ಮ ತಾಯಿ ಕೊಟ್ಟ ತಿಂಡಿ. ನಮ್ಮನೆದೇನೂ ಇಲ್ಲ ಇದರಲ್ಲಿ."

ಬಾಲು ಕೋಡು ಬಳೆ ಮುರಿಯುತ್ತಾ ಉತ್ತರವಿತ್ತ—

"ನಿಮ್ಮನೆ ಅಡಿಗೆ ತುಂಬಾ ರುಚಿಯಾಗಿತ್ತು."

ತಾನು ಹೇಳಿದ್ದಕ್ಕೂ, ಅವನು ಹೇಳಿದ್ದಕ್ಕೂ ಏನೂ ಸಂಬಂಧವಿರಲಿಲ್ಲವಾದ್ದರಿಂದ ಸೀತಾರಾಮು ಅವನ ಮುಖ ನೋಡಿದ. ಬೆಂಗಳೂರು ಬಿಟ್ಟು ಬಂದುದರ ಬೇಸರ ಕಿಂಚಿತ್ತೂ ಇರಲಿಲ್ಲ ಬಾಲುವಿನ ಮುಖದಲ್ಲಿ.

ಹೊಟ್ಟೆತುಂಬ ತಿಂಡಿ ತಿಂದರು. ನೀರು ಬೇಕಾಯಿತು. ಸೀತಾರಾಮು ಹಿಂಬದಿಯ ಕಿಟಿಕಿಯಲ್ಲಿ ಬಗ್ಗಿ ನೋಡಿದ. ಗಂಗೆ-ಗಿರಿಜೆಯರಿಬ್ಬರೂ ಬೃಂದಾವನದ ಪಕ್ಕದಲ್ಲಿ ದೇವರ ಪೂಜೆಯ ಉಪಕರಣಗಳನ್ನು ತೊಳೆಯುತ್ತಿದ್ದರು. ಅಲ್ಲಿಂದಲೇ ಕೂಗಿದ ಸೀತಾರಾಮು.

"ಲೇಗಂಗಾ,ಎರಡ್ ಲೋಟನೀರ್ ತಗಂಬಾರೆ."

ಎರಡೇ ನಿಮಿಷದಲ್ಲಿ ನೀರು ಬಂದಿತು—"ಸೀತಣ್ಣ" ಎಂಬ ಮೆಲುದನಿಯೊಡನೆ. ಬಣ್ಣದ ಬಳೆತೊಟ್ಟ ಎರಡು ಕೇದಗೆರಾಗದ ಉರುಟು ಕೈಗಳು ನೀರಿನ ಲೋಟಗಳನ್ನು ಉಪ್ಪರಿಗೆಯ ಮೇಲೆ ಹಿಡಿದವು. ಸೀತಾರಾಮು ಎದ್ದುಹೋಗಿ ಲೋಟ ತೆಗೆದುಕೊಂಡು—

"ಸ್ವಲ್ಪ ಇರೆ. ಈ ಪಾತ್ರೆಯಲ್ಲ ತಗಂಡ್ಹೋಗುವಂತೆ"— ಎಂದ ತಂಗಿಗೆ. ಬಾಲು ತಿರುಗಿ ನೋಡಿದ. ಶಾವಂತಿಗೆ ದಂಡೆ ಮುಡಿದ ತುಂಬು ಮುಡಿ ಮಾತ್ರ ಕಾಣಿಸಿತವನಿಗೆ. ಗಂಗೆ ಉಪ್ಪರಿಗೆಯ ಮಧ್ಯದ ಮೆಟ್ಟಿಲ ಮೇಲೆ ನಿಂತಿದ್ದಳು. ಮತ್ತೆ ಪಾತ್ರೆ ಎಲ್ಲ ತೆಗೆದುಕೊಂಡು ಕೆಳಗಿಳಿದಳು.

"ಹಾಗೇ ಎಲ್ಲಾದ್ರು ಸ್ವಲ್ಪ ತಿರುಗಾಡಿ ಬರೋಣ ಬರ್‍ತೀರಾ ಬಾಲು?"

ಬಾಲು ಮಾತಾಡದೆ ಎದ್ದು ನಿಂತ. ಇಬ್ಬರೂ ಚಪ್ಪಲಿ ಮೆಟ್ಟಿ ಕೆಳಗಿಳಿದರು. ಆಚೆ ಊರ ಚಂದ್ರೇಗೌಡ, ಕಾಳಿ ಹೆಗ್ಗಡತಿ ಬತ್ತದ ಕಣಜ ಒರಗಿ ನಂಜುಂಡಯ್ಯನವರೊಡನೆ ಮಾತು ನಡೆಸಿದ್ದಾರೆ.

"ಓ! ಯಾವಾಗ ಬಂದದ್ದು ಸಣ್ಣಯ್ಯ?"—ಕೆಂಪು ಹಲ್ಲು ಕಿರಿದ ಗೌಡ.

"ನಿನ್ನೆ ಬಂದೆ. ಹ್ಯಾಗಿದೆ ನಿನ್ನ ಖಾರುಬಾರು?"

"ಹೀಂಗೆ ಅದನಿ ಅಯ್ಯ. ಇವರು . . . ?"

"ನನ್ನ ಸ್ನೇಹಿತು. ಬೆಂಗಳೂರ್‍ನೋರು."

"ಇದ್ದೀರಾ ಮತ್, ನಾಕ್ದಿನ?"

"ಹುಂ. ಇರ್‍ತೀನಿ."

ಈಗ ಕಾಳಿ ತನ್ನ ಕರಿಯ ಹಲ್ಲು ತೋರಿಸಿದಳು—

"ಯಾವಾಗ ಅಯ್ಯ ನೀವು ನಮ್ಗೆ ಹೋಳಿಗೆ ಹಾಕಾದು?"

ಸೀತಾರಾಮು ಮೆಲುನಕ್ಕು ಹೇಳಿದ—

"ಮಾರ್‍ನೋಮಿ ದಿನ ಬಾ. ಹೋಳಿಗೆ ಕೊಡಸ್ತೀನಿ."

ಕಾಳಿ ಕಿವಿಯವರೆಗೆ ನಕ್ಕಳು—

"ಬಾಳ ಜಾಣ್ರು ಸಣ್ಣಯ್ಯ! ಮಾರ್‍ನೋಮಿ ಹೋಳ್ಗೆ ದೊಡ್ಡಮ್ಮಾರು ನಂಗ ಕೊಡ್ತಾರೆ. ನಿಮ ಸೋಬಾನ ಹೋಳ್ಗೆ ಯಾವಾಗಾಂದೆ?"

ಸೀತಾರಾಮು ಹೊಸಿಲು ದಾಟುತ್ತಾ ಹೇಳಿದ—

"ಮುದ್ಕಿ ಆಗ್ತಾ ಆಗ್ತಾ ನಿಂಗೆ ಹೋಳಿಗೆ ಆಸೆ ಜಾಸ್ತಿಯಾಯ್ತು"

"ಹೋಗ್ಲಿ ಅನ್ನೋರೆ ಅಷ್ಟು ಬಾಯಿಗಾರಾ ಕೊಡಿ?" ಕಾಳಿ ಕೇಳಿದಳು.

ಸೀತಾರಾಮುವಿನ ಅತ್ತಿಗೆ ಭಾಗೀರತಮ್ಮ ಅಷ್ಟು ಒರಟು ವೀಳ್ಯದೆಲೆ, ಗೋಟಡಿಕೆ ತಂದು ಕಾಳಿಯ ಮಡಿಲಿಗೆ ಹಾಕಿದಳು. ಸೀತಾರಾಮು, ಬಾಲು ಇಬ್ಬರೂ ಹೊರಬಿದ್ದು ಮೆಲ್ಲಮೆಲ್ಲನೆ ನಡೆದರು. ಆಗಲೇ ಸಂಜೆ ಇಳಿಯುತ್ತಿತ್ತು. ಬಹಳ ದೂರ ಹೋಗಲಿಲ್ಲ. ಮಾವಿನ ತೋಪಿನ ಎಡ ಬಗಲಲ್ಲಿ ನಡೆದರು.

ಅಲ್ಲಿ ಆಲೆತ್ತರದ ಎರಡು ಒಲೆಗಳಿದ್ದವು. ಬಾಲು ಅಚ್ಚರಿಯಿಂದ ಅದನ್ನ ನೋಡುತ್ತ ನಿಂತ. ಸೀತಾರಾಮು ತಿಳಿಸಿದ—

"ಇದು ಆಲೆಯ ಒಲೆ. ಬೆಲ್ಲ ಮಾಡೋದು. ಅಲ್ಲಿ ನೋಡಿ ಕೊಪ್ಪರಿಗೆ." ಬಾಲು ತಿರುಗಿದ. ಬಾಣಲೆ ಮಾದರಿಯ ಅಂಕಣದಗಲ ಕೊಪ್ಪರಿಗೆಗಳು. ಮುಂದೆ ನಡೆದರು. ಮುಕ್ಕಾಲೆಲ್ಲ ಹಾಲು ತುಂಬಿದ ತೆನೆಕಬ್ಬುಗಳು. ಸುಮಾರು ಎರಡು ಫರ್ಲಾಂಗ್ ವರೆಗೂ ಕಬ್ಬಿನ ಗದ್ದೆ. ಗಾಳಿಯಿಂದ ಕಬ್ಬಿನ ಗರಿಗಳು ಸೊಳಸೊಳ-ಸೊರಸೊರ, ಸದ್ದು ಮಾಡಿದವು. ಗಾಳಿಯಲ್ಲಿ ನವಿರಾದ ಸಿಹಿಸಿಹಿ ವಾಸನೆ ಹರಡಿತು. ಚೀಮುಕ್ಕಿಗಳು ಕಬ್ಬಿನ ಗರಿಯ ತುದಿಯಲ್ಲಿ ಕುಳಿತು ಚೀರ್-ಚೀರ್ ಮಾಡುತ್ತ ತಮ್ಮ ನೀಳವಾದ ಕಪ್ಪು ಗರಿಗಳನ್ನು ಕುಣಿಸಿದವು.

ದಿಣ್ಣೆಯ ಮೇಲಿದ್ದ ಒಂದು ಕುಂಟೆಯ ಮೇಲೆ ಕುಳಿತರು ಇಬ್ಬರೂ. ಬಾಲು ಉದ್ದಕ್ಕೂ ಕಣ್ಣು ಹರಿಸಿದ. ಎಲ್ಲೆಲ್ಲೂ ಹಸಿರೋ ಹಸಿರು ಬಾಂದಳದ ಅಂಚಿನಲ್ಲಿ. ನೀಲಿ ಮೋಡಗಳ ಕೊನೆಯಲ್ಲಿ ಸೂರ್ಯದೇವನ ನಿರ್ಗಮನದ ಕುರುಹಾಗಿ ಕೆಂಡಕೆಂಪು ಉದ್ದಕ್ಕೆ ಹರಡಿದೆ.

ಬಾಲು ಬೆರಗಿನಿಂದ ನೋಡಿದ. ಹೊಸ ಶಿಶು ಎಲ್ಲವನ್ನೂ ಅಚ್ಚರಿಯಿಂದ ನೋಡುವಂತೆ ಅವನು ಆ ಹಳ್ಳಿಯ ನಿಸರ್ಗ ಜಗವನ್ನು ಹೊಸಕಣ್ಣುಗಳಿಂದ ನೋಡಿದ.

ಬೆಂಗಳೂರಲ್ಲಿದ್ದಾಗ ಅವನಿಗೆ ಕತ್ತೆತ್ತಿ ಆಕಾಶದ ಕಡೆಗೆ ನೋಡಲು ಪುರಸತ್ತೇ ಇರಲಿಲ್ಲ. ಅಲ್ಲದೆ ಮನೋರಂಜನೆಯ ಸಾಧನಗಳು ಅಸಂಖ್ಯ. ಅಲ್ಲಿ, ದಿನ ದಿನ ಕಂಟೋನ್ಮೆಂಟಿನ ಚಿತ್ರಮಂದಿರಗಳಿಗೆ ಭೇಟಿ ಕೊಡುವದಿರುತ್ತಿತ್ತು, ಕಾಲೇಜಿನ ಆಟಪಾಠಗಳು, ಕಾರ್ಯಕಲಾಪಗಳು. ಮಧ್ಯೆ ಮಧ್ಯೆ ಪುಟ್ಟಪುಟ್ಟ ಪ್ರವಾಸಗಳು.

ಲಾಲ್‌ಬಾಗ್, ಕಬ್ಬನ್‌ಪಾರ್ಕ್‌ಗಳನ್ನು ನೂರಾರು ಬಾರಿ ನೋಡಿಯಾಗಿತ್ತು. ಹುಟ್ಟಿದಾರಭ್ಯ ಅವುಗಳನ್ನೇ ನೋಡಿದ ಬಾಲುವಿಗೆ ಅವುಗಳಲ್ಲಿ ಯಾವ ವಿಶೇಷತೆಯೂ ಕಾಣುತ್ತಿರಲಿಲ್ಲ. ಕಷ್ಟ ಕಾರ್ಪಣ್ಯಗಳನ್ನೇ ಕಾಣದ ಅವನಿಗೆ ಸುಖದಲ್ಲಿ ಏನೂ ಸಾರವಿರಲಿಲ್ಲ. ಎಲ್ಲ ಶ್ರೀಮಂತ ಮಕ್ಕಳಂತೆ ಅವನು ಬೆಳೆದು ವಿದ್ಯೆ ಕಲಿತ. ಇತ್ತೀಚೆಗೆ ಚಿತ್ರಾ ಅವನಿಗೆ ಒಂದು ತಾತ್ಕಾಲಿಕ ಮಾಯದ ಬಲೆ ಬೀಸಿ ಎಳೆದುಕೊಂಡು ನಡೆದಳು.

ಬಾಲುವಿಗೆ ಈಗ ಪುನರ್ಜನ್ಮ. ಶಾಪಗ್ರಸ್ತ, ಗಂಧರ್ವನೋರ್ವ ಶಾಪವಿಮುಕ್ತನಾಗಿ ಸ್ವಸ್ಥಾನಕ್ಕೆ ಬಂದು ನೆಮ್ಮದಿ ಪಡೆದಂತೆ ಬಾಲುವಿಗೆ ಬದುಕೇ ತಂಪಾಗಿ ತೋರಿದೆ.

"ಏಳಿ ಬಾಲು. ಕತ್ತಲಾಗಿದೆ, ನಾಳೆ ಬರೋಣ ಮತ್ತೆ."—

—ಅನ್ನುತ್ತ ಸೀತಾರಾಮು ಅವನ ಭುಜ ಹಿಡಿದು ಅಲುಗಿಸಿದ. ಬಾಲು ಸದ್ದಿಲ್ಲದೆ ಎದ್ದು ಅವನನ್ನು ಹಿಂಬಾಲಿಸಿದ.

## ೮

"ಅಂಬಾ"— ಎಂದು ತಾಯಿಯನ್ನು ಕರೆಯಿತು ಗೌರಿ ದನದ ಕರು. ಮಗಳ ಕರೆಯನ್ನಾಲಿಸಿ "ಹುಂ" ಅನ್ನುತ್ತ ಚುರುಕಿನ ಹೆಜ್ಜೆ ಹಾಕಿತು ಗೌರಿ.

ಕೊರಳಿಗೆ ಕುಂಟೆ ಕಟ್ಟಿಕೊಂಡ ಕೋಣ ನಿಧಾನವಾಗಿ "ವಾಯ್" ಅನ್ನುತ್ತ ಸಾಗಿತು. ಕುತ್ತಿಗೆಗೆ ದೊಡ್ಡ ಬಿದಿರ ಅಂಡೆ ಕಟ್ಟಿಕೊಂಡ ತುಡುಗು ದನ ದುರ್ಗಿ ದುಡುದುಡು ಓಡಿತು ಹೊರಕೊಟ್ಟಿಗೆಗೆ. ಹಿಂದಿನಿಂದ ಗೊಲ್ಲರ ಸೋಮ ಎಲ್ಲ ಕಾಲ್ನಡಗೆಯನ್ನು ಕೊಟ್ಟಿಗೆಗೆ ತರುಬುತ್ತಿದ್ದ. ಕಂಬಳಿ ಕುಪ್ಪೆ ಹೊತ್ತ ಸೋಮ ಕೈಯಲ್ಲಿ ಉದ್ದ ಡೊಣ್ಣೆ ಹಿಡಿದು " ಹೇಯ್! ಹೆತ್ "— ಎನ್ನುತ್ತ ಓಡೋಡಿ ಬಂದ.

ಅವರು ಮನೆಯ ಅಂಗಳಕ್ಕೆ ಬಂದಾಗ ಇದೇ ಸಂಭ್ರಮ ನಡೆದಿತ್ತು. ಕತ್ತಲೆ ಚಳಿ ಎರಡೂ ಧುಬುರುಹಾಕುತ್ತ ಬಂದಿದ್ದರೂ ಆಶ್ವಯುಜ ಶುಕ್ಲ ಷಷ್ಠಿಯ ಬಾಲೇಂದು ಅಂಬರದಲ್ಲಿ ಆಗಲೇ ಮಂದಹಾಸ ಬೀರುತ್ತಿದ್ದ.

ಅವರು ಮನೆಯ ಮೆಟ್ಟಿಲು ಹತ್ತಿದರು. ಒಳಗಿನಿಂದ ಗಂಗೆ ದೊಡ್ಡ ಹಣತೆಯಲ್ಲಿ ಹರಳೆಣ್ಣೆ ದೀಪ ಹಚ್ಚಿ ಗಾಳಿಗೆ ಆರುತ್ತದೆಂದು ಬಲಗೈ ಅದಕ್ಕೆ ಅಡ್ಡಹಿಡಿದು ಜಗುಲಿಗೆ ಬಂದಳು. ಇಬ್ಬರೂ ಅಲ್ಲೇ ನಿಂತರು. ದೀಪಕ್ಕೆ ಕೈ ಅಡ್ಡ ಹಿಡಿದಿದ್ದರಿಂದ ದೀಪದ ಹೆಚ್ಚು ಪ್ರಕಾಶವೆಲ್ಲಾ ಅವಳ ಮುಖಕ್ಕೆ ಸ್ವರ್ಣಪ್ರಭೆಯನ್ನು ತುಂಬಿತು. ಅದೇ ಆಗ ಅವಳು ತುಳಸಿಗೆ ಕುಂಕುಮವಿಟ್ಟು ಬಂದಿದ್ದಳು. ತುಳಸಿಯ ಪ್ರಸಾದ ಕುಂಕುಮ ದೊಡ್ಡ ಕುಂಕುಮದ ಕೆಳಬದಿಗೆ ಅಂಟಿ ಒಂದು ಮಂಗಳ ಶೋಭೆ ತಂದಿದೆ ಅವಳ ಮುಖಕ್ಕೆ.

ಬಾಲು ತೀರಾ ಹತ್ತಿರದಲ್ಲಿ ನೋಡಿದ ಗಂಗೆಯನ್ನ; ಅವಳೂ ಮುಖ ತಗ್ಗಿಸಿದಂತೆಯೇ ಆಕಸ್ಮಿಕವಾಗಿ ಕಣ್ಣು ಮಾತ್ರ ಎತ್ತಿ ನೋಡಿದಳು ಅವನನ್ನ. ಮರುಗಳಿಗೆ ಸರ್ವಾಂಗವೂ ನಾಚಿಕೆಯಿಂದ ಮುದುರಿತು ಅವಳಿಗೆ. ನಾಲ್ಕು ನಯನಗಳು ಸಂಧಿಸಿದ್ದು ಒಂದೇ ಗಳಿಗೆ. ಮರುಗಳಿಗೆ ಮುಖಬಾಗಿದಳು.

ಬಾಲು ಗಳಿಗೆ ಕಣ್ಣುಮುಚ್ಚಿ ಸುಧಾರಿಸಿಕೊಂಡ. ಅವನ ತಾರುಣ್ಯದ ಪ್ರಾರಂಭದಲ್ಲಿಯೇ ವಿದ್ಯುಚ್ಛಕ್ತಿಯ ಪ್ರಖರ ಪ್ರಕಾಶ ಒಂದು ಮಿಂಚಿನಂತೆ ಅವನೆದೆಯನ್ನು ಪ್ರವೇಶಿಸಿ, ಅವನ ಕೋಮಲ ಹೃದಯವನ್ನು ಸುಟ್ಟು ಆರಿಹೋಯಿತು. ಅಲ್ಲಿ ಆವರಿಸಿದ ಅಂಧಕಾರದಲ್ಲಿ ಬಾಲು ದಿಕ್ಕುಗಾಣದೆ ತಡವರಿಸುತ್ತಿದ್ದ. ಈಗ! ಮಂಗಳ ದೇವತೆಯೊಬ್ಬಳು ತಂಪಿನ ನಂದಾದೀಪದೊಂದಿಗೆ ತನ್ನ ಹೃನ್ಮಂದಿರವನ್ನು ಬೆಳಗಿದಂತೆ ಅವನಿಗೆ ಭಾಸವಾಯಿತು. ಇದೆಲ್ಲಾ ಒಂದೇ ಗಳಿಗೆಯ ಮಾಯೆ. ಗಂಗೆ ಸರ್ರನೆ ಪಕ್ಕಕ್ಕೆ ಸರಿದು ಗೋಡೆಯಲ್ಲಿದ್ದ ತ್ರಿಕೋಣಾಕಾರದ ಪುಟ್ಟ ಗೂಡಿನಲ್ಲಿ ಹಣತೆಯನ್ನಿಟ್ಟು, ಬೀದಿಯ ಹೊಸ್ತಿಲಿಗೆ ಕುಂಕುಮವಿಟ್ಟು ಕಣ್ಣೊತ್ತಿಕೊಂಡು ಬೇಗ ಒಳಗೆ ಓಡಿದಳು.

ಅವರಿಬ್ಬರೂ ನಿಧಾನವಾಗಿ ಒಳಗೆ ಹೋದರು. ಸೀತಾರಾಮುವಿನ ಅತ್ತಿಗೆ ಎರಡು ತಂಬಿಗೆಗಳನ್ನು ಹಿಡಿದು ಹಾಲು ಕರೆಯಲು ಕೊಟ್ಟಿಗೆಗೆ ಹೊರಟಿದ್ದಾರೆ. ಆ ಎರಡು ಪುಟ್ಟ ಮಕ್ಕಳು ಗೋಡೆಗೆ ತಗುಲಿಸಿದ ಸೀಮೆಎಣ್ಣೆ ಲ್ಯಾಂಪಿನ ಮುಂದೆ ಕುಳಿತು ಪಾಠ ಓದಿಕೊಳ್ಳುತ್ತಿವೆ. ನಂಜುಂಡಯ್ಯನವರು ತುಳಸೀಕಟ್ಟೆಯ ಬದಿಯಲ್ಲಿ ಸಂಧ್ಯಾವಂದನೆಗೆ ಕುಳಿತಿದ್ದಾರೆ. ಬಂದಮ್ಮನವರು ಮಡಿಯುಟ್ಟು ರಾತ್ರಿಯ ಅಡಿಗೆಗೆ ತೊಡಗಿದರು.

ಹುಟ್ಟಿದಾರಭ್ಯ ಎಲೆಕ್ಟ್ರಿಕ್ ದೀಪವನ್ನೇ ನೋಡಿದ ಬಾಲುವಿಗೆ ಈ ಲ್ಯಾಂಪಿನ ಬೆಳಕಿನಲ್ಲಿ ಸ್ವಲ್ಪ ತಡವರಿಸುವಂತಾಯಿತು. ಮೆಲ್ಲಮೆಲ್ಲನೆ



" ಹೂಂ ಒಂದ್ಗುಂಡು ಹೊಡೆಯಪ್ಪಾ.... ಇನ್ನೊಂದ್ಗುಂಡಿಗೆ ಬಂದಿತಾ ಕೊಡ್ತೀನಿ, ಹಾಗೇ ಹಿಡಕೋ. "



ನಡೆದ. ಮೇಲಿನಿಂದ ನೇತಾಡುತ್ತಿದ್ದ ಹಗ್ಗವನ್ನು ಭದ್ರವಾಗಿ ಹಿಡಿದು ಉಪ್ಪರಿಗೆ ಏರಿದ. ಕೋಣೆಯಲ್ಲಿ ದೊಡ್ಡ ಬುರುಡೆಯ ಟೇಬಲ್ ಲ್ಯಾಂಪನ್ನ ಹಚ್ಚಿ ಮೂಲೆಯ ದೊಡ್ಡ ಮೇಜಿನ ಮೇಲಿಟ್ಟಿದ್ದಳು ಗಂಗೆ.

ಚಪ್ಪಲಿ ಕಳಚಿ ಆರಾಮುಖುರ್ಚಿಯಲ್ಲಿ ಕುಳಿತ ಬಾಲು. ಸೀತಾರಾಮು ಮತ್ತೆ ಕೆಳಗೆ ಹೋದ. ಬಾಲು ಹತ್ತು ನಿಮಿಷ ಕಣ್ಣುಮುಚ್ಚಿ ಕುಳಿತವನು ಥಟ್ಟನೆ ಎದ್ದು ಅಡಿಕೆ ಚಪ್ಪರದ ಮೇಲೆ ಹೋಗಿ ನಿಂತ.

ಎಲ್ಲೆಲ್ಲೂ ಶಾಂತ, ಪ್ರಶಾಂತ. ನಿಸರ್ಗದೇವಿಯ ಅಂತರಂಗದ ಮಧುರ ಗಾಯನ! ಅಸ್ಪಷ್ಟ; ಅನಂತ! ಅಮಲ.

ಬೆಂಗಳೂರಿನಂತೆ ಯಮಸ್ವರೂಪ ವಾಹನಗಳ ಗರ್ಜನೆಗಳಿಲ್ಲಿಲ್ಲ; ಕಾರಖಾನೆಗಳ ಆರ್ಭಟಗಳಿಲ್ಲ. ರೇಡಿಯೋಗಳ ಅರಚಾಟಗಳಿಲ್ಲ. ಕಳ್ಳಕಾಕರು ವಂಚಕರು, ಮೋಸಗಾರರು, ತಲೆಬಡುಕರು, ಕುಹಕರಿಂದ ವಿದೂರವಾದ ಪುಣ್ಯಾಶ್ರಮದಂಥ ಗ್ರಾಮವಿದು.

ದೂರದ ಕೆರೆಯ ಕಪ್ಪೆಗಳ ವಟವಟ! ಇರುಳು ಜೀರುಂಡೆಗಳ ಜಿರಿಜಿರಿ. ಅಡಿಕೆ, ತೆಂಗು ಮರಗಳ ಸುಯ್ ಸುಯ್ ಮೊರೆತ. ಜೋರು ಗಾಳಿ ಬಂದಾಗ ಮಾವು, ಹುಣಿಸೆ, ಹಲಸು ಮರಗಳ ಭರಭರಾಟ. ಮಧ್ಯೆ ಮಧ್ಯೆ ಹಳ್ಳಿ ನಾಯಿಗಳ ಬೊಗಳುವಿಕೆ. ಹೊಲೆಯರ ಗುಡ್ಡಿನಿಂದ ಅಸ್ಪಷ್ಟ ಮಾತುಗಳು.

ಬಾಲು ಒಮ್ಮೆ ಸುತ್ತಲೂ ನೋಡಿದ. ಶರದಾಕಾಶದಲ್ಲಿ ಬಾಲಚಂದ್ರ ನಗುತ್ತಿದ್ದಾನೆ. ಮುಗಿಲೆತ್ತರದ ತರುರಾಜಿಗಳು ಓಲೈಸಿ ನಿಂತಿವೆ. ತಿಳಿ ಬೆಳದಿಂಗಳಿನಲ್ಲಿ ಸುತ್ತಲಿನ ಪ್ರಕೃತಿಯೆಲ್ಲ ನಿಪುಣ ಕಲಾವಿದನ ಕುಸುರಿ ಚಿತ್ರದಂತೆ ಸ್ಥಾವರ ಸ್ಥಿತಿಯಲ್ಲಿ ಮೌನತಳೆದು ನಿಂತಿವೆ. ಪ್ರಕೃತಿ ತಪಸ್ವಿಯಾಗಿದ್ದಾಳೆ.

ಬಾಲು ಹತ್ತು ನಿಮಿಷ ಕೈ ಕಟ್ಟಿ ನಿಂತು ಸುತ್ತಲೂ ನೋಡಿದ. ಇಲ್ಲ! ಅವನ ಬದುಕಿನಲ್ಲಿ ಒಂದೇ ಒಂದು ದಿನ ವಸುಂಧರೆಯ ಈ ಗಂಭೀರ ದರ್ಶನ ಪಡೆದವನಲ್ಲ.

ಕೆಲವೇ ದಿನಗಳ ಹಿಂದೆ ನರಕದ ತಾಪದಿಂದ ಬೆಂದುಹೋದ ಅವನ ಚೇತನವನ್ನು, ನಾಕದ ಹೊಸ್ತಿಲಿಗೆ ತಂದು ನಿಲ್ಲಿಸಿದ ಸೀತಾರಾಮು.

"ಎಷ್ಟು ಸುಖವಾಗಿದೆ ಈ ಹಳ್ಳಿ!"— ಎಂದು ಯೋಚಿಸುತ್ತಿದ್ದ ಬಾಲು. ಕೆಳಗಿನಿಂದ ಗಂಧದ ಕಡ್ಡಿಯ ಮೃದು ಪರಿಮಳ ತೇಲಿಬಂದಿತು. ಜೊತೆಗೇ ನಂಜುಂಡಯ್ಯನವರ ರಾತ್ರಿಯ ಮಂಗಳಾರತಿಯ ಗಣಗಣ ಗಂಟೆ ಕೇಳಿಬಂತು.

ಬಾಲುವಿಗೆ ಈ ಸಂಪ್ರದಾಯಗಳೆಲ್ಲ ಹೊಸದು. 'ಈಗ ಯಾಕೆ ಗಂಟೆ?' ಎಂದವನು ಯೋಚಿಸುತ್ತಿದ್ದ. ಅಷ್ಟರಲ್ಲಿ ಸೀತಾರಾಮು ಮೇಲೆ ಬಂದು "ಯಾಕೆ ಬಾಲು ಬೇಜಾರಾಯ್ತ? ಬನ್ನಿ ಊಟ ಮಾಡೋಣ." ಎಂದು ಕರೆದ. ಬಾಲುವಿಗೆ ಹಸಿವೇ ಇದ್ದಂತಿರಲಿಲ್ಲ. ಆದರೂ ಅವನು ಏನೂ ಹೇಳದೆ ಅವನ ಹಿಂದೆ ನಡೆದ.

ಎಲೆಯ ಮುಂದೆ ಕಾಲುದೀಪ, ಲಾಟೀನು, ಏನೇನೋ ಇತ್ತು. ಅಡಿಗೆ ಮನೆಯಲ್ಲಿ ಸೀಮೆ ಎಣ್ಣೆ ಚಿಮಣಿ ಕಾಣಿಸಿತು.

ಮಧ್ಯಾಹ್ನದಂತೆ ಎಲೆ ಹಾಕಿದ್ದಾರೆ. ಬೆಂಗಳೂರಿನ ಕೋಸುಗಡ್ಡೆಯ ಹುಳಿ ಮಾಡಿದ್ದಾರೆ... ಖಮ್ಮೆನ್ನುವ ಬಾಳಕ ಕರಿದಿದ್ದಾರೆ. ಒಳಗೆ ಅತ್ತಿಗೆ ನಾದಿನಿಯರು ಊಟಕ್ಕೆ ಕುಳಿತರು. ಬಂದವನ್ನನವರು ಬಡಿಸಿದರು. ಮಧ್ಯಾಹ್ನದಂತೆ ಸದ್ದಿಲ್ಲದ ಊಟ.

ಕೈ ತೊಳೆಯಲು ಬಿಸಿನೀರು ಬಂದಿತು ಈಗ. ಉಂಡು ಉಪ್ಪರಿಗೆ ಏರಿದರು ಗೆಳೆಯರು. ಹಾಸಿಗೆಗಳನ್ನು ಸರಿಯಾಗಿ ಒದರಿ ಹಾಸಿದ ಸೀತಾರಾಮು. ಸ್ವಲ್ಪ ಹೊತ್ತಿನಲ್ಲಿಯೇ ಕೆಳಗಿಂದ ಘಮಘಮಿಸುವ ಆಕಳಹಾಲು ಬಂದಿತು. ಈಗ ಬಾಲುವಿಗೆ ರಾತ್ರಿ ಮಲಗುವಾಗ ಒಂದೇ ಮಾತ್ರೆ ಕೊಡುವದಿತ್ತು. ಅದು ಡಾಕ್ಟರ ಸಲಹೆ. ಹಾಲಿನ ಜೊತೆಗೆ ಮಾತ್ರೆ ನುಂಗಿದ ಬಾಲು. ಕಿಟಿಕಿ ಬಾಗಿಲುಗಳನ್ನು ಭದ್ರಪಡಿಸಿ ದೀಪ ಚಿಕ್ಕದು ಮಾಡಿದ ಸೀತಾರಾಮು.

ಸ್ಥಳ ಬದಲಾವಣೆಯ ಚಿಂತೆಯೂ ಇರಲಿಲ್ಲ ಬಾಲುವಿಗೆ. ತಂದೆ-ತಾಯಿಯ ಹೆಸರೂ ಎತ್ತಲಿಲ್ಲ. ಮೂರೇ ನಿಮಿಷದಲ್ಲಿ ಮಗುವಿನಂತೆ ನಿದ್ರಿಸಿದ.

---

ಮರುದಿನ ಬಾಲುವಿನ ಬದುಕು ಬದಲಾದ ಸುಪ್ರಭಾತ ಬಾಲು ಕಣ್ಣು ತೆರೆದಾಗ ಪಕ್ಕದಲ್ಲಿ ಸೀತಾರಾಮು ಇರಲಿಲ್ಲ. ಮೊದಲು ಅವನ ಕಣ್ಣಿಗೆ ಕಂಡದ್ದು ಗೋಡೆಯಮೇಲಿನ ಕೋದಂಡರಾಮನ ಪಟ. ಬಾಲು ಅಂಥವುಗಳನ್ನು ಎಂದೂ ಗಮನಿಸಿ ನೋಡಿದವನಲ್ಲ.

ರಾಜಕಾರಣಿಗಳು, ನಟನಟಿಯರ ಚಿತ್ರಗಳೇ ಅವನ ಕಣ್ಣಿಗೆ ಬೀಳುತ್ತಿದ್ದದ್ದು. ಬಾಲು ಆ ಪಟವನ್ನೇ ನೋಡಿದ 'ರಾಮ-ಸೀತೆ! ಏನೋ ವಿಚಿತ್ರವಾಗಿ ಅಲಂಕರಿಸಿಕೊಂಡಿದ್ದಾರೆ'–ಎಂದುಕೊಂಡ.

ಆದರೂ ಆ ಪಟದ ಬೊಂಬೆಗಳು ಎಷ್ಟು ಚೆನ್ನಾಗಿವೆ. ತುಂಬ ಗಂಭೀರವಾಗಿದಾರೆ, ಅನಿಸಿತು. ಅವನಿಗೆ ರಾಮಾಯಣದ ಕಥೆ ಸ್ವಲ್ಪ ಗೊತ್ತು. ಹರಕು-ಮುರುಕಾಗಿ ನಾಟಕ,ಸಿನಿಮಾ ನೋಡಿದ್ದು ಚೂರು-ಪಾರು ಓದಿದ್ದು. ರಾಮನನ್ನೋ, ಸೀತೆಯನ್ನೋ ಯಾರೋ ಕದ್ದಿದ್ದರು. ಯಾರು, ಯಾರನ್ನೋ ಕೊಂದರು. ನರ, ವಾನರ, ಕರಡಿ, ಹದ್ದು ಏನೇನೋ ಬರುತ್ತವೆ ರಾಮಾಯಣದಲ್ಲಿ. ಚಿತ್ರವಿಚಿತ್ರವಾದ ವ್ಯಕ್ತಿಗಳು ಪಾಲ್ಗೊಂಡಿದ್ದಾರೆ ಅದರಲ್ಲಿ. ತುಂಬ ಹೊಡೆದಾಟ ಬಡಿದಾಟಗಳಿವೆ!

ಸೀತಾರಾಮು ತೆರೆದು ಹೋದ ಪೂರ್ವಾಭಿಮುಖವಾಗಿದ್ದ ಕಿಟಿಕಿಯಿಂದ ಬಾಲಸೂರ್ಯನ ಸುಳಿಕಿರಣಗಳು ತೂರಿ ಬಂದು ಕೋದಂಡ ರಾಮನ ಮುಖವನ್ನು ಬೆಳಗಿದವು. ಹೊರಗಡೆ ಹಕ್ಕಿಗಳು ಸುಸ್ವರವನ್ನು ಹಾಡಿದವು. ಕೋಳಿಗಳ, ಕೊಕ್ಕೋ, ನಾಯಿಗಳ ಬೌ ಬೌ, ಕರುಗಳ ಅಂಬಾ ಏನೇನೋ ಕೇಳಿಸಿದವು. ಇನ್ನೂ ಚಳಿ ಇದ್ದದ್ದರಿಂದ ಏಳಲು ಮನವಿಲ್ಲ ಬಾಲುವಿಗೆ. ಕೊರಳ ವರೆಗೆ ರಗ್ಗು ಹೊದ್ದು ಮುದುರಿದ. ಆದರೂ ಅವನು ಏಳಲೇಬೇಕಾಯಿತು. ಒಂದಕ್ಕೆ ಹೋಗಬೇಕಾಯಿತು. ಆಗ ಅವನಿಗೆ ಬೆಂಗಳೂರಿನ ತನ್ನ ಮನೆಯ ನೆನಪು ಬಂತು.

ಅಲ್ಲಿ ತನ್ನ ರೂಮಿನ ಪಕ್ಕದಲ್ಲೇ 'ಅಟ್ಯಾಚ್ಡ್ ಬಾತ್‌ರೂಮು.' ಬೇಗ ಬೇಗ ಹೋಗಿ ಬಂದು ಮತ್ತೆ ಬಿದ್ದುಕೊಳ್ಳಬಹುದಾಗಿತ್ತು. ಇಲ್ಲಿ ಎಷ್ಟು ದೂರ ಹೋಗಬೇಕಲ್ಲ— 'ಥೂ!' —ಅಂದುಕೊಂಡು ಎದ್ದು ಕುಳಿತ. ಕೆಳಗಿನಿಂದ ಸ್ವಲ್ಪ ನಡುಗುವ ಕಳ್ಳದನಿಯೊಂದು ಕೇಳಬಂತು. ಬಾಲು ಹಿಂಬದಿಯ ಕಿಟಿಕಿಯಲ್ಲಿ ಬಗ್ಗಿ ನೋಡಿದ. ಸೀತಾರಾಮುವಿನ ತಾಯಿ ತುಳಸೀಕಟ್ಟೆ ಸಾರಿಸುತ್ತ ಗುಣುಗುತ್ತಿದ್ದಾರೆ.

'ದಶರಥನುದುರದಿ ಜನಿಸಿದೆ ರಾಮ
ವಸುಧೆಯಭಾರವನಿಳುಹಿದೆ ರಾಮ
ಶಶಿಮುಖಿ ಜಾನಕಿ ವರಿಸಿದೆ ರಾಮ
ದಶಕಂಠನಾ ಸಿರ ತರಿದೆಯೋ ರಾಮ'

ಬಾಲು ಅಲ್ಲಿ ಬಗ್ಗಿ ನೋಡುವುದರಲ್ಲಿ ವಾಲ್ಮೀಕಿ ರಾಮಾಯಣ ಮುಗಿದಿತ್ತು. ಇನ್ನೇನು ಮಂಚದಿಂದ ಇಳಿಯಬೇಕು ಅಂದುಕೊಂಡ. ಅಷ್ಟರಲ್ಲಿ ಗಂಗೆ ರಂಗವಲ್ಲಿಯ ಬಟ್ಟಲು ಹಿಡಿದು ಬೃಂದಾವನದ ಸುತ್ತ ರಂಗವಲ್ಲಿ ಇಡಲು ಕುಳಿತಳು. ಬಾಲುವಿಗೆ ಮೂತ್ರ ತಡೆದು ಕೆಳಹೊಟ್ಟೆ ನೋಯತೊಡಗಿತು. ಆದರೆ ಒಂದು ಗಳಿಗೆ ಗಂಗೆಯ ಮುಖವನ್ನು ನೋಡಬೇಕೆಂಬ ಆಸೆಯಾಯಿತು.

'ಯಾರು ಈ ಗಂಗಾ? ಏನೋ ಒಂಥರಾ ಚೆನ್ನಾಗಿದೆ ಹೆಸರು. ನೀರಿನ ಹಾಗೇ ತಿಳಿತಿಳಿಯಾಗಿದೆ.'

ಆದರೆ ಅವಳ ಮುಖ ಕಾಣಿಸಲಿಲ್ಲ. ಮುಖ ತಗ್ಗಿಸಿ ರಂಗವಲ್ಲಿ ಇಡುತ್ತಿದ್ದಳು ಗಂಗೆ. ಹೆಚ್ಚು ಕಡಿಮೆ ಆ ಸೀತೆ ಮುಖ ಇದ್ದಾಗೆ ಇದೆ ಈ ಗಂಗಾನ ಮುಖ. ಸೀತಾರಾಂಗೆ ಮದುವೆ ಆಗಿಲ್ಲ ಅಲ್ವೆ? ಹಾಗಾದರೆ ಅವರ ತಂಗೀನೆ ಇರಬಹುದು. ಆ ಹುಡುಗಿಗೆ ಮದುವೆ ಆಗಿರಬಹುದೆ?

ಯೊಚಿಸುತ್ತ ಎದ್ದು ಕೆಳಗಿಳಿದು ಬಂದ ಬಾಲು. ನೊರೆ ತುಂಬಿದ ಹಾಲಿನ ತಂಬಿಗೆ ಹಿಡಿದು ಕೊಟ್ಟಿಗೆಯಿಂದ ಹೊರಬಂದರು ರಾಮಕೃಷ್ಣಯ್ಯ. ಸೀತಾರಾಮು ಎಲ್ಲಿ–ಎಂದು ಕೇಳಬೇಕೆಂದು ಮನಸ್ಸಿಗೆ ಬಂತು. ಆದರೆ ಯಾರನ್ನೂ ಕೇಳಲು ಸಾಧ್ಯವಾಗಲಿಲ್ಲ. ರಾಮಕೃಷ್ಣಯ್ಯನೇ ತಮ್ಮನನ್ನು ಕರೆದರು.

"ಲೋ ಸೀತೂ ಇವರನ್ನ ಬಚ್ಚಲಮನೀಗೆ ಕರಕೊಂಡ್ ಹೋಗಾ."

ಸೀತಾರಾಮು ಹಿತ್ತಲ ಬಾಗಿಲಲ್ಲಿ ನಿಂತು ಕರೆದ- "ಬನ್ನಿ ಬಾಲು ಇಲ್ಲೇ ಇದ್ದೀನಿ."

ಬಾಲು ಹಿತ್ತಲಿನ ಮೆಟ್ಟಲಿಳಿದ. ಬೆಂಗಳೂರಿನಂತೆ ಇಲ್ಲಿ ಮನೆಯೆಲ್ಲ ಚಪ್ಪಲಿ ಮೆಟ್ಟಿ ಓಡಾಡುವಂತಿರಲಿಲ್ಲ. ಬರಿಗಾಲಿನಲ್ಲೇ ತೋಟದಲ್ಲಿಳಿದು ನಡೆದರು. ಬಾಲು ಹಿಂದಿರುಗಿ ನೋಡಿದ. ಈಗಲೂ ಗಂಗೆ ಮುಖ ತಗ್ಗಿಸಿ ರಂಗವಲ್ಲಿ ಇಡುತ್ತಿದ್ದಾಳೆ. ಸ್ವಲ್ಪ ಮುಂದೆ ಹೋದ ಮೇಲೆ ಬಾಲು ಮೆಲುದನಿಯಲ್ಲಿ ಕೇಳಿದ—

"ಸೀತಾರಾಂ. ನಿಮ್ಮಲ್ಲಿ ಲೆವೆಟ್ರಿ ಎಲ್ಲಿದೆ?"

ಸೀತಾರಾಮುವಿಗೆ ನಗು ಬಂದಿತು. ತಿರುಗಿ ನಿಂತು ಹೇಳಿದ—

"ನಮ್ಮಲ್ಲಿ ಬಲು ದೊಡ್ಡ ಕಷ್ಟ ಅಂದ್ರೆ ಇದೊಂದೇ ಬಾಲು. ನಿಮಗೆ ಎರಡ್ದಿನ ತುಂಬಾ ತಾಪತ್ರಯ ಆಗುತ್ತೆ. ಬನ್ನಿ ತೋರಸ್ತೀನಿ"—

ಅನ್ನುತ್ತ ಸೀತಾರಾಮು ಮುಂದೆ ಮುಂದೆ ನಡೆದ.

೬

ಬಾಳೆ, ಅಡಿಕೆಮರಗಳ ಸಂದಿಗೊಂದಿಗಳಲ್ಲಿ ನುಸಿನುಸಿದು ಹೋಗುತ್ತಿದ್ದ ಸೀತಾರಾಮು. ಉಬ್ಬು, ತಗ್ಗು, ಕೊಚ್ಚೆಗಳಲ್ಲಿ ಪಜೀತಿಪಡುತ್ತ ಕಾಲುಹಾಕಿದ ಬಾಲು. ತೋಟದ ಕೊನೆ ಬಂತು. ಅಲ್ಲೇ ಸಣ್ಣ ಕೆರೆ. ಪಕ್ಕದಲ್ಲೆಲ್ಲಾ ಮಟ್ಟು ಮಟ್ಟು. ಸೀತಾರಾಮು ಅಲ್ಲೇ ನಿಂತು ಕೈಮಾಡಿ ತೋರಿಸಿದ.

"ನೋಡಿ ಬಾಲು, ಅದೇ ನಮ್ಮಲ್ಲಿಯ ಕಕ್ಕಸು. ಅಲ್ಲೇ ಮಡಿಕೇಲಿ ನೀರಿಟ್ಟು ಬಂದಿದೀನಿ. ನಾ ಇಲ್ಲೇ ಇರ್ತೀನಿ. ಹೋಗಿ ಬರ್ತೀರಾ?"

ಅಂತೂ ಅಭ್ಯಾಸವಿಲ್ಲದ ಔಪಾಸನ ಮುಗಿಸಿ ಬರುವುದಲ್ಲಿ ಬಾಲುವಿಗೆ ಮತ್ತೊಮ್ಮೆ ಅಮ್ಮನ ಹೊಟ್ಟೆಯಿಂದ ಬಂದಷ್ಟೇ ಶ್ರಮವಾಯಿತು. ಈಗ ಬಚ್ಚಲುಮನೆ ಕಾಣಬೇಕಿತ್ತು. ಕೆರೆಯ ದಂಡೆಯ ಮೇಲೆ ನಡೆದುಬಂದರು. ಕೆರೆಯ ತುಂಬ ಜೊಂಡು ಬೆಳೆದು ನಿಂತಿದೆ. ಮಧ್ಯೆ, ಮಧ್ಯೆ ಕೆಂದಾವರೆಗಳು ಈಗೀಗ ಬಾಯ್ದೆರೆಯುತ್ತಿವೆ. ಕೆರೆಯ ಅಂಚಿನಲ್ಲಿ ಮಂಟಪದಂತೆ ನಿಂತ ಕಂಬವನ್ನು ತೋರಿಸಿ ಕೇಳಿದ ಬಾಲು.

"ಇದೇನು ಸೀತಾರಾಂ?"

"ಇದೇ ಕೆರೆಯ ತೂಬು. ಆ ಮಧ್ಯ ಇದೆಯಲ್ಲ ತಿರುಗುಣಿ ಅದನ್ನ ಮೇಲೆತ್ತಿದರೆ ಅಲ್ಲಿ ಅಚ್ಚೆಯಿಂದ ನೀರು ತೋಟಕ್ಕೆಲ್ಲಾ ಹೋಗುತ್ತೆ. ಮಳೆಗಾಲದಲ್ಲಿ ನೀರು ಹೆಚ್ಚು ಬಿಡೋಲ್ಲ. ನೋಡಿ ಅದೇ ನೀರೇ ಅಲ್ಲಿ ಬಚ್ಚಲಮನೆ ಹತ್ರ ಹೋಗುತ್ತೆ."

ಇದನ್ನ ಬಣ್ಣಿಸುತ್ತಾ ಸೀತಾರಾಮು ಬಚ್ಚಲು ತಲುಪಿದ. ಆಗಲೇ ಹಂಡೆಯಲ್ಲಿ ನೀರು ಕುದಿಯುತ್ತಿತ್ತು. ಮುಖ ತೊಳೆದು ಬಂದು ಬಿಸಿ ಬಿಸಿ ಕಾಫಿ ಕುಡಿದಾಯಿತು. ಬಾಲು ಅತ್ತಿತ್ತ ನೋಡಿದ. ಮನೆಯೆಲ್ಲ ಸಾರಿಸಿ ರಂಗವಲ್ಲಿ ಇಟ್ಟಿದ್ದರು. ರಾಮಕೃಷ್ಣಯ್ಯ ಬೀದಿ ಬಾಗಿಲಿಗೆ ಪಚ್ಚೆ ತೋರಣ ಕಟ್ಟುತ್ತಿದ್ದರು. ಬಾಲು ಮಿಕಿಮಿಕಿ ನೋಡಿದ. ಹೊರಜಗುಲಿಗೆ ಬಂದ ಸೀತಾರಾಮು ಅಣ್ಣನೊಡನೆ ಕೇಳಿದ.

"ರಾಮಣ್ಣ ಇವತ್ತು ಪೇಟೆಕಡೆ ಹೋಗ್ತೀಯಾ ?"

"ಮಧ್ಯಾನ್ಹ ಹೋಗ್ತನಿ. ಯಾಕಾ ?"

"ಒಂದು ಕಾಗ್ದ ಪೋಸ್ಟ್ ಮಾಡೋದಿತ್ತು."

"ಮಾಡ್ತಿನಿ ಇಟ್ಟಿರು."

ಸೀತಾರಾಮು ರಂಗಯ್ಯನವರಿಗೆ ಬರೆದ ಪತ್ರವನ್ನು ಅಣ್ಣನ ಕೋಟಿನ ಜೇಬಿಗೆ ತುರುಕಿ —

"ಬನ್ನಿ ಬಾಲು. ಹಾಗೇ ಸ್ವಲ್ಪ ತಿರುಗಾಡಿ ಬರೋಣ."—ಎಂದ.

'ಎಲ್ಲಿಗೆ ?'— ಎಂದು ಬಾಲು ಕೇಳಲಿಲ್ಲ; ಅವನು ಹೇಳಲಿಲ್ಲ. ವಾಸ್ತವದಲ್ಲಿ ಅಂದಿನ ಉದಯ ಮನೋಹರವಿತ್ತು. ಬಾಲುವಿನ ಚಿತ್ತ ಹೃದಯ ಎರಡೂ ತಂಪು, ಹಗುರು. ಮನಕ್ಕೆ ಮುದವೆನಿಸಿತ್ತು. ಸೀತಾರಾಮುವಿನ ಹಿಂದೆ ನಡೆದ. ಮನೆಯ ಬಲಬದಿಯ ವಿಸ್ತಾರವಾದ ಹಂಕಲಿನ ಹುಲ್ಲುಹಾಸಿನ ಮೇಲೆ ಕಾಲು ಸವರುತ್ತ ನಡೆದರು. ಬಾಲು ತಾನಾಗಿಯೇ ಮಾತಾಡುವಷ್ಟು ಚೈತನ್ಯ ಪಡೆದ.

"ಸೀತಾರಾಂ, ಯಾಕೆ ನಿಮ್ಮಣ್ಣ ತೋರಣ ಕಟ್ತಾ ಇದಾರಲ್ಲ ?"

"ಈಗ ದಸರಾ ಅಲ್ವೆ ಬಾಲು ? ಇವತ್ತು ಶಾರದಾಪೂಜೆ. ಇನ್ನೂ ೩-೪ ದಿನ ಹಬ್ಬಗಳೇ. ಅದಕ್ಕೆ ತೋರಣ ಕಟ್ಟಿದ್ದಾರೆ."

ಎದುರಿನ ನಾಗಸಂಪಿಗೆ ಮರ ರೊಯ್ಯನೆ ಪರಿಮಳ ಸೂಸಿತು. ಬಲಬದಿಯ ಕಲ್ಲುಸಂಪೆಹಣ್ಣು ನಾಲ್ಕು ಕಿತ್ತು ಬಾಲುವಿನ ಕೈಗೆ ಕೊಡುತ್ತ ಸೀತಾರಾಮು ಹೇಳಿದ....

"ನೋಡಿ ನಮ್ಮೂರಿನ ದ್ರಾಕ್ಷೆ"

ಕೆಂಪಗಿನ ಗೋಲಿಗಳಂಥ ಹಣ್ಣುಗಳು. ಎರಡು ಹಣ್ಣು ಬಾಯಿಗೆ ಹಾಕಿದ ಬಾಲು. ಹುಳಿಸಿಹಿ. 'ಎಷ್ಟು ರುಚಿ!' —ಎಂದುಕೊಂಡ. ಕೈಗೆ ಸಿಕ್ಕುವಂತೆ ಎಷ್ಟೊಂದು ಹಣ್ಣು, ಯಾರೂ ಕಿತ್ತಿಲ್ಲ, ಯಾಕೋ ಅಂದುಕೊಂಡ.

ಮುಂದೆ ಮಡವತ್ತಿಯ ಗುಡಿ. ಅದೊಂದು ಸಾಧಾರಣ ದೇವಸ್ಥಾನ. ಶೇಷಭಟ್ಟನ ಪೂಜೆ ನಡೆದಿತ್ತು. ಸ್ನಾನವಾಗಿರಲಿಲ್ಲವಾದ್ದರಿಂದ ಸೀತಾರಾಮು ಗುಡಿಯೊಳಗೆ ಹೋಗಲಿಲ್ಲ.

ಮತ್ತೆ ನಾಲ್ಕು ಹೆಜ್ಜೆ ಮುಂದೆ ಮೂರು ನಾಲ್ಕು ಬ್ರಾಹ್ಮಣರ ಮನೆಗಳು. ಎಲ್ಲ ಮನೆಗಳೂ ಹಬ್ಬವನ್ನು ಸಾರುತ್ತಿವೆ. ಸೀತಾರಾಮು ನಿರಾತಂಕವಾಗಿ ಒಂದು ಮನೆಯೊಳಗೆ ನುಗ್ಗಿದ. ಗಿರಿಜೆಯ ತಂದೆ ನೀಲಕಂಠಯ್ಯನವರು ರಾಮಾಯಣ, ಮಹಾಭಾರತಗಳನ್ನ ಪೇರಿಸಿ ಶಾರದಾಂಬೆಯನ್ನು ಆವಾಹಿಸಿದ್ದರು ಬಾಗಿಲೆದುರಿಗೆ. ಪೂಜೆಗೆಲ್ಲ ಅಣಿಯಾಗಿತ್ತು. ಗಿರಿಜೆಯ ಅಣ್ಣ ಶಾಮು ಸೀತಾರಾಮುವನ್ನು ಕಂಡು ಅಷ್ಟಗಲ ಬಾಯಿಮಾಡಿ ನಕ್ಕು ತಾಯಿಯನ್ನು ಕರೆದ..

"ಅಮ್ಮಾ ಸೀತಾರಾಮು ಬಂದಿದಾನೆ"

ಮಡಿಯುಟ್ಟ ರುಕ್ಕಮ್ಮ ನಗುತ್ತಾ ಹೊರ ಬಂದರು.

"ನಿನ್ನೆ ಬಂದ್ಯಂತೆ. ರಜ ತಗಂಬಂದಿದೀಯನ?"

"ಹೂಂ. ಮೂರು ತಿಂಗಳು ರಜ."

ಸೀತಾರಾಮು ಓದುತ್ತಿದ್ದಾಗ ಬೇಸಿಗೆ ರಜದಲ್ಲಿ ಮಾತ್ರ ಊರಿಗೆ ಬರುತ್ತಿದ್ದ. ಕೆಲಸವಾದ ಮೇಲೆ ಇದೇ ಎರಡನೇ ಬಾರಿ ಬಂದಿರುವುದು. 'ಯಾಕೆ ಮೂರು ತಿಂಗಳು ರಜಾ! ಈ ಬಾರಿ ಮದುವೆ ಏರ್ಪಾಡೇನಾದರೂ ಇದೆಯೋ ಏನೋ! ಅಂದು ಯೋಚಿಸಿ ಮನದಲ್ಲಿ ಹಿಗ್ಗಿದರು ರುಕ್ಕಮ್ಮ. ಗಂಗೆಯ ಮದುವೆಯಾದೊಡನೆ ಗಿರಿಜೆಯ ಮದುವೆ. ಅಥವಾ ಒಟ್ಟಿಗೆ. ಅವನ ಇಂಗಿತ ತಿಳಿಯಲು ಕುತೂಹಲಿಯಾದರು ರುಕ್ಕಮ್ಮ. ಮಗಳನ್ನು ಕರೆದು ಚಾಪೆ ಹಾಕಲು ಹೇಳಿ—

"ಕುತ್ಕೊಳ್ಳೇಪ್ಪ"—ಎಂದು ಉಪಚರಿಸಿ ಸೀತಾರಾಮುವಿನ ಹತ್ತಿರ ನಿಂತು,

"ಏನ್ ಗಂಗೆ ಮದುವೆ ಏರ್ಪಾಡೇನಾದರು ಅದಯನಾ ಈ ಸಲಾ ?"

ಪಿಸುಗುಟ್ಟಿದರು. ಸೀತಾರಾಮುವಿಗೆ ನಗು ಬಂದಿತು. ಅವನು ಚುಟುಕು ಉತ್ತರ ಕೊಟ್ಟ—

"ಅದೇನೋ ನಂಗೊತ್ತಿಲ್ಲ. ಹಾಗೇನಾರು ಉಂಟಾ ?"

"ಸ್ಸೆ! ನಂಗೇನ್ ಗೊತ್ತಾ? ಅದಕೇ ಕೇಳ್ದೆ ನಿನ್ನ?"

"ಸರಿ ಹಾಗಾರೇನೂ ಇಲ್ಲ."

ಸ್ವಲ್ಪ ಇಳಿದರು ರುಕ್ಕಮ್ಮ. ಗಿರಿಜೆ ಮೆಲು ನಗುತ್ತ ಚಾಪೆ ಹಾಸಿದಳು. ಅವಳ ತಂಗಿ ತಮ್ಮಂದಿರು ಬಂದು ಅತ್ತಿತ್ತ ಓಡಾಡಿದವು. ರುಕ್ಕಮ್ಮ ಮಗಳಿಗೆ ಹೇಳಿದರು—

"ಏ! ಗಿರ್ಜೆ ಅವರಿಬ್ರಿಗೂ ಕಾಫಿ ತಂದ್ಕೊಡೇ."

ಗಿರಿಜೆ ಕಾಫಿ ತಂದು ಮುಂದಿಟ್ಟಳು. ಸೀತಾರಾಮು ಬೇಡವೆನ್ನಲಿಲ್ಲ; ಬಾಲುವೂ ಸಂಕೋಚ ಪಡಲಿಲ್ಲ. ಬೆಂಗಳೂರಿನ ಹುಡುಗನನ್ನು ಅಳೆದು ನೋಡಿದರು ಆಕೆ. ಆ ಹುಡುಗ ಯಾಕೆ ಬಂದಿದ್ದಾನೆನ್ನುವುದು ಹಿಂದಿನ ದಿನ ಗಿರಿಜೆಯಿಂದ ತಿಳಿದಿತ್ತು. 'ಇನ್ನೂ ಮೂರು ತಿಂಗಳು ಇರುತ್ತಾರೆ. ನೋಡೋಣ'—ಎಂದುಕೊಂಡರು ರುಕ್ಕಮ್ಮ.

"ಮಧ್ಯಾನ ಊಟಕ್ಕೆ ಇಲ್ಲಿಗೇ ಬನ್ನಿ ಇವತ್ತು."

"ಇನ್ನೂ ಮೂರ್ತಿಂಗ್ಳು ಇರ್ತೀವಲ್ಲ. ಇನ್ನೊಂದಿನ ಬರ್ತೀವಿ."

ಹಾಗನ್ನುತ್ತ ಸೀತಾರಾಮು ಎದ್ದು ನಿಂತ. ನೀಲಕಂಠಯ್ಯನವರು ಪೂಜೆಗೆಂದು ಮಡಿಯುಟ್ಟು ಬಂದರು—.

"ಏನ ಎದ್ದೇ ಬಿಟ್ಯನಾ ? ಕೂತ್ಗಳ್ಳಾ ತುಸ"—ಎಂದರವರು.

"ಇನ್ನೂ ಸ್ನಾನವೇ ಆಗಿಲ್ಲ. ನಾವೂ ಶಾರದೆ ಪೂಜೆ ಮಾಡ್ಬೇಕಲ್ಲ. ಮತ್ತೆ ಬರ್ತೀನಿ"—ಅನ್ನುತ್ತ ಎದ್ದು ಹೊರಟೇ ಬಿಟ್ಟ. ಪಕ್ಕದ ಕೋಣೆಯ ಪುಟ್ಟಕಿಟಕಿಯಲ್ಲಿ ಮುಖ ಇಟ್ಟಿದ್ದಳು ಗಿರಿಜೆ. ಸೀತಾರಾಮು ತಿರುಗಿ ಕೇಳಿದ—

"ಈಗ ಬರುಲ್ವನೆ ಅಲ್ಲೀಗೆ ?"

ಅವನಿಗೆ ಮಾತ್ರ ಕೇಳುವಂತೆ ಉತ್ತರ ಬಂದಿತು—

"ಮಧ್ಯಾನ ಬರ್ತನಿ."

ಬಾಲುವಿಗೆ ಇದಾವುದರ ತಲೆಬುಡವೂ ತಿಳಿಯಲಿಲ್ಲ. ಮತ್ತೆ ಮೂರು ಮನೆಯವರೂ ಸೀತಾ

ರಾಮುವನ್ನು ಮಾತಾಡಿಸಿದರು. ಎಲ್ಲಕ್ಕೂ ಸೀತಾರಾಮುವಿನದು ಮೋಟು ಉತ್ತರ. ಬಾಲು ಮತ್ತೊಮ್ಮೆ ಉದ್ದಕ್ಕೂ ನೋಡಿದ. ಎಲ್ಲ ನಾಡು ಹೆಂಚಿನ ಮನೆಗಳು. ಸುಣ್ಣ, ಕೆಮ್ಮಣ್ಣು, ಸಗಣಿ ನೆಲ. ಹೆಂಗಸರು, ಗಂಡಸರೆಲ್ಲಾ ಏನೋ ಒಂದು ವಿಧ. ಉಡಿಗೆ, ತೊಡಿಗೆ ಮಾತು ಎಲ್ಲ ಬದಲು ಗಂಗೆ, ಗಿರಿಜೆ ಬೆಂಗಳೂರ ಹುಡುಗಿಯರಂತಲ್ಲ ಯಾಕೆ ನಮ್ಮೆದುರಿಗೆ ಬರುವುದಿಲ್ಲವಲ್ಲ!

ಏನೋ ಅಳಿದು ಸುರಿಯುತ್ತ ಬಾಲು ಮುಖ ಬಾಗಿ ಹೆಜ್ಜೆ ಹಾಕಿದ. ಅವರು ಮನೆಗೆ ಬಂದಾಗ ದನಕರುಗಳೆಲ್ಲಾ ಮೇವಿಗೆ ಹೊರಟಿದ್ದವು. ಹೊಲೇರ ರಂಗ ಅವುಗಳನ್ನು ಗುಡ್ಡಕ್ಕೆ ಅಟ್ಟುತ್ತಿದ್ದ. ಮನೆಯೊಳಗೆ ಕಾಲಿಡುವಾಗಲೇ ರಾಮಕೃಷ್ಣಯ್ಯ ಹೇಳಿದರು—

"ತುಸ ಬ್ಯಾಗ ಸ್ನಾನ ಮಾಡ್ರೋ ಸೀತು ಶಾರದೇಗೊಂದು ಅಡ್ಡ ಬೀಳುದಿಲ್ಲನೋ!"

"ಹುಂ. ಹೊರಟೆ"—ಅನ್ನುತ್ತ ಸೀತಾರಾಮು ಬಟ್ಟೆಗಳನ್ನೆತ್ತಿಕೊಂಡು ಬಚ್ಚಲಿಗೆ ನಡೆದ.

ನಂಜುಂಡಯ್ಯನವರು ಶಾಸ್ತ್ರೋಕ್ತ ವಾಗ್ದೇವಿಯ ಪೂಜೆ ನಡೆಸಿದರು. ತೋಟದ ಹೂವು, ಹಣ್ಣುಗಳು ಯಥೇಚ್ಛ ದೇವಿಗೆ ಅರ್ಪಿತವಾದವು. ಧೂಪ ದೀಪ, ಮಹಾನೈವೇದ್ಯಗಳ ಸಮರ್ಪಯಾದವು. ಸೀತಾರಾಮುವೂ ಕೆಂಪಿನ ಪಟ್ಟೆ ಮಗುಟ ಉಟ್ಟು ಶಾರದೆಯನ್ನು ಪೂಜಿಸಿ ದೀರ್ಘದಂಡ ನಮಸ್ಕರಿಸಿದ. ಬಾಲುವಿಗೆ ಏನು ಮಾಡಬೇಕೆಂದು ತಿಳಿಯದು. ತನ್ನ ಮನೆಯಲ್ಲಿ ಕೆಲವು ಮುಖ್ಯ ಹಬ್ಬಗಳಲ್ಲಿ ತಾಯಿ ಬಲವಂತವಾಗಿ ಅವನ ಹತ್ತಿರ ಪೂಜೆ ಮಾಡಿಸುತ್ತಿದ್ದರು. ವಿಧಿ ಇಲ್ಲದೆ ಮಾಡುತ್ತಿದ್ದ. ಈಗ ಒಂದೂ ತೋರದು. ಇಲ್ಲಿ ಯಾರೂ ಅವನನ್ನು ಒತ್ತಾಯಿಸಲಿಲ್ಲ.

ಎದುರಿನ ಸಾಲು ಜ್ಯೋತಿಗಳು, ರಾಶಿರಾಶಿ ಹೂವಿನ ಅಲಂಕಾರ, ಧೂಪದೀಪಗಳ ಸಮ್ಮಿಶ್ರ ಪರಿಮಳ, ಆ ಮಡಿಮಡಿಯ ವಾತಾವರಣ. ಇದೆಲ್ಲ ಬಾಲುವಿನ ಮನಸ್ಸನ್ನು ಭಕ್ತಿಲೋಕಕ್ಕೆ ಒಯ್ದವು. ಅವನೂ ಎಲ್ಲರಂತೆ ದೇವಿಗೆ ನಮಸ್ಕರಿಸಿದ. ತೀರ್ಥ ಪ್ರಸಾದಗಳ ನಂತರ, ಎರೆಯಪ್ಪ, ಹುಗ್ಗಿ, ಮೊಸರು ಅವಲಕ್ಕಿಗಳ ಫಲಾಹಾರ, ಕಾಫಿ ಆಯಿತು.

ಹೊಟ್ಟೆ ಭರ್ತಿಯಾದ ಮೇಲೆ ಸೀತಾರಾಮು ಕೇಳಿದ—

"ಬಾಲು ನಿಮ್ಮ ತಂದೇಗೆ ಏನಾದರೂ ಪತ್ರ ಬರೆಯೋದಿದ್ರೆ ಬರೆದು ಕೊಡಿ ನಮ್ಮಣ್ಣ ಪೋಸ್ಟಿಗೆ ಹಾಕ್ತಾರೆ."

ಬಾಲು ಒಂದು ಗಳಿಗೆ ಯೋಚಿಸಿದ—

'ಏನು ಬರೆಯಬೇಕು ಅಣ್ಣನಿಗೆ? ನಾನು ತುಂಬಾ ಸುಖವಾಗಿದೀನಿ. ಸುಡುಗಾಡು ಆ "ಅಪ್ಸರಾ" ಹೊಟೇಲು, ಅಬ್ಬಾ! ಆ ಚಿತ್ರಾ ಎಲ್ಲಾ ತುಂಬಾ ದೂರ ಇಲ್ಲಿಗೆ. ದೂರವಾಗೇ ಇರಲಿ, ನಾನು ಸುಖವಾಗಿದೀನಿ ಇಲ್ಲಿ.'

ಬಾಲುವಿನ ಉತ್ತರವನ್ನು ನಿರೀಕ್ಷಿಸಿದ ಸೀತಾರಾಮು. ಬಾಲು ಮೆಲ್ಲನೆ ಹೇಳಿದ—

"ನಾ ಬರೆಯೋದು ಏನೂ ಇಲ್ಲವಲ್ಲ ಸೀತಾರಾಂ. ನಾನು ಸರಿಯಾಗಿದೀನೀಂತ ನೀವೇ ಬರೆದ್ಬಿಡಿ"

ನಿಜವಾಗಿಯೂ ಈಗ ಎರಡು ದಿನಕ್ಕೇ ಬಾಲು ಸ್ವಲ್ಪ ಸರಿಯಾದಂತೆ ಕಂಡಿತು ಸೀತಾರಾಮುವಿಗೆ. ಅದನ್ನ ಬೇಗ್ಗೆಯೇ ಬರೆದು ಅಣ್ಣನ ಕೈಲಿ ಕೊಟ್ಟಾಗಿತ್ತು. ಇನ್ನು ಮೂರು ತಿಂಗಳಲ್ಲಿ ಅವನು ಸಂಪೂರ್ಣ ಗುಣ ಪಡೆಯುವನೆಂದು ಅವನಿಗೆ ಅನಿಸಿತು. ಅಲ್ಲದೆ ಬಾಲುವಿನ ಚರಿತ್ರೆಯು ಯಾವ ಸುಳಿವೂ ಮನೆಯವರಿಗೆ ತಿಳಿಯದಂತೆ ಅವನು ಬಹಳ ಎಚ್ಚರಿಕೆ ವಹಿಸಿದ್ದ. ಬಾಲು ಎರಡೇ ದಿನಗಳಲ್ಲಿ ಹೆಚ್ಚು ಬದಲಾದದ್ದು ಅವನಿಗೆ ಸಮಾಧಾನ ತಂದಿತು. ಅವನು ಸುಮ್ಮನೆಯೆ ಕೇಳಿದ.

"ನಮ್ಮೂರು ನಿಮಗೆ ಬೇಜಾರಾಗುವುದೇ ಬಾಲು?"

"ಇಲ್ಲಾರಿ. ನಂಗೆ ಬೇಜಾರೇನೂ ಇಲ್ಲ. ನಾವು ಇನ್ನು ಎಷ್ಟು ದಿನ ಇಲ್ಲಿರಬಹುದು?"

"ಮೂರು ತಿಂಗಳು ಇರಬೇಕೂಂತ ಡಾಕ್ಟರು ಹೇಳಿದಾರೆ."

ಬಾಲು ಮಲಗಿದವನು ಎದ್ದು ಸೀತಾರಾಮುವಿನ ಕೊರಳಿಗೆ ಎರಡೂ ಕೈ ಜೋಡಿಸಿ ಗೋಗರೆದ—

"ಹಾಗಾದರೆ ಇನ್ನು ಮೂರು ತಿಂಗ್ಳು ಇಲ್ಲಿ ಇರಬಹುದು ಅಲ್ವೆ ಸೀತಾರಾಂ?"

"ಅಗತ್ಯ ಇರಬೋದು. ಮೂರು ತಿಂಗಳಲ್ಲದಿದ್ರೆ ಒಂದು ವರ್ಷ ಇರಬೋದು. ನಾನು ಇಲ್ವೆ ನಿಮ್ಮನೇಲಿ ಒಂದೂವರೆ ವರ್ಷದಿಂದ?"

"ಹೌದಾ ಸೀತಾರಾಂ?"

"ಹೌದು ಬಾಲು ಅದೆಲ್ಲಾ ನಿಮಗೆ ಮರೆತು ಹೋಯ್ತು?"

"ಏನೋ ಗೊತ್ತಿಲ್ಲ"

ಬಾಲು ತಟ್ಟನೆ ಅವನ ಕೊರಳು ಬಿಟ್ಟು ಅವನ ತೊಡೆಯ ಮೇಲೆ ತಲೆಯಿಟ್ಟು ಮಲಗಿದ. ಸೀತಾರಾಮು ಬಾಗಿ ಅವನ ಮುಖ ನೋಡಿದ. ಕಣ್ಣು ಮುಚ್ಚಿದ್ದಾನೆ. ಇಷ್ಟು ಬೇಗ ನಿದ್ರೆ ಎಲ್ಲಿ ಬರಬೇಕು? ಮೆಲ್ಲಮೆಲ್ಲನೆ ಅವನ ಕ್ರಾಪಿನಲ್ಲಿ ಬೆರಳಾಡಿಸಿದ. ಮಗುವಿನಂತೆ ಮಲಗಿದ್ದಾನೆ. 'ಆ ಶ್ರೀಮಂತ ಹುಡುಗನ ಬಗೆಗೆ ತಾನು ಈಗ ನಡೆದುಕೊಳ್ಳುತ್ತಿರುವುದು ಹೆಚ್ಚು ಒರಟು' ಅನ್ನಿಸಿತು ಅವನಿಗೆ. ಪಾಪ! ತಂದೆ-ತಾಯಿಯ ಯೋಚನೆಯೂ ಇಲ್ಲದೆ ನನ್ನ ಹಿಂದೆ ಬಂದಿದ್ದಾನಲ್ಲ!

ಸೀತಾರಾಮು ಮೃದುವಾಗಿ ಅವನ ಮುಖ ಸವರಿದ.

## ೧೦

ದುರ್ಗಾಷ್ಟಮಿ, ಮಹಾನವಮಿ, ವಿಜಯದಶಮಿ ಮೂರು–ನಾಲ್ಕು ದಿನ ಸಾಲು ಹಬ್ಬ. ದಿನ ದಿನ ಪೂಜೆ-ಪುನಸ್ಕಾರಗಳು, ನೇಮ-ನಿಷ್ಠೆಗಳು, ಅತಿಥಿ ಅಭ್ಯಾಗತರಿಗೆ ಶ್ರದ್ಧೆಯ ಸರಳ ಆತಿಥ್ಯ. ಯಾವುದೂ ಅತಿ ಇಲ್ಲ. ಇತಿ, ಮಿತಿ, ರೀತಿ, ಹದದಲ್ಲಿ ಸದ್ದು-ಗದ್ದಲವಿಲ್ಲದೆ ಶಾಂತವಾಗಿ ಜರುಗುವ ಸಂಸಾರ ನಂಜುಂಡಯ್ಯನವರದು.

ಅತ್ತೆ-ಸೊಸೆಯರಲ್ಲಿ, ತಂದೆ-ಮಕ್ಕಳಲ್ಲಿ ಮಿತದ ಹಿತ. ಹಿರಿಯ ಮಗ ರಾಮಕೃಷ್ಣಯ್ಯ ಗೃಹಕೃತ್ಯ, ಬೇಸಾಯದ ಜವಾಬ್ದಾರಿ ಪೂರಾ ಹೊತ್ತ ಮೇಲೆ ತಂದೆ ಆ ತಂಟೆಗೆ ಬರುತ್ತಿರಲಿಲ್ಲ. ಸೀತಾರಾಮು ವಿದ್ಯೆ ಕಲಿಯುತ್ತೇನೆಂದಾಗ ಅಣ್ಣ ಬೇಡವೆನ್ನಲಿಲ್ಲ. ಅವನು ಕೇಳಿದಾಗ ಹಣ ಕೊಡುತ್ತಿದ್ದರು. ಸೀತಾರಾಮು ಸೌಜನ್ಯ-ಶೀಲನಾಗಿ, ಎಲ್ಲರ ಪ್ರೀತಿಗೆ ಪಾತ್ರನಾಗಿ, ಉಳಿದ ವಿದ್ಯಾರ್ಥಿಗಳಂತೆ ಯಾವ ಅನವಶ್ಯ ಗೊಂದಲಕ್ಕೂ ಬೀಳದೆ ಬಿ. ಇ. ಮುಗಿಸಿ ಇಂಜಿನಿಯರಾಗಿ ಒಂದೂವರೆ ವರ್ಷವಾಯಿತು. ಅವನ ಸಂಪಾದನೆಯ ಹಣ ಅವನ ಖರ್ಚು ಕಳೆದು ನಾಲ್ಕು ಸಾವಿರ ಉಳಿದಿದೆ. ತಮ್ಮ ಖರ್ಚು ಮಾಡಲಿಲ್ಲ; ಅಣ್ಣ ಮುಟ್ಟಲಿಲ್ಲ; ತಂದೆ ಕೇಳಲಿಲ್ಲ!

ಎಲ್ಲ ಒಂದು ಬಗೆಯ ಸ್ಥಿತಪ್ರಜ್ಞರು.

ಗಿರಿಜೆ ಸೀತಾರಾಮುವಿನ ತಾಯಿಯ ಕಡೆಯ

ಬಳಗ. ಮನೆ ತೀರಾ ಹತ್ತಿರ. ಹೋಗಿ ಬರುವ ಪರಿಪಾಠ—

"ನಮ್ಮ ಹುಡುಗಿ ನಿಮ್ಮ ಸೊಸೆ"—ಅಂದರು ಒಂದು ದಿನ ನೀಲಕಂಠಯ್ಯ. ಮುಗಿಯಿತು. ಇಂದಿಗೂ ಅದೇ ಮಾತು—

ಗಂಗೆಯ ಮದುವೆ, ಗಿರಿಜೆಯ ಮದುವೆ ಒಂದೇ ಬಾರಿ ಮಾಡುವ ಸಂಕಲ್ಪ ಹಿರಿಯರದು. ಏನು ಕಾರಣವೋ ಗಂಗೆಗಿನ್ನೂ ಕಂಕಣ ಬಲ ಕೂಡಿ ಬಂದಿರಲಿಲ್ಲ. ಎರಡೂ ಮದುವೆ ಹಾಗೇ ನಿಂತಿವೆ.

ನರಸಿಂಹರಾಜಪುರದಲ್ಲಿ ಹೈಸ್ಕೂಲು ಬಂದರೂ ಮನೆಯ ಹಿರಿಯರು ಗಂಗೆ-ಗಿರಿಜೆಯರನ್ನು ಅಲ್ಲಿಗೆ ಕಳಿಸಲಿಲ್ಲ. ಹೊಸಕೆರೆಯ ಪ್ರೈಮರಿ ಶಾಲೆಗೇ ಮುಕ್ತಾಯವಾಯಿತು, ಅವರಿಬ್ಬರ ವಿದ್ಯೆ. ಕನ್ನಡ ಚನ್ನಾಗಿ ಓದಿ ಬರೆಯಲು ಕಲಿತರು, ಹಳ್ಳಿಯ ಹಾಡು ಹಸೆ ಕಲಿತರು. ಮನೆಗೆಲಸ, ಒಪ್ಪಓರಣ, ನಿಷ್ಠೆನಿಯಮ, ವಿನಯ ಸೌಜನ್ಯ ಜನ್ಮಜಾತವಾಗಿಯೇ ಬಂದಿತು.

ಅಸಹ್ಯ ನಾಗರಿಕತೆ, ಆಡಂಬರಗಳಿಗೆ ಹುಡುಗಿಯರು ಬಲಿಬೀಳದಂತೆ ತಾಯಿಯರು ಎಚ್ಚರಿಕೆ ವಹಿಸಿದರು. ಉತ್ತಮ ಗೃಹಿಣಿಯರಾಗಿ ಬಾಳುವಷ್ಟು ಶಾಂತಿ, ಸಹನೆ, ಕ್ಷಮಾಶೀಲತ್ವ ಆ ಗ್ರಾಮಕನ್ನೆಯರಿಗೆ ರಕ್ತಗತವಾಯಿತು.

ಈ ಎಲ್ಲ ಹಿತಮಿತಗಳಿಂದ ಆ ಸಂಸಾರ ಏರುಪೇರುಗಳಿಲ್ಲದೆ ಸಮಭೂಮಿಯಲ್ಲಿ ಹರಿಯುವ ನದಿಯಂತೆ ಶಾಂತವಾಗಿ ಜರುಗುತ್ತಿದೆ.

ಸೀತಾರಾಮು ಬಾಲುವಿನ ವಿಷಯದಲ್ಲಿ ತಿಳಿಸಿದುದಿಷ್ಟೆ—

"ನನಗೆ ಕೆಲಸ ಕೊಟ್ಟಿರುವ ಇಂಜಿನಿಯರರ ಮಗ. ತುಂಬಾ ಕಾಹಿಲೆ ಬಿದ್ದು ಎದ್ದಿದ್ದಾನೆ. ಎರಡು ಮೂರು ತಿಂಗಳು ಹವ ಬದಲಿಸಬೇಕು. ನಾನು ಮೂರು ತಿಂಗಳು ರಜೆಯೊಂದಿಗೆ ಬರುತ್ತೇನೆ."

ರಾಮಕೃಷ್ಣಯ್ಯ ಆ ಪತ್ರವನ್ನು ತಂದೆ-ತಾಯಿಯರಿಗೆ ಓದಿ ಹೇಳಿದ್ದರು. ಅದಕ್ಕೆ ಯಾರ ಅಡ್ಡಿಯೂ ಇರಲಿಲ್ಲ. ತಂದೆ ಅಂದರು—

"ಸೈ, ಬರಲಿ ಯಾರು ಬ್ಯಾಡಾಂದೋರು"

ತಾಯಿ ಸಂತಸಪಟ್ಟರು—

"ಈ ನೆಪದಾಗಾರ ನಾಕ್ದಿನ ಮನೇಲಿರ್ತಾನೆ ಸೀತು. ಮಾರಾಯನಾಗಿ ಬರ್ಲಿ"

ಅಣ್ಣ ಬರುವನೆಂದು ಗಂಗೆ ಹರುಷಪಟ್ಟಳು. ಮೂರು ತಿಂಗಳ ಕಾಲ ತನ್ನ ಭಾವೀಪತಿಯ ಮುಖ ನೋಡುತ್ತಿರಬಹುದೆಂದು ಗಿರಿಜೆ ಒಳಗೊಳಗೇ ನಲಿದಳು.

ಬಂದ ಮೇಲೂ ಅಷ್ಟೆ. ಸಂತೋಷದ ಅತಿರೇಕವಿಲ್ಲ. ನಾಲ್ಕು ದಿನದ ಆಡಂಬರವಿಲ್ಲ. ಬಾಲುವಿನ ವಿಷಯವಾಗಿ ಯಾರೂ 'ಚ'ಕಾರವೆತ್ತಲಿಲ್ಲ. ನಂಜುಂಡಯ್ಯನವರು ಮಗನಿಗೆ ತಿಳಿಸಿದುದಿಷ್ಟೆ—

"ಅವರು ಪಟ್ಣವಾಸದ ಜನ. ನಮ್ಮೂರ ಊಟ, ಉಪಚಾರ ಹೆಂಗಾದೀತೋ ಏನೋ. ನೀನೇ ಕುಸ ಎಲ್ಲ ಸಮ ನೋಡ್ಕಾಬೇಕೋ ಸೀತು."

ಆಯಿತು. ಮತ್ತೆಲ್ಲ ನೇರ ನಡೆಯಿತು.

ಶೀಗವಾನಿಯ ಪ್ರಕೃತಿ ಬಾಲುವಿನ ಮೇಲೆ ಉತ್ತಮ ಚಿಕಿತ್ಸೆ ನಡೆಸಿದಳು. ಬೆಂಗಳೂರಿಗೂ ಇಲ್ಲಿಗೂ ಪೂರ್ಣ ಪರಿವರ್ತನ.

ಉದಯದಲ್ಲಿ ಕಣ್ಣು ತೆರೆಯುವ ಮೊದಲೇ ಇಲ್ಲಿ ಕಿವಿಗೆ ಬೀಳುತ್ತಿದ್ದುದು ಕೋಳಿಗಳ ಕೊಕ್ಕೋ, ಹಕ್ಕಿಗಳ ಕಿಲಿಕಿಲಿ, ಬಂದಮ್ಮನವರ— 'ಏಳು ನಾರಾಯಣ, ಏಳು ಲಕ್ಷ್ಮೀರಮಣ'—ಉದಯರಾಗ. ಬೆಂಗಳೂರಿನಲ್ಲಿ ನಾಲ್ಕಾರು ಮನೆಯ ರೇಡಿಯೋಗಳ ಸಾಮೂಹಿಕ ಕಿರಿಚಾಟ. ಕಣ್ಣು ತೆರೆದಾಗ ಇಲ್ಲಿ ಮೊದಲು ಕಾಣಿಸುವುದು ಕೋದಂಡರಾಮನ ಪಠ.—ಅಲ್ಲಿ ಕಾಣುತ್ತಿದ್ದುದು ಯಾವುದೋ ಅಮೇರಿಕನ್ ಕ್ಯಾಲೆಂಡರ್. ಎದ್ದು ಹೊರಗೆ ಹೊರಟರೆ ಇಲ್ಲಿ ಕಾಣಸಿಗುತ್ತಿದ್ದುದು, ಮೊದಲು ಗೋಮಾತೆಯ ದರ್ಶನ, ಬೃಂದಾವನ ದರ್ಶನ; ಋಷಿಪತ್ನಿಯರಂಥ ಬಂದಮ್ಮ, ಭಾಗೀರತಮ್ಮನ ದರ್ಶನ. ಆಕಸ್ಮಿಕವಾಗಿ ಕಂಡರೆ ಅದೇ ಆ ಲೋಕಪಾವನೆ ಗಂಗೆ. ಮುಂದೆ ಕೆರೆಯ ದಂಡೆ, ಅರಳಿದ ಕಮಲಗಳು, ತೋಟದ ತುಂಬೆಲ್ಲ ಫಲಪುಷ್ಪ ಪ್ರದರ್ಶನ. ಎಲ್ಲೆಲ್ಲೂ ನೈಸರ್ಗಿಕ ಬೆಡಗು. ಚಿತ್ತೋಹಾರಿ ಸಂದರ್ಶನ. ಅಲ್ಲಿ ಮನೆಯ ಬಣ್ಣದ ಗೋಡೆಗಳು, ಅಡಿಗೆಯವ, ಜವಾನ. ನಂತರ ತಾಯಿ ತಂದೆ, ಗೆಳೆಯರು. ನೋಟ, ನುಡಿಯಂತೆಯೇ ಆಹಾರ ವಿಹಾರವೂ ಪೂರ್ಣ ಬದಲು.

ಅಲ್ಲಿ ಬೆಳಗಿನ ತಿಂಡಿ, ಇಡ್ಲಿ, ಪೂರಿ, ಚಪಾತಿ, ಉಪ್ಪಿಟ್ಟು, ದೋಸೆ. ಇಲ್ಲಿ-ಕೆಂಡರೊಟ್ಟಿ, ಅವಲಕ್ಕಿ ಮೊಸರು, ತಾಲಿಪಿಟ್ಟು, ಮೆಂತ್ಯದ ದೋಸೆ, ಅಕ್ಕಿತರಿ ಉಪ್ಪಿಟ್ಟು.

ಅಲ್ಲಿ-ಎಲ್ಲಾ ಅಂಗಡಿಯ ತರಕಾರಿ, ಸಾಮಾನು ಊಟ.

ಇಲ್ಲಿ-ಮನೆಯ ಹಿತ್ತಿಲ ತರಕಾರಿ, ಮನೆಯ

ಕೊಟ್ಟದ ಅಕ್ಕಿ, ಅಪ್ಪಟ ಹಸುವಿನ ಹಾಲು, ಮೊಸರು-ಬೆಣ್ಣೆ-ತುಪ್ಪ.

ಅಲ್ಲಿ-ಅಡಿಗೆಯವನ ಕೈ.

ಇಲ್ಲಿ-ಮನೆಯೊಡತಿ ಅನ್ನಪೂರ್ಣೆಯ ಕೈ.

ಅಲ್ಲಿ-ಮಾರ್ಕೆಟ್ಟಿನ ಮೂಸುಂಬಿ, ದ್ರಾಕ್ಷಿ, ಸಪೋಟಾ, ಕಿತ್ತಲೆ.

ಇಲ್ಲಿ ಆಗಾಗಲೇ ಕೀಳುವ ಹಲಸು, ಬಾಳೆ, ಪೇರಲ, ನೇರಲೆ, ಪನ್ನೇರಲೆ, ಜಂಬೂಫಲಗಳು; ಮತ್ತೆ ವನ್ಯಫಲಗಳು-ಖರ್ಜೆ, ಕಲ್ಲಸಂಪೆ, ರಂಜ, ಬಿಮ್ಮಾರಲ, ಗೇರು ಹಣ್ಣುಗಳು.

ಅಲ್ಲಿಯ ವಿಹಾರ—ನಾಟಕ, ಸಿನಿಮಾ, ಇಸ್ಪೇಟು, ದುಷ್ಟ ಚಟದ ಗೆಳೆಯರು. ಸಿಗರೇಟು, ಕಳ್ಳತನದಲ್ಲಿ ಆಗಾಗ್ಗೆ ಬಾರುಗಳ ದರ್ಶನ ಬಣ್ಣದ ಚಿಟ್ಟೆಗಳಂತಹ ಕಾಲೇಜು ಹುಡುಗಿಯರ ಬಾಲಂಗೋಚಿಯಾಗುವುದು.

ಇಲ್ಲಿಯ ವಿಹಾರ— ಫಲಭರಿತ ತೋಟ, ಪುಷ್ಪಭರಿತ ವನ, ಮನಕ್ಕೆ ಮುದ ತುಂಬುವ ಕೆರೆ ದಂಡೆ, ಸಕಲ ಸೌರಭ ಹೊತ್ತು ತರುವ ಚೇತನ ಕಾರಿ ಮಂದಾನಿಲ.

ಅಲ್ಲಿ— ದಿನಕ್ಕೆ ಲಕ್ಷ-ಲಕ್ಷ ಅವಲಕ್ಷಣದ ಮುಖಗಳ ದರ್ಶನ.

ಇಲ್ಲಿ— ಆಶ್ರಮವಾಸಿಗಳಂತಹ ಹತ್ತೆಂಟು ಮುಖಗಳ ಪಾವನ ದರ್ಶನ. ಮತ್ತೆ ಅದೇ ಕಾಡು ಹೊಲೆಯರ, ಗೌಡರ, ಗೊಲ್ಲರ ಮುಖಗಳು.

ಇನ್ನು ಅಲ್ಲಿ ಎಷ್ಟು ಆರ್ಭಟವೋ ಇಲ್ಲಿ ಅಷ್ಟೇ ಪ್ರಶಾಂತ. ಉತ್ತೇಜಕ, ಮಾದಕ ವಸ್ತುಗಳು ಎಂದೋ ಬಾಲುವಿನಿಂದ ದೂರವಾದವು. ತಂದೆಗೆ ತಿಳಿಯದಂತೆ ಆಗಾಗ್ಗೆ ಬಾರುಗಳಿಗೆ ಹೋಗುವ ಅಭ್ಯಾಸ ಇತ್ತೀಚೇಗೆ ಅಂಟಿಕೊಂಡಿತ್ತು ಬಾಲುವಿಗೆ. ಚಿತ್ರಾ ಎಲ್ಲವನ್ನೂ ತಿರುವು-ಮುರುವು ಮಾಡಿ ಹಾರಿ ಹೋದಳು.

ಈಗ ಅವನು ಎಲ್ಲವನ್ನೂ ಮರೆತು ಹಸು ಕಂದನಂತಾಗಿದ್ದ. ಹಸುವಿನ ಹಿಂದಿನ ಕರುವಿನಂತೆ ಸೀತಾರಾಮುವಿನ ಹಿಂದೆ ಮುಂದೆ ಇರುತ್ತಿದ್ದ.

ಮತ್ತೆ ನಾಲ್ಕೈದು ದಿನಗಳಲ್ಲಿಯೇ ರಂಗಯ್ಯನವರಿಂದ ಉತ್ತರ ಬಂದಿತು. ಅವರು ಯಾರಿಗೂ ಇದು ತಿಳಿಯದಂತೆ ಇಂಗ್ಲಿಷಿನಲ್ಲಿ ಬರೆದಿದ್ದರು—

'ನಿನ್ನ ಪತ್ರ ತಲುಪಿ ನೆಮ್ಮದಿ ಎನಿಸಿದೆ ಸೀತಾರಾಂ. ನನ್ನ ಏಕಮಾತ್ರ ಮಗುವನ್ನ ಜೀವ ಹಿಡಿದು ನಿನ್ನೊಂದಿಗೆ ಕಳಿಸಿದ್ದೇನೆ. ಬಾಡಿಹೋದ ಹೂವು ಮತ್ತೆ ಚಿಗುರೀತು—ಎಂಬ ಭರವಸೆಯಿಂದ. ನಿನಗೆ ತುಂಬ ತೊಂದರೆಕೊಡುತ್ತಿದ್ದೇನೆ. ವಾರಕ್ಕೊಂದು ಪತ್ರ ಬರಿ. ಅವನ ತಾಯಿ ತುಂಬಾ ಸೊರಗಿದ್ದಾಳೆ. ನಿನ್ನ ಪತ್ರವೇ ಅವಳಿಗೆ ತಾರಕ. ಈಗ ನೀನೆ ಅವನ ತಂದೆ. ಇದಕ್ಕಿಂತ ಹೆಚ್ಚು ಬರೆಯಲಾರೆ. ನಿನ್ನ ಹಿರಿಯರಿಗೆಲ್ಲ ನನ್ನ ನಮಸ್ಕಾರ ತಿಳಿಸು.'

ಪತ್ರ ಯಾರ ಕೈಗೇ ಸಿಕ್ಕಿದರೂ ಅಪಾರ್ಥಕ್ಕೆಡೆಯಾಗುವಂತಿರಲಿಲ್ಲ. ತಂದೆಯ ಪತ್ರವನ್ನೋದಿದ ಬಾಲು ಅದನ್ನ ಹಿಂದಿರುಗಿ ಕೊಡುತ್ತ ಮೆಲ್ಲನೆಂದ—

"ಸೀತಾರಾಂ. ನಾನು ಈಗ ಸರಿಯಾಗಿದೀನಿ ಅಲ್ವೆ? ಇನ್ನು ಮೇಲೆ ನಾನು ಚಿತ್ರಾಳ ಯೋಚನೆ ಮಾಡೋದಿಲ್ಲ ಸೀತಾರಾಂ, ಖಂಡಿತಾ ಮಾಡೋದಿಲ್ಲ. ಅವಳು ತುಂಬಾ ಮೋಸಮಾಡಿದಾಳೆ."



"ಅರೆ—ಅರೆ—ರೆ-ರೆ- ಇಲ್ಲಿಗೂ ಬಂದುಬಿಟ್ರಾ ನೀವು. ಈ ಗುಪ್ತಸ್ಥಳ ಖಾಯಂ ಗಿರಾಕಿಗಳಿಗೆ ಮಾತ್ರ ಗೊತ್ತು."

ಸೀತಾರಾಮು ಮುಗುನಕ್ಕು ಹೇಳಿದ—

"ನೀವ್ಯಾಕೆ ಅವಳ ಯೋಚ್ನೆ ಮಾಡ್ಬೇಕು ಬಾಲು? ಅವಳ್ಯಾರೋ ನೀವ್ಯಾರೋ? ಅವಳೇನು ನಿಮ್ಮ ಮದುವೆಯಾದ ಹೆಂಡತೀನೇ? ಅವಳು ಬೇರೆ ಯಾರನ್ನೋ ಮದುವೆ ಆಗಿರಬೇಕು. ನಿಮ್ಮ ತಂದೆ-ತಾಯಿ ನಿಮಗೂ ಒಳ್ಳೇ ಹುಡುಗಿ ತಂದು ಮದ್ವೆ ಮಾಡ್ತಾರೆ. ಅದಕ್ಯಾಕೆ ಯೋಚ್ನೆ?"

ಬಾಲು ಒಂದು ಗಳಿಗೆ ತಡೆದು ಮೆಲ್ಲನೆ ಹೇಳಿದ—

"ಬೇಡಿ ಸೀತಾರಾಂ. ನನಗೆ ಮದ್ವೆಗಿದ್ವೆ ಒಂದೂ ಬೇಡ. ನಂಗ್ಯಾಕೋ ಆ ಹುಡಗೀರನ್ನ ಜ್ಞಾಪಿಸ್ಕೊಂಡ್ರೆ ಭಯವಾಗುತ್ತೆ ಸೀತಾರಾಂ. ನಮ್ತಂದೆ ನಂಗೆ ಮದ್ವೆ ಮಾಡೋದಾದ್ರೆ ನಾನು ಅಲ್ಲೀಗೆ ಹೋಗೋದೇ ಇಲ್ಲ. ಇಲ್ಲೇ ಇದ್ಬಿಡ್ತೀನಿ."

ಸೀತಾರಾಮು ಪಕಪಕನೆ ನಕ್ಕ—

"ಎಷ್ಟು ದಿವ್ಸ ಇರ್ತೀರಿ ಬಾಲು? ಒಂದ್ವರ್ಷ ಓದ್ಬೇಕಲ್ಲ ನೀವು."

"ಯಾಕೆ ಓದ್ಬೇಕು?"

"ಯಾಕೆ ಬಾಲು ಮರ್ತೇಹೋಯ್ತೆ? ಇದು ಕೊನೇ ವರ್ಷ ಅಲ್ವೆ; ಮುಂದಿನ ವರ್ಷನಾದ್ರು ಅದನ್ನ ಮುಗಸ್ಬೇಕಲ್ಲ."

"ಏನೋ ನೋಡೋಣ."

—ಬಾಲು ಬಗಲು ತಿರುಗಿ ಕಣ್ಣುಮುಚ್ಚಿ ಮಲಗಿದ. ಅವನನ್ನು ಹಾಗೇ ಬಿಟ್ಟು ಸೀತಾರಾಮು ಕೆಳಗಿಳಿದು ಹೋದ.

ಮಧ್ಯಾನ್ಹ ನಾಲ್ಕರ ಸಮಯ. ಸೀತಾರಾಮು ಕೆಳಗಡೆ ಇದ್ದ. ಬಾಲು ಒಬ್ಬನೇ ಮಲಗಿದ್ದಾನೆ. ಬೇಸರವಾಯಿತು. ಮಂಚದ ತಲೆಯ ಬದಿಗಿದ್ದ ದೊಡ್ಡ ಬೀಚೆ ಬೀರುವಿನ ಕಡೆ ಅವನ ನೋಟ ಹರಿಯಿತು—

'ಏನಿರಬಹುದು ಅದರಲ್ಲಿ?'..

ಬಾಲು ಎದ್ದು ಬಾಗಿಲು ತೆರದ. ಅದರ ತುಂಬ ದಪ್ಪದಪ್ಪ ಪುಸ್ತಕಗಳು. ಒಂದೆರಡು ಪುಸ್ತಕ ತೆಗೆದು ನೋಡಿದ. ಎಲ್ಲಾ ರಾಮಾಯಣ, ಮಹಾಭಾರತ, ಭಾಗವತ, ಮತ್ತೆ ಕೆಲವು ಕತೆ ಪುಸ್ತಕಗಳು.

ಬಾಲು ಕನ್ನಡ ಓದುವುದನ್ನು ಬಿಟ್ಟು ಬಹಳ ದಿನಗಳಾಗಿತ್ತು. ಬರೆಯುವುದೂ ಮರೆತು ಹೋಗಿತ್ತು.

'ಅಬ್ಬಬ್ಬ ಏನು ಇಷ್ಟೊಂದು ಯಾರು ಬರೆದು ಹಾಕಿದರಪ್ಪ!'... ಎಂದುಕೊಂಡ.

ವಾಲ್ಮೀಕಿ ರಾಮಾಯಣ, ಪಂಪ ಭಾರತ,

ಶೇಷ ಭಾಗವತ! 'ಇದನ್ನ ಹೇಗೆ ಓದುತ್ತಾರೋ ಅನಿಸಿತು ಅವನಿಗೆ. ಹಾಗೇ ಚಿತ್ರಗಳನ್ನ ನೋಡಿದ. ಉದ್ದಕ್ಕೂ ರಾಮ,ಸೀತೆ,ಲಕ್ಷ್ಮಣ,ಆಂಜನೆಯ!'

ಎಲ್ಲದರ ಶೀರ್ಷಿಕೆ ಓದುತ್ತಾ ನಡೆದ. ಕೆಲವು ಅಷ್ಟಾಗಿ ಅರ್ಥವಾಗುತ್ತಿರಲಿಲ್ಲ. ಅಲ್ಲೊಂದು ಚಿತ್ರ ರಾಮ, ಸೀತೆ ಪರ್ಣಕುಟಿಯಲ್ಲಿ ಕುಳಿತಿದ್ದಾರೆ. ಶೂರ್ಪನಖಿ ಸುಂದರರೂಪು ತಳೆದು ರಾಮ ನೊಡನೆ ತನ್ನನ್ನು ಮದುವೆಯಾಗಲು ಬೇಡುತ್ತಿ-ದ್ದಾಳೆ. ರಾಮ ಹೇಳುತ್ತಿದ್ದಾನೆ. 'ನಾನು ಏಕ ಪತ್ನೀವ್ರತಸ್ಥ ಅಲ್ಲಿ ಲಕ್ಷ್ಮಣನಿದ್ದಾನೆ; ಅವನನ್ನ ಮದುವೆಯಾಗು'—

'ಏಕಪತ್ನೀ ವ್ರತ,! ಹಾಗೆಂದರೇನೋ?'

ಬಾಲು ಪುಸ್ತಕ ಮುಚ್ಚಿ ಮುದುರಿ ಮಲಗಿದ.

'ಯಾರು ಈ ಶೂರ್ಪನಖಿ? ತುಂಬಾ ಸುಂದರಿ! ಯಾರು?'

ಓ! ಚಿತ್ರಾ ಅವಳೇ ಅವಳೇ!!

'ಸೀತೆ! ಯಾರದ್ದೋ ಮುಖ ನೋಡಿದ್ದೇನಲ್ಲ. ಇದೇ ಥರ! ಯಾರು?' ಬಾಲು ಸೀತೆಯ ಮುಖ ವನ್ನೇ ನೋಡುತ್ತಿದ್ದಾನೆ.

ಕೆಳಗೆ ಬಂದಮ್ಮನವರು ಅಟ್ರಿಗೆ ಹೋದ ಮಗ ಳನ್ನು ಕರೆಯುತ್ತಿದ್ದಾರೆ—

"ಏ, ಗಂಗೇ ಗಿರಿಜೇ ಬನ್ರಿ ಕಾಫಿ ಕುಡಿ ಯಾಕೇ?"

"ಬಂದೇ......"

ಗಂಗೆಯ ದನಿ ಹೂಬಾಣದಂತೆ ಬಂದು ಬಾಲುವಿನ ಎದೆ ತಾಗಿತು. ಬಾಲು ತಟ್ಟನೆದ್ದ.

'ಓ! ಇವಳೇ, ಸೀತೆ ಇವಳೇ!!'

## ೧೧

ಬಾಲು ದುಡು ದುಡು ಎದ್ದು ಚಪ್ಪರಕ್ಕೆ ಓಡಿದ. ಗಂಗೆ, ಗಿರಿಜೆ ಹರಟುತ್ತಾ ಎರಡು ಬುಟ್ಟಿ ಹೂವು ಕುಯ್ದು ಹೊತ್ತು ಬರುತ್ತಿದ್ದಾರೆ. ಅವರು ಕಣ್ಣೆತ್ತಿ ನೋಡಿರಲಿಲ್ಲ. ಬಾಲು ಉದ್ದಕ್ಕೆ ನಿಂತಿ ದ್ದಾನೆ ಚಪ್ಪರದ ಮೇಲೆ. ಗಿರಿಜೆ ಮುಂದೆ ಬಂದಳು. ಗಂಗೆ ಕಾಲಿಗೆ ಚುಚ್ಚಿದ ಮುಳ್ಳನ್ನು ಜಾಗಿ ತೆಗೆದು ಹಿಂದೆ ನಡೆದಳು. ಬಾಲು ಸರಿಯಾಗಿ ನೋಡಿದ ಗಂಗೆಯನ್ನ.

'ಹೌದು ಆ ರಾಮಾಯಣದ ಸೀತೆ ಹೀಗೇ ಇದ್ದಾಳೆ'—ಅಂದುಕೊಂಡ. ಮನೆಯ ಹತ್ತಿರ ಬಂದಾಗ ಗಂಗೆ ತಟ್ಟನೆ ತಲೆ ಎತ್ತಿ ನೋಡಿದಳು. ಬೆಳ್ಳಗೆ ಬೇತಾಳನಂತೆ ಚಪ್ಪರದ ಮೇಲೆ ನಿಂತಿ ದ್ದಾನೆ ಬಾಲು. ಅವಳಿಗೆ ಹೆದರಿಕೆಯಾಯಿತು.

'ಗಿರಿಜೆ ಕಂಡಳೋ ಏನೋ?—'

ನಡಗುತ್ತ ಮನೆಯೊಳಗೆ ಓಡಿದಳು ಗಂಗೆ. ಸೀತಾರಾಮು ತಟ್ಟೆಯಲ್ಲಿ ತಿಂಡಿ, ಕಾಫಿ ಹಿಡಿದು ಮೇಲೆ ಬರುತ್ತ ಕೇಳಿದ—

"ಅಲ್ಲೇನು ಮಾಡ್ತೀರಿ ಬಾಲು? ಬನ್ನಿ ತಿಂಡೀಗೆ."

"ನಿಮ್ಮ ಹಲಸಿನ ಮರದಲ್ಲಿ ನೆಲದಿಂದ ಕಾಯಿ ಬಿಟ್ಟಿದೆಯಲ್ಲ ಸೀತಾರಾಂ—"

ಬಾಲು ಈ ಮಾತನ್ನು ಏಕೆ ಹೇಳಿದನೋ ಅವ ನಿಗೇ ತಿಳಿಯದು.

"ಅದನ್ನ ನೊಡ್ತಾ ಇದ್ರ ನೀವು? ಮಳೆನಾಡ ಹಲಸು ಹಾಗೇ ಬಿಡೋದು. ನೋಡಿ ಇದೊಂದು ತಿಂಡಿ. ಹಲಸಿನ ಹಣ್ಣಿನದು."

ತಟ್ಟೆಯನ್ನು ಮಂಚದ ಮೇಲಿಟ್ಟ. ರಾಮಾ ಯಣ ತೆರೆದುಬಿದ್ದಿದೆ. ಸೀತಾರಾಮು ಕೇಳಿದ—

"ರಾಮಾಯಣ ಓದುವಷ್ಟು ಬೇಜಾರಾಯ್ತೆ ಬಾಲು ನಿಮಗೆ?"

"ಇಲ್ಲ. ಸುಮ್ನೆ ಚಿತ್ರ ನೋಡ್ತಾ ಇದ್ದೆ."

"ನೀವು ಕನ್ನಡ ಓದೋಲ್ವೇನೋ ಅಂದು ಕೊಂಡಿದ್ದೆ. ಬೇರೆ ಕತೆ ಪುಸ್ತಕಾನು ಇದೆ ಬೇಕಾದ್ರೆ."

ಬಾಲು ಆ ವಿಷಯ ಬಿಟ್ಟು ತಟ್ಟೆಯಲ್ಲಿದ್ದ ತಿಂಡಿ ಕೈಗೆತ್ತಿ ಕೇಳಿದ—

"ಇದರ ಹೆಸರೇನು?"

"ಮುಳಕ"

"ಮುಳಕ! ಹಾಗಂದ್ರೆ?"

"ಹಾಗಂದ್ರೆ, ಹಾಗೇ. ಹಲಸಿನ ಹಣ್ಣಿನ ಮುಳಕ. ನಮ್ಮ ಹಳ್ಳಿ ಜಾಮೂನ್."

ಅಪ್ಪಟ ತುಪ್ಪದಲ್ಲಿ ಕರಿದ ಮುಳಕ ಬಾಯಿ ಗಿಡುತ್ತ ಹೇಳಿದ ಬಾಲು...

"ಜಾಮೂನಿಗಿಂತ ರುಚಿಯಾಗಿದೆ ಇದು."

ಚಪ್ಪರಿಸುತ್ತ ಜಾಮೂನು, ಸಂಡಿಗೆ ತಿಂದು ಕಾಫಿ ಕುಡಿದ. ಸೀತಾರಾಮು ಪಾತ್ರೆ ಎತ್ತಿ ಕೆಳಗೆ ಹೋದಾಗ ಮತ್ತೆ ಸೀತೆಯನ್ನ ನೋಡಿದ ಬಾಲು. ಸದಾ ರಾಮನನ್ನ ಎಡಬಿಡದ ಸೀತೆ. 'ಒಳ್ಳೇ ಹೆಂಡತಿ'—ಎಂದುಕೊಂಡ. ಮತ್ತೆ ಅರ್ಧ ಗಂಟೆ ಯಲ್ಲಿ ಅವರು ತಿರುಗಾಡಲು ಹೊರಟರು.

ಇಂದು ಅವರು ಶೀಗವಾನಿಯ ಹೆಬ್ಬಾಗಿಲು ದಾಟಿ ಆಚೆ ಊರಿಗೆ ಕಾಲು ಹಾಕಿದರು. ಅಲ್ಲೆಲ್ಲ ಬರೀ ಗೌಡರ ಮನೆಗಳು. ದಿಬ್ಬ ಹತ್ತುವಾಗಲೇ ಊರ ಪಟೇಲ ಮುದಿಶಿವ್ಮೇಗೌಡ ಆದರದ ಸ್ವಾಗತ ನೀಡಿದ—

"ಓ! ಬನ್ನಿ ಬನ್ನಿ ಸಣ್ಣೈನೋರು. ಭಾಳ ಅಪ್ರೂಪ ಬಂದದ್ದು. ನಾ ಮನ್ಗೆ ಹೊತ್ತಾರೆ ನಿಮ್ಮನೆತಾಕೆ ಬಂದಿದ್ದೆ. ಕಾಣ್ಲೆ ಇಲ್ಲ ತಮ್ಮನ್ನ. ವೈನಾಗಿದ್ದೀರಿ ಅಯ್ಯ?"

"ಗುಂಡು ಗೂಳಿ ಹಾಗಿದೀನಲ್ಲ ತಿಮ್ಮಯ್ಯ. ನೀ ಹ್ಯಾಗಿದ್ದಿ?"

"ಕಾಣಿ ಅಯ್ಯ. ಇದ್ದೀನಲ್ಲ ಏಣ ಇದ್ದಂಗೆ."

ತೊಲೆಯ ಮೇಲಿನ ಈಚಲು ಚಾಪೆ ತೆಗೆದು ಹಾಸಿ—

"ಬನ್ನಿ ಅಯ್ಯ ಜಗ್ಲಿ ಮ್ಯಾಕೆ. ಕುಂದರ್ರಿ ಚಾಪೆ ಮ್ಯಾಕೆ."

ತಗ್ಗು ಸೂರಿನ ಹುಲ್ಲು ಜೋಪಡಿಗಳೇ ಎಲ್ಲಾ. ಇಬ್ಬರೂ ಜಗುಲಿ ಏರಿ ಕುಳಿತರು. ದೊಡ್ಡ ಅಂಗಳ ತುಂಬ ಕೋಳಿಪಿಳ್ಳೆಗಳು ಓಡಾಡುತ್ತಿ ದ್ದವು. ಎದುರಿನ ದೊಡ್ಡ ಕೊಟ್ಟಿಗೆಯಲ್ಲಿ ರೇಸಿನ ಕುದುರೆಗಳಂತಹ ಅವನ ಜೋಡೆತ್ತುಗಳು ಶೋಭಾಯಮಾನವಾಗಿದ್ದವು. ಬಾಲು ಎತ್ತುಗಳ ಕಡೆ ಗಮನ ಕೊಟ್ಟಿದ್ದ. ಗೌಡ ಅವನ ಕಡೆ ತೋರಿಸುತ್ತ ಕೇಳಿದ—

"ಈ ಅಯ್ನೋರು ಯಾರೋ ತಿಳೀನಿಲ್ಲ ಅಯ್ಯ?"

ಸೀತಾರಾಮು ನಿಜ ಸಂಗತಿ ಸಂಕ್ಷಿಪ್ತದಲ್ಲಿ ತಿಳಿ ಸಿದ. ಅಷ್ಟರಲ್ಲಿ ಶೇಷಿ ಹೆಗ್ಗಡತಿ ಕೆರೆಯಿಂದ ಬಂದಳು.—

"ಓ, ಗ್ಯಾಪಗ ಬಂತಾ ಏನೋರ್ಗೆ ಪಟೇ ಲ್ರದ್ದು?"—ಅಷ್ಟಗಲ ನಕ್ಕಳು ಶೇಷಿ.

"ಅದಲ್ಲ ಇಲ್ರಿ, ಅಪರಪಕ್ಕೆ ಬಂದವರೆ ಅಯ್ಯ. ಏನಾರ ಅಷ್ಟ್ ತತಾ ಅವರ್ಗೆ"—ಗೌಡ ಆರ್ಡರು ಮಾಡಿದ ಎರಡನೇ ಹೆಂಡತಿಗೆ.

"ಈಗೇನೂ ಬೇಡ ಗೌಡ. ಈಗ ತಿಂಡಿ ತಿಂದು ಬಂದಿದೀವಿ."

ಗೌಡ ತಾನೇ ಎದ್ದು ಒಳಗೆ ಹೋದ.ಬರುವಾಗ ಅವನ ಕೈಯಲ್ಲೊಂದು ಬಿದಿರ ಚಿಬ್ಬಲು ಇತ್ತು.

"ನಿಮ್ಮನೇಲಿಲ್ಲದ್ದು ನಮ್ತಾವ ಏನಿದ್ದೀತು ಅಯ್ಯ. ಕುಸು ತಕಳಿ ಇದ್ನ."—ತಂದು ಮುಂದಿಟ್ಟ ಗೌಡ.

ಎರಡು ದೊನ್ನೆಗಳಲ್ಲಿ, ಜೇನುತುಪ್ಪ, ತುಪ್ಪ, ಒಣಬಾಳೆಹಣ್ಣು, ಅಪ್ಪು ಸುಟ್ಟ ಗೇರುಬೀಜಗಳು.

ತಂದು ಮುಂದಿಟ್ಟಾಗ ಬೇಡವೆನ್ನಲಿಲ್ಲ ಸೀತಾರಾಮು. ಅದನ್ನ ತಿನ್ನುವ ವಿಧಾನ ಬಾಲುವಿಗೆ ತಿಳಿಸಿದ. ಬಾಲು ಇದನ್ನೆಲ್ಲಾ ಅವನ ಜನ್ಮದಲ್ಲಿ ಕಂಡವನಲ್ಲ. ಎಲ್ಲ ವಿವರಿಸಿದ ಸೀತಾರಾಮು. ಚೂರೂ ಬಿಡದಂತೆ ಇಬ್ಬರೂ ತಿಂದು ಮುಗಿಸಿದರು. ಒಂದಕ್ಕಿಂತ ಒಂದು ರುಚಿ. ಬಾಲು ಒಣಬಾಳೆಹಣ್ಣು ತಿರುಗಿಸಿ ನೋಡಿದ—

"ಏ ಹೈದಾ, ಎಳ್ನ ಸೀಯಾಳ ತತ್ತಾರೋ ಬಿಸ್ನೆ."

ಅಜ್ಜನ ಮಾತು ಕಿವಿಗೆ ಬೀಳುವುದರಲ್ಲಿಯೇ ಡೊಳ್ಳುಹೊಟ್ಟೆಯ ಹೈದನೊಬ್ಬ ಎತ್ತರದ ತೆಂಗಿನ ಮರವನ್ನೇರಿದ. ಹತ್ತು ನಿಮಿಷದಲ್ಲಿ ಸೀಯಾಳ ಬಾಯಿತೆರೆದು ಬಂದಿತು. ಬೆಂಗಳೂರಿನಂತೆ ಇಲ್ಲಿ ಕೊಳವೆ ಇಲ್ಲ. ಸೀತಾರಾಮುವಿನಂತೆ ಅವನೂ ಸೀಯಾಳವನ್ನು ಚುಂಬಿಸಿ ಹೀರಿದ. ಪಾತಾಳಗಂಗೆಯಂತೆ ಒಡಲು ತಂಪು ಮಾಡಿತು ಸೀಯಾಳ. ಗೌಡನ ಬಾಯಿಂದ ತಟ್ಟನೆ ಬಂದ ಮಾತು ಬಾಲುವನ್ನು ಮರಗಟ್ಟಿಸಿತು.

"ಪಸಂದಾಗವ್ರೆ ಈ ಐನೋರು. ನಮ್ ಗಂಗಮ್ಮಾರನ್ನ ಕೊಟ್ಟು ಲಗ್ನ ಮಾಡ್ಬಿಡಿ ಅಯ್ಯ ಇವ್ರಿಗೆ."

'ಗೌಡ ಹಿಂದುಮುಂದು ನೋಡದೆ ಬಾಲುವಿನ ಮುಂದೆ ಆ ಮಾತು ಆಡಬಾರದಿತ್ತು'—ಎನಿಸಿತು ಸೀತಾರಾಮುವಿಗೆ. ಅವನ ಮನಸ್ಸಿಗೆ ಬಂದದ್ದು ಬಾಯಲ್ಲಿ ಹೊರಡಲಿಲ್ಲ. ಅವನ ಬಾಯಿಗೆ ಎಂದೂ ಕಡಿವಾಣ. ತೀರ ಲಘುವಾಗಿ ಉತ್ತರವಿತ್ತ.

"ನಮ್ಮನೇಲಿ, ಅವರ ಮನೇಲಿ ಎರಡು ಕಡೇನೂ ಹಿರಿಯೋರಿದ್ದಾರಲ್ಲ ಗೌಡಾ! ನಮಗೇಕೆ ಅದೆಲ್ಲ. ಅದೂ ಅಲ್ದೆ ಇವ್ರು ಬೆಂಗಳೂರು ಪಟ್ನದೋರು. ಈ ಹಳ್ಳೀ ಹುಡುಗೀರನ್ನ ಅವರು ಮದುವೆಯಾಗೋದೂ ಇಲ್ಲ."

"ಐ! ತಗೀರಿ ನನ್ನೊಡ್ಯಾ. ನಮ್ ಗಂಗಮ್ಮಾರು ಒಳ್ಳೇ ಗೌರಮ್ಮ ಇದ್ದಂಗವ್ರೆ. ಯಾಕೆ ಐನೋರೆ ನೀವು ವಲ್ರ ನಮ್ ಸಣ್ಣಮ್ಮೋರನ್ನ?"

ಬಾಲು ಗೌಡನ ಮುಖ ಮಿಕಿಮಿಕಿ ನೋಡಿದ. ಇನ್ನು ಅಲ್ಲಿ ಕುಳಿತಿರುವುದು ಕ್ಷೇಮಕರವಲ್ಲವೆಂದಿನಿಸಿತು ಸೀತಾರಾಮುವಿಗೆ. ಏಳುತ್ತಲೇ ಹೇಳಿದ—

"ಬರ್ತೀನಿ ತಿಮ್ಮಯ್ಯ. ನೀ ಯಾವಾಗ ಬರ್ತಿ ಮನೆ ಕಡೆ?"

"ಬತ್ತೀನಿ ನಾಳೆ ಹೊತಾರೆ"

ಇಬ್ಬರೂ ಜಗುಲಿ ಇಳಿದರು. ಸೀತಾರಾಮು ಹಿಂದಿರುಗಿದ. ಜೇನುತುಪ್ಪ ಕೊಟ್ಟ ಹೆಗ್ಗಡತಿಗೆ ಹೇಳಬೇಕಿತ್ತು—

"ಬರ್ತೀನೇ ಶೇಷಿ. ಒಣಬಾಳೆಹಣ್ಣು ಇದ್ರೆ ನೀ ಬರೂವಾಗ ಇನ್ನೂ ಸ್ವಲ್ಪ ತಗೊಂಡ್ಬಾ."

ಶೇಷಿ ಬೆನ್ನು ಬಗ್ಗಿಸಿ ಮೆಟ್ಟಿಲಿಳಿದು ಬಂದು ಹೊಗೆಸೊಪ್ಪು ತುಂಬಿದ ಬಾಯಿ ಹಿಗ್ಗಿಸಿದಳು—

"ಮಸ್ತ್ ಐತೆ. ತಂದ್ ಕೊಟ್ಟೇನು ನಡೀರಿ ಅಯ್ಯಾ."




"ನಾಯಿ ನನಗೆ ಆಯಾಸವಾಗಿದೆ. ಎಷ್ಟೊಂದು ಬಿಸಿಲು. ಕೂಸು ಸ್ವಲ್ಪ ದೂರ ನಡೆಸೋಣ ಬಿಡ್ತೀಯಾ ನಾವು?"

ಗದ್ದೆಯ ಬದುವಿನ ಮೇಲೆ ನೀಟುಗಾಲು ಹಾಕಿ ಇಬ್ಬರೂ ಮೌನವಾಗಿ ನಡೆದರು. ಸಂಧ್ಯೆ ಮೆಲ್ಲಮೆಲ್ಲನೆ ಇಳಿಯುತ್ತಿತ್ತು. ಪಕ್ಷಿಗಳು ಮಾಲೆ ಮಾಲೆಯಾಗಿ ತಾಣದೆಡೆಗೆ ಸಾಗುತ್ತಿದ್ದವು. ಕಾಮಕ್ಕಿ, ಕಾಜಾಣ, ಕೋಗಿಲೆಗಳ ಕಚೇರಿ ಲಯಬದ್ಧವಾಗಿ ಪ್ರಾರಂಭವಾಯಿತು. ಅಸ್ತಂಗತ ದಿನಕರನ ಹೊಂಬೆಳಕು ದೂರದ ಅಡಿಕೆ ತೋಟದ ಮೇಲೆ ಬಿದ್ದು, ಅಡಿಕೆ ಗೊನೆಗಳು ಚಿನ್ನದ ಗೆಜ್ಜೆಯ ಗೊಂಚಲಿನಂತೆ ಕಂಗೊಳಿಸಿತು. ಫಲಭಾರದಿಂದ ಅಡಿಕೆಮರಗಳು ಮೆಲ್ಲಮೆಲ್ಲನೆ ತಲೆದೂಗುತ್ತಿದ್ದವು.

ಎತ್ತರದ ದಿಬ್ಬದ ಮೇಲೆ ನಿಂತ ಬಾಲು. ಹಿಂದಿರುಗಿ ನೋಡಿದ ಸೀತಾರಾಮು ಕೇಳಿದ—

"ಯಾಕೆ ಬಾಲು ನಿಂತದ್ದು?"

ಬಾಲು ಕನಸಿನಲ್ಲಿ ಮಾತಾಡಿದಂತೆ ಅಸ್ಪಷ್ಟ ನುಡಿದ—

"ನೋಡಿ ಸೀತಾರಾಂ. ಇಲ್ಲಿಂದ ನಿಮ್ಮ ಹಳ್ಳಿ ಎಷ್ಟು ಚೆನ್ನಾಗಿ ಕಾಣುತ್ತೆ. ನನ್ನ ಕ್ಯಾಮರಾ ತಂದಿದ್ರೆ......"

ಬಾಲುವಿನ ದೃಷ್ಟಿಯನ್ನು ಅನುಸರಿಸಿದ ಸೀತಾರಾಮು. ಅದು ಸೀದಾ ಮನೆಯ ಅಡಿಕೆ ಚಪ್ಪರ ಮುಟ್ಟಿತ್ತು. ಅಲ್ಲಿ ಉತ್ತುತ್ತೆ ಬೊಂಬೆಗಳಂತೆ ಕಾಣುತ್ತಿದ್ದಾರೆ—ಗಂಗೆ, ಗಿರಿಜೆ, ಪುಟ್ಟ ವೆಂಕಟರಾಮು, ಗಣೇಶ!

ಏನು ಉತ್ತರ ಹೇಳಬೇಕೆಂದು ತಿಳಿಯಲಿಲ್ಲ ಸೀತಾರಾಮುವಿಗೆ. ಸುಮ್ಮನೆ ಮೌನಕ್ಕು ಮುಂದೆ ಸಾಗಿದ. ಬಾಗಿಲಲ್ಲೇ ಕೇಳಿದಳು ದೊಡ್ಡಮ್ಮಜಿ—

"ಅಜೆ ಊರಿಗೋಗಿದ್ರ ಸಣ್ಣಯ್ಯ."

"ಹೂಂ ಕಣೇ."—ಎನ್ನುತ್ತ ಸೀತಾರಾಮು ತಿರುಗಿ ನೋಡದೆ ಮುಂದೆ ನಡೆದ. ತರಕುತಲೆಯ, ಸಿಂಬಳ ಸುರುಕ ಹೊಲೆಯರ ಮಕ್ಕಳು ಹಂದಿಗಳನ್ನು ಬೆರೆಸಾಡಿದವು. ಇನ್ನೂ ಪೂರಾ ಕತ್ತಲಾಗಿರಲಿಲ್ಲ. ರಂಗಿ, ಡೊಳ್ಳ, ದನಗಳನ್ನು ಕೊಟ್ಟಿಗೆಗೆ ಅಟ್ಟುತ್ತಿದ್ದರು.

ಇವರಿಬ್ಬರೂ ಒಂದೇ ಬಾರಿಗೆ ಮನೆಯೊಳಗೆ ಕಾಲಿಟ್ಟರು. ಮುಂದಿನ ತೊಟ್ಟಿಯ ಉಯ್ಯಾಲೆ ಮಣೆಗೆ ಆಗ ತಾನೇ ಬಂದು ಕುಳಿತಿದ್ದರು— ಗಂಗೆ, ಗಿರಿಜೆ. ಏನೋ ಕುಟುಕುಟು ಬಾಯಾಡಿಸುತ್ತಿದ್ದಾರೆ. ಇವರಿಬ್ಬರನ್ನು ಕಂಡವರೇ ಹುಡುಗಿಯರಿಬ್ಬರೂ ಮೆಲ್ಲನೆ ನಗುತ್ತ ಅಲ್ಲಿಂದ ಕಾಲ್ತೆಗೆದರು. ಗಿರಿಜೆ ಗಂಗೆಯೊಡನೆ ಪಿಸುಗುಟ್ಟಿದಳು—

"ಕತ್ಲಾತು ಕಣೆ ಗಂಗೆ. ನಾ ಹೋಗ್ತೀನಮ್ಮ ಮನೀಗೆ."

"ಒಬ್ಳೆ ಹೋಗ್ತೀಯನೆ? ನಾನೂ ಬರ್ತೀನಿ ತಡಯೇ ದೇವಸ್ಥಾನದ್ ತಂಕ."

"ದೀಪ ಹಚ್ಚಿಲ್ಲನೆ ಗಂಗಾ?" ಸೀತಾರಾಮು ಕೇಳಿದ.

"ಈಗ ಹಚ್ತೀನೋ. ತುಸ ಪಂಕ್ಲಾಗೆ ನಿಂತ್ಕೊತೀಯಾ ಸೀತಣ್ಣ? ಗಿರಿಜೆ ಮನೀಗ್ಹೋಗ್ತಾಳಂತೆ?"

"ಸ್ವಲ್ಪ ಇರಿ ಬಾಲು. ಈಗ ಬಂದ್ಬಿಟ್ಟೆ"— ಅನ್ನುತ್ತ ಅತ್ತ ತಿರುಗಿ "ಬಾರೆ ಮತ್ತೆ"— ಅನ್ನುತ್ತ ಗಿರಿಜೆಯನ್ನು ನಿರೀಕ್ಷಿಸಿದ.

"ಬ್ಯಾಡ ಕಣೆ ನಾ ಹೋಗ್ತೀನಿ"—ಅನ್ನುತ್ತ ಗಿರಿಜೆ ಲಜ್ಜೆ ಪ್ರಕಟಿಸಿದಳಾದರೂ ಅವನ ಜೊತೆಗೆ ನಾಲ್ಕುಮಾರು ನಡೆಯುವುದು ಅವಳಿಗೆ ಹಿತವಿತ್ತು. ಗಂಗೆ ದೀಪ ಮುಟ್ಟಿಸಿದೊಡನೆ ಗಿರಿಜೆ ಕುಂಕುಮವಿಟ್ಟುಕೊಂಡು ಸರಸರ ಹೊರಟಳು. ಬಾಲು ಅನ್ಯಮನಸ್ಕನಾಗಿ ಉಪ್ಪರಿಗೆಯ ಕಂಬ ಒರಗಿ ನಿಂತಿದ್ದಾನೆ. ಎದುರಿನ ಹಂಕಲಿನಲ್ಲಿ ಗಿರಿಜೆ, ಸೀತಾರಾಮು ಸರಸರ ನಡೆದಿದ್ದಾರೆ. ಇಬ್ಬರೂ

ಮಾರುದೂರ ಬಿಟ್ಟು ನಡೆಯುತ್ತಿದ್ದಾರೆ. ಸೀತಾರಾಮು ಒಮ್ಮೆ ಏನು ಕೇಳಿದನೋ! ಗಿರಿಜೆ ಬಾಗಿ ದಂಕೆಯೇ ತಲೆಯಾಡಿಸಿದಳು.

ದಟ್ಟ ಕೂದಲಿನ, ದಪ್ಪ ಜಡೆಯ ಗಿರಿಜೆಯ ಅಂಗಸೌಷ್ಠವ ಬಲು ಚೆನ್ನ. ಅವಳು ಗಂಗೆಗಿಂತ ಒಂದು ಬಣ್ಣ ಕಡಿಮೆ. ಆದರೆ ಅಷ್ಟೇ ಆರೋಗ್ಯ ಶಾಲಿ ಹೆಣ್ಣು. ಮುಖದ ತೇಜ ಅಮಿತ.

ಬಾಲು ಕಣ್ಣು ಚುರುಕು ಮಾಡಿ ನೋಡುತ್ತಿದ್ದ. ಇಬ್ಬರೂ ದೇವಸ್ಥಾನದ ವರೆಗೆ ಹೋದರು. ಬಾಲುವಿನ ಎದೆ ಢವ ಢವ. ಅಲ್ಲೇ ಕತ್ತಲು ಮುಸುಕಿತ್ತು. ಬಾಲುವಿನ ತಲೆ ಬಿಸಿಯಾಗುತ್ತಿತ್ತು—

'ಈಗ ಅಲ್ಲಿ ಕತ್ತಲು. ಯಾರು ಈ ಹುಡುಗಿ? ಸೀತಾರಾಂ ಹೋಗಿದ್ದಾರೆ ಅವಳೊಂದಿಗೆ. ಅಲ್ಲಿ ಏನು ಮಾಡಬಹುದು?'

'ಕತ್ತಲು! ಅಪ್ಸರಾ ಹೋಟೆಲಿನ ರಾತ್ರಿ ರಾಣಿ ಮರದ ಕೆಳಗೆ! ಕತ್ತಲು. ಚಿತ್ರಾ!'

ಬಾಲು ದೊಡ್ಡದಾಗಿ ಕಣ್ಣು ಅರಳಿಸಿದ. ಸೀತಾರಾಮು ಮುಂದೆ ಹೋಗಲಿಲ್ಲ. ಅವಳ ಹತ್ತಿರವೂ ಹೋಗಲಿಲ್ಲ. ಅವಳು ಮಾತ್ರ ಮುಂದೆ ಹೋದಳು. ಹೌದು! 'ಸೀತಾರಾಂ ಅಲ್ಲೇ ನಿಂತಿದ್ದಾರೆ' —ಎಂದುಕೊಂಡ ಬಾಲು.

ಗಿರಿಜೆ ಮನೆ ಮುಟ್ಟಿರಬೇಕು. ಸೀತಾರಾಮು ಹಿಂದಿರುಗಿದ. ಉಟ್ಟ ಲುಂಗಿ ಮೇಲೆತ್ತಿ ಸಿಕ್ಕಿಸಿ ಸರಸರನೆ ಬಂದ. ಅವನು ಕಾಲು ತೊಳೆದು ದೀಪ ಮೇಲೆ ತರುವುದರಲ್ಲಿ ಬಾಲು ಮಂಚದ ಹಾಸಿಗೆ ಸುರುಳಿಗೆ ಒರಗಿದ್ದಾನೆ. ಸೀತಾರಾಮು ಪಶ್ಚಾತ್ತಾಪದಿಂದ ನುಡಿದ—

"ಓ! ನೀವು ಕತ್ತಲೇಲೆ ಕೂತಿದೀರಿ!"

ಬಾಲು ಮಂಕನಂತೆ ಮಿಳಮಿಳನೆ ಅವನ ಮುಖನೋಡಿದ.

ಡಾಕ್ಟರು ಕೊಟ್ಟಿದ್ದ ಮಾತ್ರೆ ಮುಗಿದು ಮೂರು ದಿನಗಳಾಗಿತ್ತು. ಮಾತ್ರೆಯ ಅಮಲು, ಮತ್ತತೆ ಕಡಿಮೆಯಾಗಿ ಬಾಲುವಿನ ಮನಸ್ಸು ತಿಳಿಯಾಗಿತ್ತು. ಬೆಂಗಳೂರಿನಲ್ಲಿ ನಡೆದದ್ದೆಲ್ಲಾ ಈಗ ಚಲನಚಿತ್ರದಂತೆ ಅವನ ಚಿತ್ತಪಟಲದ ಮೇಲೆ ಸರಿದುಹೋಗುತ್ತಿದೆ. ಜೀವ ಲಜ್ಜೆಯಿಂದ ಮುದುರುತ್ತಿದೆ.

'ನಾನೆಂತಹ ಹೇಡಿ; ಎಷ್ಟು ಅಲ್ಪ; ಯಾವುದೋ ದಿಕ್ಕುದೆಸೆಯಿಲ್ಲದ ಹುಡುಗಿಗಾಗಿ ಮೂರು ದಿನಗಳಲ್ಲಿ ಎಷ್ಟು ಹಗುರವಾದೆ. ನನ್ನ ಸ್ನೇಹಿತರೆಲ್ಲ ಇಲ್ಲವೆ ಈಗ! ನನಗೇನು ಬಂದಿತ್ತು ಅಂತಹ ಭ್ರಮೆ?'

ಚಿತ್ರಾಳನ್ನು ಜ್ಞಾಪಿಸಿಕೊಂಡು ಬಾಲು ನಡುಗಿದ, ಬೆವರಿದ.

'ನನ್ನ ತಂದೆಯ ಸ್ಥಾನಮಾನಗಳೇನು; ಅವರ ವಯಸ್ಸು, ಅವರ ಮನಸ್ಸು ಎಷ್ಟು ಉನ್ನತ!'

'ಸೀತಾರಾಂ! ಎಂತಹ ಉದಾರಿ, ಈ ಚಿಕ್ಕ ವಯಸ್ಸಿಗೆ ಎಂತಹ ಹಿರಿಮೆ? ಎಲ್ಲ ಹಳ್ಳಿಯ ಜನ. ಎಂತಹ ಪ್ರಾಮಾಣಿಕತೆ! ನನಗಾಗಿ ಅಲ್ಲವೆ ಅವರು ರಜೆ ಪಡೆದು ಬಂದಿದ್ದಾರೆ. ಅವರ್‍ಯಾರು, ನಾನ್ಯಾರು? ಅಮ್ಮನಿಗೆ ನನಗಿಂತ ಹೆಚ್ಚಿನ ಮಗ ಸೀತಾರಾಂ. ಎಂತಹ ಸರಳ ಆತಿಥ್ಯ ಇವರದು. ಕಿಂಚಿತ್ತೂ ಉದಾಸೀನವಿಲ್ಲ, ಬೇಸರವಿಲ್ಲ.'

'ಆ ಹುಡುಗಿಯರು ನಮ್ಮ ಎದುರಿಗೇ ನಿಲ್ಲುವುದಿಲ್ಲವಲ್ಲ. ಯಾಕೆ? ಬೆಂಗಳೂರು ಹುಡುಗಿಯರು! ಎಲ್ಲ ಕವಲು ಜಡೆ, ರಂಗಿನ ತುಟಿ, ಪೌಡರಿನ ಮುಖಗಳು. ಪುರುಷರೆಂಬ ಎಗ್ಗಿಲ್ಲದೆ ಹರಿಹಾಯುವ ಹುಡುಗಿಯರು.

'ಇವರ ಅಲಂಕಾರಗಳೇ ಬೇರೆ! ಉಡಿಗೆ-ತೊಡಿಗೆಗಳೇ ಬೇರೆ. ಮೃದು ನಗೆಯ ಮೆಲುಮಾತು. ಒಂದು ದಿನವಾದರೂ ಸರಿಯಾಗಿ ನೋಡಲಾಗಲಿಲ್ಲವಲ್ಲ ಈ ಹುಡುಗಿಯರನ್ನ? ಎಷ್ಟು ನಿರಾಡಂಬರ ಜೀವಿಗಳು ಎಷ್ಟು ಲಜ್ಜಾಶೀಲರು.'

ಯೋಚನಾಪರನಾಗಿದ್ದ ಬಾಲು. ಲಜ್ಜೆ, ಪಶ್ಚಾತ್ತಾಪಗಳಿಂದ ಜೀವ ಮುದುರುತ್ತಿತ್ತು.'

'ಒಂದು ತಿಂಗಳು ಕಳೆದುಹೋಯಿತು. ಸಾಧ್ಯವಾದಷ್ಟು ಜಾಗ್ರತೆ ಇಲ್ಲಿಂದ ಹೊರಟುಬಿಡೋಣವೇ? ಅಯ್ಯೋ ಹೇಗೆ ಬಿಟ್ಟುಹೋಗಲಿ ಈ ಹಳ್ಳಿಯನ್ನ? ಅಮ್ಮ ಎಷ್ಟು ದುಃಖಿಸುತ್ತಿದ್ದಾರೋ? ನಾನೇ ಅವರಿಗೊಂದು ಕಾಗದ ಬರೆದರೆ?'

ಸೀತಾರಾಮು ನಗುನಗುತ್ತ ಹತ್ತಿರ ಬಂದು ಕುಳಿತ. ಬಾಲು ಬೆವರುತ್ತಿದ್ದಾನೆ. ಅವನು ಕಣ್ಣರಳಿಸಿ ಕೇಳಿದ—

"ಯಾಕೆ ಬಾಲು ಇಷ್ಟು ಬೆವರ್‍ತಾ ಇದ್ದೀರಿ?"

ಬಾಲು ಮಾತಾಡದೆ ಅವನ ಬಲಗೈಯನ್ನು ಭದ್ರವಾಗಿ ಹಿಡಿದುಕೊಂಡ. ಸೀತಾರಾಮು ಎಡಗೈಯಿಂದಲೇ ಟವೆಲು ತೆಗೆದು ಅವನ ಮುಖದ ಬೆವರೊರಸಿದ. ಮುಖವೆಲ್ಲ ಕೆಂಪು ಕೆಂಪು.

ಮಾತ್ರೆ ಮುಗಿದು ನಾಲ್ಕು ದಿನಗಳಾಗಿತ್ತು. ಅಂದಿನಿಂದ ಅವನ ಕಣ್ಣಿನ ಮಂಕುಛಾಯೆ ಹರಿದು ಕಣ್ಣು ದೀಪಗಳಂತೆ ಹೊಳೆಯುತ್ತಿದ್ದವು. ಮುಖ ಗೆಲವು ತುಂಬಿದೆ. ಮೈ ಚುರುಕು ಬಂದಿದೆ. ತಿಂಗಳಲ್ಲೇ ಅವನು ಮೈಕೈ ತುಂಬಿಕೊಂಡು ಮೊದಲಿನಂತಾಗಿದ್ದ. ಆದರೂ ಹೀಗೇಕೆ? ಎಂದು ಸೀತಾರಾಮು ಯೋಚಿಸಿದ.

"ಯಾಕೆ ಬಾಲು ಮೈ ಸರಿಯಿಲ್ಲವೆ?"

ಬಾಲು ಮೂಗರಳಿಸಿ ತುಟಿ ಸವರಿಕೊಂಡು ಕೇಳಿದ—

"ಎಲ್ಲಾ ಸರಿಯಾಗಿದೆ ಸೀತಾರಾಂ. ನಾನು ಬಂದು ತಿಂಗಳಾಯ್ತು?"

"ಯಾಕೆ ಬಾಲು, ಬೆಂಗಳೂರು ಯೋಚನೆ ಬಂತೆ? ನಾವು ಬಂದು ಇನ್ನೂ ತಿಂಗಳು ತುಂಬಿಲ್ಲ. ನವರಾತ್ರಿಯಲ್ಲಲ್ಲವೆ ನಾವು ಬಂದದ್ದು? ನಾಡಿದ್ದು ದೀಪಾವಳಿ. ದೀಪಾವಳಿಗೆ ತಿಂಗಳು ತುಂಬುತ್ತೆ. ಯಾಕೆ ನೀವು ಕೇಳಿದ್ದು?"

ಬಾಲು ದನಿ ತಗ್ಗಿಸಿದ—

"ಯಾಕೂ ಇಲ್ಲ. ಸುಮ್ನೆ ಕೇಳ್ದೆ. ನನ್ನಿಂದ ನಿಮಗೆ ತುಂಬಾ ತೊಂದ್ರೆ ಅಲ್ವೆ?"

"ಯಾರು ಹೇಳಿದ್ದು ಹಾಗಂತ?"

"ನಾನೇ ಹೇಳ್ತಾ ಇದ್ದೀನಲ್ಲಾ. ಈಗ ಮೂರು ದಿನದಿಂದ ಬೆಂಗ್ಳೂರಲ್ಲಿ ನಡೆದದ್ದೆಲ್ಲಾ ಮತ್ತೆ ನೆನಪಿಗೆ ಬರ್‍ತಾ ಇದೆ ಸೀತಾರಾಂ. ತುಂಬಾ ಬೇಜಾರು."

"ನೀವು ಬೇಜಾರು ಪಡಬಾರದೂಂತ ನಿಮ್ಮನ್ನ ಅಲ್ಲಿಂದಿಲ್ಲಿಗೆ ಕರಕೊಂಡ್ಬಂದೆ. ನಾ ಇನ್ನೇನ್ಮಾಡ್ಲಿ ಹೇಳಿ ಬಾಲು?"

"ನೀವು ತಪ್ಪು ತಿಳಕೊಂಡ್ರಿ ಸೀತಾರಾಂ"

ಸೀತಾರಾಮು ಪ್ರಶ್ನಾರ್ಥಕವಾಗಿ ಅವನ ಮುಖ ನೋಡಿದ—

"ನನ್ನ ಮೂರ್ಖತನ, ಅವಿವೇಕದಿಂದ ನಿಮಗೆಲ್ಲ ಎಷ್ಟು ತೊಂದ್ರೆ, ಅವಮಾನ ಆಯ್ತಲ್ಲಾಂತ ನನಗೆ ತುಂಬ ವ್ಯಥೆ, ಬೇಜಾರು ಆಗ್ತಾ ಇದೆ ಅಷ್ಟೆ"

ಸೀತಾರಾಮು ಗಾಂಭೀರ್ಯ ತಳೆದ—

"ದಯವಿಟ್ಟು ನೀವು ಕಳೆದದ್ದನ್ನು ಮರೆತ್ಬಿಡಿ ಬಾಲು. ನಿಮ್ತಂದೆ-ತಾಯಿ ಅಲ್ಲಿ ಎಷ್ಟ್ ಕೊರಗ್ತಾ ಇದಾರೆ ಗೊತ್ತೆ? ನಿಮ್ಮಿಂದ ಯಾರಿಗೂ ಏನೂ ತೊಂದ್ರೆ ಆಗಿಲ್ಲ. ನೀವು ಈಗ ಸರಿಯಾಗಿದೀರೀಂತ ನಾನು ಅವರಿಗೆ ಕಾಗ್ದ ಬರೆದ್ಹಾಕಿದೀನಿ. ನೀವು ಇನ್ನೂ ಕೊರಗ್ತಾ ಇದ್ದೀರಲ್ಲಾ?. ತಪ್ಪು ಅಕಸ್ಮಾತ್ತಾಗಿ ಎಲ್ಲಾರಿಂದ್ಲೂ ಆಗುತ್ತೆ. ಅದಕ್ಕೆ ಮಾಡೋದೇನು ? ಅದಕ್ಕೆ ನೀವೇ ಪಶ್ಚಾತ್ತಾಪ ಪಟ್ಕೊಂಡಿದೀರಲ್ಲ. ಇನ್ಯಾಕೆ ಯೋಚ್ನೆ ?"

ಬಾಲು ಮತ್ತೆ ಅವನ ಕೈ ಹಿಡಿದ;—

"ಹಾಗಾದ್ರೆ ಸೀತಾರಾಂ ನೀವೇನೂ ಅದನ್ನ ಮನಸ್ಸಿನಲ್ಲಿ ಇಟ್ಕೊಳ್ಳೆ?"

"ಸ......ರಿ. ಅದು ಯಾವ ದೊಡ್ವಿಷ್ಯ ಬಿಡಿ. ಆ ಬೆಂಗ್ಳೂರಾಗೆ ಇಂಥಾದ್ದು ದಿನಕ್ಕೊಂದ್ಸಾವ್ರ ನಡೆಯುತ್ತೆ. ಸದ್ಯ ನಿಮಗೆ ಅಂಟಿದ ಶನಿ ಬೇಗ ಬಿಡುಗಡೆ ಆಯ್ತಲ್ಲ ಬಿಡಿ. ನೀವು ಅದರ ಯೋಚ್ನೆ ಬಿಟ್ರಾಯ್ತು ಅಷ್ಟೆ."

ಬಾಲು ಎದ್ದು ಕುಳಿತು ಅವನ ಕೈಯಲ್ಲಿ ಕೈ-ಯಿಟ್ಟು ಹೇಳಿದ—

"ಬಿಟ್ಟೆ ಸೀತಾರಾಂ; ಖಂಡಿತಾ ಬಿಟ್ಟೆ. ಇನ್ನು ಅದರ ಯೋಚನೆ ಮಾಡೋದಿಲ್ಲ."

ಸೀತಾರಾಮುವಿನ ಮುಖವರಳಿತು. ಅವನು ಬಾಲುವಿನ ಬೆನ್ನು ತಟ್ಟಿ ಕೈಕುಲುಕಿದ—

"ಅಭಿನಂದನೆ ಬಾಲು! ನಿಮಗೆ ದೊಡ್ಡ ಅಭಿನಂದನೆ. ನಾನು ನಿಮ್ಮನ್ನು ಕರೆತಂದದ್ದು ಸಾರ್ಥಕವಾಯ್ತು. ಇನ್ನು ಎರಡು ತಿಂಗ್ಳು ನೀವು ನಿಶ್ಚಿಂತೆಯಾಗಿ ಇದ್ಬಿಡಿ. ಆಮೇಲೆ ಬೆಂಗ್ಳೂರಿಗೆ ಹೋಗೋಣ, ಆಯ್ತೆ?"

ಬಾಲು ಸಪ್ಪೆಯಾಗಿ ನುಡಿದ—

"ಅಂತೂ ಕಡೆಗೂ ಆ ಹಾಳು ಬೆಂಗಳೂರಿಗೆ ಹೋಗಲೇಬೇಕಲ್ಲ."

ಸೀತಾರಾಮು ಸಾವಧಾನದಿಂದ ಹೇಳಿದ—

"ಹೋಗ್ಬೇಕು ಬಾಲು. ಏನ್ಮಾಡೋದು; ನಿಮ್ಮ ತಂದೆ-ತಾಯಿಗೋಸ್ಕರ ಹೋಗಲೇಬೇಕಲ್ಲ. ಗಟ್ಟಿ ಮನಸ್ಮಾಡಿ ಇನ್ನೊಂದೊರುಷ ಓದ್ಬಿಡಿ. ಆ ಮೇಲೆ ಗ್ರ್ಯಾಂಡಾಗಿ ಮದುವೆ ಮಾಡಿಬಿಡ್ತಾರೆ. ಆ ಮೇಲೆ ನೀವೇ ರಾಜ!"

ಒಂದು ಗಳಿಗೆ ಬಾಲು ಮುಖ ಮಂಕು ಮಾಡಿದ—

"ನೀವು ಎಲ್ಲಾ ಸರಸರ ಹೇಳ್ತಿದ್ದೀರಿ. ಸೀತಾರಾಂ. ಓದೋದೇನೋ ನನ್ನದಾಯಿತು. ಮದುವೇಗೆ ಎಲ್ಲಾದ್ರೂ ಹೆಣ್ಣು ನೋಡಿದ್ದಾರಾ?"

"ಅವರು ನೋಡೋದೇನು ಬಂತು ಬಾಲು? ಈಗ್ಲೆ ಎಷ್ಟು ಹೆಣ್ಣುಗಳು ಕಾದು ನಿಂತಿದ್ದಾವೋ? ನಿಮ್ಮಂಥೋರಿಗೆ ಹೆಣ್ಣಿಗೆ ಕಡಿಮೆನಾ?"

ಬಾಲು ಒಂದು ಗಳಿಗೆ ಕಣ್ಣುತೇಲಿಸಿ ಕೇಳಿದ–

"ಹಾಗಾದ್ರೆ ನನ್ನದೊಂದು ಮಾತಿಗೆ ನೀವು ಸರಿಯಾಗಿ ಉತ್ರ ಹೇಳಬೇಕು ಸೀತಾರಾಂ."

ಸೀತಾರಾಮು ಮೆಲುವಕ್ಕ—

"ನಾನು ಯಾವುದಕ್ಕೆ ತಪ್ಪಾಗಿ ಉತ್ರ ಹೇಳಿದೀನಿ?"

"ಛೆ ಛೆ! ಹಾಗಲ್ಲ ಸೀತಾರಾಂ. ತಪ್ಪು ತಿಳಕೋಬೇಡಿ. ನನಗೆ ಸಮಾಧಾನ ಆಗೋಹಾಗೆ ಹೇಳಿದರೆ ಸಾಕು"

"ಅಗತ್ಯ ಹೇಳ್ತೀನಿ ಅದೇನು ಹೇಳಿ"

"ನಿಮಗೆ ಮದುವೆ ಯಾವಾಗ?"

ಮೈತುಂಬ ನಕ್ಕ ಸೀತಾರಾಮು—

"ಬಲು ದೊಡ್ಡ ವಿಷಯ ಕೇಳಿದ್ರಿ ಬಾಲು. ನಿಜವಾಗಿ ನನ್ನ ಮದುವೆಯಾವಾಗಾಂತ ನನಗ್ಗೊತ್ತಿಲ್ಲ. ಅಂತೂ ನನ್ನ ತಂಗೀ ಮದ್ವೆ ಜೋತೇಲೇ ನನ್ನ ಮದ್ವೇನೂ ಮಾಡಬೇಕೂಂತಿದಾರಂತೆ. ಅಷ್ಟೇ ನನಗ್ಗೊತ್ತಿರೋದು"

ಬಾಲುವಿನ ಧ್ವನಿ ನಡುಗಿತು—

"ನಿಮ್ಮ ತಂಗಿ ಮದುವೆ ಯಾವಾಗ ಸೀತಾರಾಂ ?"

"ಅದೂ ನನಗ್ಗೊತ್ತಿಲ್ಲ ಬಾಲು. ಮನೇಲಿ ಹಿರಿಯೋರಿದಾರೆ. ಅದನ್ನೆಲ್ಲಾ ಅವರೇ ನೋಡಿಕೋತಾರೆ. ಅವಳಿಗಿನ್ನೂ ಗಂಡು ಸಿಕ್ಕಿಲ್ಲಾಂತ ಕಾಣ್ಸುತ್ತೆ. ನಮ್ಮನೇಲಿ ಅವಳೊಬ್ಳೇ ಹೆಣ್ಣು ಮಗಳು. ಇಲ್ಲೇ ಎಲ್ಲಾದ್ರೂ ಹತ್ರ ಕೊಡಬೇಕೂಂತ ನಮ್ಮ ತಾಯಿ ಇಷ್ಟ. ಇನ್ನೂ ಯಾವದೂ ಸರಿಯಾಗಿ ಸಿಕ್ಕಿಲ್ಲಾಂತ ಅನಿಸುತ್ತೆ ನನಗೆ."

"ಹಾಗಾದ್ರೆ ನಿಮಗೆ ?"

ಸೀತಾರಾಮು ಸ್ಥಿರವಾಗಿ ಹೇಳಿದ---

"ನನಗೆ ಗೊತ್ತಾಗಿದೆ ಬಾಲು. ನೀವು ನೋಡಿರಬೋದು ಗಿರಿಜಾನ್ನ, ನನ್ನ ತಂಗೀ ಜೋತೇಲಿರ್ತಾಳಲ್ಲ ಯಾವಾಗ್ಲೂ"

"ಹೌದು ನೋಡಿದೀನಿ"

"ಅವಳೇ, ನಮ್ಮ ತಾಯಿ ಕಡೆ ಬಳಗ, ಹಿರಿಯರು ಗೊತ್ತು ಮಾಡಿದ್ರು"

"ನಿಮ್ಮನ್ನ ಕೇಳಿಲ್ಲವೇ ?"

"ಕೇಳೋದಕ್ಕೇನಿದೆ! ಹಳೆಯ ರಕ್ತಸಂಬಂಧ. ಕಂಡದ್ದು, ಕೇಳಿದ್ದು, ಹುಟ್ಟಿದಾರಭ್ಯ ನೋಡ್ತಾನೆ ಇದ್ದೀವಿ. ಎಲ್ಲಾ ಸರಿಯಾಗಿದೆ. ಇನ್ನು ನನ್ನ ಕೇಳೋದೇನಿದೆ ?"

ಬಾಲು ತಣ್ಣಗಾದ. ಅವನ ಪ್ರಶ್ನೆಗೆಲ್ಲ ಸಮರ್ಪಕ ಉತ್ತರ ಸಿಕ್ಕಿತ್ತು.

"ಚಿಕ್ಕಪ್ಪ ಊಟಕ್ಕೆ ಬರ್ಬೇಕಂತೆ"

ಪುಟ್ಟ ವೆಂಕಟರಾಮು ಬಂದು ಕರೆದ. ಇಬ್ಬರೂ ಕೆಳಗಿಳಿದರು.

ಅಂದು ನೀರು ತುಂಬುವ ಹಬ್ಬ. ಮನೆಯೆಲ್ಲ ಸುಣ್ಣ, ಕೆಮ್ಮಣ್ಣು, ರಂಗವಲ್ಲಿಯಿಂದ ಸಿಂಗಾರವಾಗಿತ್ತು. ಹಂಡೆ, ಒಲೆ, ಬೀಸುವ ಕಲ್ಲು, ಒನಕೆಗಳು ಸುಣ್ಣ ಕೆಮ್ಮಣ್ಣಿನ ನಾಮ ಎಳೆದುಕೊಂಡಿದ್ದವು. ಹಿಂಡ್ಲಚ್ಚಿ ಹಾರ ಹಾಕಿಕೊಂಡಿತ್ತು ಹಂಡೆ.

ಬಾಲುವಿಗೆ ಇದೆಲ್ಲಾ ಹೊಸಪರಿ. ಅಂದೂ ಸಿಹಿಯೂಟವಾಯಿತು. ಮರುದಿನ ಅಭ್ಯಂಜನ. ಮನೆಮಂದಿಯೆಲ್ಲ ಎಣ್ಣೆವತ್ತಿ ಎರೆದುಕೊಂಡರು.



ಕಡೆಯದಾಗಿ ಬಾಲು, ಸೀತಾರಾಮುವಿನ ಸರದಿ ಬಂತು. ಬಾಲು ಒಲ್ಲೆನೆಂದು ಕುಳಿತ. ಬೆಂಗಳೂರಿನಲ್ಲೂ ಉಗಾದಿ, ದೀಪಾವಳಿಗಳಲ್ಲಿ ತಾಯಿ ಒತ್ತಾಯಿಸಿ ಎರಡು ತಂಬಿಗೆ ನೀರು ಹಾಕಬೇಕಿತ್ತು.

ಇಲ್ಲಿ ಸೀತಾರಾಮು ಬಿಡಲಿಲ್ಲ. ತಾನೇ ಸೊಂಟ ಕಟ್ಟಿನಿಂತ, ಅವನಿಗೆ ಅಭ್ಯಂಜನ ಮಾಡಿಸಲು. ಬಚ್ಚಲಿನಿಂದ ಮೇಲೆ ಬರುವುದರಲ್ಲಿ ಬಾಲು ಬಳಲಿಹೋಗಿದ್ದ. ಚೀನೀಕಾಯಿಕಡುಬಿನ ಊಟ. ಹೊಸ ಬಟ್ಟೆಗಳ ಸಂಭ್ರಮ. ಮಕ್ಕಳಿಬ್ಬರೂ ಪಟಾಕಿ ಹಾರಿಸಿ ನಲಿದರು. ಮಡವತ್ತಿ, ಹೊಸ ಕೇರಿಯ ಹುಡುಗರೂ ಬಂದು ಸೇರಿದರು ಪಟಾಕಿ ಸುಡಲು.

ಮರುದಿನವೇ ದೀವಳಿಗೆ ಹಬ್ಬ. ಲೋಕವೇ ದೀಪೋತ್ಸವಗಳಿಂದ ಮೆರೆದಾಡುವ ಮಹಾ ದೀಪಾವಳಿ. ಮನೆಮುಂದಿಯೆಲ್ಲ ಹೊಸ ಬಟ್ಟೆ ಧರಿಸಿದರು. ಸೀತಾರಾಮುವಿನ ಹೊಸ ಪಂಚೆ ಉಟ್ಟು, ಅವನದೇ ಶರಟು ತೊಟ್ಟ ಬಾಲು.

ಗಂಗೆ ಹೊಸ ಸೀರೆಯುಟ್ಟು ಮನೆಯ ಬಾಗಿಲುಗಳಿಗೆಲ್ಲ ಚಂಡುಹೂವಿನ 'ಕೆರಕ' ಇಟ್ಟಳು. ಮನೆಯ ಪ್ರತಿಯೊಂದು ಹೊಸಿಲನ್ನೂ ಅರಿಸಿನ-ಕುಂಕುಮ ಹೂವುಗಳಿಂದ ಪೂಜಿಸಿದಳು. ಕೊಟ್ಟಿಗೆಯ ಹಿಂಭಾಗದ ಬಾಗಿಲಿಗೆ ಕಡೆಯದಾಗಿ ಹೋದಳು. ಸೀತಾರಾಮು ಮಡವತ್ತಿ ದೇವಸ್ಥಾನದತ್ತ ಹೊಗಿದ್ದ.

ಗಂಗೆ ಕೆರಕ ಇಡುತ್ತಿದ್ದಳು. ಗೊಲ್ಲರ ಸೋಮ ದನಗಳಿಗೆ ಸುಣ್ಣ ಕೆಮ್ಮಣ್ಣಿನ ಹಂಡ ಹಾಕಲು ತೊಡಗಿದ್ದ. ಕುಡುಗು ದನ ದುರ್ಗಿಗೆ ಎರಡು ಬಾರಿ ಹಂಡ ತಟ್ಟಿದ. ಅದು ಕೊಟ್ಟಿಗೆಯಿಂದ ಹೊರಗೋಡಿ ಬಂದಿತು. ಗಂಗೆ ಬಾಗಿಲಲ್ಲೇ ಪಂಚವಾಳ ಇಟ್ಟುಕೊಂಡು ಹೊಸ್ತಿಲು ಪೂಜಿಸುತ್ತಿದ್ದಾಳೆ. ಆ ದುರ್ಗಿ ಕಂಡರೆ ಎಲ್ಲರಿಗೂ ಹೆದರಿಕೆ. ಗಂಗೆ ಪೂಜಾಸಾಮಗ್ರಿ ಅಲ್ಲೇ ಬಿಟ್ಟು ಎದ್ದು ಇತ್ತ ಓಡಿಬರುತ್ತ ಸೋಮನನ್ನು ಗದರಿಸಿದಳು.

"ಮೈಮ್ಯಾಲೆ ಗ್ಯಾನ ಇಲ್ಲನ ನಿಂಗೆ! ಹಾಗೆ ನುಗ್ಗಸ್ತಿಯಲ್ಲ---"

ಅನ್ನುತ್ತ ಇತ್ತ ಹಾರಿದಳು. ಅಲ್ಲೇ ಸೀತಾರಾಮು ನಿಂತಿದ್ದ. ಹೆದರಿಕೆಯಿಂದ ಅಣ್ಣನ ಭುಜ ಭದ್ರವಾಗಿ ಹಿಡಿದುಕೊಂಡಳು. ಸೋಮ ದನವನ್ನೋಡಿಸಿಕೊಂಡು ಅಬ್ಬೆಯತ್ತ ನಡೆದ. ಗಂಗೆ ನಡುಗುತ್ತಿದ್ದಳು. ಹಾಗೇ ಸೀತಾರಾಮುವೂ ನಡುಗುತ್ತಿದ್ದ. ಅವಳು ಬಾಗಿಲ ಕಡೆ ನೋಡಿದಳು. ದನದ ಕಾಲು ತಾಗಿ ಹೊಸ್ತಿಲಿಗೆ ಅರಿಸಿನ-ಕುಂಕುಮ ಸೂರೆಯಾಗಿತ್ತು. ಸೀತಾರಾಮುವಿನ ಎರಡು ತೋಳುಗಳೂ ಗಂಗೆಯನ್ನು ಬಿಗಿದಪ್ಪಿದವು. ಗಂಗೆ ಗಾಬರಿಯಿಂದ ಮುಖವೆತ್ತಿದಳು. ಅಲ್ಲಿ ಕಂಡದ್ದು ಸೀತಾರಾಮುವಿನ ಬಟ್ಟೆ ತೊಟ್ಟ ಬಾಲುವಿನ ಮುಖ.

## ೧೩

ಗಂಗೆಗೆ ಪ್ರಜ್ಞೆ ತಪ್ಪುವಂತಾಯಿತು. ಹೇಗೋ ಬಾಲುವಿನ ತೋಳಿನಿಂದ ಕಳಚಿ ಬಾಣದಂತೆ ಒಳಗೋಡಿ ಬಂದಳು. ಎದೆ ಧಡ ಧಡ! ಮನಸ್ಸು ವಿಲಿವಿಲಿ.

ಯಾಕೆ ಹೀಗಾಯ್ತು! ಎಂಥ ಅಚಾತುರ್ಯ, ವರ್ಷಾವಧಿ ಹಬ್ಬದ ದಿನ. ತಾನೇಕೆ ಹಿಂದಿರುಗಿ ನೋಡಲಿಲ್ಲ? ಅವರೇಕೆ ಅಣ್ಣನ ಬಟ್ಟೆ ತೊಟ್ಟರೋ? ಯಾರು ಕಂಡರೋ! ಅವರೇನು ತಿಳಿದುಕೊಂಡರೋ!!

ಅವಳ ಬುದ್ಧಿಯೆಲ್ಲ ತಳಮಳ. ಕೈಕಾಲು ಥರಥರ ನಡಗುತ್ತಿದೆ. ಏನು ಮಾಡಲೂ ತಿಳಿಯದೆ ಅಡಿಗೆಮನೆಯ ಮೂಲೆಯಲ್ಲಿ ನಿಂತಳು. ತಾಯಿ ಕೇಳಿದಳು.

"ಕೆರಕನ ಪೂಜೆ, ತುಳಸಿಪೂಜೆ ಆತನೆ?"

ಸುಳ್ಳು ಸತ್ಯ ಬೆರಕೆಯಾಗಿ ಹೊರಟಿತು ಅವಳ ಬಾಯಿಂದ. ನಡಗುವ ದನಿಯಲ್ಲಿ ಮಾತನಾಡಿದಳು.

"ನೋಡಮ್ಮಾ ಕೃಟ್ಗಿ ಬಾಗ್ಲ ಪೂಜೆ ಮಾಡ್ತಿದ್ದೆ. ಆ ಸೋಮ ದುರ್ಗಿ ದನ ಮೈಮ್ಯಾಲೆ ನುಗ್ಗಸ್ಬಿಟ್ಟ. ಅರ್ಶ್ನ-ಕುಂಕ್ಮ ಯಲ್ಲ ಚೆಲ್ಹೋತು ಅಲ್ಲೆ."

ತಾಯಿ ತಿರುಗಿ ನೋಡಿದರು. ಮಗಳು ಅಲ್ಲೇ ನಿಂತಿದಾಳೆ. ಅವರು ಕಳ್ಳದನಿಯಲ್ಲಿ ಗದರಿಸಿದರು.

"ಪಂಚ್ವಾಳ ಎಲ್ಲೆ? ತಗಂಬಾ ಹೋಗು ಅದ್ನ!"

"ಅಲ್ಲೇ ಅದೆ!"

"ದನ ಹೋತೋ ಇಲ್ಲೋ? ಇನ್ನ್ಯಾಕೆ ನಿಂತಿದ್ದಿ? ಹೋಗು ತಗಂಬಂದು ಬ್ಯಾಗ ಪೂಜೆಗೀಜೆ ಮುಗ್ಸು. ಇನ್ನೂ ಖಂಡ್ಗ ಕೆಲ್ಸ ಕೂತದೆ. ಮಡ್ಗಿ ಕಡಯಲ್ಲನು?"

ಈಗಲೂ ಅವಳ ಕಾಲು ನಡುಗುತ್ತಿತ್ತು—

'ಹೇಗೆ ಹೋಗೋದು ಅಲ್ಲಿಗೆ? ಅವರು ಅಲ್ಲೇ

ಇದ್ದಾರೋ ಏನೋ. ಯಾರನ್ನು ಕಳಿಸಲಿ ಅಲ್ಲಿಗೆ? ಅತ್ತೆ ಸೊಸೆ ಹಬ್ಬದ ಅಡಿಗೆಯಲ್ಲಿ ತೊಡಗಿದ್ದಾರೆ. ಮಕ್ಕಳಿಬ್ಬರು ಪಟಾಕಿ ಸಂಭ್ರಮದಲ್ಲಿದ್ದಾರೆ. ಗಿರಿಜೆ ಇನ್ನೂ ಬಂದಿಲ್ಲ. ಅಯ್ಯೋ! ಅವರು ಇನ್ನೂ ಅಲ್ಲೇ ಇದ್ದರೆ ಏನು ಗತಿ?'

ಮೆಲ್ಲಮೆಲ್ಲನೆ ಹೊರಗೆ ಬಂದಳು. ದೂರದಿಂದಲೇ ನೋಡಿದಳು. ಬಾಲು ಅಲ್ಲಿರಲಿಲ್ಲ. ಸರಸರ ಹೋಗಿ ಪಂಚವಾಳ ಎತ್ತಿ ಒಳಗೋಡಿ ಬಂದಳು. ಅಸ್ತವ್ಯಸ್ತಮನದಿಂದ ಮುಂದಿನ ಕೆಲಸ ಯಾಂತ್ರಿಕವಾಗಿ ನಡೆಯಿತು ಮಜ್ಜಿಗೆ ಕಡೆಯಲು ಕುಳಿತಳು ಗಂಗೆ.

ಅವಳ ಹದಿನೆಂಟು ವರ್ಷಗಳು ನಿರ್ವಿಕಾರವಾಗಿ ಶಾಂತವಾಗಿ ಹರಿದುಬಂದಿತ್ತು. ಇಂದು ಆ ಮಜ್ಜಿಗೆಯ ಪಾತ್ರೆಯಂತೆಯೇ ಅವಳ ಚಿತ್ತದಲ್ಲಿ ವಿಚಾರಮಥನ ನಡೆಯುತ್ತಿತ್ತು. ಮಧ್ಯೆಮಧ್ಯೆ ತಾಯಿ, ಅತ್ತಿಗೆ ಕೇಳಿದ ಪ್ರಶ್ನೆಗೆ ಅವಳು ಎಪರುತಪರಾಗಿ ಉತ್ತರ ಕೊಡುತ್ತಿದ್ದಳು.

ಬಾಲುವಿಗೆ---ಕೈಗೆ ಬಂದ ತುತ್ತು ಬಾಯಿಗೆ ಬರಲಿಲ್ಲ. ಪಚ್ಚೆಗಿಳಿಯೊಂದು ಕೈಗೆ ಸಿಕ್ಕಿ ಪಕ್ಕನೆ ಹಾರಿಹೋಗಿತ್ತು. ಒಂದೇ ಗಳಿಗೆ ತನ್ನ ಕನಸಿನ ಪ್ರತಿಮೆ. ಗುಳಿಕೆನ್ನೆಯ ಮುದ್ದುಗದ್ದದ ಗಂಗೆ ಕೈಗೆಟಕಿ ಓಡಿದಳು. ಅದು ತೀರಾ ಆಕಸ್ಮಿಕ, ಅನಿರೀಕ್ಷಿತ.

ಬಾಲು ಮೆಲ್ಲಮೆಲ್ಲನೆ ಉಪ್ಪರಿಗೆ ಏರಿದ. ಸೀತಾರಾಮು ದೂರ ಮಡವತ್ತಿಯಿಂದ ಬರುತ್ತಿರುವುದು ಕಾಣಿಸಿತು. ಮಂಚದ ಮೇಲುರುಳಿ ಮುಖಕ್ಕೆ ಕೈ ಅಡ್ಡ ಇಟ್ಟು ಮಲಗಿದ.

ಬಹು ಸಣ್ಣಗೆ ಸೀಟಿಹಾಕುತ್ತ ಮೇಲೆ ಬಂದ ಸೀತಾರಾಮು. ಬಾಲು ಮುಖ ಮುಚ್ಚಿ ಮಲಗಿದ್ದಾನೆ. ನಿದ್ದೆ ಬಂದಿದೆಯೇನೊ ಎಂದುಕೊಂಡು ಬಾಗಿನೋಡಿದ ಸೀತಾರಾಮು. ನಿದ್ರೆಯ ನಟನೆ ನಡೆದಿತ್ತು. ಮುಖವೆಲ್ಲಾ ಕೆಂಪಡರಿದೆ. ಹಣೆಯಲ್ಲಿ ತನಿಬೆವರು ಕಾಣಿಸಿದೆ. ಆತ ಸುಮ್ಮನೆ ಮಲಗಿಕೊಂಡಿದ್ದಾನೆ ಎಂದುಕೊಂಡ ಸೀತಾರಾಮು. ಕೆಳಗೆ ಹಬ್ಬದ ಅಡಿಗೆ ನಡೆದಿತ್ತು. ಹೋಳಿಗೆಯ 'ಘಮ-ಘಮ,' ಉಪ್ಪರಿಗೆ ಏರಿ ಬಂದಿತು.

'ಸೊರ್ ಭರ್'--- ಮಜ್ಜಿಗೆ ಕಡೆಯುವುದು ಕೇಳಿಬರುತ್ತಿದೆ. ಊಟಕ್ಕೆ ಇನ್ನೂ ಬಹಳ ಹೊತ್ತು ಇದೆ. ಸೀತಾರಾಮು ಹಾಗೇ ದಿಂಬನ್ನೊರಗಿದ.

ಮಹಾನೈವೇದ್ಯ ಮಂಗಳಾರತಿಯಾಗಿ ಊಟಕ್ಕೆ ಎಲೆ ಹಾಕಿದರು. ಸೀತಾರಾಮು ಬಾಲುವನ್ನು ಎಚ್ಚರಿಸಿದ. ಬಾಲು ಎದ್ದು ಕುಳಿತ. ಕಣ್ಣು ಕಿರಿದಾಗಿದೆ. ಕಣ್ಣೆತ್ತಿ ನೋಡಲಾರ ಸೀತಾರಾಮುವನ್ನ.

ಭಕ್ಷಭೋಜ್ಯ ಸಾಲು ಎಲೆಯ ಮೇಲಿದೆ. ಮುಖ ತಗ್ಗಿಸಿ ಊಟ ಮುಗಿಸಿದ ಬಾಲು. ಗಂಗೆ ಅಡಿಗೆಮನೆಯ ಮೂಲೆ ಸೇರಿದ್ದಳು. ಹಬ್ಬದ ಸಡಗರದಲ್ಲಿ ಗಂಗೆಯ ಫಜೀತಿಯನ್ನು ಯಾರೂ ಗಮನಿಸಲಿಲ್ಲ. ಬಾಲುವಿನ ಬದಲು ತಿಳಿದದ್ದು ಸೀತಾರಾಮುವಿಗೆ.

ಇದ್ದಕ್ಕಿದ್ದಂತೆ ಮೌನ ತಳೆದಿದ್ದ. ಏನೊ ಗಾಂಭೀರ್ಯ. ಅದನ್ನು ಕೆಣಕುವ ಗೋಜಿಗೆ ಹೋಗಲಿಲ್ಲ ಸೀತಾರಾಮು. ಅಂದು ಸಂಜೆ ಬಲೀಂದ್ರನ ಪೂಜೆ. ದೀಪೋತ್ಸವ. ವೆಂಕಟರಾಮು, ಅವನ ತಮ್ಮ ಮತಾಪುಹಚ್ಚಿ ಕುಣಿದಾಡಿದರು. ಈಗ ಹುಡುಗರ ಜೊತೆ ಸೀತಾರಾಮುವೂ ಪಟಾಕಿ ಹಚ್ಚಲು ಸೇರಿಕೊಂಡ. ಬಾಲು ದೂರ ನಿಂತು ನೋಡಿದ.

ಮನೆಯ ಸುತ್ತಲೂ ಸಾಲುಜ್ಯೋತಿಗಳು ಬೆಳಗಿದವು. ಪ್ರತಿ ಬಾಗಿಲಿನಲ್ಲಿ, ಜಗುಲಿಗಳ ಅಂಚಿನಲ್ಲಿ, ಕೊಟ್ಟಿಗೆಯ ಮೋಟು ಗೋಡೆಗಳಲ್ಲಿ ಎಲ್ಲೆಲ್ಲೂ ಸಾವಿರಾರು ಹಣತೆಗಳು ಬೆಳಗಿದವು. ಸ್ವರ್ಣಪ್ರಭೆ ಎಲ್ಲೆಲ್ಲೂ ಪಸರಿಸಿತು. ಗಿರಿಜೆಯೂ ಸಿಂಗಾರವಾಗಿ ಬಂದಿದ್ದಳು- ಇಬ್ಬರು ಹುಡುಗಿಯರೂ ಹಣತೆಗಳನ್ನು ಹಚ್ಚುತ್ತಿದ್ದಾರೆ. ಗಂಗೆಯ ಅಂತರಂಗದ ತುಮುಲ ಯಾರಿಗೂ ತಿಳಿಯದು. ಬಾಲು ಹೊರಗಡೆ ನಿಂತಿದ್ದಾನೆ. ಅವಳು ಹೊರಗಡೆ ಓಡಾಡಬೇಕು; ಓಡಾಡಲಾರಳು.

'ದೇವರ ದಯದಿಂದ ಮತ್ತೆ ಯಾರಿಗೂ ತಿಳಿದಿಲ್ಲ'— ಎಂಬ ಸಮಾಧಾನ ಮರುಗಳಿಗೆ—

'ಅವರು ಅಣ್ಣನ ಬಟ್ಟೆ ತೊಟ್ಟಿದ್ದಾರೆ. ನಾನು ಅದನ್ನ ಗಮನಿಸದೇ ನಾನಾಗಿಯೇ ಹೋಗಿ ಅವರನ್ನ ಮುಟ್ಟಿದೆನಲ್ಲ. ದೊಡ್ಡ ಮನುಷ್ಯರ ಮನೆಯವರು. ಏನು ತಿಳಿದುಕೊಂಡಿದ್ದಾರೋ! ನಾನು ಬೇಕಾಗಿ ಮಾಡಿದ್ದಲ್ಲವೆಂದು ಅವರಿಗೆ ಹೇಗೆ ಗೊತ್ತಾಗಬೇಕು? ಒಂದು ಗಳಿಗೆ; ಒಂದೇ ಒಂದು ಗಳಿಗೆ ತನಗೆ ಏನಾಯಿತೋ. ಅವರಿಂದ ಹೇಗೆ ಪಾರಾಗಿ ಬಂದೆನೋ! ಆ ಒಂದು ಗಳಿಗೆ!'

ಗಂಗೆ ಯೋಚಿಸುತ್ತಾ ಹಣತೆ ಹಚ್ಚುತ್ತಿದ್ದಳು.

ಕೈತುಂಬ ಬಳೆಗಳು; ಮುಡಿತುಂಬ ಹೂವು; ಹೊಸ ಸೀರೆ ರವಿಕೆಗಳು. ಮಂಗಲಶೋಭೆ ತುಂಬಿದ ಮುಖ. ಜೊತೆಗೆ ಲಜ್ಜೆಯ ಸ್ವರ್ಣಕಾಂತಿ ಬೆಳಗುತ್ತಿದೆ ವದನದಲ್ಲಿ. ಬಾಲು ಕೈ ಕಟ್ಟಿ ಕಂಬ ಒರಗಿ ನಿಂತು ಆ ಬಾಲೆಯ ಚಲನವಲನ ನೋಡಿದ. ಮನಕ್ಕೆ ಏನೋ ಸಮಾಧಾನವೆನಿಸಿತು.

ರಾತ್ರಿಯ ಸಂಭ್ರಮ ಊಟ ಮುಗಿದು ಮಲಗಿದಾಗ ಹತ್ತು ಹೊಡೆದಿತ್ತು. ಬೆಳಗಿನ ಜಾವದ ಕನಸಿನಲ್ಲಿ ಗಂಗೆ ಬಾಲುವಿನ ಕೈಗೆ ಸಿಕ್ಕಿದಳು. ಅವಳ ಕೈ ಹಿಡಿದಿದ್ದಾನೆ ಬಾಲು. ಬಲಗೈ ಹಿಡಿದು ಮೃದುವಾಗಿ ಬೆರಳುಗಳನ್ನ ಸವರುತ್ತಿದ್ದಾನೆ. ಇದೇನು! ಕೈ ತುಂಬ ಬಳೆಗಳಿತ್ತು. ಈಗ ಒಂದೂ ಇಲ್ಲವಲ್ಲ! ಕೈ ಉದ್ದಕ್ಕೂ ತಡವರಿಸಿದ ಗಂಗೆ ಅವನಿಂದ ಬಿಡಿಸಿಕೊಂಡು ಓಡಲು ಪ್ರಯತ್ನಿಸಿದಳು. ಅವನು ಅವಳ ಕೊರಳಿಗೆ ಕೈಹಾಕಿ ಹತ್ತಿರಕ್ಕೆಳೆದ. ಅವಳು ಅವನ ಕ್ರಾಪಿನಲ್ಲಿ ಕೈಯಾಡಿಸಿ—

'ಯಾಕೆ ಬಾಲು?'— ಎಂದು ಕೇಳಿದಳು. ಬಾಲು ತಟ್ಟನೆ ಕಣ್ಣು ತೆರೆದ.

ಸೀತಾರಾಮು ಮೆಲ್ಲನೆ ಅವನ ಮುಖ ಸವರುತ್ತಿದ್ದಾನೆ—

"ಏನು ಕನಸಾಯಿತೆ ಬಾಲು?" — ಮೆಲ್ಲನೆ ಕೇಳಿದ ಸೀತಾರಾಮು. ಅವನ ಬಲಗೈ ಬಾಲುವಿನ ಕೈಯಲ್ಲಿದೆ. ಆ ಬೋಳು—ಕೈ ಸವರುತ್ತಿದ್ದಾನೆ ಅವನು.

'ಕ್ಕೊ ಕ್ಕೊ ಕ್ಕೊಕೊ......'

ಹೊಲೆಯರ ಮನೆಯ ಕೋಳಿರಾಯ ಉದಯ ಸಾರಿದ.

ಬಾಲು ಲ್ಯಾಂಪಿನ ಮಸುಕು ಬೆಳಕಿನಲ್ಲಿ ಸೀತಾರಾಮುವಿನ ಮುಖ ನೋಡಿದ.

'ಹೌದು! ಗಂಗೆಯ ಮುಖವಂತೆಯೇ ಹೆಣ್ಣುಮುಖ ಇವರದು.'

ಅನಿಸಿತು ಅವನಿಗೆ 'ಅದೇ ಗದ್ದ; ಅದೇ ತುಟಿ'

ಬಾಲು ಮಾತಾಡಲಿಲ್ಲವಾದುದರಿಂದ ಸೀತಾರಾಮುವೇ ಮಾತಾಡಿದ.

"ಇನ್ನೂ ಬೆಳಗಾಗಲಿಲ್ಲ ಬಾಲು. ಈಗ್ಲೆ ಏಳ್ಬೇಡಿ. ತುಂಬಾ ಚಳಿ."

ಅದಕ್ಕೂ ಅವನು ಮಾತಾಡಲಿಲ್ಲ. ಮತ್ತೂ ಅವನ ಹತ್ತಿರ ಸರಿದು ಅವನ ಕೊರಳನ್ನು ತಬ್ಬಿಕೊಂಡು ಮಲಗಿದ ಬಾಲು.

'ಇನ್ನೂ ಚಿತ್ರಾಳ ಗುಂಗು ಹರಿದಿಲ್ಲ---"

ಎಂದುಕೊಂಡ ಸೀತಾರಾಮು.

ಅಂದು ಮಧ್ಯಾಹ್ನ ಉಂಡು ಉರುಳಿದರು ಮಂಚದ ಮೇಲೆ. ಬಾಲು ಒಂದು ಪುಸ್ತಕ ಹಿಡಿದ ಕೈಯಲ್ಲಿ. ಪುಸ್ತಕದ ಹಿಂದು ಮುಂದೆಲ್ಲ ಹರಿದು ಹೋಗಿತ್ತು. ಕಥೆಯ ಹೆಸರು... 'ಪ್ರೇಮಾಂಕುರ.'

ಆಕರ್ಷಕ ಹೆಸರು: 'ಓದೋಣ---' ಅನ್ನಿಸಿತು ಬಾಲುವಿಗೆ. ಕಥೆ ದೊಡ್ಡದಲ್ಲ. ಅದರಲ್ಲೇ ಮುಳುಗಿದ ಬಾಲು.

'ಭಾರತೀಯ ಯುವಕ ಹರಿಸೇನ ಹುಟ್ಟಿದ್ದು ಇಂಗ್ಲಂಡಿನಲ್ಲಿ. ಆಂಗ್ಲಸಂಸ್ಕೃತಿಗೆ ಮನಸೋತ ಅವನ ತಂದೆ ಅವನಿಗೆ "ಹ್ಯಾರಿಸನ್"--- ಎಂದು ಹೆಸರಿಟ್ಟ. "ಹರಿಸೇನ"-- ಎಂದು ಕರೆದ ಅವನ ತಾಯಿ ಅವನ ನಾಲ್ಕನೇ ವರ್ಷದಲ್ಲೇ ಹೋದಳು. ಹುಡುಗ ಪೂರಾ ಆಂಗ್ಲ ವಾತಾವರಣದಲ್ಲಿ ಬೆಳೆದ. ತಂದೆ ಸತ್ತ ನಂತರ ಅವನು ಭಾರತೀಯನೆಂಬುದು ಹೊರಬಿದ್ದಿತು. ಅವನ ಮೆಚ್ಚಿನ "ಸ್ವೀಲಾ" ಅವನನ್ನು ತೊರೆದಳು. ಆಂಗ್ಲ ಸಮಾಜ ಅವನನ್ನು ಪೂರಾ ತೊರೆದು ತುಚ್ಛೀಕರಿಸಿದಾಗ ಅವನನ್ನು ಮಡಿಲಿಗೆ ತೆಗೆದುಕೊಂಡವರು---' ದೇವಕಿರೂಪ ಚಂದ. ಅವಳ ಸಲಹೆಯ ಮೇರೆಗೆ ಅವನು ತನ್ನ ತಂದೆಯ ಜನ್ಮಭೂಮಿಯಾದ ಭಾರತ ನೋಡಲು ಹಿಂದಿರುಗಿದ್ದಾನೆ. ಭಾರತದಲ್ಲಿ ಹುಟ್ಟಿದ ತಂದೆ-ತಾಯಿ ಇಂಗ್ಲಂಡಿನಲ್ಲಿ ಮಣ್ಣಾದರು. ತಾನು ಇಂಗ್ಲಂಡಿನಲ್ಲಿ ಹುಟ್ಟಿ ತನ್ನ ಮಾತೃಭೂಮಿಯಲ್ಲೇ ಮಣ್ಣಾಗುತ್ತೇನೆ---ಎಂಬ ಸಂಕಲ್ಪ ಅವನದು. ಭಾರತಕ್ಕೆ ಬಂದಿದೆ ಹಡಗು. ಹಡಗಿನ ಮೇಲ್ತಡಿಯಲ್ಲಿ ನಿಂತು ನೋಡುತ್ತಿದ್ದಾನೆ ಹರಿಸೇನ. ಆಂಗ್ಲರ ದೌರ್ಜನ್ಯ, ಸ್ವೀಲಾಳ ವಂಚನೆಗಳಿಂದ ಸುಟ್ಟುಹೋದ ಅವನ ಹೃದಯ ಸಸ್ಯಶ್ಯಾಮಲೆ ಭಾರತಿಯನ್ನು ಕಂಡು ತನಿಭರಿತವಾಯಿತು. ತಂದೆ ಸಂಪಾದಿಸಿದ ಲಕ್ಷಲಕ್ಷ ಪೌಂಡುಗಳನ್ನು ಇಂಗ್ಲಂಡ್ ಸರ್ಕಾರ ತನ್ನದೆಂದು ದೋಚಿಟ್ಟುಕೊಂಡು ಅವನನ್ನು ಬರಿಗೈಯ ಪರದೇಶಿಯನ್ನಾಗಿ ಮಾಡಿ ಹೊರಗಟ್ಟಿತ್ತು. ಅವನಲ್ಲಿದ್ದ ಆಸ್ತಿಯೆಂದರೆ ತಂದೆಯ ಭಾರತ ಭೂಸಂಪತ್ತಿನ ದಾಖಲೆಯ ಪತ್ರಗಳು ಮಾತ್ರ. ಸಮುದ್ರ ದಂಡೆಯಲ್ಲಿಯೇ ಅವನಿಗೆ ಕಾಮಧೇನು, ಕಲ್ಪವೃಕ್ಷಗಳ ದರ್ಶನವಾಯಿತು. ಪರದೇಶದಲ್ಲಿ ಹುಟ್ಟಿ ಪರದೇಶಿಯಾಗಿಯೇ ಬಂದ ಹರಿಸೇನನನ್ನು ಭಾರತಿ ಮಡಿಲೊಡ್ಡಿ ತಕ್ಕೈಸಿದಳು.'

ಒಂದೇ ಪಟ್ಟಿನಲ್ಲಿ ನೂರಾ ಐವತ್ತು ಪುಟ ಓದಿ ಮುಗಿಸಿದ ಬಾಲು. ಅವನು ಎಂದೂ ಅಷ್ಟು ತನ್ಮಯತೆಯಿಂದ ಕನ್ನಡ ಕತೆ ಓದಿದವನಲ್ಲ. ಆತ್ಮಸ್ಪರ್ಶಿಯಾದ ಅನುಕಂಪಿನ ಬರವಣಿಗೆ ಬಾಲುವನ್ನು ಒಮ್ಮೆ ಪುಟಕ್ಕೆ ಹಾಕಿ ತೆಗೆಯಿತು. ಲೇಖ

ಕರು ಯಾರೆಂದು ಕಡೆಗೂ ತಿಳಿಯಲಿಲ್ಲ. ಮೊದಲಿನ ಪುಟಗಳೇ ಇರಲಿಲ್ಲ. ಕನ್ನಡದ ಪ್ರಚಲಿತ ಸಾಹಿತ್ಯ ಇಂತಹ ಪವಿತ್ರ ಧ್ಯೇಯವನ್ನು ಹೊತ್ತಿದೆ ಎಂದು ಇದೀಗ ಮನಗಂಡ ಬಾಲು.

ಅವನನ್ನೀಗ ನಾಲ್ಕಾರು ಬಂಧನಗಳು ಎಳೆದಾಡಿದವು. ತಂದೆ-ತಾಯಿ ವಿದ್ಯೆ-ಕೆಲಸ ಕಡೆಯದಾಗಿ ತನ್ನ ಬಾಳ್ವೆಯ ದಿಕ್ಸೂಚಿಯಾಗಿರುವ ಗಂಗೆ. ಅವಳನ್ನು ಬಿಟ್ಟು ಹೊರಡಲಾರೆ ಎಂದಿತು ಜೀವ.

ಅಂದು ಮಧ್ಯಾಹ್ನ ಸೀತಾರಾಮು ಕೆಳಗೆ ಹೋಗಿ ಬರುವುದರಲ್ಲಿ ಬಾಲು ಮುಖಕ್ಕೆ ಟವೆಲು ಮುಚ್ಚಿ ಮಲಗಿದ್ದಾನೆ.

"ಏನಿದು!"—ಅನ್ನುತ್ತ ಸೀತಾರಾಮು ಟವೆಲು ಎಳೆದ. ಬಾಲು ತುಟಿ ಕಚ್ಚಿ ಬಿಕ್ಕುತ್ತಿದ್ದಾನೆ. ಕಣ್ಣು ತುಂಬಿ ನಿಂತಿದೆ. ಅವನಿಗೆ ಗಾಬರಿಯಾಯಿತು. ಇನ್ನೂ ಹದಿನೈದು ದಿನ ಆ ಮಾತ್ರೆ ಕೊಟ್ಟಿದ್ದರೆ ಚೆನ್ನಾಗಿತ್ತು—ಅಂದುಕೊಂಡ ಸೀತಾರಾಮು. ಆದರೂ ಸಂತೈಸುತ್ತಲೇ ಕೇಳಿದ—

"ಯಾಕೆ ಬಾಲು, ಏನಾಯ್ತು? ದಯವಿಟ್ಟು ತಿಳಿಸಿ."

ಅವನು ತೋಳಿನಿಂದ ಮುಖ ಮುಚ್ಚಿಕೊಂಡ. ಸೀತಾರಾಮು ಸೋತು ನುಡಿದ—

"ನೀವು ಹೀಗೆಲ್ಲಾ ಮಾಡಿದ್ರೆ ನನಗೆ ತುಂಬಾ ಬೇಜಾರು ಬಾಲು."

ಬಾಲು ಎರಡು ಬಾರಿ ಉಗುಳುನುಂಗಿ ಎದ್ದು ಕುಳಿತು ಅವನ ಕೈ ಹಿಡಿದು ಬೇಡಿದ—

"ಹೌದು ಸೀತಾರಾಂ, ನಾನು ನಿಮಗೆ ತುಂಬಾ ಬೇಜಾರು ಮಾಡ್ತಾ ಇದ್ದೀನಿ. ಅದು ನನಗೆ ಗೊತ್ತು. ಇದು ಕಡೆಯ ಮಾತಾಗಿ ಹೇಳ್ತೀನಿ ಸೀತಾರಾಂ. ಮತ್ತೆ ಮತ್ತೆ ಹೇಳೊಲ್ಲ. ಈ ಕಡೆಯ ಮಾತು ಕೇಳಿ ನನ್ನ ಬೆಂಗಳೂರಿಗೆ ಕಳಿಸಿ ಬಿಡಿ. ಹೇಳೂ ಅಂದರೆ ಹೇಳ್ತೀನಿ."

ಸೀತಾರಾಮು ಮೆಲುನಕ್ಕು ನುಡಿದ—

"ಹೇಳಿ ಬಾಲು ಸಂಕೋಚ ಬೇಡ."

"ನಿಮ್ಮ ತಂಗಿ ನನ್ನ ಜೀವನ ತುಂಬಬೇಕು."

## ೧೪

ಸೀತಾರಾಮು ಕಣ್ಣರಳಿಸಿ ಬಾಲುವಿನ ಮುಖ ನೋಡಿದ. ಕಿಂಚಿತ್ತೂ ವಿಚಲಿತನಾಗಲಿಲ್ಲ. ಅವನ ಮೌನ ಬಾಲುವನ್ನು ಮತ್ತಷ್ಟು ದುಃಖಕ್ಕೀಡುಮಾಡಿತು. ತನ್ನಂತೇ ಹೇಳಿಕೊಂಡ---

"ಹೌದು ಸೀತಾರಾಂ ನನ್ನ ಹಣೇಬರಹ ಎಲ್ಲಾ ನೀವು ಕಣ್ಣಾರೆ ಕಂಡಿದ್ದೀರಿ. ನನ್ನಂಥೋನಿಗೆ ಹೆಣ್ಣು ಕೊಡಬೇಕಾದ್ರೆ ಯಾರಾದ್ರೂ ಯೋಚಿಸ್ಲೇ ಬೇಕು. ಗಟ್ಟಿ ಮನಸ್ಸಲ್ಲ ನನ್ನದು. ಯಾಕಿಷ್ಟು ದುರ್ಬಲನಾದೇ ಅನ್ನೋದು ನನಗೇ ಗೊತ್ತಿಲ್ಲ. ನನ್ಮೇಲೆ ನಿಮ್ಮ ನಂಬಿಕೆ ಏನೇನೂ ಉಳಿದಿಲ್ಲ."

ಸೀತಾರಾಮು ನಿಧಾನವಾಗಿ ಹೇಳಿದ---

"ನಾನು ಹೇಳೋ ಮಾತನ್ನ ನೀವು ಸ್ವಲ್ಪ ಗಮನಕ್ಕೆ ತಗೋಬೇಕು ಬಾಲು."

"ಖಂಡಿತ ತಗೊಳ್ತೀನಿ ಸೀತಾರಾಂ. ಈಗ ಎರಡ್ತಿಂಗ್ಳಿಂದ ನೀವು ಹೇಳಿದ ಹಾಗೇ ಕೇಳ್ಕೊಂಡ ಇದ್ದೀನಲ್ಲ."

"ಹಾಗಾದ್ರೆ ಕೇಳಿ ಬಾಲು. ನೀವು ನನ್ತಂಗೀನ ಕೇಳೋದಿರ್ಲಿ, ನಾವೇ ನಿಮ್ಮನ್ನ ಕೇಳ್ಬೇಕಾಗಿತ್ತು. ಆದ್ರೆ ಎಲ್ಲಾ ನಮ್ಮನಸ್ಸಂತೆ ನಡೆಯೋಲ್ಲ. ನಮಗೂ ನಿಮಗೂ ತುಂಬಾ ವ್ಯತ್ಯಾಸ ಇದೆ ಬಾಲು. ನಾವೇನೇ ಅಂದ್ರೂ ಹಳ್ಳಿ ಜನ. ನನ್ತಂಗಿ ಪ್ರೈಮರಿ ಸ್ಕೂಲು ಮಾತ್ರಾ ಓದಿರೋದು. ಬೆಂಗ್ಳೂರಿನ ನಯ ನಾಜೂಕು ಏನೂ ಗೊತ್ತಿಲ್ಲ ಅವಳಿಗೆ. ಅದೂ ಅಲ್ದೆ ನಿಮ್ಮ ತಂದೆ-ತಾಯಿ ಅವರ ಅಂತಸ್ತಿಗೆ ಸರಿಯಾದ ನೆಂಟಸ್ತನ ಮಾಡ್ಲೇ ಬೇಕು. ಇರೋದು ನೀವು ಒಬ್ರೇ ಮಗ, ಒಳ್ಳೇ ಸೊಸೆ ಬರಬೇಕೂನ್ನೋ ಆಸೆ ಅವರಿಗಿರೋಲ್ವೆ? ನಮಗೇನಿದ್ರೂ ಹಳ್ಳಿ ನೆಂಟಸ್ತನವೇ ಸರಿ. ನಮ್ಮ ಪರಿಸ್ಥಿತಿ ಹೀಗಿರೋವಾಗ ನಾವಾದ್ರೂ ನಿಮ್ಮಲ್ಲಿ ಬಂದು ಕೇಳೋದು ಹೇಗೆ?"

"ಹಾಗಾದ್ರೆ ಈ ಆಸೆ ನಾನು ಬಿಟ್ಬಿಡ್ಲೇ ಸೀತಾರಾಂ?"

"ನೀವು ಹಾಗನ್ನಬಾರದು ಬಾಲು. ನಾನು ಹೇಳೋದಿಷ್ಟೆ. ನಿಮ್ಮ ತಂದೆ-ತಾಯಿಗೆ ನೀವೇ ಸರ್ವಸ್ವ. ಅವರದ್ದೆಲ್ಲಾ ನಿಮಗೇ. ಯಾವತ್ತೂ ಅವರ ಮನಸ್ಸಿಗೆ ವಿರೋಧವಾಗಿ ನಡೀಬೇಡಿ. ಮಕ್ಳು ಚೆನ್ನಾಗಿ ಬದುಕಿ ಬಾಳ್ಲಿ ಅನ್ನೋ ಆಸೆ ಅವರ್ಗಿರೊಲ್ವೆ? ಕಡೇತನಕ ಮಗನ್ನ ಸರಿಯಾಗಿ ನೋಡ್ಕೊಳ್ಳೊ ಅಂಥ ಸೊಸೆ ಬರಲೀನ್ನೋ ಆಸೆ ಇರೋಲ್ವೆ! ಹೆತ್ತೂ-ಸಾಕಿ ವಿದ್ಯೆ ಕಲಿಸಿದೋರಿಗೆ ಮದುವೆ ಮಾಡೋ ಅಧಿಕಾರಾನೂ ಇದೆ. ಹಿರಿಯೋರ ಮನಸ್ಸಿಗೆ ನೋವು ಮಾಡ್ಬೇಡಿ. ಇಷ್ಟೆ ನಾ ಹೇಳೋದು."

ಬಾಲು ಒಂದು ಗಳಿಗೆ ತಡೆದು ಹೇಳಿದ--



"ನೀವು ಒಂದೂ ಜಳ್ಳು ಮಾತು ಆಡೋಲ್ಲ ಸೀತಾರಾಂ, ನನಗ್ಗೊತ್ತು. ನೀವು ಅದೇ ರೀತಿ ನಡಕೋಳ್ತೀರಿ. ಒಂದ್ವೇಳೆ ನಮ್ಮ ತಂದೆ-ತಾಯಿ ಒಪ್ಪಿದ್ರೆ ಇದು ಆದೀತೆ ಸೀತಾರಾಂ?"

ಸೀತಾರಾಮು ಬಾಲುವಿನ ಕೈ ಹಿಡಿದು ಹೇಳಿದ—

"ಖಂಡಿತ ಬಾಲು! ಅವರೊಪ್ಪಿದರೆ ನಮ್ಮ ಪುಣ್ಯ ಅಂದ್ಕೋಳ್ತೀನೆ. ಆದ್ರೆ ಅವರನ್ನ ಕೇಳೋ ಧೈರ್ಯ ನನಗಿಲ್ಲ."

"ನೀವು ಕೇಳ್ಬೇಡಿ, ನಾನೇ ಕೇಳ್ಕೋಳ್ತೀನೆ. ಆದರೆ ನಿಮ್ಮ ತಂದೆ--ತಾಯಿ ಒಪ್ತಾರೆ ಸೀತಾರಾಂ?"

ಸೀತಾರಾಮು ಮೆಲ್ಲಗೆ ನಕ್ಕ—

"ಯಾಕೆ ಬಾಲು ಅಷ್ಟು ಸಂಶಯ?"

"ನನ್ನ ಹೊಲಸು ಪುರಾಣ ಅವರಿಗೆ ಗೊತ್ತಿಲ್ವೆ ಸೀತಾರಾಂ?"

"ಇಲ್ಲ ಬಾಲು, ನಾನು ಏನೂ ಹೇಳಿಲ್ಲ. ಕಾಹಿಲೆ ಆಗಿತ್ತು, ಹವ ಬದಲಾಯಿಸೋಕೆ ಬಂದಿದಾರೇಂತ ಹೇಳಿದೀನಿ. ಅಲ್ದೆ ಅಂಥ ಹೊಲಸು ಏನೂ ನಡೆದಿಲ್ಲಾಂತ ನಾನು ತಿಳಕೊಂಡಿದೀನಿ. ಅಲ್ವೆ ಬಾಲು?"

ಬಾಲು ಸರ್ರನೆ ಅವನ ಮುಖ ನೋಡಿದ---

"ಹೌದು ಸೀತಾರಾಂ ಹೌದು! ಅದು ನಿಮಗೆ ಹೇಗೆ ಗೊತ್ತು?"

"ನಿಮ್ಮ ಸ್ಥಿತಿ ನೋಡಿದಾಗಲೇ ತಿಳೀತು. ನಿಜವಾಗಿ ನಿಮ್ಮ ಅವಳ ಸಂಬಂಧ ಬೆಳೆದಿದ್ದರೆ ನೀವು ಅವಳಿಗಾಗಿ ಹೀಗೆ ಒದ್ದಾಡುತ್ತಿರಲಿಲ್ಲ. ಈ ಆಸೇನೂ ಇರ್ತಾ ಇರಲಿಲ್ಲ."

"ಹೌದು ಸೀತಾರಾಂ. ನೀವಂದದ್ದು ನಿಜ. ಆದ್ರೆ ನಿಮಗೆ ಇದೆಲ್ಲಾ ಹೇಗೆ ತಿಳಿಯುತ್ತೋ ನನಗ್ಗೊತ್ತಾಗೊಲ್ಲಾ!"

"ಹಾಗೇನಿಲ್ಲ ಬಾಲು. ಯಾವದೇ ಪದಾರ್ಥನಾದ್ರೂ ಆಸೆಪಟ್ಟು ನಾವು ತಂದ್ಕೊಡ್ಮೆ ಅದು ಕಳದ್ಹೋದ್ರೆ ವ್ಯಸನ ಆಗೇ ಆಗುತ್ತೆ. ಸ್ವಲ್ಪಾನಾದ್ರೂ ಅನುಭವಿಸಿದ್ರೆ ಅಷ್ಟು ವ್ಯಥೆ ಆಗೋಲ್ಲ. ನಿಮಗಾಗಿದ್ದು ಹಾಗೇ. ಅವಳು ನಿಮ್ಮ ಸುತ್ ಮುತ್ತ ಓಡಾಡಿದ್ಲು. ನೀವು ಅವಳನ್ನ ನೆಚ್ಕೊಂಡಿದ್ರಿ; ಆದ್ರೆ ಅವಳು ನಿಮ್ಮನ್ನ ನೆಚ್ಕೊಂಡಿರ್ಲಿಲ್ಲ. ನಿಮಗೆ ಕೈಗೆ ಬಂದದ್ದು ಬಾಯಿಗೆ ಬರಲಿಲ್ಲ. ಅದಕ್ಕೇ ಇಷ್ಟು ವ್ಯಥೆ. ಇನ್ನು ಮುಂದಾದ್ರೂ ನೀವು ಅದನ್ನೆಲ್ಲ ಯೋಚ್ನೆ ಮಾಡೋದನ್ನ ಬಿಟ್ಬಿಡಿ. ಸ್ಥಳ ಬದಲಾವಣೆಯಾದ್ರೆ ಸರಿಹೋಗ್ಬಹುದೂಂತಾನೆ ನಾನು ನಿಮ್ಮನ್ನ ಇಲ್ಲಿಗೆ ಕರಕೊಂಡ್ಬಂಡೆ."

"ನಿಜವಾದ ವಿಷಯ ನೀವು ತಿಳಕೊಂಡ್ಹಾಗೆ ನಮ್ಮ ತಂದೆ--ತಾಯಿ ತಿಳಿದಿಲ್ಲ ಸೀತಾರಾಂ. ಅವರು ತಪ್ಪು ತಿಳಿಯೋ ಹಾಗೆ ನಾನೇ ಮಾಡಿಕೊಂಡೆ. ಏನು ಮಾಡ್ಲಿ?"

"ಅದಕ್ಕಾಗಿ ಈಗ ವ್ಯಥೆ ಬೇಡ. ನಿಮ್ಮ ತಪ್ಪು ನೀವೇ ತಿಳಕೊಂಡಿದೀರಿ. ಮುಂದೆಲ್ಲ ಸರಿ ಹೋಗುತ್ತೆ."

"ಇಲ್ಲ ಸೀತಾರಾಂ. ನೀವೆ ನನ್ನ ತಿದ್ದಿದೀರಿ. ಮುಂದೂ ನೀವೇ ತಿದ್ದಬೇಕು. ನನ್ನ ಹೀಗೇ ಬಿಡೋದಿಲ್ಲ ಅಲ್ವೆ?"

ಸೀತಾರಾಮು ತುಂಬಾ ನಗುತ್ತಿದ್ದ---

"ಇಲ್ಲ ಬಾಲು. ಮೊದ್ಲು ನೀವು ನನ್ನ ಯಜಮಾನನ ಮಗನಾಗಿದ್ರಿ. ಈಗ ನನ್ನ ಭಾವಮೈದ್ನ! ನನ್ನ ತಂಗೀ ಗಂಡ. ನಾನು ಹೇಗೆ ಬಿಡ್ಲಿ ನಿಮ್ಮನ್ನ?"

ಬಾಲು ಸೀತಾರಾಮುವಿನ ಕೊರಳಿಗೆ ಕೈ ಬಳಸಿ ಜೋಕಾಲಿಯಾಡುತ್ತ ಹೇಳಿದ---

"ನಿಮ್ಮ ತಂಗೀನ ನಾನು ಯಾಕೆ ಮೆಚ್ಕೊಂಡೆ ಗೊತ್ತೆ ಸೀತಾರಾಂ?"

"ಇಲ್ಲ ಗೊತ್ತಿಲ್ಲ."

"ನಿಮ್ತಂಗಿ ರೂಪು ನಿಮ್ಹಾಗೇ ಮುದ್ದು ಮುದ್ದು. ಗುಣಾನೂ ನಿಮ್ಹಾಗೇ ಇರಬಹುದೂಂತ."

"ರೂಪು ಮುದ್ದುಮುದ್ದು. ಗುಣ ಪೆದ್ದುಪೆದ್ದು."

"ಇರಲಿ ಪರವಾಗಿಲ್ಲ ಸೀತಾರಾಂ. ನಾನು ಅಮ್ಮನಿಗೆ ಒಂದು ಕಾಗದ ಬರೀಬೇಕಲ್ಲಾ?"

"ಈಗಲೇ ಬರೀರಿ. ಪೋಸ್ಟಿಗೆ ಕಳಸ್ತೀನಿ."

ಬಾಲು ಪತ್ರ ಬರೆದು ಕೊಟ್ಟ. ಬರೆದದ್ದು ಕೆಲವೇ ಪಂಕ್ತಿಗಳು---

"ಅಮ್ಮಾ ನಾನೀಗ ತುಂಬಾ ಆರೋಗ್ಯವಾಗಿದ್ದೀನಿ. ಈ ಹಳ್ಳಿ ಬಲು ಸೊಗಸಾಗಿದೆ. ಈಗಲೇ ಬಿಟ್ಟು ಬರಲು ಮನವಿಲ್ಲ, ಆದರೂ ನಿನ್ನನ್ನು---ಅಣ್ಣನನ್ನು ನೋಡಬೇಕೆನಿಸಿದೆ. ಖಂಡಿತಾ ನೀವಿಬ್ಬರೂ ಇಲ್ಲಿಗೇ ಬರಲೇಬೇಕು. ಬಂದಾಗ ಉಳಿದದ್ದೆಲ್ಲಾ ಹೇಳುತ್ತೇನೆ. ಯಾವಾಗ ಬರುತ್ತೀರಿ ತಿಳಿಸಿ."

ಮಗನ ನೇರ ಮತ್ತು ಸರಳ ಪತ್ರ ನೋಡಿ ದಂಪತಿಗಳು ಕುಣಿದಾಡಿದರು. ಈಗಲೇ ಹಾರಿ ಹೋಗಬೇಕೆನ್ನುವಷ್ಟು ಆತುರ ರಾಜಮ್ಮನವರಿಗೆ. ಮನೆಯಲ್ಲಿ ಅಣ್ಣಪ್ಪನನ್ನು ತಂದು ಬಿಟ್ಟು ರಂಗಯ್ಯನವರು, ರಾಜಮ್ಮ ಶುಭದಿನದಲ್ಲಿ ಹೊರಟರು. ಹಿಂದಿನ ದಿನವೇ ನರಸಿಂಹರಾಜಪುರಕ್ಕೆ ಟೆಲಿಗ್ರಾಂ ಬಂದಿತ್ತು. ಸೀತಾರಾಮು ದಾನವಾಸದ ಹತ್ತಿರ ಹೋಗಿ ಕಾದಿದ್ದ. ಕಾರು ಅಲ್ಲಿ ತಲುಪಿದಾಗ ಮಧ್ಯಾಹ್ನ ಒಂದು ಗಂಟೆ. ಅಲ್ಲಿ ಮಗನನ್ನು ಕಾಣದೆ ರಾಜಮ್ಮ ಸ್ವಲ್ಪ ನಿರಾಶರಾದರು. ಆದರೂ ಸೀತಾರಾಮುವಿನ ಗೆಲುವು ಮುಖ ನೋಡಿ ಅವರು ಸಮಾಧಾನಪಟ್ಟರು.

ಹೊಸಕೆರೆ ಮುಖಾಂತರ ಕಾರು ಶೀಗವಾನಿ ಮುಟ್ಟಿದಾಗ ಒಂದೂವರೆ ಗಂಟೆ. ದೇವಸ್ಥಾನವನ್ನು ಬಳಸಿ ಕಾರು ಮನೆಯ ಬಲಬದಿಯ ಹಂಕಲಿಗೆ ಬಂದಿತು. ಚಪ್ಪರದ ಮೇಲೆ ನಿಂತು ನೋಡುತ್ತಿದ್ದ ಬಾಲು ಹಾರನ್ ಕೇಳಿದೊಡನೆ ಪುಟ್ಟ ಹುಡುಗನಂತೆ ದುಡುದುಡು ಉಪ್ಪರಿಗೆ ಇಳಿದು ಓಡಿದ. ಸದಾ ಉಲ್ಲನ್ ಸೂಟಿನಲ್ಲಿಯೇ ಕಾಣುತ್ತಿದ್ದ ಮಗನನ್ನು ಇಂದು ಸಾದಾ ಲುಂಗಿ ಪಂಚೆ ಶರಟಿನಲ್ಲಿ ಕಂಡರು ತಂದೆ-ತಾಯಿಗಳು. ಆದರೆ ಬಾಲು ಒಂದೂವರೆ ತಿಂಗಳಲ್ಲಿ ಮೈ ಕೈ ತುಂಬಿಕೊಂಡು ಹಿಂದಿನ ಹೊಲಸು ಚಿಂತೆ ಒಂದೂ ಇಲ್ಲದೆ ಗೆಲುವಾಗಿದ್ದಾನೆ. ಹುಡುಗನಂತೆ ಓಡಿ ಬಂದು ತಾಯಿಯನ್ನು ಕಾರಿನಿಂದ ಕೈ ಹಿಡಿದು ಇಳಿಸಿಕೊಂಡ ಬಾಲುವನ್ನು ನೋಡಿ ದಂಪತಿಗಳು ದಂಗುಬಡಿದು ಹೋದರು.

ಬೆಂಗಳೂರಿನಲ್ಲಿದ್ದಾಗ ಅವನು ಮನೆಯಲ್ಲಿರುತ್ತಿದ್ದುದೇ ಅಪರೂಪ. ಅಂತಹ ಹುಡುಗ ಈ ಹಳ್ಳಿಯಲ್ಲಿ ಎಷ್ಟು ಸುಖವಾಗಿದ್ದಾನಲ್ಲ---ಅನಿಸಿತು ಅವರಿಗೆ.

ಏನೋ ಒಂದು ಯಕ್ಷಿಣಿ ನಡೆದಂತೆ ಅವರಿಗೆ ದಿಗ್ಭ್ರಮೆ ಹಿಡಿಯಿತು. ತಾಯಿ ಮಾತಾಡುವ ಮೊದಲೇ ಬಾಲು ಹಲ್ಲು ಕಿರಿದ—

"ನಾನು ಹೇಗಿದ್ದೀನಮ್ಮ ಈಗಾ?"

ಪ್ರಯಾಣದ ಆಯಾಸದಿಂದ ಬಳಲಿದ ತಾಯಿ ಮೆಲ್ಲನೆಂದರು—

"ಚನ್ನಾಗಿದ್ದೀ ಕಣೊ ಮಗು. ಬಾ ಒಳಗ್ಹೋಗಾಣ."

ಬಾಲು ತಂದೆಯನ್ನು ಮಾತಾಡಿಸಿದ—

"ಮನೇಲಿ ಯಾರಿದಾರಣ್ಣ?"

"ನಿಮ್ಮ ದೊಡ್ಡಪ್ಪ ಇದಾರೆ ಕಣೋ"

ಬೆಂಗಳೂರಿನ ಇಂಜಿನಿಯರನ್ನ ಯಾವ ರೀತಿ ಉಪಚರಿಸಬೇಕೆಂಬ ಗೊಂದಲಕ್ಕೆ ಯಾರೂ ಬೀಳಲಿಲ್ಲ. ಸರಳತನದ ಹಳ್ಳಿಯ ಉಪಚಾರ ನಡೆಯಿತು. ಎಲ್ಲ ಹಿತ, ಮಿತ. ರಂಗಯ್ಯನವರು ಸೀತಾರಾಮುವನ್ನ ಬಾಯಿತುಂಬ ಹೊಗಳಿದರು. ಅವನಿಂದ ತಮ್ಮ ಮಗನಿಗಾದ ಉಪಕಾರ ನೂರು ಬಾರಿ ಹೇಳಿದರು. ಹೊಗಳಿಕೆ-ತೆಗಳಿಕೆಗೆ ಹಿಗ್ಗುವ-ತಗ್ಗುವ ಸ್ವಭಾವ ಆ ಸಂಸಾರದ್ದಲ್ಲ. ಕಡೆಯದಾಗಿ ನಂಜುಂಡಯ್ಯನವರು ಹೇಳಿದ್ದು ಒಂದೇ ಮಾತು-

"ಸೈ. ನಾವು ಖಡದದ್ದೆಂತದು! ಪಾಪ ಅವರ ಪಾಡಿಗೆ ಅವರಿದ್ರು."

ಬಾಲು ತಂದೆ-ತಾಯಿಯರನ್ನು ಕರೆದೊಯ್ದು ಹಳ್ಳಿಯನ್ನೆಲ್ಲಾ ತೋರಿಸಿಕೊಂಡು ಬಂದ. ಹಳ್ಳಿಯ ವಾತಾವರಣ, ಆ ಸಾತ್ವಿಕ ಜನರ ಸಹವಾಸ, ಅಲ್ಲಿಯ ಹವೆಯ ಪರಿಣಾಮೇ ಹುಡುಗನ ಮೇಲಾಗಿದೆಯೆಂದು ಅವರಿಬ್ಬರೂ ಪೂರ್ಣ ಸಮಾಧಾನಪಡೆದರು.

ಗಂಗೆ, ಗಿರಿಜೆಯರು ರಾಜಮ್ಮನವರಿಗೆ ಮನ ಮುಟ್ಟಿ ಉಪಚರಿಸುವರು. ಅವರಿಗೆ ಆ ಹುಡುಗಿಯರನ್ನು ಎಷ್ಟು ನೋಡಿದರೂ ಸಾಲದು. 'ಬೆಂಗಳೂರಲ್ಲಿ ಔಷಧಿಗೆ ಬೇಕೆಂದರೂ ಇಂಥ ಒಂದು ಹುಡುಗಿ ಸಿಗೋಲ್ಲವಲ್ಲ?' ಎಂದು ಯೋಚಿಸಿದರು ರಾಜಮ್ಮ. ಗಿರಿಜೆ ಸೀತಾರಾಮುವಿನ ಹೆಂಡತಿಯಾಗುವವಳೆಂದು ತಿಳಿದಾಗ ಅವರು ಅವನೊಡನೆ ಅಂದರು ನಗುತ್ತ—

"ಸೀತಾರಾಮು ನಿನ್ನ ಅಳಿಯನ್ನ ಮಾಡ್ಕೊಳ್ಳೋಣಾಂದ್ರೆ ನನಗೆ ಹೆಣ್ಮಕ್ಳೇ ಇಲ್ವಲ್ಲಪ್ಪ, ಅಲ್ದೆ ನಿನಗೆ ಬಂಗಾರ್ದಂತ ಹೆಂಡ್ತಿ ಗೊತ್ಮಾಡ್ಕೊಂಡಿದ್ದಿ. ಮದುವೆಯಾಯ್ತೂಂದ್ರೆ ನೀ ನಮ್ಮನ್ನ ಬಿಟ್ಟು ಹೊರಟ್ಹೋಗ್ತೀಯಪ್ಪ, ನಿನ್ನ ಬಿಟ್ಕೊಡೋಕೆ ನನಗೆ ಇಷ್ಟವೇ ಇಲ್ಲ."

ಸೀತಾರಾಮು ಗಂಭೀರವಾಗಿ ನಕ್ಕ—

"ನನಗೂ ಹಾಗೇ ಅನ್ನಿಸ್ತಾ ಇದೆ ಅಮ್ಮ. ಜೊತೆಲೇ ನನ್ನದೊಂದು ಮಾತು ಕೇಳಬಹುದೆ?"

"ಯಾಕಪ್ಪ ಸೀತಾರಾಮು ನೀ ಹೀಗ್ಮಾತಾಡ್ತಿ? ನೀ ನನ್ನ ಮಗೂನ ಬದುಕಿಸಿಕೊಟ್ಟಿದ್ದೀಯಲ್ಲಪ್ಪ ನಾವೇನ್ ಮಾಡಿದ್ರೆ ಮುಗಿದೀತು ಹೇಳು ನಿಂಗೆ?"

"ಅಮ್ಮ ಇದು ಬಲವಂತದ ಮಾತಲ್ಲ ಒಂದು ಪ್ರಾರ್ಥನೇಂತ ಇಟ್ಕೊಳ್ಳಿ. ನಮ್ಮ ಗಂಗಾನ್ನ ನಿಮ್ಮ ಸೊಸೆ ಮಾಡ್ಕೊಳ್ಳಿ. ಆಗ ನಾನೂ ಬೇಕಾದ್ರೆ ನಿಮ್ಮನೇಲೇ ಇದ್ಬಿಡ್ತೀನಿ."



ರಾಜಮ್ಮನವರು ಅವನ ಮುಖ ಚೆರಗಿನಿಂದ ನೋಡಿದರು. ಅವರ ಮನದಲ್ಲಿ ಬಂದ ವಿಚಾರ ವಿದು! ಆದರೆ ಸೀತಾರಾಮು ಬಾಲುವಿನ ಕಥೆಯನ್ನೆಲ್ಲ ಕೂಲಂಕುಷವಾಗಿ ಬಲ್ಲವನು. ಕ್ಷಮಾಶೀಲ ಹುಡುಗ. ತಮ್ಮ ಮಗನನ್ನು ಸಂತೈಸಿ ಹೊಸ ಜೀವ ತಂದುಕೊಟ್ಟವನು. ಆದರೆ, ಈ ಶೀಲಭ್ರಷ್ಟ ಹುಡುಗನಿಗೆ ತನ್ನ ತಂಗಿಯನ್ನು ಕೊಡುತ್ತೇನೆನ್ನುವ ಔದಾರ್ಯ ಹಿರಿದು. ಅವನು ನಿಜವಾಗಿ ಹೇಳು-ತ್ತಿದ್ದಾನೋ, ವಿನೋದ ಮಾಡುತ್ತಿದ್ದಾನೋ ಅವರಿಗೆ ತಿಳಿಯಲೊಲ್ಲದು. ಆದರೂ-- ಸೀತಾರಾಮು ಎಂದೂ ಪೊಳ್ಳು ಮಾತಾಡುವವನಲ್ಲವೆಂಬ ಭರವಸೆ. ನಿಧಾನವಾಗಿ ಮಾತಾಡಿದರು--- "ಅವನ ಅವಸ್ಥೆ ಎಲ್ಲ ನಿನಗೆ ಗೊತ್ತಪ್ಪ. ನಿನ್ನ ಮನಸ್ಸು ದೊಡ್ಡದು. ಸಾಧ್ಯವಾದಷ್ಟು ಬೇಗ ಅವನಿಗೆ ಮದುವೆ ಮಾಡಬೇಕೂಂತಾನೆ ಇದ್ದೀವಿ. ಆದರೂ ನಿನ್ನ ತಂಗಿ ಹೂವಿನಂಥ ಹುಡುಗಿ. ಅರಗಿಣಿ ಹಾಗಿದಾಳೆ. ಯಾವ ಬಾಯಲ್ಲಿ ಕೇಳಲಪ್ಪಾ ಇಂಥಾ ಹುಡುಗನಿಗೆ ಕೊಡೂಂತ?"

ಸೀತಾರಾಮು ಭರವಸೆಯ ಮಾತಾಡಿದ---

"ಅಮ್ಮ ನೀವು ಸುಮ್ನೆ ಗಾಬರಿ ಮಾಡ್ಕೊಂಡಿದೀರಿ; ಬಾಲುಗೆ ಏನೂ ಆಗಿಲ್ಲ. ಈಗ ಎಲ್ಲ ಸರಿಯಾಗೆ ಇದಾರೆ. ಆದರೆ ನನ್ನ ತಂಗಿ ವಿದ್ಯಾವಂತೆಯಲ್ಲ. ನೋಡೇ ಇದ್ದೀರಲ್ಲ. ಶೀರಾ ಹಳ್ಳಿಹುಡುಗಿ. ಅದರಿಂದ ನಮಗೂ ಕೇಳೋಕೆ ಹಿಂಜರಿಕೆ"

ರಂಗಯ್ಯನವರೂ, ಬಾಲು ಮೇಲೆ ಬಂದುದರಿಂದ ಸೀತಾರಾಮು ಮಾತು ಬದಲಿಸಿದ.

## ೧೫

ರಾಜಮ್ಮನವರು ಕೆಳಗಿಳಿದು ಹೋದಮೇಲೆ ಸೀತಾರಾಮು ಬಾಲುವಿನ ಕೈ ಕುಲುಕಿದ.

"ಬಾಲು ನಿಮ್ಮ ಕೆಲಸ ನಾನೇ ಮಾಡಿದ್ದೇನೆ. ನಿಮಗೆ ಶುಭಕಲ್ಯಾಣ."

ಬಾಲು ಕನವರಿಸಿದ—

"ನಿಜವಾ ಸೀತಾರಾಂ?"

"ನಿಜ! ನಿಜ!! ನಿಜ!!!"

ಸಂತೋಷದ ಅತಿರೇಕದಿಂದ ಬಾಲು ಮಂಚದ ಮೇಲುರುಳಿ ಕಣ್ಣು ಮುಚ್ಚಿದ. ಮರುದಿನವೇ ರಂಗಯ್ಯನವರು ಹೊರಡಬೇಕಿತ್ತು. ಮಧ್ಯ ಮದುವೆಯ ಪ್ರಸ್ತಾಪ ಬಂದು ಪ್ರಯಾಣ ಮತ್ತೆ ಎರಡು ದಿನ ಮುಂದೆ ಸರಿಯಿತು.

ಒಂದು ದಿನವೆಲ್ಲಾ ಯೋಚಿಸಿ ರಂಗಯ್ಯನವರು ಒಂದು ಇತ್ಯರ್ಥಕ್ಕೆ ಬಂದರು. ಮನಸ್ಸು ಹಗುರವಿತ್ತು ಮಡದಿ, ಮಗ ಮೆಚ್ಚಿಕೊಂಡ ಹುಡುಗಿ. ಪವಿತ್ರ ಮನೆತನ. ಎಲ್ಲಕ್ಕಿಂತ ಹೆಚ್ಚಾಗಿ ತಮ್ಮ ಮಗನ ಬದುಕನ್ನೇ ಬೆಳಕು ಮಾಡಿದ ಸಂದರ್ಭ.

ಮತ್ತೆ ಎರಡೇ ದಿನಗಳಲ್ಲಿ ಮದುವೆ ನಿಶ್ಚಿತವಾಗಿ ಲಗ್ನಪತ್ರಿಕೆ ಶಾಸ್ತ್ರವೂ ನಡೆಯಿತು. ಮಾರ್ಗಶಿರ ಬಹುಳದಲ್ಲಿ ಮದುವೆ ಇತ್ತು. ಅಲ್ಲಿಯ ವರೆಗೆ ರಂಗಯ್ಯನವರು ಮಾಡಬೇಕಾದ ಏರ್ಪಾಟುಗಳು ಬಹಳವಿತ್ತು. ಬಾಲು ಮಾತ್ರ ಈಗಲೇ ಬೆಂಗಳೂರಿಗೆ ಬರುವುದಿಲ್ಲವೆಂದ. ಬಾಯಿ, ಸಿಹಿ ಮಾಡಿಕೊಂಡು ರಂಗಯ್ಯನವರು, ರಾಜಮ್ಮ ಬೆಂಗಳೂರಿಗೆ ಹಿಂದಿರುಗಿದರು.

ಶೀಗವಾನಿ ಕೊಂಪೆಯ ಗಂಗೆಗೆ ಬೆಂಗಳೂರಿನ ಇಂಜಿನಿಯರ್ ವರ ದೊರೆತಿದ್ದು ಒಂದು ಅಚ್ಚರಿಯ ಸಂಗತಿ. ಹದಿನೈದು ದಿನಗಳಿಂದ ಒಳಗಿನ ಅಪ್ರಬುದ್ಧ ಚಿಂತನೆಗಳಿಂದ ತುಯ್ಯಲಾಡುತ್ತಿದ್ದ ಗಂಗೆಯ ಹೃದಯ ಈಗ ಊಹಾತೀತ ಸೀಮೆಯಲ್ಲಿ ಸಂಚರಿಸಿತು. ದೀಪಾವಳಿಯ ದಿನದಿಂದ ಅವಳು ಬಾಲುವಿಗೆ ಮುಖ ತೋರಿಸಿರಲಿಲ್ಲ. ಎದುರಿಗೆ ಕಂಡರೂ ಅವನ ದೃಷ್ಟಿಯನ್ನೆದುರಿಸುವುದು ಅವಳಿಂದ ಅಸಾಧ್ಯವಿತ್ತು.

ಮದುವೆ ನಿಶ್ಚಿತವಾದ ಮೇಲೆ ಹುಡುಗಿಯರಿಬ್ಬರೂ ಹರುಷದ ಹಕ್ಕಿಗಳಾದರು. ಮುಂದೆ ಬೆಂಗಳೂರಲ್ಲಿ ಇಬ್ಬರೂ ಜೊತೆಯಾಗಿರಬಹುದೆಂಬ ಕಲ್ಪನೆಯೇ ಅವರಿಬ್ಬರನ್ನೂ ಅರಳಿಸಿತು.

ಜೋಡು ಮದುವೆಗಳ ಸಂಭ್ರಮ ಮೂರು ಹಳ್ಳಿಗಳನ್ನು ಕುಣಿಸಿತು. ಹೊಸಕೆರೆ, ಮಡವತ್ತಿ, ಶೀಗವಾನಿ ಹೆಂಗಸರಿಗೆ ಕೈತುಂಬ, ಮೈತುಂಬ ಕೆಲಸ.

ಈಗಲಾದರೂ ಒಂದು ದಿನ ಗಂಗೆಯನ್ನು ಮಾತನಾಡಿಸಬೇಕೆಂದು ಬಾಲುವಿಗೆ ಚಪಲ. ಗಂಗೆ ಮಾತ್ರ ಅವನ ನೆರಳು ಕಂಡೊಡನೆ ಮಿಂಚಿನಂತೆ ಸರಿದು ಹೋಗುತ್ತಿದ್ದಳು. ಬಾಲು ಸೀತಾರಾಮುವಿಗೇ ಮೊರೆಹೊಕ್ಕ.

"ಒಂದೇ ಒಂದು ಮಾತಾಡೋಣವೆಂದರೂ ನಿಮ್ಮ ತಂಗಿ ಎದುರಿಗೇ ಬರೋಲ್ಲ ಸೀತಾರಾಂ. ನಾನಿನ್ನೂ ಸರಿಯಾಗಿ ನೋಡೇ ಇಲ್ಲ."

ಸೀತಾರಾಮು ಮೆಲ್ಲನೆ ಅವನ ಭುಜ ಸವರಿದ.

"ಇನ್ನು ಕೆಲವೇ ದಿನ ಬಾಲು. ಅಮೇಲೆ ಅವಳು ನಿಮ್ಮ ಮುಂದೇ ಇರ್ತಾಳೆ. ಈ ಹಳ್ಳಿ ಹುಡುಗೀರಿಗೆ ಇದೆಲ್ಲಾ ಅಭ್ಯಾಸವಿಲ್ಲ. ಅದೂ ಅಲ್ಲೆ ಬಾಲು ಈಗ್ಲೆ ಹತ್ರ ಹೋದರೆ ಆಮೇಲೆ ಸಪ್ಪೆಯಾಗುತ್ತೆ. ಸ್ವಲ್ಪ ತಡೆದುಕೊಳ್ಳಬೇಕು ನೀವು."

ಅವನಿಗೆ ನಾಚಿಕೆಯಾಯಿತು. ಮೆಲ್ಲಗೆ ಅವನೆಂದ—

"ನೀವನ್ನುವದು ನಿಜ ಸೀತಾರಾಂ. ದಿನದಿನ ನಿಮ್ಮನ್ನ ನೋಡಿಯೂ ನನ್ನದು ತುಂಬಾ ಆತುರ-ನಿಮ್ಮ ಹೆಂಡತಿಯಾಗೋ ಹುಡುಗಿ ನೀವು ಬಯಸಿದ ಗಳಿಗೆಯಲ್ಲಿ ನಿಮ್ಮ ಕೈಗೆ ಸಿಕ್ಕುತ್ತಾಳೆ. ಆದರೂ ನೀವು ಬಹಳ ಸಂಯಮಿಗಳು. ಒಂದು ದಿನಾನಾದ್ರೂ ನೀವು ಮೀರಿ ನಡೆಯೋಲ್ಲಾ. ಹೀಗಿರೋದು ತುಂಬಾ ಕಷ್ಟ."

ಸೀತಾರಾಮು ಮುಗುಳು ನಗೆಯಿಂದ ಮುಖಬಾಗಿದ—

"ಕಷ್ಟವೇನೂ ಇಲ್ಲ ಬಾಲು. ತುಂಬಾ ಸುಲಭ. ಕದ್ದು ತಿನ್ನೋದಕ್ಕಿಂದ ಎಲ್ಲರಂತೆ ನಮ್ಮ ಪಾಲಿಗೆ ಬಂದಾಗ ತಿನ್ನೋದು ರುಚಿಯಲ್ವೆ? ವಸ್ತು ನಮ್ಮದೆ ಇರೋವಾಗ ಕಳ್ಳತನ ಯಾಕೆ?".

ಬಾಲು ಅವನ ಮುಖ ನೋಡಿದ–

'ಇದರಲ್ಲಿ ವ್ಯಂಗ್ಯ ಇದೆಯೇ?'

ಇಲ್ಲ ಸೀತಾರಾಮು ನೀತಿಯಂತೆ ಮಾತಾಡಿದ್ದ. ತಾನು ಮಾಡಿದ ಕಳ್ಳತನಕ್ಕೆ ತನಗೆ ಪ್ರಾಯಶ್ಚಿತ್ತವಾಗಿತ್ತು. ಬಾಲುವಿನ ಮೌನ ನೋಡಿ ಸೀತಾರಾಮು ನಗುತ್ತ ಅವನ ಬೆನ್ನು ತಟ್ಟಿದ—

"ಹೆಚ್ಚೊಂದ್ರೆ ಇನ್ನು ಹದಿನೈದೇ ದಿನ ಬಾಲು, ಅಲ್ಲೀವರೆಗೆ ತಡಕೊಳ್ಳಿ"

"ಆಯ್ತು ಸೀತಾರಾಂ. ನೀವು ಹೇಳಿದ ಹಾಗೆ."

ಮುಂದೆ ಹದಿನೈದು ದಿನಗಳಲ್ಲಿ ವೈಭವದ ಜೋಡು ಮದುವೆಗಳು. ನರಸಿಂಹರಾಜಪುರ, ಮತ್ತೆ ನಾಲ್ಕಾರು ಹಳ್ಳಿಗಳ ಜನ ಮದುವೆಯಲ್ಲಿ ಪಾಲ್ಗೊಂಡರು. ಅಬ್ಬರ, ಆಡಂಬರಗಳಿಲ್ಲದಿದ್ದರೂ ಶಾಸ್ತ್ರ ಸಂಪ್ರದಾಯಗಳಿಗೆ ಕಡಿಮೆಯಾಗಲಿಲ್ಲ. ಸೀತಾರಾಮು ಕನ್ನದಾಗಿದ್ದ ನಾಲ್ಕು ಸಾವಿರ ಈಗ ಸದ್ವಿನಿಯೋಗ ಮಾಡಿದ.

ಬೆಂಗಳೂರು ಬೀಗರು ಮೂಗಿನ ಮೇಲೆ ಬೆರಳಿಟ್ಟರು. ಗಂಗೆ, ಗಿರಿಜೆಯರು ಮಂಗಳ ಲಕ್ಷ್ಮಿಯರಂತೆ ಬೆಳಗಿದರು. ಬೀಗರ ಔತನದ ದಿನ ರಾಜಮ್ಮನವರು ತಮ್ಮ ಬೀಗಿತ್ತಿಗೆ ಹೇಳಿದರು–

"ಬಂದಮ್ನೋರೆ ನೀವು ನಿಮ್ಮ ಮಗಳಿಗೆ ಏನು ಕೊಡದಿದ್ರೂ ಚಿಂತೆಯಿಲ್ಲ, ವರುಷಕ್ಕೆ ಎರಡು ಜಾಡಿ ಈ ಮಾವಿನ ಮಿಡಿ ಉಪ್ಪಿನಕಾಯಿ ಹಾಕಿ ಕಳಿಸಿಕೊಡಿ."

ಎಲ್ಲಾ ಖೊಳ್ಳನೆ ನಕ್ಕರು. ಬಂದಮ್ಮನವರು ಮೆಲ್ಲನೆಂದರು–

"ನಾಚಿಕ್ಕೇಡು ಇದು, ಯಾವ ದೊಡ್ಡ ಸಂಗ್ತೀ-ನಮ್ಮೂರಾಗೆ ಮಾವಿನಕಾಯಿಗೆ ಬರವೇ? ಹಂಗಂತ ನಿಮ್ಮೂರಾಗೆ ನಗ್ತಾರೋ ಏನ್ಕತೆಯೋ?"

ರಂಗಯ್ಯನವರ ಅಣ್ಣ ಉಪ್ಪಿನಕಾಯಿ ಕಚ್ಚಿ ಲೊಚ್ಚೆ ಹೊಡೆದರು–

"ತಾಯೀ, ನಿಮ್ಹುಡುಗೀನ ನಮ್ಮ ಹುಡುಗ ಮೆಚ್ಕೊಂಡದ್ದು ಯಾಕೇನ್ನೊ ಗುಟ್ಟು ನನಗೀಗ ತಿಳೀತು."

ಬಂದಮ್ಮನವರು ತಬ್ಬಿಬ್ಬಾಗಿ ಅವರ ಮುಖ ನೋಡಿದರು. ಉಳಿದವರೂ ಕುತೂಲಹದಿಂದ ಅವರ ಕಡೆ ನೋಡುತ್ತಿದ್ದಾರೆ. ಶ್ರೀನಿವಾಸಯ್ಯನವರು ನಿಧಾನವಾಗಿ ಅಂದರು--

"ಮತ್ತೇನಿಲ್ಲ ನೋಡಿ; ನಮ್ಮ ಬಾಲು ಇಲ್ಲಿಗೆ ಬಂದ ದಿನಾನೇ ನೀವು ಅವನಿಗೆ ಈ ಉಪ್ಪಿನಕಾಯಿ ಹಾಕಿರಬೇಕು. ಅದಕ್ಕೇ ನಮ್ಮ ಹುಡುಗ ಇಲ್ಲಿ ಬೇರೂರಿಬಿಟ್ಟ. ಈಗ ಕಿತ್ತರೂ ಬರಲೊಲ್ಲ. ನೀವೀಗ ಅಳಿಯನ್ನ ಹೊರಡಿಸಬೇಕೂಂದ್ರೆ ಜೊತೇಲಿ ಉಪ್ಪಿನಕಾಯಿ ಹೊರಟ್ರೇನೇ!"

ಚಪ್ಪರವೆಲ್ಲ ಹ್ಹೊ ಹ್ಹೊ ಹ್ಹೊ! --ಎಂದು ನಕ್ಕಿತು. ರಂಗಯ್ಯನವರು ಮೆಲ್ಲನೆಂದರು--

"ಅಣ್ಣಯ್ಯ. ಈ ಉಪ್ಪಿನಕಾಯಿ ನೆವದಾಗ್ಲೆ ನೀನೂ ಎಲ್ಲಾದ್ರೂ ಇಲ್ಲೇ ಕೂತ್ಬಿಟ್ಟೀಯ, ನಿಂಗ್ಯಾವ್ದೂ ಹೆಣ್ಣಿಲ್ಲಪ್ಪ ಇಲ್ಲಿ!"

ನಗೆಯ ಹುಯ್ಲಿನಲ್ಲೇ ಮದುವೆ ಜರುಗಿತು. ಮತ್ತೆ ಎರಡನೆಯ ದಿನಗಳಲ್ಲೇ ನಿಷೇಕದ ಶಾಸ್ತ್ರ. ಸೀತಾರಾಮುವಿಗೆ ಹೊಸಕೆರೆಯ ಮನೆ. ಬಾಲುವಿಗೆ ಇದೇ ಮನೆ, ಇದೇ ಉಪ್ಪರಿಗೆ, ಇದೇ ಮಂಚ. ಹಳ್ಳಿಯ ಸಂಪ್ರದಾಯಗಳು ಒಂದೂ ಬಿಡಲೊಲ್ಲರು. ತೋಟದ ಜಂಬೂಫಲಗಳು, ಬಗೆಬಗೆಯ ಲಡ್ಡುಗೆಗಳು ಸಾಲುಸಾಲು ವಿರಾಜಿತವಿದ್ದವು.

ಹಳ್ಳಿಯ ಹೆಣ್ಣು ಮಕ್ಕಳೇ ಸಜ್ಜೆಮನೆಯನ್ನು ಅಲಂಕರಿಸಿದ್ದರು. ಅದೇ ಏಕಪತ್ನೀವ್ರತಸ್ಥ ಕೋದಂಡರಾಮ ಅಲ್ಲೇ ಇದ್ದಾನೆ. ಹಾಲು, ಜೇನು, ಸಕ್ಕರೆ, ಕರ್ಪೂರ ವೀಳ್ಯ ಎಲ್ಲ ಸುಸಜ್ಜಿತ.

ಬೆಂಗಳೂರಲ್ಲಿದ್ದಾಗ ಗಳಿಗೆ ಕೈಗೆ ಸಿಕ್ಕದ ಬಾಲು ಈಗ ತಾಯಿ ಹೇಳಿದಂತೆ ಕೇಳಿ ಮದುವೆಯ ಎಲ್ಲಾ ಕಲಾಪಗಳಲ್ಲಿಯೂ ನಗುನಗುತ್ತ ಸಹಕರಿಸಿದ. ಹೆತ್ತಹೊಟ್ಟೆ ತಂಪಾಯಿತು.

ರಾತ್ರಿ ಸಜ್ಜೆಮನೆಯ ಕಲಾಪಗಳು ಮುಗಿದು ಮುತ್ತೈದೆಯರು ಬಾಗಿಲೆಳೆದುಕೊಂಡು ಉಪ್ಪರಿಗೆ ಇಳಿದರು. ಕೆಳಗಡೆ ಇನ್ನೂ ಗದ್ದಲ ನಡದೇ ಇತ್ತು.

ಈ ವರೆಗೆ ಅವನು ಗಂಗೆಯೊಡನೆ ಒಂದೂ ಮಾತಾಡಿರಲಿಲ್ಲ. ಮದುವೆಯಲ್ಲಿ ಒಂದೆರಡು ಮಾತಾಡಿದರೂ ಅವಳು ಉತ್ತರ ಕೊಟ್ಟಿರಲಿಲ್ಲ. ಬಾಲು ಮೆಲ್ಲನೆ ಬಾಗಿಲ ಅಗುಳಿ ಹಾಕಿ ಮಂಚದಲ್ಲಿ ಬಂದು ಕುಳಿತ. ಜರಿಯ ಪಚ್ಚಾಂಬರ, ಮಂಗಲ ದ್ರವ್ಯಗಳು, ಗಂಡನ ಮನೆಯ ಸಿಗಿ ಸಿಗಿ ಆಭರಣಗಳಿಂದ ಭೂಷಿತೆಯಾದ ಗಂಗೆ ಬಾಗಿಲ ಬದಿಯಲ್ಲಿ ಮೈತುಂಬ ಸೆರಗು ಹೊದೆದು ಮುಖಬಾಗಿ ನಿಂತಿದ್ದಾಳೆ. ಆ ಚಿಕ್ಕ ಕೋಣೆಯಲ್ಲಿ ಪೆಟ್ರೊಮ್ಯಾಕ್ಸ್ ಪ್ರಕಾಶ ತುಂಬಿ ಸೂಸಿತು. ಧೂಮಕಡ್ಡಿಯ ಧೂಮ ಬಳಕುತ್ತ ಮೇಲೇರಿ ಕೋಣೆ ತುಂಬೆಲ್ಲ ಪಾರುಪತ್ಯ ಮಾಡಿತು. ಪನ್ನೀರು ಚಿಮುಕಿಸಿದ ಸುಪ್ಪತ್ತಿಗೆ ನವದಂಪತಿಗಳನ್ನು ಆಹ್ವಾನಿಸುತ್ತಿದೆ- ಈ ಎಲ್ಲ ಸಂಭ್ರಮ ತಮಗಾಗಿ ಕಾದಿದೆ. ಆದರೆ ಇಬ್ಬರೂ ಮೌನವಾಗಿ ದೂರ ದೂರ ನಿಂತಿದ್ದಾರೆ.



ಎರಡು ತಿಂಗಳಿಂದ ಅವಳಿಗಾಗಿ ಹಂಬಲಿಸಿದವನು ಬಾಲು. ತಾಪದಿಂದ ಬೆಂದ ಅವನ ಚೇತನಕ್ಕೆ ಶೀಲಧಾರೆಯಿಂದ ತಂಪೆರೆದವಳು ಅವಳು. ಒಬ್ಬರಿಗೊಬ್ಬರು ಹೇಳಿಕೊಳ್ಳುವುದು ಖಂಡುಗವಿದೆ. ಮೌನಮುದ್ರೆ ಒಡೆಯುವದು ಹೇಗೆ?

ಪೆಟ್ರೊಮ್ಯಾಕ್ಸಿನ ಪ್ರಖರ ಬೆಳಕಿನಲ್ಲಿ ಬಾಲು ತನ್ನ ಮನದನ್ನೆಯನ್ನು ಸರಿಯಾಗಿ ನೋಡಿದ.

'ಗಂಗಾ! ಎಂತಹ ಪಾವನ ನಾಮ. ಪಾಪ ನಿವಾರಿಣೆ! ತಾಪಹಾರಿಣಿ ಗಂಗಾ. ಹೌದು! ಆ ಕೋದಂಡ ರಾಮನ ಹೆಂಡತಿ ಸೀತೆಯಂತೇ ನಿಂತಿದ್ದಾಳೆ ಗಂಗಾ.'

'ಹಾಲು ಆರುತ್ತಿದೆ. ಅದನ್ನ ಬೇಗ ಗಂಡನಿಗೆ ಕೊಡಬೇಕು'– ಎಂಬ ಆತಂಕ ಗಂಗೆಗೆ. ಮುಂದೆ ಹೆಜ್ಜೆ ಇಡಲು ನಾಚಿಕೆ. ಬಾಲು ಇನ್ನು ತಡೆಯದಾದ. ಮೆಲ್ಲನೆ ಹೋಗಿ ಅವಳ ಬಲಗೈ ಹಿಡಿದು...

"ಗಂಗಾ!"– ಎಂದ ಬಹು ಮೃದುವಾಗಿ.

ಅಷ್ಟೇ ಕೋಮಲವಾಗಿ ತಲೆ ಎತ್ತಿ ಗಂಡನನ್ನು ತೀರಾ ಹತ್ತಿರದಲ್ಲಿ ನೋಡಿದಳು ಗಂಗೆ.

ಅದೆ ಗಳಿಗೆಯಲ್ಲಿ ಅವನಿಗೆ ಚಿತ್ರಾಳ ನೆನಪು. ಮನದನ್ನೆಯ ಮುಖ ನೋಡಿದ.

'ಅದು ಪೌಡರು, ರೋಸ್, ಲಿಪ್‌ಸ್ಟಿಕ್ ಮುಖ. ಇದು ಕೇದಗೆ ರಾಗದ, ತಿಳಿಗೆಂಪಿನ ತುಟಿಯ ಸಿಂಧೂರ-ಕುಂಕುಮ ಶೋಭಿತ ಮುಖ.'

ಬೆರಳು ಸವರಿದ. ಚಿತ್ರಾಳದು ನೀಳ ಕೋಮಲ ಬೆರಳುಗಳು. ರಂಗು ಬಳಿದ ಉದ್ದನ್ನ ಉಗುರು-

ಇವಳದು ಮುಂಡಗಿನ ಸುಳಿಬೆರಳುಗಳು.

ಬಾಲುವಿಗೆ ಮೈ 'ಜುಂ' ಎಂದಿತು. ತಲೆ ಕೊಡವಿಕೊಂಡ. 'ಹುಷ್ ರಾಮ! ಈಗೇಕೆ ಅವಳ ನೆನಪು! ಈಗ ಅವಳು ಎಲ್ಲಿ ಯಾರ ತೋಳಿನಲ್ಲೋ!'

ತಲೆ ಚಿಟ್ಟೆಂದಿತು. ಬಾಲುವಿಗೆ ಎರಡೂ ಕೈಯಲ್ಲೂ ಗಂಗೆಯ ಬಲಗೈ ತೆಗೆದು ತನ್ನ ಎದೆಗೆ ಒತ್ತಿ ಹಿಡಿದ. ಅವನ ಎದೆ ಢಡಕ್-ಢಡಕ್ ಅನ್ನುತ್ತಿದ್ದುದು ಅವಳ ಕೈಯಿಗೆ ತಿಳಿಯಿತು. ಮೆಲ್ಲನೆ ಕೈ ಬಿಡಿಸಿಕೊಂಡು ಬಾಗಿ ಅವನ ಪಾದ ಸ್ಪರ್ಶಿಸಿದಳು. ಅವನಿಗೆ ವಿಚಿತ್ರವೆನಿಸಿತು. ಮೌನವಾಗಿ ಅವನ ಕೈ ಹಿಡಿದು ಮಂಚದಲ್ಲಿ ಕೂಡಿಸಿ ಹಾಲು ಕೊಟ್ಟಳು. ಬಾಲು ಕೂಸಿನಂತಾಗಿದ್ದ. ಮಡದಿ ಕೊಟ್ಟ ತಾಂಬೂಲ ಬೇಡವೆನ್ನಲಿಲ್ಲ. ಅವಳೂ ತಾಂಬೂಲ ಸವಿದಳೆಂದು ಅವಳ ಅಧರಗಳು ತಿಳಿಸಿದವು. ಅವಳ ಕರ್ತವ್ಯ ಮುಗಿಯಿತು. ಪಕ್ಕದ ಕೋದಂಡರಾಮ ಸೀತೆಯರಿಗೆ ಕರಜೋಡಿಸಿ ಶಿರಬಾಗಿದಳು. ಮತ್ತೆ ಅಲ್ಲೇ ಸೀತೆಯ ಬಗಲಲ್ಲಿ ನಿಂತಳು ಮುಖಬಾಗಿ.

ಬಾಲು ಎಡಗೈಯಿಂದ ಪೆಟ್ರೊಮ್ಯಾಕ್ಸ್ ದೀಪವನ್ನು ಇಳಿಸಿದ. ಆ ಉಜ್ವಲ ಪ್ರಕಾಶ ಅಡಗಿತು. ಎರಡು ಮೂಲೆಗೆ ನಿಂತ ದೀಪಸ್ತಂಭಗಳು ಶಾಂತವಾಗಿ ಬಂಗಾರದ ಗೆಜ್ಜೆಗಳಂತೆ ಹತ್ತು ದೀಪಗಳನ್ನು ಉರಿಸುತ್ತಿದ್ದವು. ಈಗ ಬಾಲು ಗಂಗೆಯನ್ನು ನೋಡಿದ. ಆ ಪ್ರಶಾಂತ ತಂಪು ಬೆಳಕಿನಲ್ಲಿ ಗಂಗೆ ತನ್ನ ಬದುಕಿನ ದಾರಿದೀಪವಾಗಿ ತೋರಿದಳು. ಮನ ತುಂಬಿಬಂದಿತು. ಕೋಮಲವಾಗಿ ಕರೆದ—

"ಬರುವುದಿಲ್ಲವೆ ಗಂಗಾ?"

ಕೈಬಳೆಗಳ ಕಾಲುಂಗುರುದ ಕಿಂಕಿಣಿನಾದದೊಂದಿಗೆ ಮೆಲ್ಲಡಿಯಿಟ್ಟು ಬಂದಳು ಗಂಗೆ.

ಮುಸ್ಸಂಗಳಿಗೆಯಲ್ಲಿ ಹಾಲು ಜೇನು ಒಂದಾದವು. ಹೃದಯ ಪ್ರೇಮ ಅಂತಃಕರಣಗಳು ಒಂದಾದವು.

ಬಾಲುವನ್ನು ಅವಳು ಕೈ ಹಿಡಿದು ಮೆಲ್ಲಮೆಲ್ಲನೆ ಕರೆದೊಯ್ದಳು...

'ಅಸತ್ಯದಿಂದ–ಸತ್ಯದೆಡೆಗೆ.
ಕತ್ತಲೆಯಿಂದ–ಬೆಳಕಿನೆಡೆಗೆ.
ಮೃತ್ಯುವಿನಿಂದ–ಅಮೃತತ್ವದೆಡೆಗೆ
ತಾಪದಿಂದ–ತಂಪಿನೆಡೆಗೆ!'

ಅಲ್ಲಿ ಹೊಸಕೆರೆಯ ಮನೆಯಲ್ಲಿ, ಮಹಡಿಯ ಸುಪ್ಪತ್ತಿಗೆಯಲ್ಲಿ, ಒಬ್ಬರೊಬ್ಬರ ತೆಕ್ಕೆಯಲ್ಲಿ ಗಿರಿಜೆ-ಸೀತಾರಾಮು ಇನ್ನೂ ಹರಟುತ್ತಿದ್ದರು.




ತುಂಟಿಂದ್ಯಾರಿ : ಜಾಗ್ರತೆ

# ಉದಯೋನ್ಮುಖ ನೃತ್ಯತಾರೆ

# ಕುಮಾರಿ ಶಚೀದೇವಿ

ಮತ್ತೂರ ಕೃಷ್ಣಮೂರ್ತಿ
ಬೆಂಗಳೂರು



ಭರತನಾಟ್ಯಕ್ಕೆ ಒಂದು ವಿಶೇಷ ಕೀರ್ತಿ ತಂದಿರುವುದು ಅದರಲ್ಲಿರುವ ಕಲೆಯ ಸಂಪತ್ತು, ವೈಭವ. ಭರತಮುನಿ ಭಾರತಕ್ಕೆ ಕೊಟ್ಟಿರುವ ಅನರ್ಘ್ಯ ರತ್ನ ಭರತನಾಟ್ಯ.

'ಭಕ್ತಿಯಿಂದ ಕರಗುವ ಮನಸ್ಸು ಒಳ್ಳೇ ಸಂಸ್ಕಾರ ಪಡೆದಿರುತ್ತದೆ' ಎಂದಿದ್ದಾರೆ ನಮ್ಮ ಹಿಂದಿನವರು. ಭರತನಾಟ್ಯವನ್ನು ಭಗವಂತನಿಗೇ ಅರ್ಪಿಸಿ ಈ ಕಲೆಗೂ ದೇವಾಲಯಗಳಿಗೂ ಸಂಬಂಧ ಕಲ್ಪಿಸಿರುವುದು ಬಹುಶಃ ಈ ಉದ್ದೇಶದಿಂದಲೇ ಇದ್ದೀತು.

ಅನೇಕ ವರ್ಷಗಳವರೆಗೆ ಭರತನಾಟ್ಯ ಕೇವಲ ಒಂದು ವರ್ಗದವರ ಪಾಲಿಗೇ ಬಂದಿತ್ತು. ದೇವರ ಸನ್ನಿಧಿಯಲ್ಲೇ ಪ್ರದರ್ಶನವಾಗಬೇಕು ಎಂದಿತ್ತು. ಪಂದಲ್ಲೂರ್ ಮೀನಾಕ್ಷಿ ಸುಂದರಂ ಪಿಳ್ಳೈಯವರನ್ನು ಈ ಸಂಬಂಧದಲ್ಲಿ ಭರತನಾಟ್ಯ' ಕಲಾಭಿಮಾನಿಗಳು ಮರೆಯುವಂತೆಯೇ ಇಲ್ಲ. ಈ ಕಲೆಯನ್ನು ಪರಿಶುದ್ಧ ಸ್ವರೂಪದಲ್ಲಿ ರಕ್ಷಿಸಿಕೊಂಡು ಬಂದವರ ವಂಶದ ಶ್ರೀ ಪಿಳ್ಳೆಯವರು ಭರತನಾಟ್ಯಕಲೆ ಜನಸಾಮಾನ್ಯರ ಆರಾಧನೆಗೂ ದೊರಕುವಂತೆ ಮಾಡಿದರು.

ಪ್ರತಿದೇಶವೂ ತನ್ನದೇ ಆದ ನಾಟ್ಯಕಲೆಯನ್ನು ಪಡೆದಿದೆ. ಆದರೂ ಭರತನಾಟ್ಯ ತನ್ನದೇ ಆದ ವೈಶಿಷ್ಟ್ಯ ಪಡೆದಿದೆ ಎಂಬುದನ್ನು ವಿದೇಶೀಯರೂ ಒಪ್ಪಿಕೊಂಡಿದ್ದಾರೆ. ಈ ಕಲೆಯನ್ನು ಕಲಿಯಲು ವಿದೇಶಗಳಿಂದೆಲ್ಲ ಬರುತ್ತಾರೆ.

ಮೊದಲೇ ಹೇಳಿದಂತೆ, ಕಣ್ಮನಗಳಿಗೆ ಸಂತಸ ನೀಡಿ ಪ್ರೇಕ್ಷಕರನ್ನು ಕಲೆಯ ಲೋಕಕ್ಕೆ ಒಯ್ಯುವ ಭರತನಾಟ್ಯ ಈಗ ಹಿಂದಿನಂತೆ ಒಂದು ವರ್ಗದವರಿಗೇ ಮೀಸಲಾಗಿಲ್ಲ. ಇಂದು ನೂರಾರು, ಸಹಸ್ರಾರು ಹೆಣ್ಣುಮಕ್ಕಳು ಈ ಕಲೆಗೆ ಮಾರು ಹೋಗಿದ್ದಾರೆ, ಹೋಗುತ್ತಿದ್ದಾರೆ.

ರುಕ್ಮಿಣಿ ಅರುಂಡೇಲ್, ಬಾಲಸರಸ್ವತಿ, ಮೃಣಾಳಿನಿ ಸಾರಭಾಯಿ, ಇಂದಿರಾಣಿ ರೆಹಮಾನ್, ವೈಜಯಂತಿಮಾಲಾ, ಕುಮಾರಿ ಕಮಲಾ, ಯಾಮಿನಿ ಕೃಷ್ಣಮೂರ್ತಿ, ಮಾಯಾರಾವ್, ಸುಧಾರಾಣಿ, ರಾಮಗೋಪಾಲ್, ಉದಯಶಂಕರ್ ಮೊದಲಾದ ಹಲವರು ದೇಶವಿದೇಶಗಳಲ್ಲಿ ಭರತನಾಟ್ಯದ ವೈಖರಿಯನ್ನು ಬೆಳಗಿದ್ದಾರೆ.

ಈ ಕಲೆಗೆ ಕನ್ನಡನಾಡು ಕಡಿಮೆ ಸೇವೆ ಸಲ್ಲಿಸಿಲ್ಲ. ಸರ್ವಶ್ರೀ ಕೆ. ಗುಂಡಪ್ಪ, ಎಂ. ಎಸ್. ನಟರಾಜನ್, ಯು. ಎಸ್. ಕೃಷ್ಣರಾವ್, ವಿ. ಎಸ್. ಕೌಶಿಕ್, ಎಚ್. ಎಸ್. ಕೇಶವಮೂರ್ತಿ, ಕೆ. ರಾಧಾಕೃಷ್ಣನ್ ಮೊದಲಾದ ನಾಟ್ಯಾಚಾರ್ಯರು ಹಲವರನ್ನು 'ಭರತನಾಟ್ಯ ಪ್ರವೀಣೆ' ಯರನ್ನಾಗಿಸಿದ್ದಾರೆ. ಇವರುಗಳ ಶಿಷ್ಯೆಯರಲ್ಲಿ ಹಲವರು ಈಗಾಗಲೇ ಭಾರತದಾದ್ಯಂತ ಸಂಚರಿಸಿ ಪ್ರದರ್ಶನ ನೀಡಿ ಕನ್ನಡನಾಡಿನ ಕೀರ್ತಿಯನ್ನು ಹೆಚ್ಚಿಸಿದ್ದಾರೆ.

ಅಂಥ ಉದಯೋನ್ಮುಖ ನೃತ್ಯತಾರೆಯರಲ್ಲಿ ಕುಮಾರಿ ಶಚೀದೇವಿ ಒಬ್ಬರು.

'ಉತ್ತಮನರ್ತಕಿ' ಯೆನಿಸಿಕೊಳ್ಳಲು ಕಲಾವಿದ್ಯೆಯಲ್ಲಿರಬೇಕಾದ ಮಿಕ್ಕೆಲ್ಲ 'ಯೋಗ್ಯತೆ' ಗಳಿಗಿಂತ 'ನೃತ್ಯ ಮತ್ತು ಅಭಿನಯ' ಇವೆರಡೂ ಭರತನಾಟ್ಯಕ್ಕೆ ಇರಬೇಕಾದ ಪ್ರಧಾನ ಅಂಶಗಳು. ಈ ಎರಡು ಅಂಶಗಳೂ ಕುಮಾರಿ ಶಚೀದೇವಿಯಲ್ಲಿ ಮೈಗೂಡಿಕೊಂಡಿರುವುದರಿಂದಲೇ ಕೇವಲ ೧೧-೧೨ನೇ ವಯಸ್ಸಿಗೇ ಇವರು 'ಪರಿಣತರ' ಮೆಚ್ಚುಗೆ ಪಡೆದರು !

'ನೃತ್ಯದಲ್ಲಿ ಹೆಸರು ಗಳಿಸಿಬಿಡಬಹುದು. ಆದರೆ ಅಭಿನಯದಲ್ಲಿ ಅಷ್ಟು ಸುಲಭವಲ್ಲ' ಎಂದು ನಾಟ್ಯಶಾಸ್ತ್ರಕೋವಿದರು ಹೇಳುತ್ತಾರೆ- ಶಚೀದೇವಿ ಎರಡರಲ್ಲೂ 'ಸೈ' ಎನಿಸಿಕೊಂಡಿದ್ದಾರೆ.

ಸಂಗೀತಜ್ಞಾನ ಸಾಕಷ್ಟಿದ್ದು ತಾಳಜ್ಞಾನ—ಲಯಜ್ಞಾನ ಚೆನ್ನಾಗಿದ್ದು ಅಭಿನಯಕಲೆಯಲ್ಲಿಯೂ ಅಸಾಧಾರಣ ಸಾಮರ್ಥ್ಯಪಡೆದಿರುವ ಕಲಾವಿದೆಯರು ಇರುತ್ತಾರೆ. ಬರೀ ಇಷ್ಟರಿಂದಲೇ ನಾಟ್ಯವಿಶಾರದೆಯಾಗಿ ಖ್ಯಾತಿಗಳಿಸಲಾದೀತೆ ? ಇಲ್ಲ. ಸಹಜ ಸೌಂದರ್ಯವನ್ನು ಪಡೆದಿರಬೇಕು ಅವರು. ಅಂಥವರೇ ವೇದಿಕೆಯ ಮೇಲೆ ಪ್ರದರ್ಶನ ನೀಡಿ ಪ್ರೇಕ್ಷಕರ ಹೃನ್ಮನಗಳಿಗೆ ಕಣ್ಣಿಗೆ ಸಂತೃಪ್ತಿ ನೀಡಬಲ್ಲರು. ಇವೆಲ್ಲವುಗಳ ಸಂಗಮವೆಲ್ಲಿರುವುದೋ ಅಂಥವರು ಖ್ಯಾತಿಯ ಮೆಟ್ಟಿಲನ್ನೇರಿ ಶಿಖರ ಮುಟ್ಟಬಲ್ಲರು- 'ಇಂಥ ಕೆಲವೇ ಮಂದಿಯಲ್ಲಿ ನಾನೂ ಒಬ್ಬಾಕೆ' ಎಂಬುದನ್ನು ಕುಮಾರಿ ಶಚೀದೇವಿ ತನ್ನ ಏಳನೇ ವಯಸ್ಸಿನಲ್ಲೇ ನಿರೂಪಿಸಿದ್ದನ್ನು ನೋಡುವಾಗ ಇವರ ಅಪಾರ ಸಾಧನೆಯ ಜತೆಗೆ ಕಲೆಯ ಸಂಸ್ಕಾರವೂ ಸಾಕಷ್ಟಿದೆ ಎಂಬುದು ವೇದ್ಯವಾಗುತ್ತದೆ.

ತಮ್ಮ ನಾಲ್ಕನೇ ವಯಸ್ಸಿನಲ್ಲೇ ನಾಟ್ಯಾಚಾರ್ಯ ವಿ. ಎಸ್. ಕೌಶಿಕರ ಬಳಿ ಭರತನಾಟ್ಯವನ್ನು ಅಭ್ಯಸಿಸಲು ಪ್ರಾರಂಭಿಸಿದ್ದರು. ಆರನೇ ವಯಸ್ಸಿನಲ್ಲಿ ಮೊದಲಬಾರಿಗೆ 'ರಂಗಪ್ರವೇಶ' ಮಾಡಿ ಏಳು, ಎಂಟನೇ ವಯಸ್ಸಿಗೇ ಪ್ರದರ್ಶನಗಳನ್ನು ಕೊಡಲಾರಂಭಿಸಿ, ೧೪-೧೫ ನೇ ವಯಸ್ಸಿಗೇ ಪಂಡಿತ ನೆಹರೂ, ರಾಜೇಂದ್ರ ಪ್ರಸಾದ್, ಕ್ರುಶ್ಚೇವ್, ಬುಲ್ಗಾನಿನ್, ಟಿಟೋ, ಹೈಲಿಸಿಲಾಸಿ ಮೊದಲಾದ ದೇಶ-ವಿದೇಶೀ ಪ್ರಮುಖರ ಮೆಚ್ಚುಗೆಗೆ ಪಾತ್ರರಾಗುವುದು ಸುಲಭದ ಮಾತಲ್ಲ. ವಿದೇಶೀ ಪ್ರಮುಖರ ಆಹ್ವಾನ ಪಡೆಯುವುದಂತೂ ಎಲ್ಲರ ಪಾಲಿಗೂ ಸಿಗುವ 'ಅದೃಷ್ಟ'ವೂ ಅಲ್ಲ !

ಕಲೆಯ ಮೇಲೆ ವಿಶೇಷ ಆಸಕ್ತಿವಹಿಸಿರುವ ಮನೆತನದಲ್ಲಿ ಹುಟ್ಟಿರುವ ಶಚೀ ತನ್ನ ಎಳೆ... ಅಂದರೆ ನಾಲ್ಕನೇ ವಯಸ್ಸಿನಲ್ಲೇ ನೃತ್ಯಕಲೆ







೩





೧ ಸರಸವಾಡೆ ಕೆಳೆಯನೆತ್ತಲ್

೨ ಅರಸಿತಂದೆಯೆ

೩ ಅರಗಿಣಿಯ ನುಡಿಯ ಕೇಳಿ

೪ ಮರುಳುಗೊಂಡೆಯೋ

೫ ಬೆಡಗನೋಳ್ಪರಿರದೆ ನಿನಗೆ

೬ ಬೇಸರಾದುದೆ

೭ ನುಡಿಯ ಕೇಳ್ವರಿರದ ಮನಸು

೮ ರೋಸಿಪೋದುದೇ

೫

೮















೯

೧೩





೯ ಕಲಿಸಿದುಲಿಯನುಲಿಯುವ ಗಿಣಿ

೧೦ ತಿಳಿಯಲಹುದೇ ನಿನ್ನ ಮನವ

೧೧ ಕಾದು ನೋಡುತಿಹನು ನಿನ್ನ

೧೨ ಚೆನ್ನಕೇಶವಂ

೧೩ ಆದಿಮೂಲನ್

೧೪ ಅವನೇ ಸೊಬಗನ್

೧೫ ಎಲ್ಲ ಸೂಸುವಂ

೧೬ ಶುಕಭಣಿತದಿ ಪಿಕಮಣಿತದಿ
ಸಕಲ ಜಗದ ರುಚಿಯೊಳವನೆ
ಸರಸವಾಡೆ

ಫೋಟೋ :
**ಡಿ. ಜೆ. ಆನಂದರಾಜ್**

೧೫







ಗುರು-ಶಿಷ್ಯೆಯರು : ಶಚೀದೇವಿ ಗುರು ಶ್ರೀ ಕೌಶಿಕರೊಂದಿಗೆ

ಯನ್ನು ಅಭ್ಯಸಿಸಲು ಪ್ರಾರಂಭಿಸಿದರು.

ಸನಾತನ ಕಲಾಕ್ಷೇತ್ರದ ಪ್ರಿನ್ಸಿಪಾಲರಾದ ಖ್ಯಾತ ನಾಟ್ಯಾಚಾರ್ಯ, ಭರತನಾಟ್ಯ ಪ್ರವೀಣ ಶ್ರೀ ವಿ. ಸುಬ್ರಹ್ಮಣ್ಯ ಕೌಶಿಕರಲ್ಲಿ ಶಿಕ್ಷಣ ಪ್ರಾರಂಭವಾಯಿತು.

ಶಾಸ್ತ್ರೀಯ ರೀತಿಯಲ್ಲಿ ಹೊಸ ಪ್ರಯೋಗ, ಹೊಸಕೃತಿಗಳನ್ನು ಸೃಜಿಸುವ ಭವ್ಯಸಂಪ್ರದಾಯವನ್ನು ಬೆಳೆಸಿಕೊಂಡುಬರುತ್ತಿರುವ ಶ್ರೀ ವ್ಹಿ.ಎಸ್. ಕೌಶಿಕ್ ಮೈಸೂರು ಸಂಪ್ರದಾಯದ ಭರತ ನಾಟ್ಯಕ್ಕೆ ಅನುಪಮ ಸೇವೆ ಸಲ್ಲಿಸುತ್ತಿದ್ದಾರೆ.

ಯೋಗಶಾಸ್ತ್ರ, ಶರೀರ ವ್ಯಾಯಾಮ ಇವೆರಡನ್ನೂ ಲಕ್ಷ್ಯದಲ್ಲಿಟ್ಟು ಶಾಸ್ತ್ರೀಯ ಭರತನಾಟ್ಯವನ್ನು ವಿದ್ಯಾರ್ಥಿಗಳಿಗೆ ಕಲಿಸುವದು, ಯೋಗ ಮತ್ತು ನಾಟ್ಯಶಾಸ್ತ್ರಗಳಲ್ಲಿ ಸಂಶೋಧನ ನಡೆಸುವುದೇ ಕಲಾಕ್ಷೇತ್ರದ ವೈಶಿಷ್ಟ್ಯ.

'ಇಂಥ ಗುರು ನನಗೆ ಲಭಿಸಿದ್ದು ನನ್ನ ಪೂರ್ವಾರ್ಜಿತ ಪುಣ್ಯ' ಎನ್ನುತ್ತಾರೆ ಬಿ. ಎ. ಪದವೀಧರೆಯಾಗಲಿರುವ ಹದಿನೆಂಟರ ಕುಮಾರಿ ಶಚೀ.

ಏಳನೇ ವಯಸ್ಸಿಗೆ ಬೆಂಗಳೂರಿನ 'Wonder Girl' ಎನಿಸಿಕೊಂಡ ಶಚೀ ಈ ವರೆಗಾಗಲೇ ೨೦೦ ಕ್ಕೂ ಹೆಚ್ಚು ನೃತ್ಯಪ್ರದರ್ಶನ ನೀಡಿದಾರೆ. ನೃತ್ಯರೂಪಕಗಳಲ್ಲಿ ಭಾಗವಹಿಸಿದಾರೆ.

ಶಚೀದೇವಿಯ ನೃತ್ಯಪ್ರದರ್ಶನವೊಂದನ್ನು ೧೯೫೪ ರಲ್ಲಿ ವೀಕ್ಷಿಸಿದ ವಿಶ್ವೇಶ್ವರಯ್ಯನವರು, ನಾಟ್ಯಕಲೆಯಲ್ಲಿ ಮೈಸೂರಿಗೆ ಅಪಾರ ಕೀರ್ತಿತರುತ್ತಾಳೆ 'ಈಕೆ' ಎಂದಿದ್ದರು.

ಇಷ್ಟು ಸಣ್ಣ ವಯಸ್ಸಿನಲ್ಲೇ ಬೆಂಗಳೂರಿನ ರಸಿಕವರ್ಗದ ಅಪಾರ ಮೆಚ್ಚುಗೆ ಗಳಿಸಿರುವ ಶಚೀದೇವಿಯ ಕಲಾಪ್ರೌಢಿಮೆಯನ್ನು ಕಣ್ಣಾರೆ ನೋಡಬೇಕೆಂದು ಖ್ಯಾತ ನೃತ್ಯತಾರೆ ಪದ್ಮಿನಿ ಇವರ ಮನೆಗೆ ಹೋಗಿ ನೃತ್ಯನೋಡಿ, 'ವ್ಯಾಸಂಗ ನಿಲ್ಲಿಸಿದರೂ ನೃತ್ಯ ಶಿಕ್ಷಣ ನಿಲ್ಲಿಸಬೇಡಿ' ಎಂದು ಶಚೀದೇವಿಯ ತಾಯಿ ತಂದೆಯರಾದ ಶ್ರೀಮತಿ ಲಕ್ಷ್ಮೀದೇವಿ ಹಾಗೂ ಶ್ರೀಮಲ್ಲೇಗೌಡರಲ್ಲಿ ಮನವಿ ಮಾಡಿಕೊಂಡರು!

ನೃತ್ಯರೂಪಕಗಳಲ್ಲಿ ಪಾತ್ರವಹಿಸಿ ವಿಶೇಷ ಮೆಚ್ಚುಗೆಗೆ ಪಾತ್ರಳಾದ ಮಗಳ ಸಾಮರ್ಥ್ಯ, ಕಲಾಪ್ರೌಢಿಮೆಯ ಬಗೆಗೆ ಪರಿಣತರು ವ್ಯಕ್ತಪಡಿಸಿದ ಮೆಚ್ಚಿಗೆ—ಈ ಕಲೆಯ ಮೇಲೆ ಶಚೀದೇವಿಗೆ ಇದ್ದ ಅಭಿಮಾನ–ಆಸೆ ಇವೆಲ್ಲ ತಾಯಿ-ತಂದೆಯರಲ್ಲಿದ್ದ ಆಸೆಯನ್ನು ಮಾರ್ಪಡಿಸಿತು. ನೃತ್ಯ ಶಿಕ್ಷಣಕ್ಕೆ ನೀಡುತ್ತಿದ್ದ ಪ್ರೋತ್ಸಾಹವನ್ನು ಹೆಚ್ಚಿಸಿದರು. ಶಾಲೆ ಕಾಲೇಜಿನಲ್ಲಿ ಎಲ್ಲ ತರಗತಿಗಳಲ್ಲೂ ಪ್ರಥಮಸ್ಥಾನಗಳಿಸುತ್ತಲೇ ಬಂದಿರುವ ಇವರಿಗೆ ನೃತ್ಯದತ್ತ ಹೆಚ್ಚಿನ ಲಕ್ಷ್ಯಹರಿಸಲು ಸಾಧ್ಯವಾಯಿತು. ಮೌಂಟ್‌ಕಾರ್ಮಲ್ ಕಾಲೇಜಿನ 'ಅತಿ ಬುದ್ಧಿಶಾಲೀ' ವಿದ್ಯಾರ್ಥಿಗಳಲ್ಲಿ ಒಬ್ಬರಾಗಿರುವ ಈಕೆ ತಮ್ಮ ಬಿ. ಎ. ಗೆ ರಾಜಕೀಯವನ್ನು ಐಚ್ಛಿಕವಾಗಿ ತೆಗೆದುಕೊಂಡಿದ್ದಾರೆ.

ಕೌಶಿಕರ ಸನಾತನ ಕಲಾಕ್ಷೇತ್ರದ ಶಿಷ್ಯವರ್ಗದಲ್ಲಿ ಕುಮಾರಿ ಶಚೀದೇವಿಗೆ ಪ್ರಮುಖ ಸ್ಥಾನವಿದೆ.

ರಷ್ಯದ ಸಾಂಸ್ಕೃತಿಕಯೋಗ ತನ್ನ ದೇಶಕ್ಕೆ ಬರಬೇಕೆಂದು ಶಚೀದೇವಿಗೆ ನೀಡಿರುವ ಆಹ್ವಾನ ಇವರು ಬಿ. ಎ. ಡಿಗ್ರಿ ಪಡೆಯುವದನ್ನೇ ಕಾಯುತ್ತಿದೆ!

"ನೃತ್ಯಕಲೆ— ವ್ಯಾಸಂಗ— ಇವೆರಡೇ ನನಗೆ ಅತ್ಯಂತ ಪ್ರಿಯವಾದವು" ಎನ್ನುತ್ತಾರೆ ಶಚೀ.

ಈ ವರೆಗಾಗಲೇ, ಮೇಲೆ ಹೇಳಿದಂತೆ, ಅನೇಕ ಪ್ರದರ್ಶನಗಳನ್ನು ನೀಡಿರುವ ಶಚೀ ಹಲವು ಸಹಾಯಾರ್ಥ ಪ್ರದರ್ಶನಗಳನ್ನೂ ನೀಡಿ ಎಷ್ಟೋ ಶಿಕ್ಷಣಸಂಸ್ಥೆಗಳಿಗೆ, ಕಲಾ ಕೇಂದ್ರಗಳ ಉನ್ನತಿಗೆ ಕಾರಣರಾಗಿದಾರೆ.

"ಈ ವಯಸ್ಸಿಗೆ ಈ ಸಾಧನೆ ಹೆಚ್ಚೇ" ಎಂದು ನೃತ್ಯಕಲಾ ಪ್ರವೀಣರೊಬ್ಬರು ಶಚೀದೇವಿಯ ಕುರಿತು ಹೇಳಿದ ಮಾತು ಉತ್ಪ್ರೇಕ್ಷೆಯಲ್ಲ.

ವರ್ಣಾಭಿನಯದಲ್ಲಿ ವಿಶೇಷ ಖ್ಯಾತಿಗಳಿಸಿರುವ ಶಚೀದೇವಿ ಕೌಶಿಕರು ರಚಿಸಿರುವ ಎಲ್ಲ ನೃತ್ಯ ರೂಪಗಳಲ್ಲೂ ಪ್ರಮುಖ ಪಾತ್ರವಹಿಸಿ ಯಶಸ್ವಿಯಾಗಿ ನಿರ್ವಹಿಸುತ್ತ ಬಂದಿದಾರೆ.

ಕೌಶಿಕರ ಶಕುಂತಲಾ ನೃತ್ಯರೂಪದಲ್ಲಿ ಪ್ರಧಾನ ಪಾತ್ರವಹಿಸಿ ನೀಡುವ ಇವರ ಅಭಿನಯ ಪ್ರೇಕ್ಷಕರನ್ನು ಮುಗ್ಧಗೊಳಿಸುತ್ತದೆ.

ಡಿ. ವಿ. ಜಿಯವರ ಅಂತಃಪುರಗೀತೆಗಳೆಂದರೆ ಶಚೀದೇವಿಯ ಗುರು ಕೌಶಿಕರಿಗೆ ವಿಶೇಷ ಅಭಿಮಾನ. ಅವರ ಹಲವಾರು ಗೀತೆಗಳನ್ನು ನೃತ್ಯಕ್ಕೆ ಅಳವಡಿಸಿಕೊಂಡಿದಾರೆ. ಈ ಕೃತಿಗಳನ್ನು ನಿವೇದಿಸುವಾಗ ಶಚೀದೇವಿಯ ಅಭಿನಯ, ಮುಖಮುದ್ರೆ ಅಂಗವಿನ್ಯಾಸ, ಅಡವುಗಳು, ಕೈಗಳ ಚಲನ-ವಲನ, ಕಣ್ಣುಗಳ ಓಟ, ನೋಟ, ಇವಕ್ಕೆ ತಕ್ಕ ಭಾವ ಇವೆಲ್ಲ ವರ್ಣನಾತೀತ.

ಡಿ. ವಿ. ಜಿ. ಯವರ ಮೆಚ್ಚುಗೆ ಪಡೆಯುವುದು ಸುಲಭವಲ್ಲ. ಶಚೀ ಅದನ್ನು ಗಳಿಸಿದಾರೆ.

ಕೃತಿಯ ಸಾಹಿತ್ಯವನ್ನು ಅನುಭವಿಸಿ, ಅದಕ್ಕೆ ತಕ್ಕಂತೆ ಬೆರಳುಗಳ ಓಟ, ಹುಬ್ಬುಗಳ ಆಟ, ಸಾಹಿತ್ಯದ ಅರ್ಥಕ್ಕೆ ತಕ್ಕಂತೆ ಬದಲಾಗುವ ಮುಖಮುದ್ರೆ, ಹಾವಭಾವ ಇವೆಲ್ಲವನ್ನೂ ಪ್ರದರ್ಶನ ನೋಡಿಯೇ ಅನುಭವಿಸಬೇಕು.

ಎಂತಲೆ ಡಿ. ವಿ. ಜಿಯವರ ಹಲವಾರು ಕೃತಿಗಳಲ್ಲಿ ಒಂದಾದ

**"ಸರಸವಾಡೆ ಕೆಳೆಯನೆತ್ತಲ್**
**ಅರಸಿ ತಂದೆಯೋ ?"**

ಎಂಬುದು ಶಚೀದೇವಿಗೆ ಅಮಿತವಾದ ಕೀರ್ತಿ ತಂದಿರುವ ಕೃತಿಗಳಲ್ಲಿ ಒಂದಾಗಿದೆ.

ಈ ಕೃತಿಯ ಅವರ ಭಾವಪೂರಿತ ಅಭಿನಯವನ್ನು ಇಲ್ಲಿ ಕೊಡಲಾಗಿದೆ.

'ಚೆಲುವ ಚೆನ್ನಕೇಶವನನ್ನು, ಕಲಾದೇವಿ ಸರಸವಾಡಲು ಕರೆಯುತ್ತಿದ್ದಾಳೆ' ಎಂಬ ಈ ಕೃತಿಯನ್ನು ಸಿಂಹೇಂದ್ರ ಮಧ್ಯಮರಾಗ, ರೂಪಕ ತಾಳದಲ್ಲಿ ರಚಿಸಲಾಗಿದೆ.

'ಕಲಾವಿದೆ, ಕಲೆಯೊಂದಿಗೆ ಲೀನವಾಗಬೇಕು' ಎಂಬ ಡಿ.ವಿ.ಜಿ.ಯವರ ಮಾತಿಗೆ ಅಪಚಾರವೆಸಗದಂತೆ ಪ್ರೇಕ್ಷಕರ ಮುಂದಿಡುವ ಸಾಮರ್ಥ್ಯ ಪಡೆದಿದಾರೆ ಶಚೀ.

ಇವರ ನೃತ್ಯಪ್ರದರ್ಶನವನ್ನು ನೋಡುವಾಗ ನಾಟ್ಯಸರಸ್ವತಿಯ ಅನುಗ್ರಹ ಸಂಪೂರ್ಣವಾಗಿ ಇವರ ಮೇಲಿದೆ ಎಂಬುದು ಗೋಚರವಾಗದಿರದು.

'ಕನ್ನಡನಾಡಿನ ಹೆಮ್ಮೆಯ ಕಾಣಿಕೆಯಾಗಿ ಶಚೀದೇವಿ ದೇಶ-ವಿದೇಶಗಳಲ್ಲಿ ಅಪಾರಕೀರ್ತಿ ಗಳಿಸಬೇಕು' ಎಂದು ದೀಪಾವಳಿಯ ಈ ಶುಭ ದಿನ ಕನ್ನಡ ಜನ ಹಾರೈಸುವರು ಎಂಬುದರಲ್ಲಿ ಸಂಶಯವಿಲ್ಲ.

# ಒಳ್ಳೆಯ ಚಿತ್ರ ಬರಬೇಕಾದರೆ......

## ಚಿತ್ರನಿರ್ಮಾಪಕನ ಹೊಣೆ ಗುರುತರವಾಗಿದೆ


ಆರ್. ನಾಗೇಂದ್ರರಾವ್
( ಪ್ರಸಿದ್ಧ ಚಿತ್ರನಿರ್ಮಾಪಕರು )


ಒಂದು ಉತ್ತಮ ಚಿತ್ರವನ್ನು ತೆಗೆಯುವ ವಿಧಾನವೇನು? ಬಹಳ ಕುತೂಹಲಕಾರಿಯಾದ ಪ್ರಶ್ನೆ. ಇದು ನಮ್ಮ ಚಿತ್ರರಂಗದಲ್ಲಿ ಎಂದಿಗೂ ಬಿಡಿಸಲಾರದ ಒಗಟಾಗಿಯೇ ಉಳಿಯುವುದು ಖಂಡಿತ. ಈ ಪ್ರಶ್ನೆಗೆ ಸಮಂಜಸವಾದ ಸಮಾಧಾನದ ಸೂತ್ರ (Key) ಇದ್ದಿದ್ದರೆ ನಮ್ಮಲ್ಲಿ ಕೀಳುದರ್ಜೆಯ ಚಿತ್ರಗಳೇ ಬರುತ್ತಿರಲಿಲ್ಲ. ಪ್ರತಿಯೊಬ್ಬ ನಿರ್ಮಾಪಕನೂ ಚಿತ್ರವನ್ನು ಪ್ರಾರಂಭಿಸುವಾಗ ಉತ್ತಮ ಚಿತ್ರವನ್ನು ತೆಗೆಯಬೇಕೆಂದು ನಿರ್ಧರಿಸುತ್ತಾನೆಯೇ ವಿನಾ ಅಯಶಸ್ವಿಕರವಾದ ಚಿತ್ರವನ್ನು ತಯಾರಿಸಬೇಕೆಂದು ಬಯಸುವುದಿಲ್ಲ. ಪ್ರತಿ ಚಿತ್ರವನ್ನು ಪ್ರಾರಂಭಿಸುವಾಗಲೂ ಅವನು ತನಗೆ ತಿಳಿದ ಮಟ್ಟಿಗೆ ಯಶಸ್ಸಿನ (Box-Office) ಅಂಶಗಳನ್ನು ಚಿತ್ರದಲ್ಲಿ ಸೇರಿಸಲು ಪ್ರಯತ್ನಿಸುತ್ತಾನೆ. ತನ್ನ ಅರಿವಿನ ಮಟ್ಟಕ್ಕೆ ಉತ್ತಮ ನಟನಟಿಯರು, ಕಥೆ, ದಿಗ್ದರ್ಶಕ, ಸಂಗೀತ, ದಿಗ್ದರ್ಶಕ ಮುಂತಾದವನ್ನು ಗೊತ್ತುಮಾಡುತ್ತಾನೆ. ಹೀಗಾದರೂ ತಯಾರಾದ ಎಷ್ಟೋ ಚಿತ್ರಗಳು ಪ್ರೇಕ್ಷಕರ ಮನ್ನಣೆ ಪಡೆಯದೆ, ಅಯಶಸ್ವಿಯಾಗಿ ತಯಾರಕನ ಕೈ ಸುಡುವಂತೆ ಮಾಡುತ್ತವೆ. ಇದಕ್ಕೆ ಯಾರು ಹೊಣೆ?

ಈ ಪ್ರಶ್ನೆಗೆ ಉತ್ತರ ಹುಡುಕುವುದಕ್ಕೆ ಮುಂಚೆ ಉತ್ತಮ ಚಿತ್ರವೆಂದರೇನೆಂಬುದನ್ನು ಯೋಚಿಸೋಣ. ಚಿತ್ರ ಉತ್ತಮ ಅಹುದೋ ಅಲ್ಲವೋ ಇದನ್ನು ನಿರ್ಧರಿಸುವವರು ಯಾರು? ತಯಾರಕನೋ, ಪ್ರೇಕ್ಷಕನೋ, ವಿಮರ್ಶಕನೋ, ಅಥವಾ ರಾಷ್ಟ್ರಪ್ರಶಸ್ತಿ ನೀಡುವ ಸಮಿತಿಯೊ? ಹೆತ್ತವರಿಗೆ ಹೆಗ್ಗಣ ಮುದ್ದು, ಕೂಡಿದವರಿಗೆ ಕೋಡಗ ಮುದ್ದು ಎಂಬಂತೆ ಪ್ರತಿಯೊಬ್ಬ ತಯಾರಕನೂ ತನ್ನ ಚಿತ್ರದ ಸಮಾನ ಯಾವ ಚಿತ್ರವೂ ಇಲ್ಲವೆಂದು ಭಾವಿಸುವುದು ಮಾನವಸಹಜವಾದ ಗುಣ. ಆದ್ದರಿಂದ ತಯಾರಕನ ಅಭಿಪ್ರಾಯ ನಮಗೆ ಅಳತೆಗೋಲಾಗುವುದು ಸಾಧ್ಯವಿಲ್ಲ.

ಎರಡನೆಯದಾಗಿ ಪ್ರೇಕ್ಷಕ ಜನಸಂದಣಿ ಹೆಚ್ಚಾಗಿ ನಿಂತಿರುವ ಚಿತ್ರಮಂದಿರದಲ್ಲಿ ನಡೆಯುತ್ತಿರುವ ಚಿತ್ರವೇ ಉತ್ತಮ ಚಿತ್ರವೆಂದು ಭಾವಿಸಬಹುದೇ? ಅದೂ ಸಾಧ್ಯವಿಲ್ಲ. ನಟನಟಿಯರಲ್ಲಿ ಕೆಲವರಿಗೆ ಸಹಸ್ರಾರು ಮಂದಿ ರಸಿಕಪ್ರೇಮಿ(Fans)ಗಳಿರುತ್ತಾರೆ. ಚಿತ್ರದಲ್ಲಿ ಆ ನಟನಟಿಯರು ಅಭಿನಯಿಸಿದ್ದರೆ ಸಾಕು, ಚಿತ್ರವು ಹೇಗಾದರೂ ಇರಲಿ, ಆ ಪ್ರೇಮಿಗಳು ನೋಡಿಯೇ ತೀರುವುದು ಖಂಡಿತ. ಮಿಕ್ಕ ಎಲ್ಲಾ ವಿಷಯಗಳಲ್ಲೂ ಕಲಾತ್ಮಕವಾಗಿರುವ ಚಿತ್ರಗಳು ಈ ಜನಪ್ರಿಯ ನಟ ನಟಿಯರಿರುವ ಚಿತ್ರದ ಎದಿರು ನಿಲ್ಲಲಾರದೆ ಬಿದ್ದುಹೋಗಿ, ಅದೇ ಸಮಯ ಜನಪ್ರಿಯ ನಟಿಯರ ಚಿತ್ರಗಳು ೨೫ ವಾರ ಓಡುವುದು ಸರ್ವೇಸಾಧಾರಣ. ಆದ್ದರಿಂದ ಪ್ರೇಕ್ಷಕರ ಮೆಚ್ಚುಗೆಯೇ ಚಿತ್ರದ ಉತ್ತಮತೆಯನ್ನು ನಿರ್ಧರಿಸಲು ಅಳತೆಗೋಲಾಗಲಾರದು.

ಕೊನೆಯದಾಗಿ ವಿಮರ್ಶಕ ಮತ್ತು ಸನ್ಮಾನ ಸಮಿತಿಯವರು. ವಿಮರ್ಶಕರಿಂದ ಯಥೇಚ್ಛವಾಗಿ ಹೊಗಳಲ್ಪಟ್ಟು ರಾಷ್ಟ್ರಪ್ರಶಸ್ತಿ ಗಳಿಸಿರುವ ಚಿತ್ರಗಳು ಪ್ರೇಕ್ಷಕರ ಮನ್ನಣೆಪಡೆಯಲಾರದೆ ಹೋಗುತ್ತವೆ. ಅದೇ ರೀತಿ ವಿಮರ್ಶಕನು ಖಂಡಿಸಿರುವ ಚಿತ್ರಗಳು ಅನೇಕಾನೇಕ ವಾರಗಳು ಜಯಭೇರಿ ಹೊಡೆಯುತ್ತವೆ. ಆದ್ದರಿಂದ ಈ ಕೊನೆಯ ವರ್ಗದವರ ಹೊಗಳಿಕೆಯನ್ನು ಉತ್ತಮತೆಯ ಲಕ್ಷಣವೆಂದು ಭಾವಿಸೋಣವೇ? ಎಲ್ಲದಕ್ಕಿಂತ ಮುಖ್ಯವಾಗಿ ಚಿತ್ರರಂಗವು ವ್ಯಾಪಾರರಂಗ. ಕಲಾತ್ಮಕವಾದ ಚಿತ್ರಗಳನ್ನು ತೆಗೆದು ಕೈ ಸುಟ್ಟುಕೊಳ್ಳಲು ಎಷ್ಟು ಜನರಿಗೆ ಮನಸ್ಸು ಬರುತ್ತದೆ? ಅಥವಾ ಅದರಿಂದ ಸಂಭವಿಸಬಹುವಾದ ಕಷ್ಟನಷ್ಟಗಳನ್ನು ತಡೆದುಕೊಳ್ಳುವ ಶಕ್ತಿಯಾದರೂ ಯಾವ ನಿರ್ಮಾಪಕನಿಗಿದೆ? ಅದರಲ್ಲೂ ಅನೇಕ ಮಿತಿಗಳನ್ನು ಹೊಂದಿರುವ ಕನ್ನಡ ಮಾರುಕಟ್ಟೆಯಲ್ಲಿ! ಚಿತ್ರವು ಯಶಸ್ವಿಯಾದಾಗಲೇ ಅವನಿಗೆ ಬರುವ ಲಾಭ ಮಧ್ಯದಲ್ಲಿ ಬರುವ ಎಲ್ಲರೂ ತಿಂದು, ತೇಗಿ ಉಳಿವ ಮೌಲ್ಯ) ಅತ್ಯಲ್ಪ. ಇನ್ನು ಚಿತ್ರವು ಅಯಶಸ್ವಿಯಾದರೆ ಅವನು ಹಾಕಿದ ದುಡ್ಡಿನಲ್ಲಿ ಅರ್ಧ ಭಾಗ ಬರುವುದು ಕೂಡ ದುಸ್ಸಾಧ್ಯ! ನಾಲ್ಕು ಚಿತ್ರಗಳಲ್ಲಿ ಅವನು ಸಂಪಾದಿಸಿದ ಲಾಭವು ಒಂದು ಚಿತ್ರದಲ್ಲಿ ಕಳೆದುಹೋಗಿ ಅವನು ಸಂಸ್ಥೆಯನ್ನೇ ಮುಚ್ಚಿ, ಸಾಲಗಾರನಾಗಿ ಓಡಾಡಬೇಕಾದ ಪ್ರಸಂಗ ಒದಗುತ್ತದೆ. ಆದ್ದರಿಂದ ಚಿತ್ರ ತಯಾರಿಸುವಾಗ ಪ್ರಥಮ ಪ್ರಾಮುಖ್ಯ ವ್ಯಾಪಾರ ದೃಷ್ಟಿಗೆ ಎಂದರೆ ಅದು ತಪ್ಪೆಂದು ಭಾವಿಸಲಾಗುವುದಿಲ್ಲ.

ಇನ್ನು ತಯಾರಕನು ಚಿತ್ರಕಥೆಗಳನ್ನು ಆರಿಸಬೇಕಾದರೆ ಎಷ್ಟೋ ರಾತ್ರಿ ನಿದ್ರಾಹಾರಗಳನ್ನು ತೊರೆದು ಯೋಚಿಸುತ್ತಾನೆ. ಆಗ ತಾತ್ಕಾಲಿಕವಾಗಿರುವ ಅನೇಕ ಸಂದರ್ಭಗಳು ಅವನ ನಿಶ್ಚಯಕ್ಕೆ ಮೂಲ ಕಾರಣವಾಗುತ್ತವೆ. ಆ ಸಮಯದಲ್ಲಿ ಪ್ರದರ್ಶಿತವಾಗುತ್ತಿದ್ದ ಚಿತ್ರಗಳು ಯಾವುವು? ಅದರಲ್ಲಿ ಯಾವುದು ಯಶಸ್ವಿಯಾಯಿತು, ತಾನೂ ಅದೇ ರೀತಿ ಸೂತ್ರಗಳಿರುವ ಚಿತ್ರವನ್ನು ತೆಗೆದರೆ ತನ್ನ ಚಿತ್ರವೂ ಯಶಸ್ವಿಯಾಗಬಹುದೇ ಮುಂತಾದ ಅನೇಕ ಪ್ರಶ್ನೆಗಳು ಅವನ ಮುಂದೆ ಬಂದು ನಿಲ್ಲುತ್ತವೆ. ಅವಕ್ಕೆ ಅವನ ಮನಸ್ಸಿನಲ್ಲಿ ದೊರೆಯುವ ಸಮಾಧಾನವೇ ಅವನು ಯಾವ ಕಥೆಯನ್ನು ಆರಿಸುತ್ತಾನೆಂಬುದನ್ನು ನಿರ್ಧರಿಸುತ್ತವೆ.

ಚಿತ್ರ ಬಿಡುಗಡೆಯಾಗುವ ವೇಳೆಗೆ ಮಾರುಕಟ್ಟೆಯ ಪರಿಸ್ಥಿತಿ ಹೇಗಿರುತ್ತದೋ ಅದೂ ಹೇಳಲಾಗುವುದಿಲ್ಲ. ಇಂದು ಸಾಮಾಜಿಕಗಳನ್ನು ಕಿಕ್ಕಿರಿದು ನೋಡುತ್ತಿರುವ ಪ್ರೇಕ್ಷಕರು ಇನ್ನು ಎರಡು ತಿಂಗಳಲ್ಲಿ ಪೌರಾಣಿಕಗಳತ್ತ ತಿರುಗಬಹುದು. ಚಿತ್ರದ ಬಿಡುಗಡೆಗೆ ಹಿಂದೆ ಯಾವ ಚಿತ್ರ ಓಡುತ್ತಿತ್ತು, ಮುಂದೆ ಯಾವುದು ಬರಬಹುದು, ಇದರ ಮೇಲೆ ಚಿತ್ರದ ಹಣೆಯಬರಹ ಅನ್ವಯಿಸಿರು

ಕನ್ನಡ ಚಿತ್ರರಂಗ ಈಗ ಪ್ರಗತಿಪರವಾಗಿದ್ದರೂ ಚಿತ್ರಪ್ರೇಮಿಯ ದೃಷ್ಟಿಯಲ್ಲಿ ಒಳ್ಳೆಯ ಚಿತ್ರ ಬರುತ್ತಿಲ್ಲ. ಆದರೆ ಈ ರೀತಿ ಒಳ್ಳೆಯ ಚಿತ್ರ ಬರಲು ಹಲವಾರು ತೊಂದರೆಗಳಿರಬಹುದು; ಸಂಕಷ್ಟಗಳಿರಬಹುದು. ಅವನ್ನೇ ಕುರಿತು ಕನ್ನಡ ಚಿತ್ರರಂಗದ ಖ್ಯಾತ ವ್ಯಕ್ತಿಗಳು ಇಲ್ಲಿ ಚರ್ಚಿಸಿದ್ದಾರೆ. . . . .

ತ್ತದೆ, ಹೀಗೆ ಬದಲಾವಣೆಯಾಗುತ್ತಲೇ ಇರುವ ಪ್ರೇಕ್ಷಕರ ಅಭಿರುಚಿಯನ್ನು ಕಂಡುಹಿಡಿಯಲೆತ್ನಿಸುವದು ದುಸ್ಸಾಧ್ಯವಾದ ಮಾತು. ಆದ್ದರಿಂದಲೇ ಚಿತ್ರ ತಯಾರಕನಿಗೆ ದೈವಬಲವೇ ಮುಖ್ಯವಾದ ಬಲ. ಆ ಅದೃಷ್ಟ ಒಂದಿದ್ದರೆ ಮಣ್ಣು ಸಹ ಹೊನ್ನಿನಂತೆ ಕಾಣುತ್ತದೆ.

ಚಿತ್ರವು ಒಬ್ಬ ಮನುಷ್ಯನ ಪ್ರಯತ್ನದ ಫಲವಲ್ಲ. ಅನೇಕ ಕಲೆಗಳು ಸೇರಿ ಆಗುವ ಮಹಾಕಲೆ. ಅದು ಯಶಸ್ವಿಯಾಗುವುದೂ ಬಿಡುವುದೂ ನಮ್ಮ ಕೈಯಲ್ಲಿಲ್ಲ. ಪ್ರಯತ್ನವೊಂದೇ ನಮ್ಮದು. ಫಲ ಮಾತ್ರ ಪರಮೇಶ್ವರನ ಅಧೀನ?

—

# ಚಿತ್ರನಿರ್ದೇಶಕ ಏನು ಮಾಡಬೇಕು?

ಒಂದು ಒಳ್ಳೆಯ ಚಿತ್ರ ಬರಬೇಕಾದರೆ ನಿರ್ದೇಶಕ ಏನು ಮಾಡಬೇಕು? ಎಂದು ಕೇಳಿದರೆ ಏನು ಮಾಡಬಾರದು? ಎಂಬ ಮರುಪ್ರಶ್ನೆ ಹುಟ್ಟಿಕೊಳ್ಳುತ್ತದೆ. ಹೌದು ನಿರ್ದೇಶಕ ಮಾಡಲೇಬೇಕಾದದ್ದು ಕೆಲವು, ಮಾಡಬಾರದ್ದು ಕೆಲವಿವೆ.

ಮೊದಲನೆಯದಾಗಿ ನಿರ್ದೇಶಕ ಯಾವ ಬಗೆಯ ಚಿತ್ರವನ್ನು ತೆಗೆಯಬೇಕೆಂದು ನಿರ್ಧರಿಸುತ್ತಾನೆಯೋ ಆ ಒಗೆಯ ಕಥೆಯನ್ನು ಆಯ್ದು—ಕೊಳ್ಳಬೇಕು. ತನ್ನ ಶಕ್ತಿಗೆ ಮೀರಿದ ಕಥಾವಸ್ತುವನ್ನು ಆರಿಸುವುದು ತಪ್ಪು. ಒಂದು ವೇಳೆ ತನಗೆ ಶಕ್ತಿ ಇದ್ದೂ ಅದನ್ನು ಸಮರ್ಪಕವಾಗಿ ಹೊರತರಲು ಬೇಕಾದ ದಾರ್ಢ್ಯವಿಲ್ಲದ ನಿರ್ಮಾಪಕನಾದರೆ ಅಸಾಧ್ಯಗಳಿಗೆ ಕೈಹಾಕುವದು ಸರ್ವಥಾ ತಪ್ಪು. ಹೇಗೆಂದರೆ ವಿಜಯನಗರದ ವೈಭವವನ್ನು ತೆರೆಗೆ ತರುವ ಹಂಬಲ ನಿರ್ದೇಶಕನಿಗಿರಬಹುದು. ಆದರೆ ನಿರ್ಮಾಪಕನು ಆನೆಗೊಂದಿ ಸಂಸ್ಥಾನವನ್ನು ತೋರಿಸಲು ಸಹ ಸಮರ್ಥನಿಲ್ಲದಿರಬಹುದು. ಆಗ ನಿರ್ದೇಶಕನ ಹಂಬಲ ಹಂಬಲವಾಗಿಯೇ ಉಳಿಯುವುದು.

ಹುಷಾರಾಗಿ ಕಥೆಯನ್ನು ಹುಡುಕಿ ಅದಕ್ಕೆ ತಕ್ಕ ಲೇಖಕನನ್ನು ಹೊಂದಿಸಬೇಕು. ಅನಂತರ ಪಾತ್ರಗಳನ್ನು ವಿಂಗಡಿಸಿ ಅವಕ್ಕೆ ನ್ಯಾಯ ಸಲ್ಲಿಸುವ ಪ್ರತಿಭಾವಂತ ಪಾತ್ರಧಾರಿಗಳನ್ನು ಆಯ್ದುಕೊಳ್ಳಬೇಕು. .ಉತ್ತಮ ಛಾಯಾಗ್ರಾಹಕನಿಂದ ತನ್ನ ಮನೋಗತವನ್ನು ಸ್ಪಷ್ಟವಾಗಿ ತೆರೆಯ ಮೇಲೆ ಕಾಣಿಸಬೇಕು. ಹೀಗೆಯೇ ಎಲ್ಲ ಶಾಖೆಗಳಲ್ಲೂ ಸಮರ್ಥ ತಂತ್ರಜ್ಞರನ್ನು ಕೂಡಿಸಬೇಕು. ಈ ವಿಷಯದಲ್ಲಿ ನಿರ್ದೇಶಕ ನಿರ್ದಾಕ್ಷಿಣ್ಯವಾಗಿರಬೇಕು. ದಾಕ್ಷಿಣ್ಯಕ್ಕೆ ಕಟ್ಟುಬಿದ್ದು ಅಸಮರ್ಪಕವಾದ ಯಾವುದೇ ಕೆಲಸವನ್ನು ಮಾಡಬಾರದು.

ದಕ್ಷಿಣ ಭಾರತದಲ್ಲಿ ತಮಿಳು, ತೆಲುಗು ಆದ ಬಳಿಕ ಮೂರನೇ ಸ್ಥಾನದಲ್ಲಿರುವ ಕನ್ನಡ ಚಿತ್ರರಂಗ ಇನ್ನೂ ಹಿಂದೆ ಉಳಿದಿದೆ ಎಂದು ವಿಷಾದದಿಂದ ಹೇಳಬೇಕಾಗಿದೆ. ಏಕೆ? ಎಂಬ ವಿಮರ್ಶಾತ್ಮಕ ಪ್ರಶ್ನೆ ಬಂದಾಗ ಉತ್ತರ ಕಟುವಾಗುತ್ತದೆ.

ಕನ್ನಡ ಪ್ರೇಕ್ಷಕ ಎಲ್ಲ ಬಗೆಯ ಚಿತ್ರಗಳನ್ನೂ ನೋಡುವ ರಸಿಕ. ಆತನಿಗೆ ತನ್ನದು—ಇತರರದು ಎಂಬ ಭಿನ್ನಬೇಧವಿಲ್ಲ. ಚೆನ್ನಾಗಿರುವುದು. ಯಾವುದೇ ಭಾಷೆಯದಾಗಿರಲಿ ಅದನ್ನು ಆಸ್ವಾದಿಸುವ ಗುಣಗ್ರಾಹಿ ಆತ.



ಎಸ್. ಕೆ. ಏ. ಚಾರಿ

ಗುಣಗ್ರಾಹಿಯಾಗಿರುವಂತೆಯೆ ಅತನು ಭಾಷಾಭಿಮಾನಿಯೂ ಆಗಬೇಕು. ಕನ್ನಡ ಚಿತ್ರರಂಗ ಇನ್ನೂ ಪ್ರೌಢಾವಸ್ಥೆಗೆ ಬಂದಿಲ್ಲ, ಅಲ್ಲಿಯವರೆಗೆ ಕನ್ನಡ ಚಿತ್ರ-ಪ್ರೇಕ್ಷಕ ಭಾಷಾಭಿಮಾನದಿಂದ ತನ್ನ ಭಾಷೆಯ ಚಿತ್ರಗಳಲ್ಲಿರಬಹುದಾದ ಲೋಪದೋಷಗಳನ್ನು ಮನ್ನಿಸುವಷ್ಟು ಉದಾರಚಿತ್ರನಾಗಬೇಕು.

ಕನ್ನಡ ಚಳವಳಿಯ ಪರಿಣಾಮವಾಗಿ ಕನ್ನಡ ಚಿತ್ರ-ಪ್ರೇಕ್ಷಕರ ಚಿತ್ತವೃತ್ತಿ ಬದಲಾಗಿದೆ ಕನ್ನಡ ಚಿತ್ರಗಳಿಗೆ ಮೊದಲಿಗಿಂತಲೂ ಈಗ ಪ್ರೋತ್ಸಾಹ ಹೆಚ್ಚು ಸಿಗುತ್ತಿದೆ. ಆದರೆ ಈ ಜಾಗೃತಿ ಕೇವಲ ತಾತ್ಕಾಲಿಕ ಉದ್ವೇಗದ ಪರಿಣಾಮವಾಗದೆ ಶಾಶ್ವತವಾದುದಾಗಬೇಕು. ಈ ಚಳವಳಿಯ ಲಾಭ ಕೇವಲ ಸ್ವಾರ್ಥಸಾಧಕರ ತೃಪ್ತಿಗೆ ಮೀಸಲಾಗಬಾರದು. ಎಂದಿನ ವರೆಗೆ ಕನ್ನಡಿಗರು ಸ್ವಪರಿಪೂರ್ಣರಾಗುವದಿಲ್ಲವೋ ಅಂದಿನ ವರೆಗೆ ಕನ್ನಡ ಚಿತ್ರರಂಗ ಹಿಂದೆ ಉಳಿದಿರುತ್ತದೆ.

ಒಳ್ಳೆಯ ಚಿತ್ರ ನಿರ್ಮಾಣ ಪ್ರತಿಯೊಬ್ಬರ ಗುರಿಯಾಗಿರುತ್ತದೆ. ನಿರ್ಮಾಪಕನಾವನಿಗೂ ಕೆಟ್ಟ

ಎಸ್. ಕೆ. ಏ. ಚಾರಿ
( ಖ್ಯಾತ ಚಿತ್ರನಿರ್ದೇಶಕರು )

ಚಿತ್ರ ಕೊಡಬೇಕೆಂಬ ಆಸೆ ಇರುವದಿಲ್ಲ. ಅದರೆ ಆತನ ಕೆಲಸಗಾರರ ತಂಡದಲ್ಲಿ ದಕ್ಷತೆ ಇಲ್ಲದೆ ಚಿತ್ರ ಕೆಡಬಹುದು.

ಒಳ್ಳೆಯ ಚಿತ್ರವನ್ನೇ ಕೊಡುತ್ತೇನೆಂಬುದು ನಿರ್ಮಾಪಕನ ಸಂಕಲ್ಪವಾಗಿರುತ್ತದೆ, ಆದರೆ ಆ ಸಂಕಲ್ಪ ಸಿದ್ಧಿಯಾಗಬೇಕಾದರೆ ತಾಂತ್ರಿಕ ವರ್ಗ, ಅಭಿನೇತೃಗಳು ಮೊದಲಾದ ಎಲ್ಲರ ತ್ರಿಕರಣ ಶುದ್ಧಿ ಇರಬೇಕು.

ಆತ್ಮವಿಶ್ವಾಸದಿಂದ, ಶ್ರದ್ಧೆಯಿಂದ, ಏಕಾಗ್ರಚಿತ್ತದಿಂದ, ಐಕಮತ್ಯದಿಂದ ದುಡಿದ ಯಾವುದೇ ಕಾರ್ಯವಾಗಲೀ ಜನತಾಜನಾರ್ದನನಿಗೆ ಪ್ರಿಯವಾಗಿಯೇ ಆಗುತ್ತದೆ.

# ಚಿತ್ರಲೇಖಕ ವಿಚಿತ್ರ ಪರಿಸ್ಥಿತಿಯಲ್ಲಿಯೂ ಮುಂದಾಗಬೇಕಾಗುವುದು

ಎಚ್. ಕೆ. ವಿಜಯನಾರಸಿಂಹ
(ಕನ್ನಡ ಚಿತ್ರರಂಗದ ಸಾಹಿತಿ)

ಒಂದು ಒಳ್ಳೆಯ ಚಿತ್ರದ ನಿರ್ಮಾಣದ ಹಿನ್ನೆಲೆಯಲ್ಲಿ ಅನೇಕ ಶ್ರದ್ಧಾಳುಗಳ ಶ್ರಮ, ಪ್ರತಿಭೆ, ವರ್ಚಸ್ಸು, ಕ್ರಿಯಾಸಿದ್ಧಿ ಇವು ಇರಲೇಬೇಕು. ಕೇವಲ ಒಬ್ಬನ(ಳ) ಕಾರಣದಿಂದ ಚಿತ್ರದ ಪೂರ್ಣ ಯಶಸ್ಸು ದೊರೆಯುವುದು, ಅನೇಕರಿಂದ ಕೆಡುವುದು-ಅನೇಕರಿಂದ ಯಶಸ್ಸು ದೊರೆತು ಒಬ್ಬನಿ(ಳಿ)ಂದ ಕೆಡುವುದೂ ಸಂಭವನೀಯವಾದ ಈ ವಿಚಿತ್ರ ಉದ್ಯಮದಲ್ಲಿ ಒಂದು ಚಿತ್ರದ ಏಳ್ಗೆಗಾಗಲೀ ಪತನಕ್ಕಾಗಲೀ ಒಬ್ಬನನ್ನೇ (ಅದೃಷ್ಟಹೀನನನ್ನು) ಗುರಿಮಾಡಿ ಅನ್ನುವ ಹಾಗೂ ಪೂಜೆ ಮಾಡುವ, ಅಂಧವಿಶ್ವಾಸ ನಮ್ಮ ಚಿತ್ರೋದ್ಯಮದಲ್ಲಿ ಸರ್ವೇಸಾಮಾನ್ಯವಾಗಿದೆ. ಈ ಬಗೆಯ ಯಾವುದೇ ವಿಧವಾದ ಪ್ರಶಂಸೆ ಅಥವಾ ಮುಖಭಂಗಕ್ಕೆ ಪಾತ್ರವಾಗಬೇಕಾಗುವ ಮೊದಲ ವ್ಯಕ್ತಿ ಲೇಖಕನೆಂದರೆ ತಪ್ಪಾಗದು. ಏಕೆಂದರೆ ಚಿತ್ರದ ಆರಂಭದ ಶ್ರೀಕಾರದಿಂದ ಅಂತ್ಯದ ಶುಭಂವರೆಗೆ ಚಿತ್ರದ ಹಿನ್ನೆಲೆಯಲ್ಲಿರುವ ಆತನ ವರ್ಚಸ್ಸು ಕಂಡುಬರುತ್ತದೆ. ಆ ದೃಷ್ಟಿಯಿಂದ ಕಥಾನಾಯಕ ಅಥವಾ ನಾಯಕಿಗಿಂತ ಆತನದೇ ಹಿರಿಯ ಪಾತ್ರ; ಆದರೆ ಈ ಕಟುಸತ್ಯಕ್ಕೆ ಸ್ಥಾನ ಅವಜ್ಞವಾಗಿರುತ್ತದೆ.

ದಧೀಚಿಯ ಬೆನ್ನೆಲುಬಿನಿಂದಾದ ವಜ್ರಾಯುಧದಿಂದ ದೇವೇಂದ್ರನು ದಿಗ್ವಿಜಯ ಗಳಿಸಲು ಸಾಧ್ಯವಾಯಿತಂತೆ. ಪೌರಾಣಿಕ ಕಾಲದಲ್ಲಿ. ಆದರೆ ಈ ಕಾಲದಲ್ಲಿ, ಅದೂ ಚಿತ್ರೋದ್ಯಮದಲ್ಲಿ ಲೇಖಕನ ಬೆನ್ನೆಲುಬಾದ ಲೇಖಣಿಯ ಸಹಾಯದಿಂದ ಚಿತ್ರದ ದಿಗ್ವಿಜಯ ಸಾಧಿತವಾಗುತ್ತದೆ ಆದರೆ ಅವನ ಸ್ಥಾನ ಬೆನ್ನೆಲುಬನ್ನು ನೀಗಿಕೊಂಡ ದಧೀಚಿಯಂತೆಯೇ ನಿರ್ಜೀವವಾಗಿರುತ್ತದೆ.

"ಉಪಾಧ್ಯಾಯಾಶ್ಚ ವೈದ್ಯಾಶ್ಚ ಕಾರ್ಯಾಂತೆ ಅಪ್ರಯೋಜಕಃ" ಎಂಬ ಗಾದೆಯಂತೆ ಕೆಲಸವಾದ ಬಳಿಕ ಅಪ್ರಯೋಜಕನ ಪಟ್ಟಗಳಿಸುವವನು ಚಿತ್ರರಂಗದಲ್ಲಿ ಲೇಖಕ. ಈ ಪರಿಸ್ಥಿತಿಯಿಂದ ಅವನು ಮುಕ್ತನಾಗಬೇಕು. ಅಂದರೆ ಅವನ ಕೃತಿಗೆ ಸಲ್ಲಬೇಕಾದ ಗೌರವ ಮತ್ತು ಗೌರವಧನ ನ್ಯಾಯವಾಗಿ ಸಲ್ಲಬೇಕು. ಆಗ ಲೇಖಕನು ತೃಪ್ತನಾಗುತ್ತಾನೆ; ಅವನಿಂದ ಉತ್ತಮೋತ್ತಮ ಕೃತಿಗಳು ನಿರ್ಮಿತವಾಗಲು ಸ್ಫೂರ್ತಿ ನೀಡುವ ಆನಂದದ ರಸಬುಗ್ಗೆ ಚಿಮ್ಮುತ್ತದೆ. ಈ ಅಂಶವನ್ನು ಮೊದಲನೆಯದಾಗಿ ನಿರ್ಮಾಪಕ, ಎರಡನೆಯದಾಗಿ ಪ್ರೇಕ್ಷಕ ಅರ್ಥಮಾಡಿಕೊಂಡಂದು-ಉತ್ತಮ ಕೃತಿ ಬಂದೇಬರುತ್ತದೆ.

ಲೇಖಕನ ಭಾಗ್ಯದ ಬಾಗಿಲು ತೆರೆದು ನಿರೀಕ್ಷಿಸಿದ ಗೌರವ ಹಾಗೂ ಗೌರವಧನ ದೊರೆತರೆ ಮಾತ್ರ ಸಾಲದು; ಅವನಿಗೆ ಸ್ವಾತಂತ್ರ್ಯವೂ ಬೇಕು. ಚಿತ್ರರಂಗದಲ್ಲಿ ಲೇಖಕನಿಗೆ ಇರುವ ಸ್ಥಾನ ಉನ್ನತವಾಗಬೇಕು. ಅವನ ಸೃಷ್ಟಿಶೀಲ ಪ್ರವೃತ್ತಿಗೆ ಎಲ್ಲ ವಿಧವಾದ ಸಹಕಾರೀ ಸನ್ನಿವೇಶಗಳು ನೆರವಾಗಬೇಕು. ಆದರೆ ಚಿತ್ರ ಪ್ರಪಂಚದಲ್ಲಿ ಲೇಖಕನ ವಿನಾ ಮಿಕ್ಕವರೆಲ್ಲ ಬರಹಗಾರರೆ! ಕಥೆಗಾರನ ವಿನಾ ಮಿಕ್ಕವರೆಲ್ಲ ಕಥೆಗಾರರ!! ಸಾಹಿತಿ ವಿನಾ ಮಿಕ್ಕವರೆಲ್ಲ ಸಾಹಿತಿಗಳೆ!!

"ರೀ, ನೋಡ್ರಿ, ಪ್ರೊಡ್ಯೂಸರ್ ಅವರ... 'ಅವರು' ಒಂದು 'ಫೈನ್' (Fine) ಐಡಿಯಾ (Idea) ಹೇಳಿದಾರೆ, ಅದರ ಹಾಗೆ 'ಸೀನ್ ಛೇಂಜ್' ಮಾಡಿ."

"ಅಲ್ರಿ, 'ಸಂಗಮ' ನಲ್ಲಿ 'ಬುಡ್ಡಾ ಮಿಲ್ ಗಯಾ' ಹಾಡಿದೆಯಲ್ರಿ—ಆ ಥರ ಬರಬೇಕು ಲಿರಿಕ್ಕು (Lyric)!"

"ಇಲ್ಲಿ ಸೆನ್ಸಾರ್ ಮಾಡೊವ್ರಿಗೆ ಅಂಥ ಕನ್ನಡ ಏನು ಅರ್ಥವಾಗೊಲ್ಲ, ಒಂದು ವೇಳೆ ಅರ್ಥವಾದರೂ ಪರವಾಗಿಲ್ಲ-ಕಟ್ ಆದ್ರೂ ಪರವಾ ಇಲ್ಲ; ಯಾಕೇಂದ್ರೆ ಅಲ್ಲಿವರೆಗೂ ಆ ಸೆಕ್ಸಿ ಡೈಲಾಗ್ಸು (Sexy dialogues) ಅವಳ ಬಾಯಿಂದ ಕೇಳ್ತಾ ಇರಬಹುದಲ್ಲ. ಬರೀರಿ ಪರವಾಗಿಲ್ಲ ಸೆಕ್ಸಿ ಡೈಲಾಗ್ಸು (Sexy Dialogues)"

"ಇವಳು ಡಿಸ್ಟ್ರಿಬ್ಯೂಟರ್ ಕಡೆಯಿಂದ ಬಂದಿರೋ ಹುಡುಗಿ. ಆದಷ್ಟು ಜಾಸ್ತಿ ಡೈಲಾಗು ಕೊಡಿ."

ಇಂಥ ಇಕ್ಕಟ್ಟಿನಲ್ಲಿ ಸಿಕ್ಕಿಕೊಂಡು ಸ್ವಾತಂತ್ರ್ಯವಿಲ್ಲದೆ ಬರೆದ ಮಾತುಗಳಲ್ಲಿ ಸತ್ವವಿರಲು ಸಾಧ್ಯವೆ? ಭಾವತರಂಗ ಸ್ವಚ್ಛಂದವಾಗಿ ವಿಹರಿಸಲು, ಭಾಷೆ ನಿರ್ಮಲವಾಗಿರಲು ಈ ಅಸಹಾಯ ಪರಿಸ್ಥಿತಿಯಲ್ಲಿ ಸಾಧ್ಯವೇ ಇಲ್ಲ. ಇಂಥ ಪರಿಸ್ಥಿತಿಗಳಿಂದ ಲೇಖಕ ಮುಕ್ತನಾಗಬೇಕು. ಅವನ ಸ್ವಾತಂತ್ರ್ಯಕ್ಕೆ ಧಕ್ಕೆ ಬರಕೂಡದು.

ಒಂದು ಒಳ್ಳೆ ಚಿತ್ರ ತಯಾರಾಗಲು ಲೇಖಕನು ಹೊರಬೇಕಾಗಿರುವ ಹೊಣೆ ಸಾಧಾರಣವಾದುದಲ್ಲ. ಅವನಲ್ಲಿನ ಸೃಷ್ಟಿಶೀಲಪ್ರವೃತ್ತಿ ಸದಾ ಜಾಗ್ರತವಾಗಿರಬೇಕು. ಸಾಮಾಜಿಕ ಪ್ರಜ್ಞೆ, ಸಾಂಸ್ಕೃತಿಕ ಔನ್ನತ್ಯ, ವಾಕ್‌ಸಂಪತ್ತು, ವಿದ್ಯಾಬಲ ವಿಪುಲವಾಗಿರಬೇಕು. ಹಾಗಿದ್ದರೇನೇ ಲೇಖಕ ಉತ್ತಮ ಕೃತಿಗಳನ್ನು ಕೊಡಬಲ್ಲ.

ಲೇಖಕ ಪ್ರತಿಕ್ಷಣದಲ್ಲೂ ಬದಲಾಗುತ್ತಿರುವ ಪ್ರಪಂಚದ ಪರಿಸ್ಥಿತಿಯನ್ನು ಸಂಜಯನಂತೆ ನೋಡುತ್ತಿರಬೇಕು. ಪ್ರೇಕ್ಷಕನ ಚಿತ್ತವೃತ್ತಿ ಹೇಗಿದೆ? ಅವನ ಅಭಿರುಚಿಯಲ್ಲಿ ಆಗಿರುವ ಮಾರ್ಪಾಟೇನು? ಎಂಬುದನ್ನು ತೀಕ್ಷ್ಣವಾಗಿ ಗ್ರಹಿಸುವದೇ ಆದರೆ ಆಯಾ ಸಮಯ, ಸಂದರ್ಭಕ್ಕನುಗುಣವಾದ ಮಾತುಗಳನ್ನು ಹೆಣೆಯುವುದಾಗಲೀ ಗೀತೆಗಳನ್ನು ರಚಿಸುವುದಾಗಲೀ ಮಾಡುವುದರಿಂದ ಖಂಡಿತ ಜನಪ್ರಿಯನಾಗುತ್ತಾನೆ! ಆದರೆ ಜನಪ್ರಿಯತೆ ಬಿಸಿಲು ಕುದುರೆಯ ಸವಾರಿಯಂತೆ. ಇಂದಿನ ಸಮಯ ಸಂದರ್ಭಕ್ಕನುಗುಣವಾಗಿ ಬರೆದು 'ಭಲೆ' 'ಭೇಷ್' ಗಳಿಸಿದ ಲೇಖಕನ ಮಾತು ನಾಳೆಗೆ ಹಳಸಿ ಹೋಗಬಹುದು. ಹೀಗೆ ಹಳಸಿ ಹೋಗದಂತೆ ಎಂದಿಗೂ ನಿಲ್ಲುವಂತೆ ಸಾಹಿತ್ಯ ಸೃಷ್ಟಿಸಿದಾತನೇ ನಿಜವಾದ ಉತ್ತಮ ಲೇಖಕ.

ಚಿತ್ರದಷ್ಟು ಪ್ರಭಾವಶಾಲಿ ಪರಿಣಾಮಕಾರಿ ಮಾಧ್ಯಮ ಬೇರೊಂದಿಲ್ಲ. ಎಂಥ ವಿಷಯವನ್ನಾಗಲೀ ಚಿತ್ರವತ್ತಾಗಿ ಹೇಳಲು ಈ ಆಧುನಿಕ ಮಾಧ್ಯಮವನ್ನು ಚೆನ್ನಾಗಿ ಬಳಸಬಹುದು. ಈಗ ಪ್ರಪಂಚದ ಪ್ರತಿ ಮೂಲೆ ಮೂಲೆಗಳಿಗೂ ನಮ್ಮ ಸಂಸ್ಕೃತಿಯನ್ನು ಹಬ್ಬಿಸಲು ಈ ಸಾಧನದ ಉಪಯೋಗ ಬಹಳ ಮಟ್ಟಿಗೆ ಮಾಡಿಕೊಳ್ಳಬಹುದು. ಈ ಸಂದರ್ಭದಲ್ಲಿ ಉತ್ತಮ ಮಟ್ಟದ, ಉನ್ನತ ಸಂಸ್ಕೃತಿಯ ಪಕ್ವವಾದ ಕೃತಿಗಳ ರಚನೆಯಾಗಬೇಕು. ಆದರೆ ಈ ಬಗ್ಗೆ ಸರ್ವಾನುಮತವಾದ ಅಭಿಪ್ರಾಯವಿಲ್ಲ. ಕಾಲಕ್ಕೆ ತಕ್ಕಂತೆ ತಾಳ ತಪ್ಪಿ ನಡೆದರೂ ಶೀಲ ಬಿಟ್ಟು ಕುಣಿದರೂ ಚಿಂತೆಯಿಲ್ಲ! 'ಬಾಕ್ಸ್ ಆಫೀಸ್' ತುಂಬಬೇಕು.

'ಬಾಕ್ಸ್ ಆಫೀಸ್ ಹಿಟ್' ಆಗಬೇಕು ನಿಜ. ಆದರೆ ಈ 'ಹಿಟ್'ಗಾಗಿ ಸಾಹಿತ್ಯಧರ್ಮವನ್ನು ಮೀರುವುದು ನ್ಯಾಯವೆ? ನ್ಯಾಯವೆಂದೇ ನೂರಕ್ಕೆ ತೊಂಭತ್ತೊಂಭತ್ತು ಮಂದಿಯ ಅಭಿಪ್ರಾಯ. ಆದರೆ ಲೇಖಕ (ನಿಷ್ಠಾವಂತ) ಈ ಎಲ್ಲ ನಂಜನ್ನು ವಿಷಕಂಠನಂತೆ ನುಂಗಿ ಉತ್ತಮ ಕೃತಿಗಳನ್ನು ಜನಪ್ರಿಯವಾಗುವಂತೆ ಕೊಡಬೇಕು. ಎಂಥ ಪ್ರಚಂಡ ಎದುರಾಳಿಯನ್ನಾಗಲೀ ಬಿರುಗಾಳಿಯನ್ನಾಗಲೀ ಎದುರಿಸುವ ಎದೆ ಲೇಖಕನಲ್ಲಿದ್ದರೆ ಮಾತ್ರ ಉತ್ತಮ ಸಾಹಿತ್ಯದ ಸೃಷ್ಟಿ ಸಾಧ್ಯ. ಉತ್ತಮ ಸಾಹಿತ್ಯ ಮಾತ್ರ ಎಂದೆಂದಿಗೂ ಉಳಿಯಬಲ್ಲದು. ಆ ದಿಸೆಯಲ್ಲಿ ಮಾಡಿದ ಸಾಹಿತಿಯ ಕೃಷಿ ಎಂದೆಂದಿಗೂ ಕಲ್ಪತರು.



# ಸಂಗೀತನಿರ್ದೇಶಕ ರಂಜನೀಯ ಸಂಗೀತ ನೀಡಲು ಮುಂದಾಗಬೇಕು

ವಿಜಯ ಭಾಸ್ಕರ
( ಈ ವರ್ಷದ ಉತ್ತಮ ಸಂಗೀತನಿರ್ದೇಶಕರು )

ನಾವು ಕನ್ನಡ ತಾಯಿಯ ಸೇವೆಯನ್ನು ಚಿತ್ರರಂಗದ ಮೂಲಕ ಮಾಡಲು ಸಿಕ್ಕಿರುವ ಅವಕಾಶವನ್ನು ಸರಿಯಾಗಿ ಉಪಯೋಗಿಸಿಕೊಳ್ಳಬೇಕು: ಇದರಲ್ಲಿ ನಾವು ತೋರುವ ಆಸಕ್ತಿ ಎಷ್ಟು ಹೆಚ್ಚಾಗಿರುತ್ತದೆಯೋ ಅಷ್ಟೇ ಉತ್ತಮವಾದ ಪರಿಣಾಮ ಚಿತ್ರದ ಪ್ರಯೋಗದಲ್ಲಿ ಕಾಣಬಹುದು ಎಂಬುದು ನನ್ನ ಅಭಿಪ್ರಾಯ.

ನಾವು ಎಷ್ಟೋ ಇಂಗ್ಲಿಷ್, ಹಿಂದಿ, ತಮಿಳು, ತೆಲಗು ಚಿತ್ರಗಳನ್ನು ನೋಡುತ್ತಲೇ ಇರುತ್ತೇವೆ. ಇದರಲ್ಲಿ ಎಷ್ಟೋ ಉತ್ತಮ ಚಿತ್ರಗಳ ಜಯಭೇರಿ ಸಂಗೀತದಿಂದಲೇ ಆಗಿರುತ್ತದೆ ಎಂಬುದು ನಿಜ. ಜನರು ಹೆಚ್ಚು ಹೆಚ್ಚು ಸಂಗೀತಪ್ರಿಯರಾಗುತ್ತಿದ್ದಾರೆ.

ಸಂಗೀತದಿಂದ ಹೆಚ್ಚು ಬೆಳೆ ಬೆಳೆದಿರುವ ನಿದರ್ಶನ ಇತ್ತೀಚೆಗೆ ಪತ್ರಿಕೆಗಳಲ್ಲಿ ಓದಿದ್ದೇವೆ. ಅನೇಕ ರೋಗಗಳಿಗೆ ಸಂಗೀತದಿಂದ ಉತ್ತಮ ಚಿಕಿತ್ಸೆ ದೊರೆತಿದೆ. ಚರಿತ್ರಪುರುಷ ತಾನಸೇನ್ 'ದೀಪಕ' ರಾಗ ಹಾಡಿ ದೀಪಗಳನ್ನು ಬೆಳಗಿದ; 'ಮೇಘ ಮಲ್ಹಾರ್' ರಾಗ ಹಾಡಿ ಮಳೆ ತರಿಸಿದ. ಪುರಾಣಕಾಲದ ಕೃಷ್ಣನ ಮುರಳಿ, ವಾಣಿಯ ವೀಣೆ, ತುಂಬುರ ನಾರದರ ಗಾಯನ, ಈಶ್ವರನ ಡಮರು, ನಂದಿ ಭೃಂಗಿಯ ಮೃದಂಗವಾದನ ಎಲ್ಲರಿಗೂ ಗೊತ್ತಿರುವ ವಿಷಯಗಳು. ಆದರೆ ಈ ಸಂಗೀತಪ್ರಿಯತೆ ನಮ್ಮ ನಾಗರಿಕತೆಯನ್ನು ಎತ್ತಿ ಹಿಡಿಯುವ ಮುಖ್ಯಾಂಶವೆಂಬುದನ್ನು ಮರೆಯಬಾರದು.

ನಮ್ಮ ಜನ ಅನಾದಿಕಾಲದಿಂದಲೂ ಸಂಗೀತಪ್ರಿಯರೆಂಬ ಅಂಶ ಸರ್ವಸಮ್ಮತವಾದದ್ದು. ಇಂಥ ಸಂಗೀತಪ್ರಿಯರ ನಾಡಿನಲ್ಲಿ ಹಿಂದಿನಿಂದಲೂ ಸಂಗೀತಕ್ಕಾಗಿ ಜೀವನವನ್ನೇ ತ್ಯಾಗ ಮಾಡಿದ, ಅನೇಕ ಕಷ್ಟ ಸಂಕಟಗಳಿಗೆ ಗುರಿಯಾದ ಮಹನೀಯರ ಜೀವನ ಚರಿತ್ರೆಯನ್ನು ನಾವು ಓದಿದ್ದೇವೆ.

ಇಂಥ ರಸಿಕ ಮಹನೀಯರುದಿಸಿದ ಕನ್ನಡ ನಾಡಿನಲ್ಲಿ ಹುಟ್ಟು ಸಂಗೀತಪ್ರಿಯರಾಗಿಯೆ ಜನತೆ ಇರುವುದು ಅಚ್ಚರಿಯಲ್ಲ. ಈ ಆಧುನಿಕ ಯುಗದಲ್ಲಿ ಚಿತ್ರ ಸಂಗೀತ ಎಲ್ಲರಿಗೂ ಬೇಕಾಗಿದೆ. ಏಕೆಂದರೆ ಕಾಲಕ್ಕೆ ತಕ್ಕಂತೆ ಜನರು ಹೆಚ್ಚು ಹೆಚ್ಚಾಗಿ ಚಿತ್ರಗಳನ್ನು ನೋಡಿ ಆನಂದಪಡುತ್ತಾರೆ. ಈ ಬಗೆಯ ಜನಕ್ಕೆ ಹೆಚ್ಚು ರಂಜನೀಯವಾದ ಸಂಗೀತವೇ ಇಷ್ಟವಾಗಿರುತ್ತದೆ. ಕ್ಲಿಷ್ಟವಾದ, ಪಾಂಡಿತ್ಯಪೂರ್ಣವಾದ ಉತ್ತಮ ದರ್ಜೆ ಸಂಗೀತಕ್ಕೆ ಚಿತ್ರರಂಗದಲ್ಲಿ ಅವಕಾಶ ಕಿರಿದು. ಪ್ರೇಕ್ಷಕರಿಗೂ ಲಘು ಸಂಗೀತವೇ ತೃಪ್ತಿಕರ. ಆದ್ದರಿಂದ ಚಿತ್ರಗಳಲ್ಲಿ ಲಘು ಸಂಗೀತ ಇರಬೇಕಾಗಿರುತ್ತದೆ. ಆದರೆ ಸಂಗೀತಮಯ ಚಿತ್ರಗಳಲ್ಲಿ ಅಂದರೆ ಸಂಗೀತಗಾರನ ಜೀವನ ಚರಿತ್ರೆಯನ್ನು ಚಿತ್ರಿಸುವ ಚಿತ್ರಗಳಲ್ಲಿ ಇದಕ್ಕೆ ಅಪವಾದವಿದೆ.

ಕನ್ನಡ ನಾಡಿನಲ್ಲಿ ಮೊದಲಿನಿಂದಲೂ ಪ್ರಸಿದ್ಧವಾದ ಕರ್ನಾಟಕ ಸಂಗೀತವಿದೆ. ಇಲ್ಲಿ ಉತ್ತರಾದಿ ವಿದ್ವಾಂಸರೂ ಗೌರವ ಗಳಿಸಿದ್ದಾರೆ. ಆದ್ದರಿಂದ ಕನ್ನಡನಾಡಿನಲ್ಲಿ ಕರ್ನಾಟಕ ಸಂಗೀತ ಮತ್ತು ಹಿಂದುಸ್ತಾನಿ ಸಂಗೀತ ಎರಡೂ ಪ್ರಚಲಿತ. ಈ ಪದ್ಧತಿಯಲ್ಲಿ



ವಿಜಯಭಾಸ್ಕರ

ಆಯಾ ಚಿತ್ರದ ಸಮಯ, ಸನ್ನಿವೇಶ ವಾತಾವರಣಕ್ಕೆ ಸರಿ ಹೊಂದುವ ರಾಗ ತಾನಗಳನ್ನು ಯೋಚಿಸಿ ಸ್ವರಸಂಯೋಜನೆ ಮಾಡಬೇಕು. ಅದಕ್ಕೆ ತಕ್ಕಂತೆ ಗೀತೆಯ ಸಾಹಿತ್ಯವನ್ನು ಗೀತರಚಕರಿಂದ ಪಡೆದರೆ ಜನಪ್ರಿಯ ಸಂಗೀತ ಕೊಡಲು ಸಾಧ್ಯ. ಚಿತ್ರವನ್ನು ನೋಡುತ್ತಿದ್ದಂತೆಯೇ ಅದರಲ್ಲಿರುವ ಗೀತಗಳ ರಾಗಗಳು ಸುಲಭಗ್ರಾಹ್ಯವಾಗಿ ಇಂಪಾಗಿರಬೇಕು. ಸಂಗೀತ ಸಾಹಿತ್ಯದ ಉತ್ತಮ ಸಂಗಮವಾದ ಗೀತಗಳು ಜನಪ್ರಿಯವಾಗಲೇಬೇಕು.

ರಾಗಭಾವಕ್ಕೆ ಪುಷ್ಟಿಯನ್ನೀಯುವ ನಾದ ಪ್ರಸಾರ ಮಾಡುವ ವಾದ್ಯಗಳ ಸಮ್ಮಿಲನಗೊಳಿಸಿ ಅಂಥ ವಾದ್ಯಗಳನ್ನು ನುಡಿಸುವ ಸಮರ್ಥರನ್ನು ಗೊತ್ತುಮಾಡಿ ಅವರ ಸಹಾಯ ಪಡೆಯುವುದು ಒಂದು ಕಲೆ. ಅಂತೆಯೇ ಆಯಾ ಗೀತಗಳನ್ನು ಹಾಡಲು ಸರಿಯಾದ ಕಂಠಗಳನ್ನು ಗೊತ್ತುಪಡಿಸಿ ಅವರಿಂದ ಭಾವಪೂರ್ಣವಾದ ಗಾಯನ ಮಾಡುವಂತೆ ನಿಯೋಜಿಸುವುದು ಸಂಗೀತನಿರ್ದೇಶಕನ ಮಹತ್ತರ ಹೊಣೆ.

ಚಿತ್ರಕ್ಕೆ ಹಿತಕರವಾದ ಸಂಗೀತವನ್ನು ನೀಡುವುದು ಸಂಗೀತನಿರ್ದೇಶಕನ ಹೊಣೆ. ಆ ಕರ್ತವ್ಯದಲ್ಲಿ ಲೋಪವಿಲ್ಲದೆ ನಿರ್ವಹಿಸುವುದು ಮಾತ್ರ ಸಂಗೀತನಿರ್ದೇಶಕನ ಪರಮ ಗುರಿ. ಈ ಗುರಿ ಸಾಧನೆಯಲ್ಲಿ ಸಂಗೀತನಿರ್ದೇಶಕ ಯಶಸ್ವಿಯಾದರೆ ಚಿತ್ರವು ಯಶಸ್ವಿಯಾಗಲೇಬೇಕು. ಒಂದು ವೇಳೆ ತಾನೊಂದು ಎಣಿಸಿದರೆ ದೈವ ಒಂದು ಎಣಿಸಿದಂತೆ, ಚಿತ್ರವು ಅಯಶಸ್ವಿಯಾದರೂ ತಾನು ಆತ್ಮಸಾಕ್ಷಿಯ ಎದುರು ನಿರ್ದೋಷಿಯಾಗಿರುವ ಆತ್ಮಸಂತೋಷ ಅವನನ್ನು ಭವಿಷ್ಯದಲ್ಲಿ ಉನ್ನತ ಸ್ಥಿತಿಗೆ ತಂದೇ ತರುತ್ತದೆ.

# ನಾಯಕ ನಟ ಹಿರಿಯಮಗನಂತೆ ನಡೆದುಕೊಳ್ಳಬೇಕು

ಕಲ್ಯಾಣಕುಮಾರ
( ಜನಪ್ರಿಯ ನಾಯಕ ನಟ )

ಕನ್ನಡ ಚಿತ್ರರಂಗ ಮುಂದುವರಿಯಬೇಕಾದರೇ ನಮ್ಮ ಕರ್ತವ್ಯವೇನು ? ಮುದ್ದಾದ ಪುಟ್ಟ ಪ್ರಶ್ನೆ...ಆದ್ರೇ ಅದಕ್ಕೆ ಉತ್ತರ ಹೇಳುವುದು ಮಾತ್ರ ಕ್ಲಿಷ್ಟವಾದದ್ದು. ಅದಕ್ಕೆ ಪೂರ್ಣವಾಗಿ ಉತ್ತರ ಸಿಗದಿದ್ದರೂ ಸ್ವಲ್ಪಮಟ್ಟಿಗೆ ಹೇಳಬಹುದು,

ಚಿತ್ರರಂಗ ಒಂದು ಸವಿಷ್ಟಿತ ಕುಟುಂಬ ಇದ್ದಂತೆ. ಕುಟುಂಬ ಸಂತೋಷದಿಂದ ನೆಮ್ಮದಿಯಿಂದ ತೂಗಿಸಬೇಕಾದರೆ ಮನೆಯಲ್ಲಿ ಎಲ್ಲರ ಸಹಕಾರವೂ ಬೇಕು, ಯಾರೊಬ್ಬರು ಮುನಿದರೂ ಮನಸ್ಸಿಗೆ ಬೇಸರ, ಮನೆಯಲ್ಲಿ ಶೋಕ, ಹಾಗೆಯೇ ಚಿತ್ರರಂಗ ಕೂಡ; ಎಲ್ಲರ ಸಹಕಾರವೂ ಬೇಕು, ಯಾರೊಬ್ಬರು ತೊಂದರೆ ಕೊಟ್ಟರೂ, ಚಿತ್ರ ಕುಂಟುತ್ತೆ, ಆ ಮೇಲೆ ಎಡವುತ್ತೆ..ಅನಂತರ ಮಲಗುತ್ತೆ...ಮಲಗಿದ ಚಿತ್ರವನ್ನು ಎಬ್ಬಿಸಬೇಕಾದ್ರೂ ಎಲ್ಲರ ಸಹಕಾರವೂ ಬೇಕು. ಚಿತ್ರರಂಗಕ್ಕೆ ಸಹಕಾರವೇ ಆಧಾರ.

ಒಬ್ಬೊಬ್ಬರು ತಮ್ಮ ಪಾಲಿಗೆ ಬಂದ ಕರ್ತವ್ಯವನ್ನು ನಿಷ್ಠೆಯಿಂದ ಪಾಲಿಸಿದರೇ, ಕನ್ನಡ ಚಿತ್ರರಂಗ ನಮ್ಮ ಪಾಲಿಗೆ ಒಂದು ಕಾಮಧೇನುವೇ ಸರಿ...ಎಲ್ಲರೂ ಅದರ ಅಮೃತವನ್ನು ಉಂಡು, ಆನಂದದಿಂದ ಇರಬಹುದು, ಮನೆಗೆ ಬಂದವರಿಗೂ ಹಂಚಬಹುದು.

" ಕರ್ತವ್ಯ " ಈ ಮೂರು ಅಕ್ಷರ ನಮ್ಮ ಬಾಳಿನ ಗುರಿಯಾಗಿರಬೇಕು, ತಪಸ್ಸುಮಾಡಿ, ದೇವರನ್ನು ಮೆಚ್ಚಿಸಿ, ವರಪಡೆಯುತ್ತಿದ್ದರಂತೆ ಅನಾದಿಕಾಲದಲ್ಲಿ. ಈ ಕಾಲದಲ್ಲೂ ವರಪಡೆಯಬಹುದು. ' ಕರ್ತವ್ಯ ' ಎಂಬ ದೇವರನ್ನು ನಿಷ್ಠೆಯಿಂದ ಪೂಜಿಸಿದರೆ ಮಾತ್ರ. ಆ ಪೂಜೆಗೆ ಬೇಕಾದ್ದು ಹೊನ್ನಲ್ಲ, ಪವಿತ್ರ ಹೃದಯ. ಆಡಂಬರ ಬೇಕಿಲ್ಲ, ಅನಂತ ಭಕ್ತಿಬೇಕು. ನೈವೇದ್ಯಬೇಕಿಲ್ಲ ನಿಷ್ಠೆಬೇಕು. ಇವುಗಳಿಂದ ಕರ್ತವ್ಯದ ದೇವರನ್ನು ಒಲಿಸಿಕೊಂಡ್ರೇ ಜೀವಾವಧಿ ನಾವು ಸಂತೋಷದಿಂದ ಬಾಳಬಹುದು. ಆ ಬಾಳಿಗೆ ಕತ್ತಲೆಯ ಛಾಯೆ ಎಂದೆಂದಿಗೂ ಬೀಳದು.

ಒಬ್ಬೊಬ್ಬರು ಒಂದೊಂದು ಕರ್ತವ್ಯವನ್ನು ಪಾಲಿಸಬೇಕು...ಅದರಲ್ಲಿ ನಮ್ಮ ಅಂದ್ರೇ ಕಥಾನಾಯಕರ, ಕರ್ತವ್ಯವೇನು! ಈ ಪ್ರಶ್ನೆಗೆ ಉತ್ತರ ಹೇಳುತ್ತೇನೆ...ಆದ್ರೇ ಆ ಉತ್ತರದಿಂದ ಬೇರೊಬ್ಬರನ್ನು ನೋಯಿಸಬೇಕೆಂಬ ಅಲ್ಪ ಆಶೆ ನನಗಿಲ್ಲ... ನನಗೆ ಹೊಳೆದಿದ್ದನ್ನು ಮಾತ್ರ ಹೇಳುತ್ತಿದ್ದೇನೆ. ಕಥಾನಾಯಕ ಚಿತ್ರರಂಗದಲ್ಲಿ ಹಿರಿಯಮಗನಂತೆ... ನಿಜನುಡಿಯಬೇಕಾದ್ರೇ ಚಿತ್ರರಂಗದ ಆಗುಹೋಗುಗಳು ಮುಕ್ಕಾಲು ಭಾಗ ಇವರ ಮೇಲೆ ಆಧಾರಪಟ್ಟಿದೆ, ಹಿರಿಯಮಗ ಕುಟುಂಬದಲ್ಲಿ ಅಕ್ಕರೆ ಇಲ್ಲದೆ ಅಲೆದಾಡುತ್ತಿದ್ದರೆ, ಆ ಕುಟುಂಬದಗತಿ ಏನು ಹೇಗೋ ನಡೆಯುತ್ತೆ, ಆದ್ರೇ ಸಮಾಜದಲ್ಲಿ ತಲೆ ಎತ್ತಿ ಬಾಳಲಾರದೆ ಪರಿತಪಿಸುತ್ತೆ...ಹಾಗೆ ಕಥಾನಾಯಕನೂ ಸಹ ಚಿತ್ರದಲ್ಲಿ ತನ್ನ ಭಾಗಕ್ಕೆ ಬಂದಿರುವ ಕರ್ತವ್ಯವನ್ನು ಮರೆತು ನಡೆದರೇ ಚಿತ್ರದ ಗತಿ ಏನು! ಒಂದು ವೇಳೆ ಮುಗಿದರೂ ಅದು ಜನಗಳ ಮಧ್ಯೆ ಹೋಗಿ ನಿಲ್ಲಲಾರದು...ಆ ಚಿತ್ರನಿಲ್ಲದಿದ್ದರೇ, ನಿರ್ಮಾಪಕ ನಿಲ್ಲುವುದಿಲ್ಲ, ನಿರ್ಮಾಪಕ ನಿಲ್ಲದಿದ್ದರೇ



ಕಲ್ಯಾಣಕುಮಾರ

ಮಿಕ್ಕಕಲಾವಿದರೂ ತಾಂತ್ರಿಕ ವರ್ಗದವರೂ ನಿಲ್ಲಲಾರದೆ ಕುಸಿದುಬೀಳುವರು, ಇದಕ್ಕೆ ಕಾರಣ ಯಾರು? ಕರ್ತವ್ಯವನ್ನು ಕಡೆಗಣ್ಣಿಂದ ನೋಡುವ ಕಥಾನಾಯಕ...ಕಥಾನಾಯಕ ಮಾತ್ರವಲ್ಲ, ಎಲ್ಲರೂ, ಕರ್ತವ್ಯವನ್ನು ಪಾಲಿಸಬೇಕು. ಒಬ್ಬರು ಕರ್ತವ್ಯವನ್ನು ಮರೆತರೂ, ಮಿಕ್ಕವರೆಲ್ಲಾ ತೊಂದರೆಗೀಡಾಗುತ್ತಾರೆ. ಕಥಾನಾಯಕ ಪಾಲಿಸಬೇಕಾದ ಕರ್ತವ್ಯಗಳು ಮುಖ್ಯವಾಗಿ ಮೂರು. ಮೊದಲನೆಯದಾಗಿ ಕಥಾನಾಯಕ ಚಿತ್ರಕಥೆಯನ್ನು ಸಂಪೂರ್ಣ ತಿಳಿದುಕೊಳ್ಳಬೇಕು ಆ ಚಿತ್ರದಲ್ಲಿ ಕಥಾನಾಯಕನ ವೇಷ ತನಗೆ ಸರಿಯಾಗಿ ಒಪ್ಪುವುದೇ ಒಪ್ಪುವುದಿಲ್ಲವೇ ಎಂದು ಯೋಚಿಸಿ ನಂತರ ಸಮ್ಮತಿಸಬೇಕು. ಬರುವ ಎಲ್ಲಾ ಚಿತ್ರಗಳಲ್ಲೂ ತಾನೇ ನಟಿಸಬೇಕೆಂದು ಆಶಿಸಿ, ಸಮ್ಮತಿಸಿದರೇ ಅದು ಆತನಿಗೂ ಒಳ್ಳೆಯದಲ್ಲ, ಮತ್ತೊಬ್ಬ ಕಲಾವಿದನಿಗೂ ಕೇಡು ಬಯಸಿದಂತಾಗುತ್ತೆ, ಜನಗಳಿಗೂ ಬೇಸರಬರುತ್ತೆ.

ಎರಡನೆಯದಾಗಿ ಚಿತ್ರದಲ್ಲಿ ತನ್ನಪಾತ್ರ ಚೆನ್ನಾಗಿರಬೇಕು ತನ್ನೊಡನೆ ನಟಿಸುವವರು ಚೆನ್ನಾಗಿ ನಟಿಸಬೇಕು ಎಂಬ ಆಶೆ ಇರುವುದು ಸಹಜ... ಆದ್ರೇ ಆ ಆಶೆ ಹೋಗುವರೀತಿ ನೋಡಿದ್ರೇ, ಎದೆ ನಡುಗುತ್ತೆ, ಕಥಾನಾಯಕ ತನಗೇ ಇಂಥಿಂಥಾ ಪಾತ್ರಗಳಿಗೆ ಇಂಥಿಂಥವರೇಬೇಕೆಂದು ಖಂಡಿತವಾಗಿ ಹೇಳುವುದು ಒಳ್ಳೆಯದಲ್ಲವೆಂದು ನನ್ನ ಭಾವನೆ. ಕಾರಣ, ಕಥಾನಾಯಕರ ತೃಪ್ತಿಗಾಗಿ, ಮುಂಚಿತವಾಗಿಯೇ ಒಪ್ಪಂದವಾಗಿರುವ ಕಲಾವಿದರನ್ನು ತೆಗೆದು ಮತ್ತೊಬ್ಬರನ್ನು ಒಪ್ಪಂದ ಮಾಡುವುದು ನ್ಯಾಯವೇ ? ಕಥಾನಾಯಕರನ್ನು ನಿರ್ಮಾಪಕರು, ನಿರ್ದೇಶಕರೂ ಸಲಹೆ ಕೇಳುತ್ತಾರೆ ನಿಜ...ಅದಕ್ಕಾಗಿ—ಅದನ್ನು ದುರುಪಯೋಗ ಪಡಿಸಿಕೊಳ್ಳುವುದು ತಪ್ಪಲ್ಲವೇ? ಅವರ ಸ್ವತಂತ್ರ, ಸ್ವೇಚ್ಛೆ, ಆಶೆಗಳಿಗೆ ಅಡ್ಡಿ ಹೋಗಬಹುದೇ! ಹಾಗೆ ಪ್ರತಿಯೊಂದು ವಿಷಯದಲ್ಲೂ ತಲೆಹಾಕುವುದು ಉಚಿತವಲ್ಲವೆಂದು ನನ್ನ ಅಭಿಪ್ರಾಯ.

ಮೂರನೆಯದಾಗಿ ಮತ್ತು ಕಡೆಯದಾಗಿ ಮತ್ತು ಮುಖ್ಯವಾಗಿ ಕಥಾನಾಯಕರು ಪಾಲಿಸಬೇಕಾದ್ದು ಚಿತ್ರಣಕ್ಕೆ ನಿರ್ಮಿತ ಸಮಯಕ್ಕೆ ಬರಬೇಕಾದ್ದು, ಇದು ತುಂಬಾ ಮುಖ್ಯ, ಸ್ಟುಡಿಯೋಗಳಲ್ಲಿ ಒಂದೊಂದು ಕ್ಷಣಕ್ಕೂ ಥರ್ಮಾಮೀಟರಿನಲ್ಲಿ ಜ್ವರ ಏರಿದಂತೆ ದುಡ್ಡು ಏರುತ್ತೇ ನಿರ್ಮಾಪಕರ ಎದೆ ಪರಿತಪಿಸುತ್ತೆ, ಸ್ಟುಡಿಯೋ ಯಜಮಾನರ ಕಬ್ಬಿಣದ ಪೆಟ್ಟಿಗೆ ನಗುತ್ತೆ, ಹೀಗೆ ಪ್ರತಿಯೊಂದು ಕಾಲ್‌ಷೀಟ್ ಆಲಸ್ಯವಾಗಿ ಆರಂಭಿಸಿದರೇ, ಮುಂಚಿತವಾಗಿ ನಿರ್ಮಾಪಕರೂ, ಹಾಕಿಕೊಂಡಿರುವ "ಬಜೆಟ್" ಏಟು ತಿನ್ನುತ್ತೇ, ಮಧ್ಯದಲ್ಲಿ ಹಣದ ತಾಪತ್ರಯ ಬರುತ್ತೆ, ಅಷ್ಟೇ ಅಲ್ಲಿಗೆ ಮುಗಿಯಿತು, ಚಿತ್ರದ ಕಥೆ.

ಆದ್ರೇ ಇದು ಬರೇ ನಮ್ಮಗಳ "ಕರ್ತವ್ಯ" ಮಾತ್ರ...ನಮ್ಮ ಕರ್ತವ್ಯದಿಂದ ಮಾತ್ರ ಚಿತ್ರರಂಗ ಉಜ್ವಲವಾಗಿ ಬೆಳಗಲಾರದು. ಎಲ್ಲರೂ ಕರ್ತವ್ಯವನ್ನು ಪಾಲಿಸಬೇಕು. ಆಗ ಮಾತ್ರ ಚಿತ್ರರಂಗ ಮುಂದುವರಿಯಲು ಸಾಧ್ಯ. ಕರ್ತವ್ಯ ಅಭಿಮಾನಗಳಿಂದ ನಮ್ಮ ಚಿತ್ರರಂಗ ಎಷ್ಟೋ ಮುಂದುವರಿದಿದೆ. ಆದ್ರೇ ಇನ್ನೂ ಮುಂದುವರಿಯಬೇಕು. ಪರದೇಶಿಯರೂ ಕನ್ನಡ ಚಿತ್ರವನ್ನು ನೋಡಿ ನಲಿಯಬೇಕು ಎಂದು ನನ್ನ ಆಶಯ.

# ಪಾತ್ರದಲ್ಲಿ ತಲ್ಲೀನಳಾಗಿ ನಾಯಕಿ ಅಭಿನಯ ನೀಡಬೇಕು



ಲೀಲಾವತಿ

ನಿತ್ಯ ಜೀವನದ ನಾನಾ ಕೋಟಲೆಗಳಿಂದ ಮನಸ್ಸನ್ನು ಕೆಲವು ಕ್ಷಣಗಳ ಮಟ್ಟಿಗಾದರೂ ದೂರವಿರಿಸಬೇಕೆಂದು ಪ್ರೇಕ್ಷಕ ಚಿತ್ರ ನೋಡಲು ಬರುತ್ತಾನೆ. ಅಂಥವನ ಮನಸ್ಸಿನ ಬೇಸರ ಕಳೆದು ಚಿತ್ರ ಕೆಲ ನಿಮಿಷಗಳ ಮಟ್ಟಿಗಾದರೂ ತಲ್ಲೀನತೆಯನ್ನೊದಗಿಸಿ ಅವನ ಮೇಲೆ ಒಂದು ಹೊಸ ಪ್ರಭಾವ ಬೀರುವಂತಿರಬೇಕು. ಅದೇ ಚಿತ್ರದ ಸಾರ್ಥಕತೆ. ಅದಕ್ಕೆ ಬದಲಾಗಿ ನೋಡಿದ ಚಿತ್ರ ಪ್ರೇಕ್ಷಕನ ಮೇಲೆ ಅಸಹಜ ಪರಿಣಾಮ ಬೀರಿದರೆ ಚಿತ್ರ ನಿರ್ಮಾಣ ಸತ್ಯತೆಗೆ ದೂರವಿದೆ ಎಂದಾಯ್ತು. ಆದರೆ ಎಷ್ಟು ಚಿತ್ರಗಳು ಈ ರೀತಿ ಯಶಸ್ಸನ್ನು ಗಳಿಸುತ್ತಿವೆ? ಎಷ್ಟು ಚಿತ್ರಗಳು ದುಷ್ಟ ಪರಿಣಾಮ—ವನ್ನುಂಟುಮಾಡುತ್ತಿವೆ?

ಚಿತ್ರಗಳು ಕೇವಲ ಕಲಾಸೇವೆಗಾಗಿ, ಸಮಾಜ ಸುಧಾರಣೆಗಾಗಿವೆಯೆಂದಾದರೂ ಎಲ್ಲಾ ಚಿತ್ರಗಳೂ ಅದೇ ಮನೋಭಾವನೆಯಲ್ಲಿ ನಿರ್ಮಾಣವಾಗುತ್ತಿಲ್ಲ. ಒಳ್ಳೆಯ ವ್ಯಾಪಾರಿ ಮನೋಭಾವ ಹೆಚ್ಚು ಚಿತ್ರಗಳ ನಿರ್ಮಾಣಕ್ಕೆ ಕಾರಣವಾಗುತ್ತಿದೆ. ಪ್ರತಿಫಲದ ಅಪೇಕ್ಷೆ ಇಲ್ಲದ ಉದ್ಯಮ ಯಾವುದೂ ಇರಲಾರದು. ಅಂತೆಯೆ ಚಿತ್ರ ನಿರ್ಮಾಣದಲ್ಲಿ ಹೆಚ್ಚು ಲಾಭ ಮತ್ತು ಯಶಸ್ಸು ಕಂಡ ನಿರ್ಮಾಪಕ ಹೆಚ್ಚು ಉತ್ಸಾಹದಿಂದ ಮುಂದೆ ಅಡಿಯಿಡುತ್ತಾನೆ. ಹಾಗಿಲ್ಲದೇ ತನ್ನ ಲಕ್ಷಾಂತರ ರೂಪಾಯಿಗಳನ್ನು ನೀರಿನಲ್ಲಿ ಹೋಮ ಮಾಡಿಕೊಳ್ಳಲು ಯಾರೂ ಸಿದ್ಧರಾಗಿರುವುದಿಲ್ಲ.

ಉತ್ಸಾಹದಿಂದ ಮುಂಬರುವ ನಿರ್ಮಾಪಕನಿಗೆ ನಷ್ಟವಾಗದಂತೆ ಎಷ್ಟು ಬಂಡವಾಳವಾದರೆ ನಾವು ಉತ್ತಮ ಚಿತ್ರ ಕೊಡಲು ಸಾಧ್ಯ ಎಂಬುದನ್ನು ಚಿತ್ರದಲ್ಲಿ ಕೆಲಸ ಮಾಡುವ ಪ್ರತಿಯೊಬ್ಬರೂ ಯೋಜಿಸಬೇಕು. ಚಿತ್ರದ ಯಶಸ್ಸಿಗೆ ಪ್ರತಿಯೊ—ಬ್ಬರೂ ಕಾರಣರು, ಚಿತ್ರನಿರ್ಮಾಪಕನೆಂದರೆ ಹಣ ತಂದು ಸುರಿಯುವ ಒಂದು ಯಂತ್ರವೆಂದು—ಕೊಂಡು ಅವನಿಂದ ಯಾವಾಗಲೂ ನಾನಾವಿಧದಲ್ಲಿ ಹಣ ನಷ್ಟಗೊಳಿಸುತ್ತಿರುವದೇ ಚಿತ್ರರಂಗದ ಇತರರ—ಅದರಲ್ಲೂ ಮುಖ್ಯವಾಗಿ ತಾರೆಯಾದವಳ ಉದ್ದೇಶವೆಂದೂ ಹಲವರ ಭಾವನೆ. ಕಥಾ-ನಾಯಕಿಯಾದವಳು ತನ್ನ ಜವಾಬ್ದಾರಿಯನ್ನು ಚೆನ್ನಾಗಿ ಮನಗಾಣಬೇಕು. ನಿರ್ಮಾಣದ ನಿಯಮಿತ ಸಮಯಕ್ಕೆ ನಿಯಮಿತ ಸ್ಥಳಕ್ಕೆ ತಾನು ಹೆಚ್ಚು ಉತ್ಸಾಹದಿಂದ ಬಂದು ತನ್ನ ಪಾಲಿನ ಕರ್ತವ್ಯವನ್ನು ನಿರ್ವಹಿಸಬೇಕು. ನಿರ್ಮಾಪಕನಿಗೆ ತೊಂದರೆ ಕೊಟ್ಟು ಆತನನ್ನು ನಷ್ಟಕ್ಕೆ ಗುರಿಮಾಡುವುದರಿಂದಲೂ ಇತರ ತಾಂತ್ರಿಕ ವರ್ಗದವರನ್ನು ಉದಾಸೀನ ದೃಷ್ಟಿಯಿಂದ ಕಾಣುವುದೂ ನಾಯಕಿಯಾದವಳ ಯಶಸ್ಸಿಗೇ ಕೊಡಲಿ ಪೆಟ್ಟು.

ಕಥಾನಾಯಕಿಯಾದವಳು ತನ್ನ ಸುತ್ತಲಿನ ಎಲ್ಲವನ್ನೂ ಗಮನಿಸಬೇಕು. ಕಥೆಯಲ್ಲಿನ ತನ್ನ ಪಾತ್ರವನ್ನು ಚೆನ್ನಾಗಿ ಮನಗಂಡು ಅದಕ್ಕೆ ಹೊಂದಿಕೊಳ್ಳುವಂತೆ ಚಿತ್ರ ನಿರ್ಮಾಣದ ಎಲ್ಲ ವ್ಯವಸ್ಥೆಯೂ ಇದೆಯೇ ಎಂಬುದನ್ನೂ ಗಮನಿಸಬೇಕು. ಕಥೆಯಲ್ಲಿ ಹೆಚ್ಚು ಸತ್ವವಿಲ್ಲದ ಅಥವಾ ಸನ್ನಿವೇಶಗಳ ನಿರ್ಮಾಣದಲ್ಲಿ ಹೆಚ್ಚು ಸಹಜತೆ ಇಲ್ಲದಿರುವಂಥ ಪ್ರಸಂಗಗಳಿದ್ದರೆ ತನ್ನ ಪಾತ್ರ ಪೋಷಣೆಯ ಮಹತ್ವವನ್ನು ಅರಿತು ಕಥಾನಾಯಕಿಯಾದವಳು ಯಾವ ರೀತಿ ನಿರ್ವಹಿಸಿದರೆ ಚಿತ್ರ ಹೆಚ್ಚು ಯಶಸ್ಸು ಗಳಿಸಬಹುದೆಂದು ಆಲೋಚಿಸಿ ಆ ರೀತಿ ತಾಂತ್ರಿಕ ವರ್ಗದವರನ್ನೂ, ತನ್ನೊಂದಿಗೆ ಪಾತ್ರ ವಹಿಸುವ ಇತರ ನಟನಟಿಯರನ್ನೂ ಬಳಸಿಕೊಳ್ಳಬೇಕು. ಈ ರೀತಿಯ ಸೃಷ್ಟಿಶೀಲ ಮನೋಭಾವನೆಯುಳ್ಳ ಕಥಾನಾಯಕಿ ತನ್ನ ಕರ್ತವ್ಯ ಅರಿತು ವರ್ತಿಸುವುದರಿಂದ ಚಿತ್ರರಂಗದ ಹೊಸ ನಟ, ನಟಿಯರಿಗೂ, ತಾಂತ್ರಿಕವರ್ಗದವರಿಗೂ ಮತ್ತು ನಿರ್ದೇಶಕರಿಗೂ ಅವಳ ಬಗ್ಗೆ ಹೆಚ್ಚು ಗೌರವ ಮೂಡಿ ಚಿತ್ರದ ಯಶಸ್ಸಿಗೆ ಎಲ್ಲರೂ ಒಮ್ಮನಸ್ಸಿನಿಂದ ದುಡಿಯುವಂತೆ ಹುರಿದುಂಬಿಸುತ್ತದೆ.

ಎಂ. ಲೀಲಾವತಿ
(ಖ್ಯಾತ ನಾಯಕ ನಟಿ)

ಚಿತ್ರದಲ್ಲಿ ತಾರೆಯಾದವಳ ಸ್ಥಾನ ಉನ್ನತವಾದುದು. ಅವಳು ತನ್ನ ಘನತೆ ಗಾಂಭೀರ್ಯಗಳನ್ನು ಎಂದಿಗೂ ಕಾಪಾಡಿಕೊಳ್ಳಬೇಕು. ಹಾಗೆಂದು ಅವಳು ಅಹಂಕಾರಕ್ಕೆ ಬಲಿಯಾಗಬಾರದು. ತನ್ನ ಭಾಗಕ್ಕೆ ಬರುವ ಎಲ್ಲಾ ಪಾತ್ರಗಳನ್ನೂ ತನ್ನದೇ ಆದ ದೃಷ್ಟಿಯಲ್ಲಿ ಆಲೋಚಿಸಬೇಕು. ತಾನು ಎಲ್ಲಿಯ ವರೆಗೆ ಆ ಪಾತ್ರಕ್ಕೆ ತಕ್ಕ ನ್ಯಾಯ ಒದಗಿಸಲು ಸಾಧ್ಯ ಎಂಬುದನ್ನು ತನ್ನ ಯೋಗ್ಯತೆಯ ಅಳತೆಗೋಲಿನಿಂದ ಅಳೆಯಬೇಕು. ಪಾತ್ರಕ್ಕೆ ತಾನು ಹೊಂದಿಕೊಳ್ಳಲು ಸಾಧ್ಯವೇ ಎಂಬುದನ್ನು ಆಲೋಚಿಸಬೇಕು. ಸಾಮಾಜಿಕ ಚಿತ್ರಗಳಲ್ಲಿ ಯಶಸ್ಸು ಗಳಿಸಿದವಳು ಪೌರಾಣಿಕ ಅಥವಾ ಜಾನಪದ ಚಿತ್ರಗಳಲ್ಲಿ ಪಾತ್ರವಹಿಸುವ ಸಾಮರ್ಥ್ಯ ಹೊಂದಿಲ್ಲದಿರಬಹುದು. ತನ್ನ ಪ್ರತಿಭೆ ಯಾವಾಗಲೂ ಸರ್ವೋಚ್ಚ ಎಂದು ತಾನು ಭಾವಿಸಬಾರದು ಇದನ್ನು ನಿರ್ಣಯಿಸುವ ಬಾಧ್ಯತೆ ಜನತೆಯದು. ಕೆಲವು ಚಿತ್ರಗಳು ತನಗೆ ಒಳ್ಳೆಯ ಯಶಸ್ಸನ್ನು ಸಂಪಾದಿಸಿಕೊಟ್ಟಿದ್ದರೆ ಎಲ್ಲದರಲ್ಲೂ ತಾನು ಅದೇ ರೀತಿ ಯಶಸ್ಸು ಗಳಿಸಬಹುದೆಂಬ ಕಲ್ಪನೆ ಕೆಲ ಬಾರಿ ತಪ್ಪಾಗಬಹುದು. ಎಲ್ಲರೂ ಎಲ್ಲ ವಿಧದ ಪ್ರತಿಭೆಯನ್ನು ಹೊಂದಿರುವುದು ಅತಿ ವಿರಳ. ತನ್ನ ಕ್ರಿಯಾ—ಶೀಲತೆಯ ಬಗ್ಗೆ ಪರಿಪೂರ್ಣವಾದ ಆತ್ಮವಿಶ್ವಾಸವಿರಬೇಕು. ತನ್ನ ಮನೋಭಾವಕ್ಕೆ ಹೊಂದಿಕೊಳ್ಳಲಾರದಂತಹ ಪಾತ್ರಗಳನ್ನು ಇತರರಿಗೆ ಬಿಟ್ಟುಕೊಡುವುದು ಅವಳ ಕೀರ್ತಿಗೆ ಮೆರಗು ಹಾಗೂ ಚಿತ್ರದ ಯಶಸ್ಸಿಗೆ ಮುಖ್ಯವಾದೊಂದು ಸಹಕಾರ,

ಕೆಲವು ಸಂದರ್ಭಗಳಲ್ಲಿ ನಿರ್ದೇಶಕರು ಕೆಲವು ಹೆಸರಾಂತ ತಾರೆಯರು ಕೆಲವು ಯಶಸ್ವಿ ಚಿತ್ರಗಳಲ್ಲಿನ ಕೆಲವು ಸನ್ನಿವೇಶಗಳಲ್ಲಿ ಯಾವ ರೀತಿ ನಟಿಸಿದ್ದಾರೆ ಎಂಬುದನ್ನು ಉದಾಹರಿಸಿ-ನೋಡಿ ಈ ಸಂದರ್ಭದಲ್ಲಿ ನಿಮ್ಮ ಅಭಿನಯವೂ ಅದೇ ರೀತಿಯದಾಗಬೇಕು ಎನ್ನುತ್ತಾರೆ. ಎಲ್ಲರಿಂದಲೂ ಒಂದೊಂದು ಒಳಿತನ್ನು ಕಲಿಯಬೇಕೆನ್ನುವದು ನಿಜ. ಆದರೂ ಕನ್ನಡ ಚಿತ್ರರಂಗ ತನ್ನ ಪುಟ್ಟದಾದ ಕ್ಷೇತ್ರದಲ್ಲಿ ಸರ್ವತಂತ್ರಸ್ವತಂತ್ರವಾಗಿರಬೇಕು. ಅದರಲ್ಲಿ ಯಾರ ಅನುಕರಣೆಯೂ ಇಲ್ಲದ ನೈಜತೆ ಇರಬೇಕು. ಕನ್ನಡ ಚಿತ್ರದ ನಾಯಕಿ ನಾಯಕರೂ ಯಾವ ಪರಭಾಷೆಯ ಚಿತ್ರದ ನಾಯಕಿ—ನಾಯಕರಿಗೇನೂ ಕಡಿಮೆ ಇಲ್ಲವೆಂಬ ಭಾವನೆ ನಮ್ಮವರಲ್ಲೂ ಮೂಡಿಬರುವದಕ್ಕೆ ತಕ್ಕ ಕಲಾಪ್ರತಿಭೆಯನ್ನು ನಾವೂ ತೋರಬೇಕು. ಕನ್ನಡ ಜನತೆ ಸ್ವ...ಪರಭೇದವಿಲ್ಲದೆ ಯಾವಾಗಲೂ ಕಲಾರಾಧನೆ ಮಾಡುತ್ತದೆ. ತನ್ನ ಮಕ್ಕಳನ್ನು ಪ್ರೇಮಪೂರ್ಣವಾಗಿ ಪ್ರೋತ್ಸಾಹಿಸಿದ ನಂತರ ಇತರರಿಗೆ ಮನ್ನಣೆ ಕೊಡುವ ತಾಯ ಮನೋಭಾವ ನಮ್ಮ ಜನಾಂಗದಲ್ಲಿ ಬೆಳೆದುಬರಬೇಕು.

# ಚಿತ್ರಜಗತ್ತು

# — ನಾ ಕಂಡಂತೆ

ಮೀನಾಕುಮಾರಿ
( ಹಿಂದೀ ಚಿತ್ರರಂಗದ ಖ್ಯಾತತಾರೆ )



ಚಿತ್ರಲೋಕ ಒಂದು ಅದ್ಭುತ ಸೃಷ್ಟಿ. ಬಾಲ ತಾರೆಯಾಗಿ ಈ ಸೃಷ್ಟಿಯಲ್ಲಿ ಪ್ರವೇಶಿಸಿದ ನಂತರ ಈ ವರೆಗೆ ಎರಡು ದಶಕ ಕಾಲ ಕಳೆದಿರುವೆ. ಆಗಿನಿಂದ ಈ ವರೆಗೆ ಈ ಚಿತ್ರ ಜಗತ್ತು ಮತ್ತು ಅದರಲ್ಲಿ ತೊಡಗಿದ ನಾನಾ ಜನರ ಬಗೆಗೆ ತುಂಬಾ ಪ್ರೇಮಾದರಗಳನ್ನು ನಾನು ತಾಳಿರುವೆ. ಈ ಲೋಕದ ಕೆಲಸಗಾರರು, ತಂತ್ರಜ್ಞರೆಲ್ಲರೂ ನನ್ನನ್ನು ತಮ್ಮ ಪ್ರೀತಿಯ 'ದೀದಿ' ಎಂದೇ ಕಾಣುತ್ತ ಬಂದಿರುವರು.

ಇಂದಿನ ಈ ಸ್ಥಾನವನ್ನು ಪಡೆಯಲು ನಾನು ತುಂಬ ಶ್ರಮಿಸಿರುವೆ. ವಿವಿಧ ಸ್ಟುಡಿಯೋಗಳಲ್ಲಿ ದುಡಿಯುತ್ತಿರುವ ಶ್ರಮಿಕರನ್ನೆಲ್ಲ ನಾನು ಬಲ್ಲೆ. ಅವರೊಂದಿಗೆ ನನ್ನದು ಅವಿಚ್ಛಿನ್ನವಾದ ಬಾಂಧವ್ಯ ಬೆಳೆದು ಬಂದಿದೆ.

ಈ ಉದ್ಯಮೆಯಲ್ಲಿ ತುಂಬ ವಿಷಮತೆ ಇದೆ. ಹಲವಾರು ವರ್ಷಗಳಿಂದ ಸ್ಟುಡಿಯೋಗಳಲ್ಲಿ ದುಡಿವ ಕೆಲಸಗಾರರೂ ಕೇವಲ ೬೦—೮೦ ರೂ. ಸಂಬಳ ಪಡೆಯುವರು. ದಿನದ ಕೆಲಸ ಮುಗಿಸಿಕೊಂಡು ಮನೆಗೆ ಮರಳುವಾಗಲೆಲ್ಲ ಈ ಶ್ರಮಿಕರ ವಿಚಾರ - ನನ್ನ ತಲೆಯಲ್ಲಿ ಸುಳಿದು ಹೋಗುವದು. ಕೆಲ ನಿರ್ಮಾಪಕರು ಸ್ನೇಹಿತರೊಂದಿಗೆ ಈ ವಿಷಯವಾಗಿ ಮಾತನಾಡಿದೆ. ಅವರು ಕೇವಲ ನಕ್ಕು ಬಿಟ್ಟರು: ನಾನು 'ದುರಂತ' ಪಾತ್ರಗಳ ನಾಯಕಿಯಾದುದರಿಂದ ಯಾವಾಗಲೂ ಜೀವನದ ಈ ಅಂಶದತ್ತ ನನ್ನ ದೃಷ್ಟಿ ಹರಿಯುವದೆಂದು ಅವರ ತಿಳುವಳಿಕೆ.

ಮಾನವ ಜೀವನದ ನೈಜತೆಯನ್ನು ಮತ್ತು ಭಾವನೆಗಳನ್ನು ಸರಿಯಾಗಿ ವ್ಯಕ್ತಪಡಿಸುವದಾದ್ದರಿಂದ ದುರಂತ ಪಾತ್ರಗಳನ್ನು ನಾನು ಮೆಚ್ಚಿಕೊಳ್ಳುವೆ. ಕೆಲವರು ಜೀವನ ಹಾಸ್ಯಮಯವೆಂದೂ ಕೆಲವರು ದುಃಖಮಯವೆಂದೂ ಭಾವಿಸುವರು. ಆದರೆ ಜೀವನದಲ್ಲಿ ಇವೆರಡೂ ಹಾಸು ಹೊಕ್ಕಾಗಿವೆಯೆಂದು ನನ್ನ ಭಾವನೆ. ನನ್ನ ಜೀವನ ಹೀಗೆಯೇ ಕಳೆದುಹೋಗಿದೆ, ಅಂತೇ ಪಾತ್ರಗಳನ್ನು ತನ್ಮಯವಾಗಿ ಅಭಿನಯಿಸಲು ಅವಕ್ಕೆ ನೈಜತೆ ತಂದುಕೊಡಲು ಸಾಧ್ಯವಾಗುವದು. ರಾವಲ್ ಫಿಲ್ಮ್ಸದವರ 'ಇಲ್ಜಾಮ್'ದಲ್ಲಿ ಕಿಶೋರಕುಮಾರನೊಂದಿಗೆ ಹಾಸ್ಯಪಾತ್ರವೊಂದನ್ನು ಅಭಿನಯಿಸಿದೆ. ಅದು ಯಶಸ್ವಿಯೇನೋ ಆಯಿತು. ಆದರೆ ಆ ಪಾತ್ರವೇಕೊ ನನಗೆ ನೈಜವೆನಿಸಲಿಲ್ಲ. ಕೇವಲ ಅಭಿನಯಿಸಿದೆ ಎಂದುಕೊಂಡೆ. ಚಿತ್ರರಂಗದಲ್ಲಿ ಕೇವಲ ಅಭಿನಯ ನೀಡದೆ ನೈಜತೆಯನ್ನು ತಂದುಕೊಡಲು ನಾನು ಹಂಬಲಿಸುತ್ತಿರುತ್ತೇನೆ.

ವಿದೇಶಗಳಲ್ಲಿ ವಿಶೇಷತಃ ಹಾಲಿವುಡ್‌ದಲ್ಲಿ ಕಲಾವಿದ ನಿರ್ಮಾಪಕನಾಗುವದು ಚಿತ್ರಜಗತ್ತಿನ ಅತ್ಯುನ್ನತ ಸಾಧನೆಯೆಂದು ಬಗೆಯಲಾಗುತ್ತಿದೆ. ನನಗೂ ಚಿತ್ರನಿರ್ಮಾಣದ ಹಂಬಲವುಂಟಾಗಿ ಕಮಾಲ್ ಸಾಹೇಬರ ಜತೆಗೆ ಕೆಲವನ್ನು ನಿರ್ಮಿಸಲು ಮುಂದಾದೆ. ಇವುಗಳಲ್ಲಿ ಕೆಲವು ತುಂಬ ಯಶಸ್ವಿಯಾದವು. ಆದರೆ ಭಾರತ ಹಾಲಿವುಡ್ ಅಲ್ಲ ಎಂಬುದನ್ನು ತಿಳಿದುಕೊಂಡೆ. ನಾನು ಮೂಲತಃ ಕಲಾವಿದೆಯಾದ್ದರಿಂದ ವ್ಯವಹಾರದಲ್ಲಿಯ ಹಣಕಾಸಿನ ಬಗೆಗೆ ತಿಳಿದುಕೊಳ್ಳಲಾರದವಳಾಗಿದ್ದೆ. ರಾಜಕಪೂರನಂಥ ಕೆಲ ಅಪವಾದಾತ್ಮಕ ವ್ಯಕ್ತಿಗಳೂ ಇರಬಹುದು. ಆದರೆ ಅದೇನೂ ನಿಯಮವಲ್ಲ. ನಿಮ್ಮಿ, ನೂತನ, ಬಿನಾರಾಯ್ ಮುಂತಾದವರು ಚಿತ್ರ ನಿರ್ಮಾಣರಲ್ಲಿ ಕೈ ಸುಟ್ಟುಕೊಂಡಿರುವರು. 'ಪಕೀಜಾ' ಚಿತ್ರದಲ್ಲಿ ಲಕ್ಷಾವಧಿ ರೂಪಾಯಿಗಳನ್ನು ತೊಡಗಿಸಲಾಗಿದೆ. ಅದರ ಗತಿಯೇನಾಗುವುದೊ ಬಲ್ಲವರೇ ಬಲ್ಲರು

'ಗೃಹಿಣಿ'ಯಾಗಿ ನನ್ನ ಅನುಭವಗಳನ್ನು ಮತ್ತು ಚಿತ್ರಗಳಲ್ಲಿ ದುಡಿಯುತ್ತಿರುವ ನನ್ನ ವೈವಾಹಿಕ ಜೀವನದ ಬಗೆಗಿನ ಭಾವನೆಗಳನ್ನು ಅರಿಯಲು ನನ್ನ ಚಿತ್ರಪ್ರೇಮಿಗಳು ಕುತೂಹಲಿಯಾಗಿರಬಹುದು. ವಿವಾಹವಯಸ್ಕಳಾದ ಪ್ರತಿಯೊಬ್ಬ ಮಹಿಳೆ ಮದುವೆಯಾಗಬೇಕು; ಮಕ್ಕಳನ್ನು ಹಡೆಯಬೇಕು, ಶಾಂತಿಯುತವಾದ ಗೃಹಜೀವನ ನಡೆಸಬೇಕು ಎಂದು ಹಂಬಲಿಸುತ್ತಿರುತ್ತಾಳೆ. ಪ್ರತಿಯೊಬ್ಬ ಮಹಿಳೆಯಲ್ಲಿಯೂ ಅವಳು ಏನೇ ಹೇಳಲಿ ಸ್ತ್ರೀತ್ವವು ಜಾಗ್ರತವಾಗಿರುತ್ತದೆ. ಚಿತ್ರರಂಗವನ್ನು ಪ್ರವೇಶಿಸಿವಾಗ ತಾರಾಪಟ್ಟವನ್ನು ಮೊದಲು ಭದ್ರಪಡಿಸಿಕೊಳ್ಳಬೇಕು; ನಂತರ ಮದುವೆಯ ಬಗೆಗೆ ವಿಚಾರಿಸುವುದು ಎಂದುಕೊಂಡೆ. ಈಗ ಚಿತ್ರರಂಗದಲ್ಲಿ ಪ್ರವೇಶಿಸಿರುವ ಅನೇಕ ಅವಿವಾಹಿತ ತಾರೆಯರ ವಿಚಾರವೂ ಹೀಗೆ ಇರಲು ಸಾಕು. ಮದುವೆಯಾಗಲು ಯಾರೂ ಒಲ್ಲೆನ್ನುವದಿಲ್ಲ ಅದು ತೀರ ಸ್ವಾಭಾವಿಕವಾದುದು. ಅಂಥ ಸಮಯ ಪ್ರಾಪ್ತವಾದಾಗ ನಾನು ಮದುವೆಯಾದೆ— ಮಕ್ಕಳನ್ನು ಪಡೆದೆ, ನನ್ನವಲ್ಲದಿದ್ದರೂ ನನ್ನ ಪತಿಯ ಮೊದಲ ಹೆಂಡತಿಯ ಮಕ್ಕಳು.

ಪ್ರಾರಂಭದಲ್ಲಿ ಜೀವನ ತುಂಬ ಸುಖಮಯವಾಗಿತ್ತು. ಆದರೆ ಬೇಗ ನಾನು ಮಾನಸಿಕ ತೊಳಲಾಟದಲ್ಲಿ ಸಿಲುಕಿದೆ. ಚಿತ್ರಜೀವನವು ಗೃಹಜೀವನಕ್ಕೆ ಹೊಂದಿಕೊಳ್ಳದೆಂದುಕೊಂಡೆ. ಹೊಂದಿಕೊಳ್ಳಲೆತ್ನಿಸಿದಷ್ಟೂ ತೊಳಲಾಟ ಹೆಚ್ಚತೊಡಗಿತು. ಪತಿಯಿಂದ ಬೇರೆಯಾಗಿ, ಮತ್ತೆ ಮಿಲನಹೊಂದಿ ಈಗ ಕೊನೆಯ ಸಲ ಬೇರೆಯಾಗಿದ್ದೇನೆ.

ಚಿತ್ರರಂಗ ಪ್ರವೇಶಿಸಿದ ಹೊಸ ತಾರೆ ಆ ಜೀವನವನ್ನೇ ಮುಂದುವರಿಸಬೇಕೆಂದಿದ್ದರೆ ಅವಳು ಮದುವೆಯಾಗಬಾರದೆಂದು ನಾನು ಹೇಳಬಯಸುತ್ತೇನೆ. ನರ್ಗೀಸ್ ಚಿತ್ರರಂಗಕ್ಕೆ ಶರಣು ಹೊಡೆದು ಒಳಿತನ್ನು ಮಾಡಿದಳು. ಅದೇ ರೀತಿ ಕಲ್ಪನಾ ಕಾರ್ತಿಕ ಕೂಡ.

ಭಾರತವು ಹಾಲಿವುಡ್ ಅಲ್ಲ. ಪಶ್ಚಿಮ ಪಶ್ಚಿಮವೇ ಪೂರ್ವವು ಪೂರ್ವವೇ ಚಿತ್ರರಂಗದಲ್ಲಿದ್ದುಕೊಂಡು ಕಲಾಭಿವೃದ್ಧಿಗೆ ಹೆಣಗಬೇಕು. ಇಲ್ಲವೇ ಸುಖಿಮನೆಗೆ ಹೊಂದಿಕೊಂಡಿರಬೇಕು. ಇದು ಚಿತ್ರ ಜಗತ್ತನ್ನು ನಾನು ಅರಿತ ರೀತಿ ನಾನೀಗ ನನ್ನ ಸೋದರಿ ಮತ್ತು ಅವಳ ಪತಿ ಮಹಮ್ಮೂದ ಅವರೊಂದಿಗಿರುವೆ. ಈಗ ಯಾವ ಮಾನಸಿಕ ತೊಳಲಾಟವೂ ಇಲ್ಲ. ಕಾವ್ಯ ಮತ್ತೆ ಅಭಿನಯ ಕಲೆಯನ್ನು ನಾನು ಮೆಚ್ಚಿಕೊಂಡಿದ್ದೇನೆ. ಅವೇ ನನ್ನ ಜೀವನದುಸಿರಾಗಿವೆ. ನನ್ನ ಬದುಕಿನುದ್ದಕ್ಕೂ ಅವು ಹಾಗೇ ಉಳಿದು ಬರುವವು.

